# ರವೀಂದ್ರರ ಕೃತಿಗಳು

ನೌಕಾಘಾತ (ಕಾದಂಬರಿ)
ವಿನೋದಿನಿ ( " )
ಮನೆ-ಜಗತ್ತು ( " )
ಗೋರಾ ( " )
ಯೋಗಾಯೋಗ ( " )
ಚಿನ್ನದ ದೋಣಿ (ಕಥೆಗಳು)
ನನ್ನ ಬಾಲ್ಯದ ದಿನಗಳು (ಆತ್ಮಕಥೆ)
ಅಂಚೆಯ ಮನೆ (ನಾಟಕ)
ಬಲಿದಾನ (ನಾಟಕ)
ರಕ್ತಕರವೀರ (ನಾಟಕ) (ಅಚ್ಚಿನಲ್ಲಿ)
ಸಾಹಿತ್ಯ (ವಿಮರ್ಶೆ)

# ಯೋಗಾಯ

## (ಕುಮುದಿನಿ)

---

### ಒಂದನೆಯ ಅಧ್ಯಾಯ

ಇಂದು ಆಷಾಢ ಶುದ್ಧ ಸಪ್ತಮಿ. ಅವಿನಾಶಘೋಷಾಲನ ಹುಟ್ಟಿದ ಹಬ್ಬ. ಅವನ ವಯಸ್ಸೀಗ ಮೂವತ್ತೆರಡು. ಬೆಳಿಗ್ಗೆಯಿಂದ ಒಂದೇ ಸಮನೆ ಅಭಿನಂದನಾಸೂಚಕ ಟೆಲಿಗ್ರಾಂಗಳೂ ಹಾರ ತುರಾಯಿಗಳೂ ಬರುತ್ತಲೇ ಇವೆ.

ಕಥೆ ಇಲ್ಲಿಯೇ ಆರಂಭ. ಆದರೆ ಇದಕ್ಕೆ ಪೂರ್ವವೂ ಒಂದು ಆರಂಭವಿದೆ. ಸಂಜೆ ಹೊತ್ತಿಸುವ ದೀಪಕ್ಕೆ ಬೆಳಿಗ್ಗೆಯೇ ಬತ್ತಿ ಹೊಸೆಯುವಂತೆ.

ಈ ಕಥೆಯ ಪುರಾತನ ಮೂಲವನ್ನು ಸಂಶೋಧಿಸಿದರೆ ಒಂದು ವಿಷಯ ತಿಳಿಯುತ್ತದೆ. ಏನೆಂದರೆ, ಘೋಷಾಲ ವಂಶದವರು ಒಂದಾನೊಂದು ಕಾಲದಲ್ಲಿ ಸುಂದರವನದ ಪ್ರಾಂತದಲ್ಲಿ ದ್ದರು. ಅನಂತರದಲ್ಲಿ ಹುಗಲೀ ಜಿಲ್ಲೆಯ ಸೂರ್‌ನಗರದಲ್ಲಿದ್ದರು. ಅಲ್ಲಿಂದ ಇಲ್ಲಿಗೆ ಸ್ಥಳ ಪಲ್ಲಟವೇಕಾಯಿತೋ ಗೊತ್ತಿಲ್ಲ. ಬಹುಶಃ ಹೊರಗೆ ಪೋರ್ಚುಗೀಸರ ಧಾಳಿಯಿಂದಲೋ ಒಳಗಡೆ ನೆರೆಹೊರೆಯವರ ಉಪದ್ರವದಿಂದಲೋ ಏನೋ ಇರಬೇಕು.

ಕಷ್ಟಕಾಲದಲ್ಲಿ ಕಂಗೆಟ್ಟು, ಹುಟ್ಟಿದ ಮನೆ ಬಿಡಲೇಬೇಕಾದವರಿಗೆ ಬೇರೆ ಸ್ಥಳದಲ್ಲಿ ಬೇಗ ಹೊಸಮನೆ ಕಟ್ಟಲು ಶಕ್ತಿಯೂ ಬರುವುದು. ಆದ್ದರಿಂದಲೇ ಘೋಷಾಲ ಮನೆತನದ ಐತಿಹಾಸಿಕ ಘಟ್ಟದ ಆರಂಭದಲ್ಲಿಯೇ ಅವರಿಗೆ ಭೂಮಿಕಾಣಿ, ದನ ಕರು, ಆಳು-ಕಾಳು, ಹಬ್ಬ-ಹುಣ್ಣಿಮೆ, ಜಮಾ-ಖರ್ಚುಗಳು ಯಥೇಚ್ಛವಾಗಿದ್ದುದು ತಿಳಿಯಬರುತ್ತದೆ. ಇಂದಿಗೂ ಅವರ ಳ ಗ್ರಾಮವಾದ ಶೇಯಾಕುಲಿಯಲ್ಲಿ ಇರುವ ಹತ್ತು-ಹನ್ನೊಂದು ಎಕರೆ ವಿಸ್ತಾರವಾದ ಘೋಷಾಲ ಯಲ್ಲಿ ಕನ್ನೈದಿಲೆ-ತಾವರೆ ಎಲೆಗಳ ಮುಸುಕಿನೊಳಗಿಂದ ಕಾಣಿಸಿಕೊಳ್ಳುವ ಕೆಸರು ನೀರು ರ ಗತಿಸಿ ಹೋದ ಗೌರವಕ್ಕೆ ಕುರುಹಾಗಿದೆ. ಈಗ ಆ ಕೆರೆಯ ಹೆಸರು ಮಾತ್ರ ಅವರದು. ು ಜಮೀನ್ದಾರ ಚಟರ್ಜಿಯವರದು. ಅವರ ಅಷ್ಟು ದೊಡ್ಡ ಮನೆತನ ಇದ್ದಕ್ಕಿದ್ದ ಹಾಗೆ ು ಸಲ ಹೇಗೆ ನಾಶಹೊಂದಿತೆನ್ನುವ ವಿಷಯ ತಿಳಿಯಬೇಕಾದುದು ಅಗತ್ಯ.

ಇವರ ಇತಿಹಾಸದ ಮಧ್ಯಭಾಗದಲ್ಲಿ ಚಟರ್ಜಿ ಜಮೀನ್ದಾರರೊಡನೆ ಮನಸ್ತಾಪ ಹತ್ತಿ ಡುದು ಕಾಣಬರುತ್ತದೆ. ಈಸಲ ಸಂಪತ್ತಿನ ವಿಷಯವಾಗಲ್ಲ, ದೇವಿಯ ಪೂಜೆಯ ವಿಷಯ ಗಿ. ಘೋಷಾಲರು ಚಟರ್ಜಿಯವರ ಮೇಲೆ ಪೈಪೋಟಿಗಾಗಿ ಅವರಿಗಿಂತಲೂ ಎರಡು ಮೊಳ ತ್ತರವಾದ ವಿಗ್ರಹ ಮಾಡಿಸಿದರು. ಅದಕ್ಕೆ ಉತ್ತರವಾಗಿ ಚಟರ್ಜಿಗಳು ರಾತ್ರೋರಾತ್ರಿ, ದಾರಿಯ ಮಧ್ಯೆ ಘೋಷಾಲರ ವಿಗ್ರಹದ ತಲೆ ತಗಲುವ ಹಾಗೆ ತೋರಣಗಳನ್ನು ಕಟ್ಟಿಸಿಬಿಟ್ಟರು. ವಿಗ್ರಹದವರು ತೋರಣಗಳನ್ನು ಕಿತ್ತು ಬಿಸಾಡಲು ಆರಂಭಮಾಡಿದರು. ಚಿಕ್ಕವಿಗ್ರಹ

ಬಂದರು. ಇದರ ಪರಿಣಾಮ, ದೇವಿಯು ಆ ವತ್ತ
ನೆ ಮಾಡಿದಳು....ಖೂನಿ, ಗಾಯಗಳ ನಿಮಿತ್ತ ಕೋರ್
ಕದ್ದ ಮೆಯೇ ಘೋಷಾಲರ ಸರ್ವನಾಶದ ಅಂಚಿನವರೆ

ತು. ಕಟ್ಟಿಗೆಯೂ ಉಳಿದಿರಲಿಲ್ಲ. ಎಲ್ಲಾ ಬೂದಿಯ
ಗ್ಯಲಕ್ಷ್ಮಿಯೂ ಕಳೆಗುಂದಿಹೋಗಿದ್ದಳು. ವ್ಯವಧಾನವಿಲ್ಲದ
ಶಾಂತಿ ಹೇಗೆ ಆಗುತ್ತದೆ? ಗೆದ್ದು ನಿಂತಿರುವ ಆಳು, ಸೋತು ಬಿದ್ದಿರುವ ಆಳು, ಇಬ್ಬರೊಳಗೂ ಗುಡುಗಾಟವಿದ್ದೇ ಇರುತ್ತದೆ. ಚಟರ್ಜಿಯವರು ಘೋಷಾಲರವರ ಮೇಲೆ ಕಡೆಯಸೇಡನ್ನು ಸಮಾಜದ ಖಡ್ಗದಿಂದ ತೀರಿಸಿಕೊಂಡರು.

ಒಂದು ಕಾಲದಲ್ಲಿ ಘೋಷಾಲರು ಭಂಗಜ ಬ್ರಾಹ್ಮಣ(ಕೀಳುಜಾತಿಯವ)ರಾಗಿದ್ದರೆಂದೂ ಇಲ್ಲಿಗೆ ಬಂದು ಅದನ್ನು ಮರೆಮಾಚಿ, ಕಾಗೆ ಕೋಗಿಲೆಯಂತೆ, ವೇಷ ಹಾಕಿರುವರೆಂದೂ ಪ್ರಚಾರ ಮಾಡಿದರು. ದೋಷಾರೋಪಣೆಮಾಡುವವರಿಗೆ ಚೆನ್ನಾಗಿ ದುಡ್ಡಿದ್ದರೆ, ದುಡ್ಡಿನ ಜೋ ನಿಂದ ಅವರ ಕೂಗಿಗೂ ಬೆಲೆಯಿರುತ್ತದೆ. ಅದರಿಂದಲೇ ಸ್ಮೃತಿರತ್ನರ ಕೇರಿಯಲ್ಲಿ ಅವರ ಈ ವಾದಸಂಕೀರ್ತನೆಗೆ ಅನುಸ್ವಾರ-ವಿಸರ್ಗಗಳ ಮೃದಂಗ ವಾದನವೂ ದೊರಕಿತು.

ಕಳಂಕವನ್ನು ಅಳಿಸಿಹಾಕಲು ಬೇಕಾಗುವಷ್ಟು ಪ್ರಮಾಣಗಳನ್ನಾಗಲೀ, ದಕ್ಷಿಣೆಯನ್ನಾಗ ಆಗ ಒದಗಿಸಲು ಘೋಷಾಲರವರಿಗೆ ಶಕ್ತಿಯಿರಲಿಲ್ಲ. ಇದರ ಫಲವಾಗಿ, ಚಂಡೀಮಂಟಪ ವಿಹಾರಮಾಡುವ ‘ಸಮಾಜ'ದ ಉತ್ಪಾತ ತಡೆಯಲಾರದೆ ಅವರುಗಳು ಪುನಃ ಮನೆ ಮಠ ಬೇಕಾಯಿತು. ರಜಬಪುರಕ್ಕೆ ಹೋಗಿ ಅಲ್ಲಿ ಅತಿ ಸಾಮಾನ್ಯ ರೀತಿಯಲ್ಲಿ ವಾಸಮಾಡತೊಡಗಿ ಹೊಡೆದವರೇನೋ ಮರೆತುಹೋಗುವರು. ಏಟು ತಿಂದವರು ಅಷ್ಟು ಸಹಜವಾಗಿ ಮರೆಯು ವುದಿಲ್ಲ. ದೊಣ್ಣೆ ಅವರ ಕೈಯಿಂದ ಕುಸಿದುಬಿದ್ದರೂ ಮನಸ್ಸಿನಲ್ಲಿ ಮಾತ್ರ ಆ ದೊಣ್ಣೆ ಗು ತ್ತಲೇ ಇರುತ್ತದೆ. ಬಹಳ ಕಾಲ ಕೈ ಸುಮ್ಮನೆ ಇದ್ದುದರಿಂದ ಮನಸ್ಸಿನ ದೊಣ್ಣೆ ಮಾತ್ರ ಅವರ ವಂಶದಲ್ಲಿ ವೃದ್ಧಿಯಾಗುತ್ತಲೇ ಬಂದಿದೆ. ಆಗಾಗ ಚಟರ್ಜಿ ಮನೆಯವರಿಗೆ ಹೇಗೆ ಹೇಗೆ ರು ಬುದ್ಧಿ ಕಲಿಸಿದರೆಂದು ಸುಳ್ಳಾದ, ಸತ್ಯವಾದ ಕಥೆಗಳೆಲ್ಲಾ ಮಿಶ್ರವಾಗಿ ಇಂದಿಗೂ ಅವರ ಮನೆಯಲ್ಲಿ ಬಳಕೆಯಲ್ಲಿವೆ. ಹೆಂಚಿನ ಮನೆಯ ಜಗುಲಿಯ ಮೇಲೆ ಕುಳಿತು ಆಷಾಢಮಾಸದ ಸಂಜೆಯವೆ ಅವರ ಮನೆಯ ಮಕ್ಕಳು ಆ ಕಥೆಗಳನ್ನೆಲ್ಲಾ ‘ಹೂ'ಗುಟ್ಟಿ ಕೇಳುತ್ತಿರುತ್ತಾರೆ. ಚಟರ್ಜಿ ಮನೆಯ ಹೆಸರುವಾಸಿಯಾದ ದಾಶು ಸರ್ದಾರ ರಾತ್ರಿ ಮಲಗಿದ್ದಾಗ ಇಪ್ಪತ್ತು-ಇಪ್ಪತ್ತೈದು ಲಾಠಿಗಳನ್ನು ಹಿಡಿದ ಪ್ರಾಯಸ್ಥರು ಹೋಗಿ ಅವನನ್ನು ಹಿಂಗಟ್ಟು ಮುರಿಕಟ್ಟಿ ತಂದು ಘೋ ಲರ ಮನೆ ಚಾವಡಿಯಲ್ಲಿ ಹೇಗೆ ಸುಳಿವೇ ಇಲ್ಲದಂತೆ ಮುಗಿಸಿಬಿಟ್ಟರೆಂಬ ಕಥೆ ಈಗ ಒಂದು ನ ವರ್ಷಗಳಿಂದಲೂ ಘೋಷಾಲರ ಮನೆಯಲ್ಲಿ ಕೇಳಬರುತ್ತಿದೆ.

ಪೋಲೀಸಿನವರು ತನಿಖೆಗೆ ಬಂದಾಗ ಇವರ ಮನೆಯ ಪಾರುಪತ್ತೇಗಾರ, ಭುವನವಿಶ್ವಾ ಅನಾಯಾಸವಾಗಿ "ಹಾಂ....ಹೌದು....ಅವನೊಂದುಸಲ ಈ ಕಡೆ ಬಂದಿದ್ದ, ಏನೋ ಕೇ ಮೇಲೆ......ಮಗನಿಗೆ ಕೈಯಿಂದ, ಕಾಲಿಂದ ಚೆನ್ನಾಗಿ ಬಿಟ್ಟು ಅವಮಾನ ಮಾಡಿದರು....ಆ ನಿಂದ ಅವನೆಲ್ಲೋ ಮನಸ್ಸು ಕೆಟ್ಟು ಬೈರಾಗಿಯಾಗಿ ಹೊರಟುಹೋದ' ಅಂತ ಅಂದುಕೊಂ

ದು ಹೇಳಿದ. ಈ ಮಾತಿನಿಂದ ಪೋಲೀಸು ಅಧಿಕಾರಿಯ ಸಂದೇಹ ನಿವೃತ್ತಿಯಾಗಲಿಲ್ಲ. ಆಗ ವನನು "ಹುಜೂರ್, ಈ ವರ್ಷದೊಳಗಾಗಿ ಅವನೆಲ್ಲಿದಾನೆ ಅನ್ನುವುದನ್ನು ಪತ್ತೆಹಚ್ಚದೆ ೇದರೆ ನನ್ನ ಹೆಸರು ಭುವನವಿಶ್ವಾಸನಲ್ಲ' ಎಂದ. ದಾಶುವಿನ ಗಾತ್ರವೇ ಇದ್ದ ಪುಂಡನೊಬ್ಬ ನ್ನು ಎಲ್ಲಿಂದಲೋ ಕರೆಯಿಸಿ ಅವನನ್ನು ಸೀದಾ ಢಾಕಾಗೆ ಕಳುಹಿಸಿಬಿಟ್ಟನು. ಅವನಲ್ಲಿ ಗಡಿ ಾರ ಕದ್ದು, ಹಿಡಿಯಲ್ಪಟ್ಟನು. ತನ್ನ ಹೆಸರು ದಾಶರಥಿ ಮಂಡಲ್ ಎಂದು ಬರೆಯಿಸಿದನು. ಅವ ಗೆ ಒಂದು ತಿಂಗಳು ಜೈಲುವಾಸವಾಯಿತು. ಬಿಡುಗಡೆಯಾದ ದಿನ ಭುವನ ವಿಶ್ವಾಸನು ವ್ಯಾಜಿ ಟರ ಬಳಿ ಹೋಗಿ ದಾಶುಸರ್ದಾರ ಢಾಕಾ ಜೈಲಿನಲ್ಲಿದಾನೆಂದು ವರದಿ ಕೊಟ್ಟನು....ಅದಾದ ಂತರ "ದಾಶ, ಜೈಲಿನಲ್ಲಿದ್ದುದು ನಿಜ, ಅವನು ಹಾಕಿಕೊಳ್ಳುತ್ತಿದ್ದ ಜುಬ್ಬಾವೊಂದನ್ನು ಜೈಲು ೊರಗಿನ ಬಯಲಲ್ಲಿ ಬಿಸಾಟು ಹೊರಟುಹೋಗಿದಾನೆ" ಎಂಬ ಸಮಾಚಾರವು ಹೊರಬಿದ್ದಿತು. ಜುಬ್ಬ ದಾಶುವಿದೇ ಎಂದು ರುಜುವಾತೂ ಆಯಿತು. ಅದಾದ ನಂತರ ಅವನು ಎಲ್ಲಿಹೋದನೋ ವಿಷಯ ಪತ್ತೆ ಹಚ್ಚುವುದು ಭುವನನ ಜವಾಬುದಾರಿಯಲ್ಲ.

ಈ ಕಥೆಗಳೆಲ್ಲಾ ಇಂದು ದಿವಾಳಿಯಾಗಿಹೋದ ಹಿಂದಿನ ಕಾಲದ ಚೆಕ್ಕು(ಹುಂಡಿ)ಗಳು. ರ್ಯಾದೆಯ ದಿನಗಳು ಕಳೆದುಹೋಗಿವೆ. ಅದಕ್ಕೆಂದೇ ಆ ಹಳೆಯ ದಿನಗಳ ಕಥೆ ಪೂರ್ತಿ ಳ್ಳಾಗಿ ಇಷ್ಟು ಹೆಚ್ಚು ಶಬ್ದ ಮಾಡುವುದು.

ಏನಾದರೂ ಆಗಲಿ, ಎಣ್ಣೆ ಮುಗಿದ ಹಾಗೆಲ್ಲ ದೀಪವೂ ನಂದುವಂತೆ ಒಂದು ಸಮಯ ತ್ರಿಯೂ ಹಾಗೆಯೇ ಕಳೆಯುವುದು. ಘೋಷಾಲವಂಶಸ್ಥರ ಸೂರ್ಯೋದಯ ಮತ್ತೆ ಅವಿನಾಶನ ದೆ, ಮಧುಸೂದನನ ಭಾಗ್ಯವಂತವಾದ ಹಣೆಯಲ್ಲಿ ಕಾಣಬಂತು.

## ಎರಡನೆಯ ಅಧ್ಯಾಯ

ಮಧುಸೂಧನನ ತಂದೆ ಆನಂದ ಘೋಷಾಲನು ರಜಬಪುರದ ಮಂಡಿ ವ್ಯಾಪಾರಿಗಳ ಬಳಿ ಮಾಸ್ತೆಯಾಗಿದ್ದನು. ದಪ್ಪಕ್ಕಿ ಊಟ, ಹಳ್ಳಿಮಗ್ಗದ ಒರಟುಬಟ್ಟೆಯ ಉಡುಪು....ಹೀಗೆಯೇ ರ ಬದುಕು ಕಳೆಯುತ್ತಿತ್ತು. ಮನೆಯ ಹೆಂಗಸರ ಕೈಗೆ ಶಂಖದ ಬಳೆಗಳು, ಗಂಡಸರ ಕುತ್ತಿಗೆ ಲ್ಲಿ ಹಿತ್ತಾಳೆಯ ತಾಯಿತಿ, ಮತ್ತು ಬಿಲ್ವವೃಕ್ಷದ ಅಂಟಿನಲ್ಲಿ ಹೊಸೆದ ಬಹಳ ದಪ್ಪನಾವ ಜನಿ ರ, ಬ್ರಾಹ್ಮಣಿಕೆಯ ಗೌರವದ ಕುರುಹು ಸವೆದಂತೆಲ್ಲಾ ಜನಿವಾರದ ಪ್ರಮಾಣ ಗಟ್ಟಿಯಾಗಿತ್ತು.

ಹಳ್ಳಿಯ ಕೂಲಿಮಠದಲ್ಲಿಯೇ ಮಧುಸೂದನನ ಮೊದಲ ಅಕ್ಷರಾಭ್ಯಾಸ. ಅದರ ಜೊತೆ ಲ್ಲಿಯೇ ಕೂಲಿಯಿಲ್ಲದ ಶಿಕ್ಷಣ ನಡೆಯುತ್ತಿದ್ದುದು ನದೀತೀರದಲ್ಲಿ, ಮಂಡಿಗಳ ಅಂಗಳಗಳಲ್ಲಿ. ಣಬಿನ ಮೂಟೆಗಳ ಮೇಲೆ ಹತ್ತಿ ಕೂತುಕೊಳ್ಳುವರು, ಮಾರುವವರು, ಎತ್ತಿನ ಬಂಡಿ ಹೊಡೆ ುವವರು, ಇಂತಹವರ ಗುಂಪಿನ ಮಧ್ಯೆ ಅವನು ವಿರಾಮಕಾಲ ಕಳೆಯುತ್ತಿದ್ದುದು. ಮಂಡಿಯಲ್ಲಿ ನ ಛಾವಣಿಯ ಗಡಂಗಿನಲ್ಲಿ ಜೋಡಿಸಿಟ್ಟಿದ್ದ ಬೆಲ್ಲದ ಗುಡಾಣಗಳು, ಹೊಗೆಸೊಪ್ಪಿನ ಹೊರೆ ಳು, ವಿದೇಶೀ ಸರಕುಗಳ ಮೂಟೆಗಳು, ಸೀಮೇಯೆಣ್ಣೆ ಡಬ್ಬಗಳು, ಸಾಸುವೆ ಮೂಟೆಗಳು, ಳ್ಳಿನ ರಾಶಿ, ದೊಡ್ಡದೊಡ್ಡ ತ್ರಾಸುಗಳು, ತೂಕದ ಕಲ್ಲುಗಳು, ಇವುಗಳ ಮಧ್ಯೆ ಅಡ್ಡಾಡು ಅವನಿಗೆ ಉದ್ಯಾನದಲ್ಲಿ ತಿರುಗಾಡುವಷ್ಟು ಆನಂದ.

ಹುಡುಗ ಮುಂದಕ್ಕೆ ಬರುವನೆಂದು ಅಪ್ಪನಿಗೆ ಅನ್ನಿಸಿತು. ಅಷ್ಟು ಇಷ್ಟು ಪ್ರಯಾಸಪಟ್ಟು ಎರಡುಮೂರು ಪರೀಕ್ಷೆಗಳನ್ನು ಪಾಸು ಮಾಡಿದರೆ ಶಾಲಾಮಾಸ್ತರ ಕೆಲಸದಿಂದ ಮೊಖ್ತ್ಯಾರ್, ವಕಾಲತಿ ಪರ್ಯಂತ, ಅಂದರೆ ದೊಡ್ಡ ಮನುಷ್ಯರಿಗೆ ಯಾವುಯಾವುದು ಮೋಕ್ಷ ತೀರ್ಥವೆನ್ನಿಸಿಕೊಂಡಿರುತ್ತದೋ, ಅದರಲ್ಲಿ ಯಾವುದಾದರೂ ಒಂದು ಮಧು ಸಿಕ್ಕಬಹುದೆಂದು ಎಣಿಸಿದ್ದನು. ಇತರ ಮೂವರು ಮಕ್ಕಳ ಹಣೆಬರಹದಲ್ಲಿ ಗುಮಾಸ್ತಗಿರಿಯವರೆಗೆ ಮಾತ್ರ ಬರೆದಿತ್ತು.

ಅವರಲ್ಲಿ ಒಬ್ಬ ಮಂಡಿಯಲ್ಲಿ, ಮತ್ತೊಬ್ಬ ತಾಲೂಕು ಕಛೇರಿಯಲ್ಲಿ ಕಿವಿಯಲ್ಲಿ ಲೇಖನಿ ಸಿಕ್ಕಿಸಿಕೊಂಡು ಕೆಲಸಕಲಿಯಲು ತೊಡಗಿದ್ದರು. ಆನಂದ ಘೋಷಾಲರ ಇದ್ದ ಅಲ್ಪಸ್ವಲ್ಪದರ ಆಧಾರದ ಮೇಲೆ ಮದುಸೂದನ ಕಲ್ಕತ್ತೆಗೆ ಬಂದು ಅಲ್ಲಿಯ ಮೆಸ್ ಒಂದರಲ್ಲಿ ಕೊಠಡಿಯನ್ನು ತೆಗೆದುಕೊಂಡನು.

ಈ ಹುಡುಗ ಪರೀಕ್ಷೆಯಲ್ಲಿ ತಮ್ಮ ಕಾಲೇಜಿನ ಹೆಸರುಳಿಸುವನೆಂದು ಅಧ್ಯಾಪಕರು ನಂಬಿದ್ದರು. ಇಂತಹ ವೇಳೆಯಲ್ಲಿ ಅವನ ತಂದೆ ಸತ್ತುಹೋದರು. ಆಗ ನೋಟು ಪುಸ್ತಕಗಳನ್ನೂ ಬಿಡದೆ, ಓದುವ ಪುಸ್ತಕಗಳನ್ನೆಲ್ಲಾ ಮಾರಿ ಮಧುಸೂದನನು ಇನ್ನುಮುಂದೆ ವ್ಯಾಪಾರ ಮಾಡುವೆನೆಂದು ಮನಸ್ಸು ಮಾಡಿದನು. ಕಾಲೇಜಿನ ಹತ್ತಿರ ಹಳೆಯ ಪುಸ್ತಕಗಳನ್ನು ಮಾರುವುದಕ್ಕೆ ಮೊದಲು ಮಾಡಿದನು. ತಾಯಿ ಅತ್ತುಕೊಂಡಳು. ಆಕೆ ಆಸೆಯಿಟ್ಟುಕೊಂಡಿದ್ದಳು: 'ಮಗ ಬೇಗ ಬೇಗ ಪರೀಕ್ಷೆಗಳನ್ನು ಪಾಸುಮಾಡಿಕೊಂಡು ದೊಡ್ಡಮನುಷ್ಯರ ಅಂತಸ್ತಿಗೇರುತ್ತಾನೆ. ಅದಾದ ಮೇಲೆ ಘೋಷಾಲವಂಶದ ವಿಜಯ ಪತಾಕೆ ಹಾರಾಡುತ್ತದೆ' ಎಂದು.

ಚಿಕ್ಕವಯಸ್ಸಿನಿಂದಲೂ ಮಧುಸೂದನ ಹೇಗೆ ಸಾಮಾನುಗಳನ್ನು ಆರಿಸಿಕೊಳ್ಳುವುದರಲ್ಲಿ ಪ್ರವೀಣನೋ ಹಾಗೆಯೇ ಸ್ನೇಹಿತರನ್ನು ಸಂಪಾದಿಸುವುದರಲ್ಲಿಯೂ ನಿಪುಣ. ಯಾವಾಗಲೂ ಮೋಸಹೋಗಿರಲಿಲ್ಲ. ವಿದ್ಯಾರ್ಥಿಗಳಲ್ಲಿ ಅವನ ಅತಿ ಮುಖ್ಯಸ್ನೇಹಿತ, ಕಾನಾಯಿಗುಪ್ತ. ಇವನ ಮನೆತನಸ್ಥರು ಹಿಂದೆ ದೊಡ್ಡದೊಡ್ಡ ಕಾರ್ಖಾನೆಗಳಲ್ಲಿ ಮುತ್ಸದ್ದಿಗಳಾಗಿದ್ದರು. ಅವನ ತಂದೆ ಪ್ರಸಿದ್ಧವಾದ ಸೀಮೆಯೆಣ್ಣೆಯ ಕಂಪೆನಿಯೊಂದರಲ್ಲಿ ದೊಡ್ಡ ಹುದ್ದೆಯಲ್ಲಿದ್ದ.

ಭಾಗ್ಯವಶಾತ್ ಇವರ ಮನೆಯ ಹೆಣ್ಣುಮಗಳಿಗೇ ಮದುವೆ ಏರ್ಪಾಟಾಯಿತು. ಮಧುಸೂದನನು ಸೊಂಟಕ್ಕೆ ವಸ್ತ್ರ ಬಿಗಿದು ಕೆಲಸಕ್ಕಿಳಿದನು. ಚಪ್ಪರ ಕಟ್ಟಿಸುವುದರಿಂದ ಹಿಡಿದು ಹೂವು ಎಲೆಗಳಿಂದ ಹಸೆಮಂಟಪವನ್ನಲಂಕರಿಸುವುದು, ಮುದ್ರಣಾಲಯದಲ್ಲಿ ನಿಂತುಕೊಂಡು ಬಂಗಾರದಕ್ಷರಗಳಲ್ಲಿ ಲಗ್ನಪತ್ರಿಕೆ ಅಚ್ಚುಹಾಕಿಸುವುದು, ಕುರ್ಚಿ ಜಮಖಾನೆಗಳನ್ನು ಬಾಡಿಗೆಗೆ ತರುವುದು, ಗೇಟಿನಲ್ಲಿ ನಿಂತು ಆಹ್ವಾನಿತರನ್ನು ಬರಮಾಡಿಕೊಳ್ಳುವುದು, ಗಂಟಲು ಕಟ್ಟುವವರೆಗೆ ಕೂಗುತ್ತಾ ಊಟಕ್ಕೆ ಕುಳಿತವರಿಗೆ ಬಡಿಸುವುದು ಇತ್ಯಾದಿಗಳಲ್ಲಿ ಯಾವುದೂ ಬಿಡದೆ ಮಾಡಿದನು. ಯಾವುದರಲ್ಲೂ ಕೊರತೆಯಿರಲಿಲ್ಲ. ಇದೇ ಸುಯೋಗದಲ್ಲಿ ಅವನು ತೋರ್ಪಡಿಸಿದ ಚಟುವಟಿಕೆ ವ್ಯವಹಾರ ಜ್ಞಾನಗಳನ್ನು ನೋಡಿ ರಜನೀಬಾಬುಗಳು ಬಹಳ ಮೆಚ್ಚಿಕೊಂಡರು. ಅವರು ಒಳ್ಳೆಯ ಶ್ರದ್ಧಾಳುಗಳನ್ನು ಗುರುತಿಸಬಲ್ಲರು. ಈ ಹುಡುಗ ಮುಂದಕ್ಕೆ ಬರುತ್ತಾನೆಂದು ಖಂಡಿತ ಮಾಡಿದರು. ಅವರೇ ಸ್ವತಃ ಹಣ ಠೇವಣಾತಿಯಿಟ್ಟು ಮದುಸೂದನನಿಗೆ ರಜಬ್‌ಪುರದಲ್ಲಿ ಸೀಮೆಯೆಣ್ಣೆಯ ಏಜನ್ಸಿ ಕೊಡಿಸಿದರು.

ಅಂದಿನಿಂದ ಅವನ ಅದೃಷ್ಟದ ಓಟ ಆರಂಭವಾಯಿತು. ಈ ಓಟದ ಯಾತ್ರಾಪಥದಲ್ಲಿ ಸೀಮೆ

ಯೆಣ್ಣೆಯ ಅಂಗಡಿ ಯಾವುದೋ ಮೂಲೆಯಲ್ಲಿ ಸೊನ್ನೆಯಾಕಾರದಲ್ಲಿ ಹಿಂದೆಬಿತ್ತು. ಲಾಭದ ಕಟ್ಟಡದ-ದೊಡ್ಡದೊಡ್ಡ ಹಂತಗಳ ಮೇಲೆ ಹೆಜ್ಜೆ ಹಾಕುತ್ತಾ ಹಾಕುತ್ತಾ ಬೇಗಬೇಗ ಓಣಿಯಿಂದ ರಾಜಬೀದಿಗೆ, ಚಿಲ್ಲರೆ ವ್ಯಾಪಾರದಿಂದ ಒಟ್ಟು ವ್ಯಾಪಾರಕ್ಕೆ, ಮಳಿಗೆಯಿಂದ ಆಫೀಸಿಗೆ ಉದ್ಯೋಗ ಪರ್ವದಿಂದ ಸ್ವರ್ಗಾರೋಹಣಕ್ಕೆ ಅವನ ಉದ್ಯಮ ಮುಂದುವರೆಯಿತು. "ಇದೇ ಅಲ್ಲವೇ ಅದೃಷ್ಟ"ಎಂದು ಎಲ್ಲರೂ ಹೇಳತೊಡಗಿದರು. ಅಂದರೆ ಪೂರ್ವಜನ್ಮದ ಆವಿಯಿಂದಲೇ ಈ ಜನ್ಮದ ಗಾಡಿ ನಡೆಯುವುದು ಎಂದು....ತಾನು ಲೆಕ್ಕದಲ್ಲಿ ತಪ್ಪುಮಾಡಲಿಲ್ಲವಾದ್ದರಿಂದಲೇ ವಿಧಿ ತನಗೆ ಮೋಸಮಾಡಲಾಗಲಿಲ್ಲವೆಂದು ಮಧುಸೂದನನಿಗೆ ಚೆನ್ನಾಗಿ ಗೊತ್ತು. ಲೆಕ್ಕದಲ್ಲಿ ತಪ್ಪುಮಾಡಿ ಫೇಲಾದವರೇ ಪರೀಕ್ಷಕರ ಪಕ್ಷಪಾತವನ್ನು ದೂರುವುದು!

ಮಧುಸೂದನ ಬಹಳ ಗಂಭೀರ ಪ್ರಕೃತಿಯವನು. ಸ್ವಂತ ವ್ಯವಹಾರದ ವಿಚಾರವಾಗಿ ಹೆಚ್ಚು ಮಾತೇ ಆಡುವುದಿಲ್ಲ. ಆದರೂ ಬತ್ತಿ ಹೋಗಿದ್ದ ಗಂಗೆಯಲ್ಲಿ ಪ್ರವಾಹಬರುತ್ತಿದೆಯೆಂದು ಅಂದಾಜು ಮಾಡಬಹುದಾಗಿತ್ತು. ಕುಟುಂಬ ಪಾಲನೆಯೇ ವ್ಯವಹಾರವಾಗಿರುವ ವಂಗದೇಶದಲ್ಲಿ ಇಷ್ಟುಮಟ್ಟಿಗೆ ಸ್ಥಿತಿಗತಿ ಇರುವವರು ಸಹಜವಾಗಿ ಮದುವೆಯ ಯೋಚನೆ ಮಾಡುವರು. ಬದುಕಿರುವವರೆಗೂ ಸಂಪತ್ತನ್ನು ಭೋಗಿಸಿ ಮನೆತನವು ತಮ್ಮ ಸಾವಿನನಂತರವೂ ಮುಂದುವರೆದು ಬಾಳಬೇಕೆಂಬ ಆಸೆ ಅವರಿಗೆ ಪ್ರಬಲ. ಹೆಣ್ಣು ಹೆತ್ತವರೂ ಮಧುಸೂದನನನ್ನು ಹೀಗೆ ಉತ್ತೇಜಿಸದೆ ಇರಲಿಲ್ಲ ಆದರೆ ಅವನೋ "ಮೊದಲು ನನ್ನ ಒಂದು ಹೊಟ್ಟೆ ತುಂಬಲಿ, ಆಮೇಲೆ ಬೇಕಾದರೆ ಬೇರೆಯವರ ಹೊಟ್ಟೆ ತುಂಬಿಸುವ ಯೋಚನೆ ಮಾಡೋಣ" ಎನ್ನುತ್ತಿದ್ದ. ಇದರಿಂದ ಮಧುಸೂದನನ ಹೃದಯ ಹೇಗೇ ಇರಲಿ, ಅವನ ಹೊಟ್ಟೆ ಮಾತ್ರ ಸಣ್ಣದಲ್ಲ ಎಂದು ಅರ್ಥವಾಗುವುದು.

ಈ ಸಮಯದಲ್ಲಿ ಮಧುಸೂದನನ ವ್ಯವಹಾರ ಕುಶಲತೆಯಿಂದ ರಜಬಪುರವು ಸೆಣಬಿನ ವ್ಯಾಪಾರಕ್ಕೆ ಕೇಂದ್ರವಾಯಿತು. ಹಠಾತ್ತಾಗಿ ಮಧುಸೂದನನು ಹೊಳೆಯಂಚಿನಲ್ಲಿದ್ದ ಬಂಜರು ನೆಲವನ್ನು ಎಲ್ಲರಿಗೂ ಮುಂಚೆ ಬೇಕಾದಷ್ಟು ಕೊಂಡು ಕೊಂಡುಬಿಟ್ಟನು. ಆಗ ದರವೂ ಅಗ್ಗವಾಗಿತ್ತು. ಅಲ್ಲಿ ವಿಸ್ತಾರವಾಗಿ ಇಟ್ಟಿಗೆಗೂಡು ಕಟ್ಟಿಸಿದನು. ನೇಪಾಳದಿಂದ ದೊಡ್ಡ ದೊಡ್ಡ ಸಾಲವೃಕ್ಷದ ದಿಮ್ಮಿಗಳು ಬಂದುವು, ಸಿಲ್‌ಹೆಟ್‌ನಿಂದ ಸುಣ್ಣ ಬಂತು, ಕಲಿಕತ್ತೆಯಿಂದ ಗುಡ್ಸ್ ಗಾಡಿಯಲ್ಲಿ ಜಿಂಕ್‌ಷೀಟುಗಳೂ ಬಂದುವು. ವ್ಯಾಪಾರಿ ಜನಗಳೆಲ್ಲಾ ಅವಾಕ್ಕಾದರು. "ಎಲಾ ನೋಡಿವನ! ಕೈಯಲ್ಲಿ ಸ್ವಲ್ಪ ದುಡ್ಡು ಸೇರಿತು. ಅದು ಹೇಗೆ ತೃಪ್ತಿ? ಈಗ ಅಜೀರ್ಣದ ಸರದಿ. ವ್ಯಾಪಾರ ಹಾಳಾಗುವ ದಾರಿ ನೋಡಬೇಕಲ್ಲ....ಹಯ್ಯೊ...." ಎಂದುಕೊಂಡರು.

ಈ ಸಲವೂ ಮಧುಸೂದನನ ಲೆಕ್ಕಾಚಾರದಲ್ಲಿ ತಪ್ಪಾಗಲಿಲ್ಲ. ನೋಡನೋಡುತ್ತಾ ರಜಬಪುರದಲ್ಲಿ ವ್ಯಾಪಾರದ ಪ್ರವಾಹ ಏರಿತು. ಅದರ ಸೆಳತದಲ್ಲಿಯೇ ದಳ್ಳಾಳಿಗಳ ತಂಡವೇ ಬಂದು ಸೇರಿತು. ಮಾರ್ವಾಡಿಗಳು ಗುಂಪಾಗಿ ಬಂದರು. ಕೂಲಿಗಳನ್ನು ಹೊರಗಡೆಯಿಂದ ಕರೆಸಿದ್ದಾಯಿತು. ಕಾರ್ಖಾನೆ ಕಟ್ಟಿಸಾಯಿತು. ಅದರ ಹೊಗೆ ಕೊಳವೆಯಿಂದ ಸುತ್ತುಸುತ್ತಾಗಿ ಹೊಗೆ ಏರಿ ಆಕಾಶದಲ್ಲಿ ಕಪ್ಪು ವಿಸ್ತಾರವಾಗಿ ಹರಡಿಕೊಂಡಿತು.

ಲೆಕ್ಕದ ಪುಸ್ತಕಗಳನ್ನು ಪರೀಕ್ಷಿಸದೆಯೇ ಮಧುಸೂದನನ ಮಹಿಮೆಯು ಈಗ ದೂರದಿಂದ ಕೂಡ ಬರಿಯ ಕಣ್ಣಿಗೇ ಕಾಣುತ್ತಿತ್ತು. ಬಡಾವಣೆಯೆಲ್ಲಕ್ಕೂ ಇವನೊಬ್ಬನೇ ಯಜಮಾನ.

ಪ್ರಾಕಾರದಿಂದ ಸುತ್ತುವರೆದ ಎರಡಂತಸ್ತಿನ ಕಟ್ಟಡ. ಹೊರಬಾಗಿಲಲ್ಲಿ ಕಲ್ಲು ಹಲಗೆಯಮೇಲೆ "ಮಧುಚಕ್ರ"ವೆಂದು ಕೆತ್ತಿದೆ. ಈ ಹೆಸರು ಅವನ ಹಳೆಯ ಕಾಲೇಜಿನ ಸಂಸ್ಕೃತ ಅಧ್ಯಾಪಕರು ಸೂಚಿಸಿದುದು. ಮಧುಸೂದನನನ್ನು ಅವರು ಅಕಸ್ಮಾತ್ತಾಗಿ ಮೊದಲಿಗಿಂತಲೂ ಹೆಚ್ಚಾಗಿ ಮೆಚ್ಚುವರು.

ಈಗ ವಿಧವೆಯಾದ ತಾಯಿ ಬಂದು ಹೆದರಿ ಹೆದರಿ "ಅಪ್ಪಾ, ಯಾವಾಗ ಕಣ್ಣು ಮುಚ್ಚಿಕೊಳ್ಳುತ್ತೇನೋ ಏನೋ, ಸೊಸೆ ಬಂದದ್ದಾದರೂ ನೋಡಿ ಹೋಗುವುದಕ್ಕಾಗುತ್ತೆಯೇನೋ?" ಎಂದಳು.

ಮಧುಸೂದನ ಗಂಭೀರವಾಗಿ "ಮದುವೆಯಾಗಬೇಕಾದರೂ ಸಮಯ ನಷ್ಟ, ಮದುವೆಯಾದಮೇಲೂ ಸಮಯ ನಷ್ಟ. ನನಗೆ ಪುರಸೊತ್ತು ಯಾವಾಗ ಹೇಳಮ್ಮ" ಎಂದು ಎರಡು ಮಾತಿನಲ್ಲೇ ಹೇಳಿಬಿಟ್ಟನು.

ಹೆಚ್ಚು ಬಲವಂತ ಮಾಡುವ ಸಾಹಸ ಅವರಮ್ಮನಿಗಿಲ್ಲ. ಅಲ್ಲದೆ ಅವನಂದಂತೆಯೇ ಸಮಯಕ್ಕೆ ಪೇಟೆಯಲ್ಲಿ ಬೆಲೆ. ಮಧುಸೂದನನದು ಒಂದೇ ಮಾತೆಂದು ಎಲ್ಲರಿಗೂ ಗೊತ್ತು.

ಇನ್ನೂ ಕೆಲವು ದಿನಗಳು ಕಳೆದುವು. ಅಭಿವೃದ್ಧಿಯ ಅಲೆಯೇರಿ ಉದ್ಯಮದ ಕಛೇರಿ ಹಳ್ಳಿಯೂರಿನಿಂದ ಕಲಿಕತ್ತೆಗೆ ಬಂತು. ಮೊಮ್ಮಕ್ಕಳನ್ನು ನೋಡುವ ಆಸೆ ಬಿಟ್ಟು ಅಮ್ಮ ಇಹಲೋಕವನ್ನು ತ್ಯಜಿಸಿದಳು. ಘೋಷಾಲ್ ಕಂಪೆನಿಯ ಹೆಸರು ಇಂದು ದೇಶ ವಿದೇಶಗಳಲ್ಲಿ ಹರಡಿತು. ಬಹಳ ಕಾಲದಿಂದ ನಡೆದು ಬಂದಿದ್ದ ವಿಲಾಯಿತಿ ಕಂಪೆನಿಗಳ ಸರಿಸಮಾನವಾಗಿ ನಡೆಯುತ್ತ ಬಂತು. ಶಾಖೆಶಾಖೆಗಳಿಗೂ ಆಂಗ್ಲೇಯ ಮ್ಯಾನೇಜರುಗಳು.

ಈಗ ಮದುವೆಗೆ ಪುರಸೊತ್ತು ಸಿಕ್ಕಿತೆಂದು ಮಧುಸೂದನ ತಾನಾಗಿಯೇ ಹೇಳಿಕೊಂಡನು. ಮದುವೆ ಹೆಣ್ಣುಗಳ ಬಜಾರಿನಲ್ಲಿ ಅವನ ಘನತೆ ಬಹಳ ಮೇಲಿತ್ತು. ಅಭಿಮಾನಿಯಾದ ಅತಿ ದೊಡ್ಡ ಗೃಹಸ್ಥನ ಮಾನಭಂಗ ಮಾಡಬಹುದಾದಷ್ಟಿತ್ತು ಅವನ ಶಕ್ತಿಯೀಗ. ನಾಲ್ಕು ಕಡೆಯಿಂದಲೂ ಅನೇಕ ಕುಲವತಿ, ರೂಪವತಿ, ಗುಣವತಿ, ಧನವತಿ, ವಿದ್ಯಾವತಿಯರಾದ ವಧುಗಳ ವಿವರಗಳು ಅವನಲ್ಲಿಗೆ ಬಂದುವು. ಆದರೆ ಮಧುಸೂದನನು ಕಣ್ಣರಳಿಸಿ "ಯಾವುದೂ ಬೇಕಿಲ್ಲ. ಆ ಚಟರ್ಜಿಯವರ ಮನೆ ಹೆಣ್ಣು ಸಾಕು" ಎಂದ.

ಏಟು ತಿಂದ ವಂಶ ಏಟು ತಿಂದ ಹೆಬ್ಬುಲಿಯಂತೆ....ಅಷ್ಟು ಭಯಂಕರ.

## ಮೂರನೆಯ ಅಧ್ಯಾಯ

ಈಗ ಹೆಣ್ಣಿನ ಮನೆಯವರ ಕಥೆ. ನೂರ್‌ನಗರದಲ್ಲಿ ಚಟರ್ಜಿಯವರ ಮನೆಯ ಈಗಿನ ಅವಸ್ಥೆ ಅಷ್ಟು ಚೆನ್ನಾಗಿಲ್ಲ. ಸಂಪತ್ತಿನ ಕಟ್ಟೆ ಒಡೆದು ಹೋಗಿದೆ. ಆರಾಣೆಯ ಭಾಗಸ್ಥರು ತಮ್ಮ ಪಾಲನ್ನು ತೆಗೆದುಕೊಂಡು ಬೇರೆಯಾಗಿ ಹೋದರು. ಈಗ ಅವರು ಲಾಠಿ ಹಿಡಿದುಕೊಂಡು ಹತ್ತಾಣೆಯ ಭಾಗಸ್ಥರ ಎಲ್ಲೆಯನ್ನು ಕಡಿಯಲು ಹೊಂಚು ಹಾಕುತ್ತಿದ್ದರು.

ನೂರ್‌ನಗರದಲ್ಲಿ ಈಗ ಮೊದಲಿನ ಪ್ರತಾಪವಿಲ್ಲ. ಆದಾಯ ನಿಂತುಹೋಗಿದೆ. ವ್ಯಯ ಮಾತ್ರ ನಾಲ್ಕರಷ್ಟು ವೃದ್ಧಿಯಾಗಿದೆ.

ಶೇಕಡ ಒಂಬತ್ತರ ದರದಲ್ಲಿ ಬಡ್ಡಿ ಹಾಕಿ ಸಾಲಕೊಟ್ಟವರು ಜಮೀನ್ದಾರಿಯ ಸುತ್ತಲೂ ಜೇಡರ ಹುಳುವಿನಂತೆ ಬಲೆ ಹಾಕಿ ಕಾದಿದ್ದಾರೆ.

ಕುಟುಂಬದಲ್ಲಿ ಇಬ್ಬರು ಸೋದರರು, ಐವರು ಸೋದರಿಯರು, ಹೆಣ್ಣು ಮಕ್ಕಳು ಹೆಚ್ಚಾದ ಅಪರಾದಕ್ಕೆ ದಂಡವಿನ್ನೂ ತೀರಿರಲಿಲ್ಲ. ಯಜಮಾನರಿದ್ದಾಗಲೇ ನಾಲ್ಕು ಮಂದಿ ಹಿರಿಯ ಹುಡುಗಿಯರ ಮದುವೆ ಕುಲೀನರ ಮನೆಗಳಿಗೆ ಕೊಟ್ಟು ನಡೆದಿತ್ತು. ಇವರ ಆಸ್ತಿಯ ಡೌಲು ಇಂದಿನದು. ಹೆಸರು ಮಾತ್ರ ಹಿಂದಿನಕಾಲದ್ದು. ಅಳಿಯಂದಿರ ದೊಡ್ಡಸ್ತನಕ್ಕೆ ತಕ್ಕಂತೆಯೂ, ಇವರ ಸ್ವಂತ ಖ್ಯಾತಿಗನುಗುಣವಾಗಿಯೂ ವರೋಪಚಾರಗಳು ನಡೆಯಬೇಕಾಯಿತು. ಈ ಬಾಬತಿಗಾಗಿಯೇ ಶೇಕಡ ಒಂಬತ್ತರಷ್ಟು ಬಡ್ಡಿಯ ಗಂಟು ಹಾಕಿದ್ದ ಸಾಲದ ಉರುಲಿಗೆ ಶೇಕಡಾ ಹನ್ನೆರಡರ ಗಂಟು ಬಿತ್ತು.

ತಮ್ಮನಾದವನು ತಲೆ ಕೊಡವಿಕೊಂಡು ಎದ್ದು "ನಾನು ಇಂಗ್ಲೆಂಡಿಗೆ ಹೋಗಿ ಬ್ಯಾರಿಸ್ಟರಾಗಿ ಬರುತ್ತೇನೆ. ಉದ್ಯೋಗ ಮಾಡದೆ ಹೋದರೆ ನಡೆಯುವುದಿಲ್ಲ." ಎಂದು ವಿಲಾಯತಿಗೆ ಹೊರಟ. ಹಿರಿಯನಾದ ವಿಪ್ರದಾಸನ ಮೇಲೆ ಬಿತ್ತು ಸಂಸಾರದ ಭಾರ.

ಈ ಸಂದರ್ಭದಲ್ಲಿಯೇ ಹಿಂದೆಯೇ ಹೇಳಿದ ಘೋಷಾಲ್ ಮತ್ತು ಚಟರ್ಜಿಯವರ ಭಾಗ್ಯದ ಗಾಳಿಪಟಗಳು ಒಂದಕ್ಕೊಂದು ತಗುಲಿ ಅವುಗಳ ಹೊಡೆದಾಟ ಪುನಃ ಆರಂಭವಾಯಿತು. ಅದರ ಕಥೆ ಹೀಗೆ.

ಬಡಾಬಜಾರಿನ ತನ್‌ಸುಖದಾಸ್ ಹಲ್‌ವಾಯಿಯ ಹತ್ತಿರ ಇವರಿಗೆ ಬಲು ದೊಡ್ಡ ಸಾಲವಿತ್ತು. ಕ್ಲುಪ್ತವಾಗಿ ಬಡ್ಡಿ ಸಲ್ಲಿಸುತ್ತಾ ಬಂದಿದ್ದರು. ಯಾವ ಆಕ್ಷೇಪಣೆಯೂ ಇರಲಿಲ್ಲ. ಈ ಸಮಯದಲ್ಲಿ ನವರಾತ್ರಿಯ ರಜದಲ್ಲಿ ವಿಪ್ರದಾಸನ ಸಹಪಾಠಿಯಾದ ಅಮೂಲ್ಯಧನನು ತನ್ನ ಗೆಳೆತನ ತೋರಿಸಿಕೊಳ್ಳಲು ಬಂದು ತಳವೂರಿದ. ಅವನು ದೊಡ್ಡ ಅಟೋರ್ನಿಗಳ ಆಫೀಸೊಂದರಲ್ಲಿ ಆರ್ಟಿಕಲ್ಡ್ ಹೆಡ್‌ಕ್ಲಾರ್ಕ್. ಕನ್ನಡಕ ಹಾಕಿದ ಈ ಯುವಕ ನೂರ್‌ನಗರದ ಅವಸ್ಥೆಯನ್ನು ವಾರೆಗಣ್ಣಿನಿಂದ ನೋಡಿದ. ಅವನು ಕಲಿಕತ್ತೆಗೆ ಹಿಂದಿರುಗಿದ. ಕೂಡಲೇ ತನ್‌ಸುಖದಾಸನೂ ಬಂದು ಹಣವಾಪಸು ಬೇಕೆಂದು ಹಠ ಹಿಡಿದು ಕುಳಿತ. "ಹೊಸ ಸಕ್ಕರೆ ಕಾರ್ಖಾನೆ ತೆರೆಯಬೇಕಾಗಿದೆ ಹಣ ತುರ್ತಾಗಿ ಬೇಕು." ಎಂದ.

ವಿಪ್ರದಾಸನು ತಲೆಯಮೇಲೆ ಕೈಯಿಟ್ಟುಕೊಂಡು ಕೂತ.

ಈ ಸಂಕಟಕಾಲದಲ್ಲಿಯೇ ಚಟರ್ಜಿಯವರ ಮತ್ತು ಘೋಷಾಲರ ಹೆಸರುಗಳಲ್ಲಿ ಎರಡನೆಯ ಸಲ ದ್ವಂದ್ವ ಸಮಾಸ ಘಟಿಸಿತು. ಇದಕ್ಕೆ ಪೂರ್ವದಲ್ಲಿಯೇ ಸರ್ಕಾರದಿಂದ ಮಧುಸೂದನನು 'ರಾಜಾ' ಎಂಬ ಬಿರುದನ್ನು ಪಡೆದಿದ್ದ. ಹಿಂದೆ ಹೇಳಿದ ಸಹಪಾಠಿಯೇ ಬಂದು "ಹೊಸ ರಾಜಾಸಾಹೇಬರು ಬಹಳ ಖುಷಿಯಲ್ಲಿದ್ದಾರೆ. ಈ ಸಮಯದಲ್ಲಿ ಅವರ ಹತ್ತಿರ ಸುಲಭದರದಲ್ಲಿ ಸಾಲ ಪಡೆಯಬಹುದು" ಎಂದು ಸಲಹೆಕೊಟ್ಟ. ಹಾಗೆಯೇ ಪಡೆದುದೂ ಆಯಿತು. ಚಟರ್ಜಿ ಮನೆಯವರ ಹನ್ನೊಂದು ಲಕ್ಷದಷ್ಟು ಸಮಸ್ತ ಸಾಲವೂ ಶೇಕಡ ಏಳರ ದರದಲ್ಲಿ ಒಂದೇ ಕಡೆ ಸೇರಿತು. ವಿಪ್ರದಾಸನು ನಿಶ್ಚಿಂತೆಯ ನಿಟ್ಟುಸಿರನ್ನು ಬಿಟ್ಟು ಕೂತ.

ಕುಮುದಿನಿಯು ಇವರಿಗೆ ಕಡೆಯ ತಂಗಿ. ಮದುವೆ ಮಾಡುವುದಕ್ಕೆ ಇವಳೊಬ್ಬಳೇ ಉಳಿದಿದ್ದರೂ ಅದಕ್ಕೆ ತಕ್ಕಂತೆ ಅವರ ಸ್ಥಿತಿಯೂ ಕಡೆಯ ದೆಸೆಯಲ್ಲಿತ್ತು. ವರದಕ್ಷಿಣೆಯನ್ನು ಒದಗಿ

ಸುವ, ಗಂಡು ಹುಡುಕುವ ತಾಪತ್ರಯವನ್ನು ನೆನಸಿಕೊಳ್ಳುವುದೇ ಕಷ್ಟ. ನೋಡುವುದಕ್ಕೆ ಅವಳು ಚೆಲುವೆ. ತೆಳ್ಳಗೆ ಉದ್ದವಾಗಿದ್ದಳು, ರಜನೀಗಂಧದ ಪುಷ್ಪದಂಡೆಯಂತೆ ಸೊಬಗುಳ್ಳ ಜವ್ವನೆ. ಕಣ್ಣುಗಳು ಅಷ್ಟು ದೊಡ್ಡವಲ್ಲದಿದ್ದರೂ ನಿಬಿಡವಾಗಿ, ಕಪ್ಪಗೆ, ಆಕರ್ಷಕವಾಗಿದ್ದುವು. ಮೂಗು ಮಾಟವಾಗಿ ಹೂವಿನ ಎಸಳಿನಿಂದ ರಚಿಸಿದ ಹಾಗಿತ್ತು. ಸೊಗಸಾದ ಗೌರವರ್ಣ. ಅವಳ ಕೈಗಳಿಂದ ದೊರೆಯುವ ಸೇವೆಯು ಕಮಲ ಪುಷ್ಪದ ವರದಾನದಂತೆ, ಪಡೆಯುವವರು ಕೃತಾರ್ಥರಾಗಬೇಕು. ಮುಖದ ಮೇಲೆಲ್ಲಾ ಖೇದದ, ಕರುಣಾಭರಿತ ಧೈರ್ಯದ ಭಾವವಿತ್ತು.

ಕುಮುದಿನಿ ತನ್ನ ವಿಷಯವಾಗಿ ತಾನೇ ಸಂಕೋಚಪಡುತ್ತಿದ್ದಳು. ತಾನು ಹತಭಾಗ್ಯಳೆಂದು ಅವಳು ತಿಳಿದಿದ್ದಳು. ಗಂಡಸರು ಸ್ವಂತ ಶಕ್ತಿಯಿಂದ ಸಂಸಾರ ನಿರ್ವಾಹಮಾಡಬಲ್ಲರೆಂದೂ ಮನೆಗೆ ಲಕ್ಷ್ಮಿಯನ್ನು ತರಬಲ್ಲರೆಂದೂ ಅವಳ ನಂಬಿಕೆ. ಆದರೆ ಅವಳಿಂದ ಇದುವರೆಗೆ ಹಾಗೇನೂ ಆಗಿಲ್ಲ. ಅವಳಿಗೆ ತಿಳಿವಳಿಕೆಯ ವಯಸ್ಸು ಬಂದಾಗಿನಿಂದ ನಾಲ್ಕು ದಿಕ್ಕುಗಳಲ್ಲೂ ಕಾಣಬರುತ್ತಿದ್ದುದು ದೌರ್ಭಾಗ್ಯದ ಪಾಪದೃಷ್ಟಿ. ಸಾಲದೆ ಇಂತಹ ಕುಟುಂಬದ ಮೇಲೆ ತನ್ನ ಲಗ್ನದಯೋಚನೆ, ಭಾರವಾದ ಕಲ್ಲಿನಂತೆ, ಹೇರಲ್ಪಟ್ಟಿರುವುದನ್ನು ತಿಳಿದು ಅವಳಿಗೆಷ್ಟು ದುಃಖವೋ ಅಷ್ಟೇ ಅವಮಾನ. ಹಣೆಚಚ್ಚಿಕೊಳ್ಳುವುದರ ಹೊರತು ಬೇರೇನೂ ಮಾಡುವಹಾಗೆ ಇಲ್ಲ. ದಾರಿ ಹುಡುಕುವ ಶಕ್ತಿಯನ್ನು ದೇವರು ಹೆಣ್ಣುಮಕ್ಕಳಿಗೆ ಕೊಟ್ಟಿಲ್ಲ. ಕೊಟ್ಟಿರುವುದು ಕೇವಲ ಯಾತನೆಯನ್ನನುಭವಿಸುವ ಶಕ್ತಿ....ಅಸಂಭಾವ್ಯವಾದುದು ಯಾವುದಾದರೂ ಆಗಬಾರದೇ ? ಯಾವುದಾದರೂ ದೇವತೆಯರ- ಯಾವುದಾದರೂ ಯಕ್ಷನ ಧನ, ಪೂರ್ವಜನ್ಮದ ಯಾವುದಾದರೂ ಬರಬೇಕಾದ ಹಳೆಯ ಸಾಲ ಈಗ ಕೈಗೆ ಬರಬಾರದೇ ? ಒಂದೊಂದು ರಾತ್ರಿ ಹಾಸಿಗೆಯಿಂದೆದ್ದು ತೋಟದಲ್ಲಿ ಮರ್ಮರ ಶಬ್ದಮಾಡುತ್ತಿರುವ ಗಿಡಗಳ ರೆಂಬೆಗಳ ಕಡೆ ನಿಟ್ಟಿಸಿ ನೋಡುತ್ತಾ ಮನಸ್ಸಿನಲ್ಲಿಯೇ "ಎಲ್ಲಿರುವೆ, ನನ್ನ ರಾಜಪುತ್ರನೇ, ನಿನ್ನ ಸಾಮ್ರಾಜ್ಯದ ಭಂಡಾರವೆಲ್ಲಿ....ಎಲ್ಲಿ ಧನ, ಮಾಣಿಕ್ಯ....ನನ್ನ ಅಣ್ಣಂದಿರನ್ನು ಕಾಪಾಡಲಾರೆಯಾ....ನಾನು ಚಿರಕಾಲ ನಿನ್ನ ದಾಸಿಯಾಗಿಯೇ ಉಳಿಯುವೆನು." ಎಂದು ತಪಿಸುವಳು.

ವಂಶದ ದುರ್ಗತಿಗಾಗಿ ತನ್ನನ್ನೇ ಎಷ್ಟುದೂರಿಕೊಂಡರೂ ಅಷ್ಟೇ ತನ್ನ ಹೃದಯದ ಮಮತಾ ಸುಧೆಯನ್ನು ಉಕ್ಕಿಸಿ ಅಣ್ಣಂದಿರಮೇಲೆ ಪ್ರೀತಿ ತೋರಿಸುವಳು....ಕಠಿಣ ದುಃಖದಲ್ಲಿ ಬೆಂದ ಶುದ್ಧವಾದ ವಿಶ್ವಾಸವನ್ನು ನೀಡುವಳು. ಕುಮುದಿನಿಯ ಬಗ್ಗೆ ತಮ್ಮ ಕರ್ತವ್ಯವನ್ನು ಮಾಡಲಾರೆವಲ್ಲಾ ಎಂದು ಅವಳ ಅಣ್ಣಂದಿರೂ ಕೂಡ ಬಹಳ ಖೇದಗೊಂಡು ಅವಳನ್ನು ಮಿತಿಮೀರಿದ ಪ್ರೀತಿಯಿಂದ ಆದರಿಸುತ್ತಾರೆ. ಈ ತಂದೆತಾಯಿಗಳಿಲ್ಲದ ತಬ್ಬಲಿಯನ್ನು ದೇವರು ಅವಳಿಗೆ ಪ್ರಾಪ್ಯವಾದ ಯಾವ ಪ್ರೀತಿಯಿಂದ ವಂಚಿಸಿದ್ದಾನೋ ಆ ಪ್ರೀತಿಯನ್ನು ತಾವೇ ಕೊಡಲು ತವಕಪಡುತ್ತಿದ್ದರು. ಅವಳೊಂದು ಚಂದ್ರಕಿರಣದ ತುಣುಕು...ದುರ್ಗತಿಯ ಕತ್ತಲೆಯನ್ನು ಹೇಗೋಅನುಭವಿಸುವಷ್ಟು ಮಧುರವಾಗಿ ಮಾಡಿರುವಳೆಂದು ಅವರ ಎಣಿಕೆ. ಯಾವಾಗಲಾದರೂ ಅವರ ದುಃಸ್ಥಿತಿಗಾಗಿ ಅವಳು ತನ್ನನ್ನೇ ದೂರಿಕೊಂಡಾಗ ಅವಳಣ್ಣ ವಿಪ್ರದಾಸನು ನಗುತ್ತಾ "ಕುಮೂ, ನೀನೇ ಅಲ್ಲವೇ ನಮ್ಮಗಳ ಸೌಭಾಗ್ಯ, ಇನ್ನು ನೀನೂ ಇಲ್ಲದೆ ಹೋಗಿದ್ದರೆ ನಮ್ಮ ಮನೆಯ ಲಕ್ಷ್ಮಿಯೆಲ್ಲಿರುತ್ತಿತ್ತು?" ಎನ್ನುತ್ತಿದ್ದನು.

ಕುಮುದಿನಿಯು ಮನೆಯಲ್ಲಿಯೇ ಓದು ಬರೆಹ ಕಲಿತಿದ್ದಾಳೆ. ಹೊರಗಿನ ಪರಿಚಯವೇ

ಇಲ್ಲವೆಂದು ಹೇಳಬಹುದು. ಪುರಾತನ-ನವೀನ ಎರಡು ಕಾಲಗಳ ಬೆಳಕು-ಕತ್ತಲೆಗಳಲ್ಲಿಯೇ ಅವಳ ವಾಸ. ಅವಳ ಜಗತ್ತು ಮಂಜಿನಿಂದಾವೃತವಾದದ್ದು. ಅಲ್ಲಿ ಸಿದ್ಧೇಶ್ವರಿ, ಗಂಧೇಶ್ವರಿ ಮುಂತಾದ ದೇವತೆಗಳೇ ಪ್ರಭುತ್ವಮಾಡುವವರು, ಅಲ್ಲಿ ಹೆಚ್ಚುದಿನಗಳು ಚಂದ್ರನೇ ಕಾಣಿಸನು. ಶಂಖ ಊದಿ ಗ್ರಹಣದ ಕುದೃಷ್ಟಿಯನ್ನು ತೊಲಗಿಸಬೇಕಾಗಿತ್ತು. ಅಂಬುವಾಚಿ (ಆಷಾಢ ಶುದ್ಧ ಸಪ್ತಮಿಯಿಂದ ನವಮಿಯವರೆಗಿನ ಮೂರು ಪುಣ್ಯದಿನಗಳು)ಯಲ್ಲಿ ಅಲ್ಲಿ ಹಾಲು ಕುಡಿದರೆ ಸರ್ಪದ ಭಯ ತಪ್ಪುವುದು. ಮಂತ್ರ ಪಠಿಸಿ, ಆಡಿನ ಮರಿಯನ್ನು ಬಲಿಯಾಗಿ ಒಪ್ಪಿಸಲು ಹರಕೆ ಹೊತ್ತು ಅಡಕೆ, ಬತ್ತದರಳು, ಮತ್ತು ಐದು ಪೈಸಾಗಳಷ್ಟು ಬತ್ತಾಸನ್ನು ಅರ್ಪಿಸುವುದಾಗಿ ಹೇಳಿ ಯಂತ್ರ, ತಾಯಿತಿ ಕಟ್ಟಿಕೊಂಡರೆ ಆ ಜಗತ್ತಿನ ಶುಭಾಶುಭಗಳೊಡನೆ ಕಾರುಬಾರು ನಡೆಸಬಹುದು. ಸ್ವಸ್ತ್ಯಯನದ ಬಲದಿಂದ ಭಾಗ್ಯ ಸಂಶೋಧನೆಯ ಆಸೆ. ಆ ಆಸೆ ಸಾವಿರಸಲ ವ್ಯರ್ಥವಾಗಿದೆ. ಪ್ರತ್ಯಕ್ಷವಾಗಿ ಎಷ್ಟೋಸಲ ಶುಭ ಲಗ್ನದಲ್ಲಿ ಶುಭ ಫಲಿಸದೆಂದು ಅನುಭವಿಸಿಯಾಗಿದೆ. ಆದರೂ ಪ್ರಮಾಣದ ಮೂಲಕ ಸ್ವಪ್ನದ ಮೋಹವನ್ನು ಕತ್ತರಿಸಲು ವಾಸ್ತವಕ್ಕೆ ಶಕ್ತಿಯಿಲ್ಲ; ಸ್ವಪ್ನ ಜಗತ್ತಿನಲ್ಲಿ ವಿಚಾರಕ್ಕೆ ಸ್ಥಳವಿಲ್ಲ. ತಲೆ ಬಗ್ಗಿಸಿ ನಂಬಿಕೊಂಡು ನಡೆಯುವುದೇ ಅಲ್ಲಿ ಅಸಾಧ್ಯ. ಈ ಜಗತ್ತಿನ ದೈವದ ಕ್ಷೇತ್ರದಲ್ಲಿ ಯುಕ್ತತೆಯ ಸುಸಂಗತಿಯಿಲ್ಲ, ಬುದ್ಧಿಯ ಕರ್ತೃವಿಲ್ಲ, ಮತ್ತು ಒಳ್ಳೆಯದು-ಕೆಟ್ಟದು ಇವುಗಳ ನಿತ್ಯತತ್ವವೂ ಇಲ್ಲವೆಂದೇ ಕುಮುದಿನಿಯ ಮುಖದಲ್ಲಿ ಇಂತಹ ಮರುಕದ ಭಾವ. ತಪ್ಪುಮಾಡದೆಯೇ ಅವಳಂತಹ ಸ್ಥಿತಿಯಲ್ಲಿದ್ದಾಳೆ. ಎಂಟುವರ್ಷಗಳಿಂದ ಅವಳೀಕೊರತೆಯನ್ನು ಏಕಾಂತದಲ್ಲಿ ತನ್ನದೇ ಎಂದು ಗ್ರಹಣಮಾಡಿದ್ದಳು....ಅದು ಅವಳ ತಂದೆಯ ಸಾವಿನಿಂದ ಮೊದಲಾಗಿತ್ತು-

# ನಾಲ್ಕನೆಯ ಅಧ್ಯಾಯ

ಹಳೆಯ ಕಾಲದ ಧನಿಕರು ವಾಸಿಸುತ್ತಿದ್ದ ಪುರಾತನ ದುರ್ಗಗಳ ಕಟ್ಟಡ ಬಹಳ ಬಲವಾದುದು. ಬಹಳ ವಿಸ್ತಾರ. ಅನೇಕ ದ್ವಾರಗಳನ್ನು ದಾಟಿದ ಮೇಲೆಯೇ ಹೊಸ ಕಾಲದವರು ಅಲ್ಲಿ ಪ್ರವೇಶ ಮಾಡಲು ಸಾಧ್ಯ, ಅಲ್ಲಿರುವವರು ಹೊಸ ಯುಗಕ್ಕೆ ಬಂದು ಸೇರವುದೂ ಕೂಡ ಅಷ್ಟೇ ಕಷ್ಟ, ವಿಳಂಬ. ವಿಪ್ರದಾಸನ ತಂದೆ ಮುಕುಂದಲಾಲರೂ ಮುಂದೆ ಓಡುತ್ತಿರುವ ನವೀನ ಯುಗವನ್ನು ಹಿಡಿಯಲಾರದೆ ಹೋದರು.

ದೀರ್ಘವಾದ, ಗೌರವರ್ಣದ ದೇಹ ಅವರದು. ಗುಂಗುರು ಕೂದಲು, ದೊಡ್ಡ ದೊಡ್ಡದಾಗಿ ಎಳೆದ ಕಣ್ಣುಗಳಲ್ಲಿ ತಡೆಯಿಲ್ಲದ ಅಧಿಕಾರದ ದೃಷ್ಟಿ. ಆಳವಾದ ಧ್ವನಿಯಲ್ಲಿ ಕೂಗು ಹಾಕಿದರೆ ಅನುಚರ ಚಾಕರರ ಎದೆ ಥರಥರಗುಟ್ಟುವುದು. ಪೈಲ್ವಾನನನ್ನು ನೇಮಿಸಿಕೊಂಡು ನಿಯಮಿತವಾಗಿ ಕುಸ್ತೀ ಮಾಡುವುದು ಅವರ ಅಭ್ಯಾಸವಾಗಿದ್ದರೂ, ಶಕ್ತಿಗೆ ಕೊರತೆಯಿಲ್ಲದ ಅವರ ಸುಕುಮಾರ ಶರೀರದಲ್ಲಿ ಶ್ರಮದ ಚಿಹ್ನೆಯೇ ಕಾಣಿಸದು. ತೊಡುತ್ತಿದ್ದುದು ಚಿತ್ರ ಹೆಣಿಗೆ ಹಾಕಿದ ಹಗುರವಾದ ಮಸ್ಲಿನ್ ಜುಬ್ಬಾ, ಮತ್ತು ಪ್ರಯಾಸಪಟ್ಟು ವಿಚಕ್ಷಣೆಯಿಂದ ನೆರಿಗೆಯಿಟ್ಟು ನೆಲದವರೆಗೂ ಜೋಲಾಡುವ ಕಚ್ಚೆ ಹಾಕಿದ ಫರಾಸ್ ಡಂಗಾ ಅಥವಾ ಢಾಕಾದ ಧೋತರ. ಧಣಿ ಬರುತ್ತಿರುವನೆಂಬ ಸುದ್ದಿಯನ್ನು ಇಸ್ತಾಂಬೂಲಿನ ಅತ್ತರಿನ ಸುಗಂಧವನ್ನು ಹೊತ್ತ

ಗಾಳಿ ತಂದು ಸಾರುವುದು. ಕೈಯಲ್ಲಿ ಚಿನ್ನದ ತಾಂಬೂಲದ ಡಬ್ಬಿಯನ್ನು ಹಿಡಿದುಕೊಂಡು ಖಾನ್‌ಸಾಮಾ ಹಿಂಬಾಲಿಸಿ ಬರುತ್ತಿದ್ದನು. ಬಾಗಿಲಲ್ಲಿ ದವಾಲಿ ಹಾಕಿದ ಚಾರಸದಾ ಹಾಜರಿರುತ್ತಿದ್ದನು. ಹೆಬ್ಬಾಗಿಲಲ್ಲಿ, ವೃದ್ಧನಾದ ಚಂದ್ರಭಾನ ಜಮಾದಾರನು ಹೊಗೇಸೊಪ್ಪು ತೀಡುತ್ತಾ ಇಲ್ಲವೇ ಭಂಗೀಸೊಪ್ಪನ್ನರೆಯುತ್ತಾ ಮಧ್ಯೆ ಮಧ್ಯೆ ಬೆಂಚಿನ ಮೇಲೆ ಕೂತು ಉದ್ದವಾದ ದಾಡಿಯನ್ನು ಎರಡು ಭಾಗ ಮಾಡಿ ಬಾರಿಬಾರಿಗೂ ಹೊಸೆದು ಎರಡು ಕಿವಿಗಳ ಮೇಲೆಯೂ ಎಳೆದು ಕಟ್ಟುವನು. ಹೊರ ಪ್ರಾಂಗಣದ ಗೋಡೆಯ ಮೇಲೆ ನಾನಾ ಬಗೆಯ ಗುರಾಣಿಗಳೂ, ಅರ್ಧ ಚಂದ್ರಾಕಾರದ ಕತ್ತಿಗಳೂ ಬಹುಕಾಲದ ಹಿಂದಿನ ಬಂದೂಕು ಭರ್ಜಿ ಈಟಿಗಳೂ ಜೋತು ಹಾಕಲ್ಪಟ್ಟಿದ್ದುವು,

ಬೈಠಕು ಖಾನೆಯಲ್ಲಿ ಮುಕುಂದಲಾಲರು ಎತ್ತರವಾದ ಪೀಠದ ಮೇಲೆ ಕೂಡುವರು. ಬೆನ್ನ ಹಿಂದೆ ಮೆತ್ತನೆಯ ದಿಂಬು. ಪರಿವಾರದವರು ಮತ್ತು ಸಮಾಲೋಚಕರು ಎದುರಿನಲ್ಲೂ ಎಡ ಭಾಗದಲ್ಲೂ ಕೆಳಗಡೆ ಕೂಡುತ್ತಿದ್ದರು. ಹುಕ್ಕಾ ತಯಾರು ಮಾಡುವವರಿಗೆ ಈ ಕೂಟದಲ್ಲಿ ಯಾರು ಯಾರಿಗೆ ಯಾವ ತರಹೆಯಾಗಿ ಹುಕ್ಕಾ ತಯಾರು ಮಾಡಬೇಕೆಂಬುದು ಚೆನ್ನಾಗಿ ಗೊತ್ತು....ಧಣಿಗಳಿಗೋಸ್ಕರವಾಗಿ ದೊಡ್ಡ ಉದ್ದವಾದ ಕೊಳವೆಯುಳ್ಳ ದೊಡ್ಡ ಗುಡುಗುಡಿ. ಪನ್ನೀರಿನಲ್ಲಿ ತೋಯಿಸಿದ ತಂಬಾಕಿನ ಸುವಾಸನೆ ಅದರಿಂದ ಹೊರಡುತ್ತಿತ್ತು.

ಮನೆಯ ಮತ್ತೊಂದು ಭಾಗದಲ್ಲಿ ವಿಲಾಯತೀ ಮಾದರಿಯ ಬೈಠಕು ಖಾನೆ. ಅಲ್ಲಿ ಹದಿನೆಂಟನೆಯ ಶತಮಾನದ ಪಾಶ್ಚಾತ್ಯ ಮಾಲುಗಳು. ಎದುರಿನಲ್ಲಿಯೇ ಕರಿಯ ಮರದ ಚೌಕಟ್ಟು ಹಾಕಿದ ನಿಲುವುಗನ್ನಡಿ, ಅದರ ಪಾಲೀಷು ಮಾಡಿದ ಚೌಕಟ್ಟಿನ ಎರಡು ಕಡೆಯೂ ರೆಕ್ಕೆಯುಳ್ಳ ದೇವಕನ್ನಿಕೆಯರ ಕೈಗಳಲ್ಲಿ ದೀಪದಾನಿ. ಕೆಳಗೆ ಮೇಜಿನ ಮೇಲೆ ಬಂಗಾರದ ಲೇಪಹಾಕಲ್ಪಟ್ಟ ಕರೀ ಕಲ್ಲಿನ ಗಡಿಯಾರ, ಮತ್ತು ಹಲವಾರು ವಿಲಾಯತಿಯ ಗಾಜಿನ ಬೊಂಬೆಗಳು. ನೆಟ್ಟನೆಯ ಕುರ್ಚಿಗಳು, ಸೋಫಾಗಳು, ಸರಪಳಿಯಲ್ಲಿ ಜೋಲಾಡುವ ಥಳಥಳಗುಟ್ಟುವ ತೂಗು ದೀಪಗಳು, ರಸಗುಂಡುಗಳು. ಗೋಡೆಯ ಮೇಲೆ ಪೂರ್ವ ಪುರುಷರ ತೈಲ ಚಿತ್ರಗಳು, ಅಲ್ಲದೆ ಅವುಗಳ ಜೊತೆಯಲ್ಲಿ ವಂಶಕ್ಕೆ ಆಪ್ತರಾದ ಇಬ್ಬರು, ಮೂವರು ರಾಜಪುತ್ರರ ಚಿತ್ರಗಳು. ಕೋಣೆ ಯಾದ್ಯಂತ ನೆಲದ ಮೇಲೆ ಹರಡಿದ್ದ ವಿಲಾಯತಿಯ ರತ್ನಗಂಬಳಿ. ಅದರ ಮೇಲೆ ಸೊಗಸಾದ ಬಣ್ಣದಲ್ಲಿ ಹೂಗಳನ್ನು ಚಿತ್ರಿಸಿದ್ದರು. ವಿಶೇಷ ಕ್ರಿಯಾಕರ್ಮಗಳ ಸಮಯದಲ್ಲಿ ಜಿಲ್ಲೆಯ ಸಾಹೇಬ ಸುಬೇದಾರರನ್ನು ಸತ್ಕಾರ ಮಾಡುವಾಗ ಈ ಕೋಣೆಯ ಪರದೆಯು ತೆಗೆಯಲ್ಪಡುತ್ತಿತ್ತು. ಮನೆಯಲ್ಲಿ ಇದು ಒಂದು ಮಾತ್ರ ಆಧುನಿಕ ಕೋಣೆ. ಆದರೆ ವಿಚಿತ್ರ! ಇದೇ ಎಲ್ಲಕ್ಕಿಂತಲೂ ಹಳೆಯ ಭೂತ—ಪಿಶಾಚಿಗಳಿಗೆ ಆಸರೆಯಾದ ಕೋಣೆಯೆಂದು ತೋರುತ್ತದೆ. ಉಪಯೋಗಿಸಲ್ಪಡದೆ ಮುಚ್ಚಿದ್ದುದರಿಂದ ಶೇಖರಿಸಿಕೊಂಡಿದ್ದ ದುರ್ನಾತವು ಮೂಗಿಗೆ ಬಡಿದು ಉಸಿರು ಕಟ್ಟುತ್ತಿತ್ತು. ಆ ಕೋಣೆ ದೈನಿಕ ಜೀವನ ಯಾತ್ರೆಯ ಸಂಪರ್ಕದಿಂದ ವಂಚಿತನಾದ ಹುಟ್ಟು ಕಿವುಡನಂತೆ ವ್ಯರ್ಥಬಾಳನ್ನು ಕಳೆಯುತ್ತಿತ್ತು.

ಮುಕುಂದಲಾಲರ ಈ ಲೋಲುಪ್ತತೆ ಅಂದಿನ ಕಾಲದ ರೂಢಿಗೆ ತಕ್ಕಂತೆ ಇತ್ತು. ಅದರ ಜೊತೆಯಲ್ಲಿ ಗೊತ್ತು ಗುರಿಯಿಲ್ಲದೆ ಧಾರಾಳವಾಗಿ ವ್ಯಯಮಾಡುತ್ತಿದ್ದುದೂ ಆ ಧನಕ್ಕೆ ಮರ್ಯಾದೆ ಕೊಟ್ಟಿತ್ತು. ಅಂದರೆ ಹಣ ತಲೆಯಮೇಲೆ ಹೊರೆಯಾಗಿ ಏರಿಸಲ್ಪಟ್ಟಿರಲಿಲ್ಲ. ಪಾದ ಪೀಠವಾಗಿ

ಕಾಲಿನಡಿಯಲ್ಲಿಡಲ್ಪಟ್ಟಿತ್ತು. ಇವರ ರಸಿಕತೆಯು ಬಹಿರಂಗ ಸಭೆಯಲ್ಲಿ ದಾನ ದಕ್ಷಿಣೆ, ಖಾಸಾ ದರಬಾರಿನಲ್ಲಿ ವಿಷಯ ವಿಲಾಸ, ಈ ರೂಪಗಳಲ್ಲಿ ಪ್ರಕಟವಾಗುತ್ತಿತ್ತು. ಎರಡೂ ಬಹು ದೊಡ್ಡ ತರದ್ದು, ಒಂದು ಕಡೆ ಆಶ್ರಿತವಾತ್ಸಲ್ಯದಲ್ಲಿ ಎಷ್ಟು ಮಟ್ಟಿಗೆ ಧಾರಾಳವಿತ್ತೋ ಇನ್ನೊಂದು ಕಡೆ ಅಹಂಕಾರವನ್ನು ತುಳಿದು ಮಟ್ಟ ಹಾಕುವುದರಲ್ಲಿ ಅಷ್ಟೇ ಉಗ್ರತೆಯೂ ಇತ್ತು.

ಒಂದು ಸಲ ಇದ್ದಕ್ಕಿದ್ದಹಾಗೆ ಹಣವಂತನಾದ ನೆರೆಯವನೊಬ್ಬ ಯಾವುದೋ ದೊಡ್ಡ ತಪ್ಪಿಗಾಗಿಯೇ ಇವರ ಮಾಲಿಯ ಮಗನ ಕಿವಿಯನ್ನು ಹಿಂಡಿದನು ಅಷ್ಟೆ, ಇಷ್ಟಕ್ಕೆ ಕೋಪಗೊಂಡು ಈ ಹೊಸ ಹಣವಂತನಿಗೆ ಶಿಕ್ಷೆಮಾಡಿಸುವುದಕ್ಕೋಸ್ಕರ ಎಷ್ಟು ಹಣ ಖರ್ಚುಮಾಡಿದರೆಂದರೆ, ಸ್ವಂತ ಮಗನನ್ನು ಕಾಲೇಜಲ್ಲಿ ಓದಿಸಿ ತೇರ್ಗಡೆ ಮಾಡಿಸಲು ಈಗಿನಕಾಲದಲ್ಲಿ ಯಾರೂ ಅಷ್ಟು ಖರ್ಚುಮಾಡುವುದಿಲ್ಲ. ಇಷ್ಟಾದರೂ ತೋಟಗಾರನ ಮಗನನ್ನು ಸುಮ್ಮನೆ ಬಿಡಲಿಲ್ಲ. ಕಮ್ಮಿಯಿಂದ ಚೆನ್ನಾಗಿ ಬಾರಿಸಿ ಹಾಸಿಗೆ ಹಿಡಿಯುವ ಹಾಗೆ ಮಾಡಿದರು. ಕೋಪದಾವೇಶದಲ್ಲಿ ಚಾವಟಿಯ ಏಟು ಜೋರಾದರೂ ಹುಡುಗ ಅದರಿಂದಲೂ ಉನ್ನತಿಹೊಂದಿದನು. ಧಣಿಗಳ ಖರ್ಚಿನಲ್ಲಿಯೇ ವಿದ್ಯಾಭ್ಯಾಸ ಪಡೆದು ಅವನೀಗ ಮೊಖ್ತ್ಯಾರನಾಗಿದ್ದಾನೆ

ಹಿಂದಿನ ಕಾಲದ ಶ್ರೀಮಂತರ ರೂಢಿಗನುಸಾರವಾಗಿ ಮುಕುಂದಲಾಲರ ಜೀವನ ಎರಡು ಮಹಲುಗಳಲ್ಲಿ. ಒಂದರಲ್ಲಿ ಗೃಹಸ್ಥಜೀವನ. ಇನ್ನೊಂದರಲ್ಲಿ ವಿಲಾಸ....ಎಂದರೆ ಒಂದು ಮನೆಯಲ್ಲಿ ವಿಧ್ಯುಕ್ತವಾದ ದಶಕರ್ಮಗಳು. ಮತ್ತೊಂದರಲ್ಲಿ ಹನ್ನೊಂದನೆಯ ಕುಕರ್ಮ. ಒಂದು ಮನೆಯಲ್ಲಿ ಇಷ್ಟದೇವತೆಯಿದೆ ಮತ್ತು ಗೃಹಿಣಿ. ಅಲ್ಲಿ ಪೂಜಾ, ಅರ್ಚನೆ. ಅತಿಥಿ ಸತ್ಕಾರ, ಹಬ್ಬ ಹುಣ್ಣಿಮೆ, ವ್ರತ, ಉಪವಾಸ, ಬ್ರಾಹ್ಮಣ ಸಂತರ್ಪಣೆ, ನೆರೆಹೊರೆಯವರ ಉಪಚಾರ, ಗುರು ಪುರೋಹಿತ ಸೇವೆ.

ಭೋಗಮಂದಿರವು ಗೃಹದ ಎಲ್ಲೆಗಾಚೆ, ಅಲ್ಲಿ ನವಾಬೀ ದರಬಾರು, ಆಮೋದ ಕೂಟಗಳ ಸಂಭ್ರಮದಿಂದ ತಲೆ ಕಾದುಹೋಗುವಂತಿತ್ತು. ಅಲ್ಲಿಗೆ ಬಂದುಹೋಗುತ್ತಿದ್ದ ಜನ ಇವರ ಕುಟುಂಬವಿರುವ ಮನೆಗೆ ಬರಲಾಗದ ಪುರವಾಸಿಯರು. ಅಂತಹವರ ಸಹವಾಸವನ್ನು ಅಂದಿನ ಶ್ರೀಮಂತರು ನಾಗರಿಕತೆಯನ್ನು ಕಲಿಯಲು ಅವಶ್ಯಕವಾದ ಮಾರ್ಗವೆಂದು ಗಣನೆಮಾಡಿದ್ದರು. ಎರಡು ವಿರುದ್ಧವಾದ ಹವಾಮಾನಗಳಲ್ಲಿ ಈ ಎರಡುಕಡೆ ನೆಲಸಿದ್ದ ಗ್ರಹ ಉಪಗ್ರಹಗಳನ್ನು ಸಹಿಸಿಕೊಂಡು ಮನೆಯ ಯಜಮಾನಿಯು ಬಹಳ ತಾಳ್ಮೆಯಿಂದಿರಬೇಕಾಗಿತ್ತು.

ಮುಕುಂದಲಾಲರ ಹೆಂಡತಿ ನಂದರಾಣಿಯು ಬಹಳ ಅಭಿಮಾನಶಾಲಿ. ಸಹನೆ ಮಾಡಿಕೊಳ್ಳುವುದು ಅವಳಿಗೆ ಚೆನ್ನಾಗಿ ಅಭ್ಯಾಸವಾಗಿರಲಿಲ್ಲ. ಅದಕ್ಕೆ ಕಾರಣವಿತ್ತು. ಹೊರಗಡೆಯ ಆಕರ್ಷಣೆಗೆ ಗಂಡನ ಮನಸ್ಸು ಎಷ್ಟೇ ಚಂಚಲವಾದರೂ, ಒಳಗೊಳಗೇ ಅವರ ಹೃದಯ ಎಳೆಯುತ್ತಿರುವುದು ತನ್ನ ಕಡೆಗೇ ಎಂದು ಆಕೆಗೆ ಗೊತ್ತು. ಆದುದರಿಂದಲೇ ಗಂಡನು ತನ ಪ್ರೇಮದ ಮೇಲೆ ಅತ್ಯಾಚಾರ ಮಾಡುವುದು ಅವಳಿಗೆ ಸಹಿಸಲಾಗಲಿಲ್ಲ....ಈಸಲ ಆದದ್ದು ಹಾಗೆಯೇ.

# ಐದನೆಯ ಅಧ್ಯಾಯ

ರಾಸಲೀಲೆಯು ಮಹಾಸಂಭ್ರಮದಿಂದ ನಡೆಯುತ್ತಿದೆ. ಕಲಿಕತ್ತೆಯಿಂದ ಕೆಲವು, ಢಾಕಾದಿಂದ ಕೆಲವು ವಿಲಾಸ ಸಾಮಗ್ರಿಗಳು ಬಂದುವು. ಮನೆಯ ಅಂಗಳದಲ್ಲಿ ಕೃಷ್ಣಜನ್ಮದ ಆಟ. ಬೇರೆಯದಿನ ಹರಿಕೀರ್ತನೆ...,ಈ ಸ್ಥಳದಲ್ಲಿ ಹೆಂಗಸರ ಮತ್ತು ಸಾಮಾನ್ಯ ನೆರೆಹೊರೆಯವರ ಗುಂಪು ಸೇರಿತ್ತು. ಹಿಂದೆ ಮತ್ತೊಂದು ಕಡೆ ಬೈಠಕ್ ಖಾನೆಯಲ್ಲಿ ತಾಮಸಿಕ ಕಾರ್ಯಕ್ರಮದ ಏರ್ಪಾಡಾಗಿರುತಿತ್ತು. ಅಂತಃಪುರದ ಜನಕ್ಕೆ ರಾತ್ರಿ ನಿದ್ದೆಯೇ ಇರುತ್ತಿರಲಿಲ್ಲ. ಎದೆಯಲ್ಲಿ ಸಂಕಟ, ಬಾಗಿಲ ಸಂದುಗಳ ಮೂಲಕ ಸಾಕಷ್ಟು ಆಭಾಸವನ್ನು ನೋಡಬಹುದಾಗಿತ್ತು...!ಈಸಲ ದಣಿಗಳಿಗೆ ನದಿಯಮೇಲೆ ತೆಪ್ಪಕಟ್ಟಿಸಿ ಅದರಮೇಲೆ ಸೂಳೆಯರ ಕುಣಿತ ಏರ್ಪಾಡು ಮಾಡಬೇಕೆಂಬ ಬಯಕೆಯಾಯಿತು.

ಏನು ನಡೆಯುತ್ತಿದೆ:ಎನ್ನುವುದನ್ನು ನೋಡಲು ಸಾಧ್ಯವಿಲ್ಲವಲ್ಲ ಎಂದು ನಂದರಾಣಿಯ ಮನಸ್ಸು ನೊಂದಿತು. ಯಾರಿಗೆ ಏನು ಹೇಳಲೂ ಆಗದೆ ಕತ್ತಲಲ್ಲಿ ಬಿಕ್ಕಿಬಿಕ್ಕಿ ಅಳುವುದಕ್ಕೆ ಆರಂಭ ಮಾಡಿದರು. ಮನೆಯಲ್ಲಿ ಕೆಲಸಕಾರ್ಯ,- ಬರುವವರುಹೋಗುವವರ ಆದರ, ಸತ್ಕಾರ, ಊಟ, ಉಪಚಾರ ಎಲ್ಲವನ್ನೂ ನಗುಮುಖದಿಂದಲೇ ಮಾಡಬೇಕಾಗಿತ್ತು. ಎದೆಯೊಳಗೆ ಸೇರಿದ್ದ ಮುಳ್ಳು ಚಲಿಸಿದರೆ ಚುಚ್ಚುತ್ತಿತ್ತು. ಪ್ರಾಣ ಕಂಪಿಸುತ್ತಿತ್ತು. ಯಾರಿಗೂ ಗೊತ್ತಾಗುವ ಹಾಗಿರಲಿಲ್ಲ. ಆಕಡೆ ಆಗಾಗ "ರಾಣೀ ಮಾತೆಗೆ ಜಯವಾಗಲಿ" ಎಂದು ತೃಪ್ತ ಕಂಠಗಳಿಂದ ಕೂಗು ಬರುತ್ತಿತ್ತು.

ಕೊನೆಗೆ ಉತ್ಸವವೆಲ್ಲಾ ಪೂರೈಸಿ ಮನೆ ಖಾಲಿಯಾಯಿತು. ಕೇವಲ ಹರಿದ ಬಾಳೆ ಎಲೆಗಳ ಮತ್ತು ಒಡೆದ ಮಡಿಕೆ, ತಟ್ಟೆಗಳ ಭಗ್ನಾವಶೇಷದ ಮೇಲೆ ಕಾಗೆ ನಾಯಿಗಳ ಕೂಗಾಟ ಬಗುಳಾಟಗಳ ಉತ್ತರಕಾಂಡ ನಡೆಯುತ್ತಿತ್ತು. ಚಾಕರರು ಏಣಿ ಹಾಕಿಕೊಂಡು ಹತ್ತಿ, ಕಟ್ಟಿದ್ದ ಲಾಂದ್ರಗಳನ್ನು ಬಿಚ್ಚಿದರು. ಡೇರಾ ಇಳಿಸಿದರು. ಮೇಣದ ಬತ್ತಿಗಳ ತುಂಡುಗಳಿಗೆ, ಬೆಂಡು ಹೂಗಳ ತೋರಣಗಳಿಗಾಗಿ ಆ ಕೇರಿಯ ಹುಡುಗರು ಕಿತ್ತಾಡುತ್ತಿದ್ದರು: ಈ ಗುಂಪಿನ ಮಧ್ಯೆದಿಂದ ಆಗಾಗ ಕೆನ್ನೆಗೆ ಹೊಡೆದ ಏಟಿನ ಶಬ್ದ ಮತ್ತು ಚೀತ್ಕಾರ ರೋದನಗಳು ತಾರ ಸ್ವರದಲ್ಲಿ ತಾರಾಮಂಡಲದಂತೆ ಆಕಾಶವನ್ನು ಭೇದಿಸಿಕೊಂಡು ಹೋಗುತ್ತಿತ್ತು. ಅಂತಃಪುರದ ಪ್ರಾಂಗಣದಿಂದ ಬಿಸಾಟ ಎಂಜಲು ಅನ್ನ, ತರಕಾರಿಗಳ ವಾಸನೆಯಿಂದ ಗಾಳಿಯೆಲ್ಲಾ ಹುಳಿವಾಸನೆ ಹೊಡೆಯುತ್ತಿತ್ತು. ಅಲ್ಲಿ ಎಲ್ಲಿನೋಡಿದರೂ ಕ್ಲಾಂತಿ, ಹೇಸುಗೆ ಮತ್ತು ಕೊಳಕು. ಮುಕುಂದಲಾಲರು ಇನ್ನೂ ಮನೆಗೆ ಬರದೇ ಇದ್ದುದು ಈ ಶೂನ್ಯತೆಯನ್ನು ಇನ್ನೂ ಅಸಹ್ಯಮಾಡಿತು.

ಸಮಾಚಾರ ಮುಟ್ಟಲು ಸಾಧ್ಯವಾಗದೆ ನಂದರಾಣಿಯ ಸಹನೆಯ ಕಟ್ಟೆ ಹಠಾತ್ತಾಗಿ ಒಡೆದು ಚೂರುಚೂರಾಗಿ ಹೋಯಿತು.

ದಿವಾನನನ್ನು ಹೇಳಿಕಳುಹಿಸಿ ಪರದೆಯ ಹಿಂದಿನಿಂದ "ಯಜಮಾನರಿಗೆ ಹೇಳಿಬಿಡಿ. ಬೃಂದಾವನಕ್ಕೆ ತಾಯಿಯ ಬಳಿ ಈಗಲೇ ಹೋಗಬೇಕಾಗಿದೆ. ಆಕೆಯ ಆರೋಗ್ಯ ಚೆನ್ನಾಗಿಲ್ಲ." ಎಂದು ಹೇಳಿದರು.

ದಿವಾನನು ಸ್ವಲ್ಪಹೊತ್ತು ತಲೆಯನ್ನು ಕೆರೆಯುತ್ತಾ ಮೃದುಸ್ವರದಲ್ಲಿ "ಯಜಮಾನರಿಗೆ ಹೇಳಿ ಹೋದರೇನೇ ಒಳ್ಳೆಯದು, ರಾಣಿಯವರೇ, ಇವತ್ತೋ ನಾಳೆಯೋ ಅವರು ಮನೆಗೆ ಬರುತ್ತಾರೆಂದು ಸಮಾಚಾರ ಬಂದಿದೆ" ಎಂದನು.

"ಇಲ್ಲ....ವಿಳಂಬ ಮಾಡಲು ಸಾಧ್ಯವಿಲ್ಲ."

ಯಜಮಾನರು "ಇವತ್ತೋ ನಾಳೆಯೊಳಗಾಗಿ ವಾಪಸು ಬರುವ" ಸಮಾಚಾರ ನಂದರಾಣಿಯ ಕಿವಿಗೂ ಬಿದ್ದಿತ್ತು. ಆ ಕಾರಣದಿಂದಲೇ ಹೊರಟುಹೋಗುವ ಅವಸರ. ಸ್ವಲ್ಪ ಅತ್ತು ಗೋಳಾಡಿ, ಆಣೆ ಶಪಥಗಳಿಟ್ಟು ಬಿಡುವುದರಲ್ಲಿಯೇ ಮುಗಿದು ಹೋಗುವುದೆಂದೂ ಆಕೆಗೆ ಚೆನ್ನಾಗಿ ಗೊತ್ತು. ಪ್ರತಿಸಲವೂ ಹೀಗೆಯೇ ಆಗುವುದು. ಫಲಕಾರಿಯಾದ ಶಾಸ್ತಿಮಾತ್ರ ಅಸಮಾಪ್ತವಾಗಿಯೇ ಉಳಿಯುವುದು. ಈ ಸಲ ಹಾಗಾಗಲು ಬಿಡುವುದಿಲ್ಲ....ದಂಡದ ವ್ಯವಸ್ಥೆ ಮಾಡಿಬಿಟ್ಟು ದಂಡ ವಿಧಿಸುವವರು ಪಲಾಯನ ಮಾಡಬೇಕಾಗಿ ಬಂದಿದೆ....ಬಿಟ್ಟು ಹೋಗುವ ಮುಂಚೆ ಕಡೆಯಗಳಿಗೆಯಲ್ಲಿ ಕಾಲು ಚಲಿಸಲು ಹಿಂದೆಗೆಯಿತು. ಮಲಗುವ ಮಂಚದ ಮೇಲೊಮ್ಮೆ ಹೊರಳಾಡಿ ಬಿಕ್ಕಿಬಿಕ್ಕಿ ಅತ್ತಳು....ಆದರೇನು, ಹೊರಡುವುದನ್ನು ತಪ್ಪಿಸಲಿಲ್ಲ.

ಆಗ ಕಾರ್ತಿಕ ಮಾಸದ ಮಧ್ಯಾಹ್ನ ಸಮಯ. ಬಿಸಿಲಿನಲ್ಲಿ ಬೀಸಿ ಬರುವ ಗಾಳಿ ಸುಡುತ್ತಿದೆ. ರಸ್ತೆಯಂಚಿನ ಗಿಡಗಳ ಮರ್ಮರದೊಡನೆ ಸ್ವಲ್ಪ ದನಿಯೊಡೆದ ಕೋಗಿಲೆಯ ಕೂಗು ಸೇರಿಕೊಂಡು ಕೇಳಿಬರುತ್ತಿದೆ. ಮೇನೆಯು ಹೋಗುವ ರಸ್ತೆಯ ಕಡೆಯಿಂದ ಹಸಿರು ಪೈರುಳ್ಳ ಗದ್ದೆಯ ಕೊನೆಯಲ್ಲಿ ನದಿಯು ಕಾಣಬರುತ್ತಿದೆ. ನಂದರಾಣಿಯು ಸುಮ್ಮನೆ ಇರಲಾಗಲಿಲ್ಲ. ಮೇನೆಯ ಬಾಗಿಲಿನ ಕಂಡಿಯಿಂದ ಆ ದಿಕ್ಕಿನಲ್ಲಿ ನೋಡಲು ತೊಡಗಿದಳು. ಆ ದಡದ ಪಕ್ಕದಲ್ಲಿ ತೆಪ್ಪವಿನ್ನೂ ಕಟ್ಟಿಯೇ ಇವೆ. ಮುಖ್ಯಸ್ತಂಭದ ಮೇಲೆ ಧ್ವಜ ಹಾರುತ್ತಿದೆ, ತೆಪ್ಪದ ಛಾವಣಿಯ ಮೇಲೆ ಚಿರಪರಿಚಿತನಾದ ಗೋಪೀ ಹರಿಕಾರನು ಕೂತಿರುವುದು ದೂರದಿಂದಲೇ ಕಾಣಬರುವುದು. ಅವನ ತಲೆಯ ಮೇಲಿನ ಪಗಡಿಯ ಬಿಲ್ಲೆಯ ಮೇಲೆ ಸೂರ್ಯಕಿರಣಗಳು ಬಿದ್ದು ಥಳಥಳ ಹೊಳೆಯುತ್ತಿದೆ. ಬಲವಾಗಿ ಮೇನೆಯ ಕದವನ್ನು ಎಳೆದು ಮುಚ್ಚಿದಳು. ಎದೆಯೊಳಗೆಲ್ಲಾ ಕಲ್ಲಾದಂತಾಯಿತು.

## ಆರನೆಯ ಅಧ್ಯಾಯ

ಮುಕುಂದಲಾಲರು ಧ್ವಜಭಂಗವಾಗಿ, ಪಟ ಛಿದ್ರವಾಗಿ, ಪೆಟ್ಟು ಬಿದ್ದು ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿ ಸೊರಗಿದ ಜಹಜಿನಂತೆ, ಸಂಕೋಚದಿಂದ ಬಂದರಿಗೆ ಬಂದು ಸೇರಿದರು. ಅಪರಾಧದ ಹೊರೆಯಿಂದ ಎದೆ ಭಾರವಾಗಿತ್ತು. ಪ್ರಮೋದದ ಸ್ಮೃತಿಯು ಹೊಟ್ಟೆಬಿರಿಯ ತಿಂದಾದಮೇಲೆ ಬರುವ ಉಚ್ಚಿಷ್ಟದಂತೆ ಮನಸ್ಸಿಗೆ ಹೇಸಿಗೆಯುಂಟುಮಾಡುತ್ತಿತ್ತು. ಅವರ ಈ ಆಮೋದ ಪ್ರಮೋದಗಳಿಗೆ ನೆರವಾದವರೋ, ಉತ್ತೇಜನ ಕೊಟ್ಟವರೋ ಎದುರಿಗಿದ್ದಿದ್ದರೆ ಅವರುಗಳನ್ನು ಚಾವಟಿಯಿಂದ ಹೊಡೆದುಬಿಡುತ್ತಿದ್ದರು. ಮನಸ್ಸಿನೊಳಗೇ "ಇನ್ನೆಂದಿಗೂ ಹೀಗಾಗಲು ಬಿಡುವುದಿಲ್ಲ" ಎಂದು ಹಠತೊಟ್ಟರು. ಅವರ ಕೆದರಿದ ಕೂದಲು, ಕೆಂಪಡರಿದ ಕಣ್ಣುಗಳು, ಒಣಗಿದ ಮುಖಭಾವ, ಇವುಗಳನ್ನು ನೋಡಿದವರ್‍ಯಾರಿಗೂ ಯಜಮಾನಿಯ ಪ್ರಯಾಣದ ಸಮಾ

ಚಾರವನ್ನು ಹೇಳಲು ಧೈರ್ಯ ಬರಲಿಲ್ಲ.

ಮುಕುಂದಲಾಲರು ಹೆದರುತ್ತಹೆದರುತ್ತ ಅಂತಃಪುರದೊಳಗೆ ಬಂದರು."ಯಜಮಾನಿ ಕ್ಷಮಿಸು, ತಪ್ಪು ಮಾಡಿಬಿಟ್ಟೆ, ಇನ್ನೆಂದಿಗೂ ಹೀಗಾಗಲು ಬಿಡುವುದಿಲ್ಲ" ಎಂದು ಮನಸ್ಸಿನಲ್ಲಿಯೇ ಹೇಳಿಕೊಳ್ಳುತ್ತಾ ಮಲಗುವ ಮನೆಯ ಬಾಗಿಲ ಬಳಿ ಇದ್ದಕ್ಕಿದ್ದ ಹಾಗೆ ನಿಂತು ಆಮೇಲೆ ಮೆಲ್ಲಮೆಲ್ಲನೆ ಒಳಕ್ಕೆ ಪ್ರವೇಶಿಸಿದರು. ಮನಸ್ಸಿನಲ್ಲಿ "ಕೋಪದಿಂದ ಮಂಚದ ಮೇಲೆ ಮಲಗಿದಾಳೆ" ಎಂದು ಅವರ ಅಭಿಪ್ರಾಯ. ನೆಟ್ಟಗೆ ಕಾಲ ಬಳಿ ಹೋಗಿ ಬೀಳಬೇಕೆಂದು ನಿರ್ಧರಿಸಿ ಒಳಗೆ ಬಂದು ನೋಡಿದರು. ಮಂಚವು ಖಾಲಿ. ಮಲಗುವ ಮನೆಯೂ ಶೂನ್ಯ ! ಎದೆಯೊಳಗೆ ಉಸಿರು ನಿಂತು ಹೋಯಿತು.

ಮಲಗುವ ಮನೆಯಲ್ಲಿ ಶಯ್ಯೆಯ ಮೇಲೆ ನಂದರಾಣಿಯನ್ನು ನೋಡಿದ್ದಿದ್ದರೆ ಆಗ ತಪ್ಪನ್ನು ಕ್ಷಮಿಸಲು ಮಾನಿನಿಯು ಅರ್ಧ ಹಾದಿ ಮುಂದಕ್ಕೆ ಬಂದಿರುವಳೆಂದು ಅಂದುಕೊಳ್ಳುತ್ತಿದ್ದರು. ಆದರೆ ಯಜಮಾನಿಯು ಮಲಗುವ ಮನೆಯಲ್ಲಿ ಇಲ್ಲದಿದ್ದುದನ್ನು ನೋಡಿ ಮುಕುಂದಲಾಲರು ತಮಗೆ ಕಾದಿರುವ ಪ್ರಾಯಶ್ಚಿತ್ತವು ಬಹು ದೀರ್ಘ ಮತ್ತು ಕಠಿಣವೆಂದು ತೀರ್ಮಾನಿಸಿಬಿಟ್ಟರು.

ಆದರೆ ಅಂದು ರಾತ್ರಿಯವರೆಗೂ ನಿರೀಕ್ಷೆ ಮಾಡಬೇಕು. ಅಥವಾ ಇನ್ನೂ ನಿಧಾನವಾದರೂ ಆಗಬಹುದು. ಆದರೆ ಅಷ್ಟು ಹೊತ್ತು ಧೈರ್ಯದಿಂದಿರುವುದು ಅವರ ಕೈಯಲ್ಲಾಗದು. ಸಂಪೂರ್ಣ ಶಿಕ್ಷೆಯನ್ನು ಆ ಕ್ಷಣ ಬೇಕಾದರೆ ತಲೆಯ ಮೇಲೆ ಹೊತ್ತು ಕ್ಷಮೆ ಕೇಳಬಹುದು. ಇಲ್ಲದೆ ಹೋದರೆ ಒಂದು ತೊಟ್ಟು ನೀರು ಕೂಡ ಕುಡಿಯಲಾಗುವುದಿಲ್ಲ.

ಹೊತ್ತೇರುತ್ತಿದೆ. ಇನ್ನೂ ಸ್ನಾನಾಹಾರಗಳಾಗಿಲ್ಲ. ಇದನ್ನು ನೋಡಿಯೂ ಯಾವ ಸಾಧ್ವಿ ತಾನೇ ಸುಮ್ಮನೆ ಇರಬಲ್ಲಳು. ಮಲಗುವ ಮನೆಯ ಹೊರಗೆ ಬಂದು ನೋಡಿದರೆ ವರಾಂಡದ ಒಂದು ಮೂಲೆಯಲ್ಲಿ ಮುಖದ ಮೇಲೆ ಮುಸುಕು ಹಾಕಿಕೊಂಡು ಪ್ಯಾರಿ ದಾಸಿಯು ನಿಂತಿದ್ದಳು. ಅವಳನ್ನು "ನಿನ್ನ ಯಜಮಾನಿ ಎಲ್ಲಿ" ಎಂದು ಕೇಳಿದರು.

ಅವಳು "ಆಕೆ ಅವರ ತಾಯಿಯನ್ನುನೋಡಲು ಮೊನ್ನೆಯ ದಿನ ಬೃಂದಾವನಕ್ಕೆ ಹೋದರು." ಎಂದಳು.

ಸರಿಯಾಗಿ ಏನೂ ಅರ್ಥವಾಗದೆ ಬಿಗಿದ ಕಂಠದಿಂದ "ಎಲ್ಲಿಗೆ ಹೋದಳು ?" ಎಂದು ಪುನಃ ಕೇಳಿದರು.

"ಬೃಂದಾವನಕ್ಕೆ. ಅವರ ತಾಯಿಗೆ ಅಸ್ವಸ್ಥವಂತೆ-"

ಮುಕುಂದಲಾಲರು ಒಂದು ಸಲ ವರಾಂಡದ ಕಟಕಟೆಯನ್ನು ಆಧಾರವಾಗಿ ಹಿಡಿದುಕೊಂಡು ನಿಂತರು. ಸ್ವಲ್ಪ ಹೊತ್ತು ಹಾಗೇ ಇದ್ದು ಅವಸರವಸರವಾಗಿ ಹೊರಗಿನ ಬೈಠಕು ಖಾನೆಗೆ ಹೋಗಿ ಅಲ್ಲಿ ಒಬ್ಬರೇ ಕೂತುಕೊಂಡಿದ್ದರು, ಒಂದು ಮಾತೂ ಆಡಲಿಲ್ಲ. ಹತ್ತಿರ ಹೋಗಲು ಯಾರಿಗೂ ಧೈರ್ಯ ಬರಲಿಲ್ಲ.

ದಿವಾನರು ಬಂದು ಹೆದರಿ ಹೆದರಿ "ಅಮ್ಮಾವರನ್ನು ಕರೆತರಲು ಜನ ಕಳುಹಿಸಲೇ?" ಎಂದು ಕೇಳಿದರು.

ಬಾಯಿಂದ ಯಾವ ಮಾತೂ ಆಡದೆ ಕೈಬೆರಳಿಂದಲೇ 'ಬೇಡ' ವೆಂದು ತಿಳಿಸಿಬಿಟ್ಟರು.

ದಿವಾನರು ಹೋದಮೇಲೆ ರಾಘೂರ್ಖಾ ಸಾಮಾನ್ನನ್ನು ಕೂಗಿ" ಬ್ರಾಂದಿ ತಗೊಂಡು ಬಾ" ಎಂದು ಅಪ್ಪಣೆ ಕೊಟ್ಟರು.

ಮನೆಯೊಳಗಿನ ಜನರೆಲ್ಲರೂ ಬುದ್ಧಿ ತೋಚದವರಾದರು. ಭೂಕಂಪ ಭೂಮಿಯ ಗಭೀರ ಗರ್ಭದೊಳಗಿಂದ ಗುಡುಗಿಕೊಂಡು ಏಳುವಾಗ ಅದನ್ನು ಅಡಗಿಸ ಹೋಗುವುದು ಹೇಗೆ ನಿಷ್ಫಲವೊ, ಬೇರೆ ಉಪಾಯವಿಲ್ಲದೆ ಹೇಗೆ ಅದರ ಹಾವಳಿಯನ್ನು ಸಹಿಸಲೇಬೇಕೋ ಇದೂ ಅದರಂತೆಯೇ.

ಹಗಲು ರಾತ್ರಿ ನೀರು ಬೆರಸದೆ ಬ್ರಾಂಡಿಯ ಸೇವನೆಯಾಗುತ್ತಲೇ ಇದೆ. ಊಟ, ತಿಂಡಿಯೇ ಇಲ್ಲವೆನ್ನಬಹುದು. ಮೊದಲೇ ಮೈ ದಣಿದಿದ್ದಿತು. ಅದರ ಮೇಲೆ ಈ ಪ್ರಚಂಡ ಅನಿಯಮದಿಂದ ವಿಕಾರದೊಡನೆ ರಕ್ತ ರಕ್ತವೇ ವಾಂತಿಯಾಗಲು ಆರಂಭವಾಯಿತು.

ಕಲಿಕತ್ತೆಯಿಂದ ಡಾಕ್ಟರು ಬಂದರು. ಹಗಲು, ರಾತ್ರಿ ತಲೆಗೆ ಐಸ್ ಕಟ್ಟಿ ಮಲಗಿಸಿದರು,

ಮುಕುಂದಲಾಲರು ನೋಡಿದವರ ಮೇಲೆಲ್ಲಾ ಹುಚ್ಚು ಹುಚ್ಚಾಗಿ ರೇಗಿ ಬೀಳುತ್ತಿದ್ದರು. ಅವರ ವಿರುದ್ಧವಾಗಿ ಮನೆಯೊಳಗಿನವರೆಲ್ಲಾ ಒಳಸಂಚು ನಡೆಸುತ್ತಿದ್ದಾರೆಂದು ಅವರ ಅಭಿಪ್ರಾಯ. ಮನಸ್ಸಿನೊಳಗೇ ಅನುಮಾನದ ಕೂಗೊಂದು "ಇವರು ಯಾಕೆ ಅವಳನ್ನು ಹಾಗೆ ಹೋಗಲು ಬಿಟ್ಟರು" ಎಂದು ಬಾರಿ ಬಾರಿಗೂ ದನಿ ಮಾಡುತ್ತಿತ್ತು.

ಅವರ ಹತ್ತಿರಕ್ಕೆ ಹೋಗುವ ಸಾಹಸವಿದ್ದ ಒಬ್ಬ ಮನುಷ್ಯಳೆಂದರೆ, ಕುಮುದಿನಿ, ಅವಳು ಬಂದು ಪಕ್ಕದಲ್ಲಿ ಕೂಡುತ್ತಿದ್ದಳು. ಮುಕುಂದಲಾಲರು ಅವಳ ಮುಖವನ್ನು ನಿಟ್ಟಿಸಿ ನೋಡುವರು. ಅವಳ ಕಣ್ಣಿನಲ್ಲಾಗಲೀ, ಹುಬ್ಬಿನಲ್ಲಾಗಲಿ ತಾಯಿಯ ಹೋಲಿಕೆಯಿದೆಯೇ ಎಂದು ನೋಡುವಂತಿತ್ತು. ಒಂದೊಂದು ಸಲ ಅವಳ ತಲೆಯನ್ನು ಎದೆಗೆ ಅವಚಿಕೊಂಡು ಸುಮ್ಮನೆ ಕಣ್ಣು ಮುಚ್ಚಿಕೊಂಡಿರುತ್ತಿದ್ದರು. ಕಣ್ಣೀರು ಹರಿಯುತ್ತಲೇ ಇತ್ತು. ಆದರೆ ಮರೆತಾದರೂ ಒಂದು ಸಲ ಅವಳ ತಾಯಿಯ ಮಾತು ಎತ್ತಲಿಲ್ಲ. ಈ ಕಡೆ ಬೃಂದಾವನಕ್ಕೆ ತಂತಿ ಕೊಡಲಾಯಿತು. ಯಜಮಾನಿಯನ್ನು ಮರುದಿನವೇ ಬರಹೇಳಲಾಗಿತ್ತು. ಆದರೆ ಬರುವುದು ಹೇಗೆ? ದಾರಿಯಲ್ಲಿ ಯಾವ ಕಡೆಯೋ ರೈಲುಕಂಬಿಯೇ ಕಿತ್ತುಹೋಗಿದೆಯೆಂಬ ಸಮಾಚಾರ ಕೇಳಿ ಬಂತು.

## ಏಳನೆಯ ಅಧ್ಯಾಯ

ಅಂದು ತದಿಗೆ. ಸಾಯಂಕಾಲ ಬಿರುಗಾಳಿಯೆದ್ದಿತು. ತೋಟದ ಮರ ಗಿಡಗಳ ರೆಂಬೆಗಳು ಪಟಪಟನೆ ಮುರಿದು ಬೀಳುತ್ತಿದ್ದುವು. ಕೂಡಲೇ ಕೆರಳಿದ ರೋಷದಂತೆ ಮಳೆ ಆರ್ಭಟದಿಂದ ಸುರಿಯಲಾರಂಭಿಸಿತು. ಚಾಕರರು ಊಟಮಾಡಲೋಸುಗ ಕಟ್ಟಿಸಿದ್ದ ಹಜಾರದ ಜಿಂಕ್‌ಷೀಟಿನ ಛಾವಣಿಯು ಗಾಳಿಯ ಹೊಡೆತಕ್ಕೆ ಹಾರಿಹೋಗಿ ಕೊಳದಲ್ಲಿ ಬಿದ್ದಿತು. ಬಿರುಗಾಳಿಯು ಬಾಣ ತಗಲಿದ ಹುಲಿಯಂತೆ 'ಗೋಂ....ಗೋಂ....' ಎಂದು ಗೊರಗುಟ್ಟುತ್ತಾ ಆಕಾಶದಿಂದ ಆಕಾಶಕ್ಕೆ ಬಾಲ ಬಡಿಯುತ್ತಾ ತಿರುವಿ ತಿರುವಿ ಸುತ್ತಿ ತಿರುಗುತ್ತಿತ್ತು. ಇದ್ದಕ್ಕಿದ್ದ ಹಾಗೆ ಗಾಳಿ ಹೊಡೆಯ

ತಕ್ಕೆ ಬಾಗಿಲು, ಕಿಟಕಿಗಳು ಖಡ್ ಖಡ್ ಎಂದು ನಡುಗಲಾರಂಭಿಸಿದುವು.

ಕುಮುದಿನಿಯ ಕೈಹಿಡಿದುಕೊಂಡು ಮುಕುಂದಲಾಲರು "ಅಮ್ಮಾ, ಕುಮೂ, ಭಯಪಡಬೇಡ, ನೀನೇನೋ ಯಾವ ತಪ್ಪೂ ಮಾಡಿಲ್ಲ. ಅಗೋ ನೋಡು, ಹಲ್ಲು ಕಡಿದುಕೊಂಡು ಅವರುಗಳು ನನ್ನನ್ನು ಹೊಡೆಯಲು ಬರುತ್ತಿದ್ದಾರೆ." ಎಂದರು.

ತಂದೆಯ ಹಣೆಯಮೇಲೆ ಐಸ್‌ಬ್ಯಾಗನ್ನು ಒತ್ತುತ್ತಾ ಕುಮುದಿನಿ "ಹೊಡೆಯುವುದು ಯಾಕಪ್ಪಾ? ಬಿರುಗಾಳಿ ಬೀಸುತ್ತಾ ಇದೆ. ಈಗಲೇ ನಿಂತು ಹೋಗುತ್ತೆ" ಎಂದಳು.

"ಬೃಂದಾವನ....ಬೃಂದಾವನ....ಚಂದ್ರ ಚಕ್ರವರ್ತಿ...,ಅಪ್ಪನ ಕಾಲದ ಪುರೋಹಿತ... ಅವನು ಸತ್ತುಹೋಗಿರುವನಲ್ಲಾ....ಬೃಂದಾವನದಲ್ಲಿ ಭೂತವಾಗಿ ಹೋಗಿರುವನು....ಯಾರು ಹೇಳಿದ್ದು ಅವನು ಬರುತ್ತಾನೆಂದು?"

"ಮಾತಾಡಬೇಡಿ, ಅಪ್ಪಾ...ಸ್ವಲ್ಪ ನಿದ್ದೆಮಾಡಿ."

"ಅಗೋ, ಹುಷಾರ್, ಹುಷಾರ್ ಎಂದು ಯಾರಿಗೋ ಹೇಳುತ್ತಿದೆ."

"ಇಲ್ಲಪ್ಪ, ಗಾಳಿಯ ಹೊಡೆತಕ್ಕೆ ಮರಗಳು ಅಲ್ಲಾಡುತ್ತಿವೆ, ಅಷ್ಟೆ."

"ಯಾಕೆ, ಯಾಕೆ ಅವಳಿಗೆ ಕೋಪ? ಅಂತಹ ತಪ್ಪೇನು ಮಾಡಿದೆ? ಹೇಳಮ್ಮಾ ನೀನೇ!"

"ತಪ್ಪೇನೂ ಮಾಡಿಲ್ಲ. ಅಪ್ಪಾ, ನೀವು ಸ್ವಲ್ಪ ನಿದ್ದೆಮಾಡಿ."

"ಏಂದೇ ದೂತೀ? ಅದೇ ಮಧು ಅಧಿಕಾರಿ ವೇಶಹಾಕುತ್ತಿದ್ದನಲ್ಲಾ?"

"ಮಿಛೇ ಕರ್ ಕೇನೋ ನಿಂದೆ?
ಉಗೋ ಏಂದೇ, ಶ್ರೀ ಗೋವಿಂದೇ?"
(ಬರಿದೆ ದೂರುವೆಯೇಕೆ, ಹೇ ಏಂದೇ, ಶ್ರೀ ಗೋವಿಂದನಾ...)
ಎಂದು ಕಣ್ಣುಮುಚ್ಚಿಕೊಂಡು ಹಾಡತೊಡಗಿದರು.

"ಕಾರ್ ಬಾಂಶಿ ಐ ಬಾ ಜೇ ಬೃಂದಾವನೇ,
ಸಯಿ ಲೋ ಸಯಿ,
ಘರೆ ಆಮಿ ರಯಿಬೋ ಕೇ ಮನೆ...."

(ಯಾರ ಕೊಳಲ ನಾದವಿದು ಬೃಂದಾವನದಿ
ಹೇ ಸಖಿ, ಎಂತಿರಲಿ ನಾ ಮನೆಯೊಳಗೆ)

"ರಾಧೂ....ಹೇ ರಾಧೂ....ಬ್ರಾಂದಿ ತಗೊಂಡು ಬಾ."

ಕುಮುದಿನಿಯು ತಂದೆಯ ಮುಖದಕಡೆ ಬಾಗಿ "ಅಪ್ಪಾ, ಅದೇನು ಹೇಳಿದೆ?" ಎಂದಳು. ಮುಕುಂದಲಾಲರು ಕಣ್ಣು ತೆಗೆದು ನೋಡಿ ನಾಲಿಗೆ ಕಚ್ಚಿಕೊಂಡು ಸುಮ್ಮನಾದರು. ಬುದ್ಧಿ ಎಷ್ಟೇ ಕೆಟ್ಟಿದ್ದರೂ ಕೂಡ ಕುಮುದಿನಿಯ ಎದುರಿನಲ್ಲಿ ಮದ್ಯದ ವಿಷಯ ಎತ್ತಕೂಡದೆಂದು ತಿಳಿವು ಬಂತು. ಸ್ವಲ್ಪಹೊತ್ತಾದ ಮೇಲೆ ಪುನಃ ಹಾಡತೊಡಗಿದರು.

"ಶ್ಯಾಮೇರ್ ಬಾಂಸಿ ಕಾಡತೇ ಹೋಬೇ,
ನಯಿಲೆ ಆ ಮಾಯ್ ಏ ಬೃಂದಾವನ್ ಛಾಡತೇ ಹೋಬೇ"

(ಶ್ಯಾಮನ ಕೊಳಲ ಕಸಿಯಬೇಕು....
ಇಲ್ಲವೇ ಬೃಂದಾವನ ತ್ಯಜಿಸಲೇ ಬೇಕು)

ಈ ಅಸಂಬದ್ಧ ಗೀತೆಗಳ ತುಣುಕುಗಳನ್ನು ಕೇಳಿ ಕುಮುದುವಿನ ಎದೆಯಲ್ಲಿ ಸಂಕಟವಾಗುವುದು. ಅಮ್ಮನ ಮೇಲೆ ಬಹಳ ಕೋಪಬರುವುದು. ಅಮ್ಮನ ಪರವಾಗಿ ಕ್ಷಮೆ ಬೇಡುವಂತೆ ಅಪ್ಪನ ಕಾಲಬಳಿ ತಲೆಯಿಡುವಳು.

ಮುಕುಂದಲಾಲರು ಹಠಾತ್ತಾಗಿ "ದಿವಾನರೇ" ಎಂದು ಕೂಗುತ್ತಾ ಎದ್ದರು.

ದಿವಾನರು ಹತ್ತಿರ ಬರುತ್ತಲೂ ಅವರನ್ನು ನೋಡಿ "ಅಗೋ. ಕೇಳಿ, ಏನೋ ಠಕ್, ಠಕ್ ಎಂದು ಶಬ್ದ ಕೇಳಬರುತ್ತಿದೆ." ಎಂದರು.

ದಿವಾನರು "ಏನಿಲ್ಲ, ಖಾವಂದರೇ....ಗಾಳಿಗೆ ಬಾಗಿಲು ಅಲ್ಲಾಡುತ್ತಿದೆ." ಅಂದರು.

"ಅಗೋ ಮುದುಕ ಬಂದ! ಅಗೋ ಅವನೇ ಬೃಂದಾವನ ಚಂದ್ರ....ಬಟ್ಟತಲೆ—ಕೈಯಲ್ಲಿ ದೊಣ್ಣೆ, ಹೆಗಲ ಮೇಲೆ ರೇಶ್ಮೆವಸ್ತ್ರ. ಭೂತವಾಗಿ ಬಿಟ್ಟಿದಾನೆ ಬೃಂದಾವನ..,.ನೋಡಿಕೊಂಡು ಬಾ ಮತ್ತೆ....ಠಕ್, ಠಕ್ ಶಬ್ದ ಮಾಡುತ್ತಿದ್ದಾನೆ....ಲಾಠಿಯೇ, ಚಡಾವೇ?"

ರಕ್ತವಮನವು ಸ್ವಲ್ಪ ಹೊತ್ತು ನಿಂತಿತು. ರಾತ್ರಿ ಮೂರು ಘಂಟೆ ಹೊತ್ತಿಗೆ ಮತ್ತೆ ಆರಂಭವಾಯಿತು. ಮುಕುಂದಲಾಲರು ಹಾಸಿಗೆಯ ಮೇಲೆ ನಾಲ್ಕೂ ಕಡೆ ತಡವರಿಸಿ ಕುಗ್ಗಿದ ಸ್ವರದಲ್ಲಿ "ಯಜಮಾನಿ, ಮನೆಯೆಲ್ಲಾ ಕತ್ತಲು. ಇನ್ನೂ ದೀಪ ಹಚ್ಚುವುದಿಲ್ಲವೇ?" ಎಂದರು. ತೆಪ್ಪೋತ್ಸವದಿಂದ ವಾಪಸು ಬಂದ ಮೇಲೆ ಮುಕುಂದಲಾಲರು ಇದೇ ಮೊದಲ ಸಲ ಹೆಂಡತಿಯನ್ನು ಸಂಬೋಧಿಸಿದುದು—ಇದೇ ಕಡೆಯದೂ ಆಯಿತು.

ಬೃಂದಾವನದಿಂದ ವಾಪಸು ಬಂದು ನಂದರಾಣಿಯು ಮನೆಯ ಬಾಗಿಲಲ್ಲೇ ಮೂರ್ಛಿತಳಾಗಿ ಬಿದ್ದುಬಿಟ್ಟಳು.

ಆಕೆಯನ್ನು ಎತ್ತಿ ಮಲಗುವ ಮನೆಗೆ ತಂದು ಹಾಸುಗೆಯ ಮೇಲೆ ಮಲಗಿಸಿದರು. ಇನ್ನು ಸಂಸಾರದಲ್ಲಿ ಅವಳಿಗೆ ಏನೂ ರುಚಿಸದು. ಕಂಬನಿಯು ಹಠಾತ್ತಾಗಿ ಬತ್ತಿಹೋಯಿತು. ಮಕ್ಕಳ ಮಧ್ಯೆಯೂ ಸಮಾಧಾನವಿಲ್ಲ. ಗುರುಗಳು ಬಂದು ಶಾಸ್ತ್ರದಿಂದ ಶ್ಲೋಕಗಳನ್ನು ಪಠಿಸಿದರು. ಮುಖವನ್ನು ತಿರುಗಿಸಿಕೊಂಡು ಇದ್ದಳು. ಕೈ ಬಳೆಗಳನ್ನು ಕಳಚಲಿಲ್ಲ. "ನನ್ನ ಕೈ ನೋಡಿ ನನ್ನ ಮಾಂಗಲ್ಯಕ್ಕೆ ಅಪಾಯವಿಲ್ಲ ಎಂದು ಹೇಳುತ್ತಿದ್ದರು. ಅದು ಸುಳ್ಳಾಗುವುದು ಹೇಗೆ?" ಎಂದರು.

ದೂರ ಸಂಬಂಧದ ಕ್ಷೇಮಾ ಅತ್ತೆ ಸೆರಗಿನಿಂದ ಕಣ್ಣೊರಸುತ್ತಾ "ಆಗಬೇಕಾದ್ದು ಆಗಿಹೋಯಿತು. ಈಗ ಮನೆಯ ಕಡೆ ಗಮನವಿಡಬೇಕಮ್ಮಾ—ನಿನ್ನ ಗಂಡ ಹೋಗುವಾಗ ಏನು ಹೇಳಿ ಹೋದರು....ಯಜಮಾನೀ, ಮನೆಯ ದೀಪ ಹಚ್ಚುವುದಿಲ್ಲವೇ....ಎಂದು" ಎಂದು ಸಮಾಧಾನ ಮಾಡಿದಳು. ನಂದರಾಣಿ ಹಾಸುಗೆಯಿಂದ ಎದ್ದು ಕೂತು ದೂರದ ದಿಕ್ಕನ್ನು ನಿಟ್ಟಿಸಿ ನೋಡುತ್ತಾ "ಇಗೋ ಹೊರಟೆ,...ದೀಪ ಹಚ್ಚಿಸುವುದಕ್ಕೆ ಹೊರಟೆ....ಈ ಸಲ ಇನ್ನು ನಿಧಾನವಾಗುವುದಿಲ್ಲ" ಎಂದಳು. ಹೀಗೆ ಹೇಳಿದಾಗ ಅವಳ ಬಿಳುಪೇರಿದ ಬಾಡಿದ ಮುಖವು ಉಜ್ವಲವಾಗಿ ಕೈಯಲ್ಲಿ ಪ್ರದೀಪ ಹಿಡಿದುಕೊಂಡು ಆಗಲೇ ಯಾತ್ರೆ ಹೊರಟಂತೆ ಹೊಳೆಯಿತು.

ಸೂರ್ಯ ಉತ್ತರಾಯಣಕ್ಕೆ ಹೋದನು· ಮಾಘ ಮಾಸ ಬಂತು. ಶುಕ್ಲ ಚತುರ್ದಶಿಯ ದಿನ ನಂದರಾಣಿ ಹಣೆಗೆ ದೊಡ್ಡದಾಗಿ ಕುಂಕುಮವಿಟ್ಟುಕೊಂಡಳು. ಕೆಂಪು ಬನಾರಸಿನ ಸೀರೆಯನ್ನು ಉಟ್ಟಳು.

ಸಂಸಾರದ ಕಡೆ ಕೂಡ ನೋಡದೆ ನಗುನಗುತ್ತಾ ಹೊರಟು ಹೋದಳು.

## ಎಂಟನೆಯ ಅಧ್ಯಾಯ

ತಂದೆಯ ಸಾವಿನ ನಂತರ, ತಾವು ಆಶ್ರಯ ಕೊಟ್ಟಿದ್ದ ಮರದಲ್ಲಿ ಬುಡದಿಂದ ಹುಳುಗಳು ತಿಂದುಕೊಂಡು ಬಂದಿವೆಯೆಂದು ವಿಪ್ರದಾಸನಿಗೆ ಕಂಡುಬಂತು......ಆಸ್ತಿ ಪಾಸ್ತಿಯೆಲ್ಲಾ ಸಾಲಗಳ ಜೌಗು ಮರಳಿನ ಆಧಾರದ ಮೇಲೆ ನಿಂತಿದೆ.....ಸ್ವಲ್ಪ ಹಾಗೆಂದರೂ ಮುಳುಗುತ್ತದೆ, ಎನಿಸಿತು.

ಕರ್ಮಗಳನ್ನೆಲ್ಲಾ ಕಡಿಮೆಮಾಡಿ ಜೀವನ ಕ್ರಮದಲ್ಲಿ ಕೈ ತಡೆದು ನಡೆಯದೆ ಹೋದರೆ ಬೇರೆ ದಾರಿಯಿಲ್ಲ. ಕುಮುದಿನಿಯ ಮದುವೆಯ ವಿಷಯವಾಗಿಯೂ ಮಾತು ಬಂದಾಗ ಉತ್ತರ ಹೇಳಲು ನಾಲಿಗೆ ತಡೆಯುತ್ತಿತ್ತು. ಕೊನೆಗೆ ನೂರ್ ನಗರದ ವಾಸವನ್ನು ಬಿಡಬೇಕಾಯಿತು. ಕಲಿಕತ್ತೆಯ ಬಾಗ್ ಬಜಾರಿನ ಕಡೆ ಮನೆಯೊಂದರಲ್ಲಿ ಬಂದು ನೆಲಸಿದರು.

ಹಳೆಯ ಮನೆ ಕುಮುದಿನಿಗೆ ಜೀವಂತವಾದ ಆಪ್ತನಂತಿತ್ತು. ನಾಲ್ಕು ಕಡೆ ಹೂವು, ಹಣ್ಣಿನ ಗಿಡಗಳು, ದನಗಳ ಕೊಟ್ಟಿಗೆ, ಪೂಜೆಯ ಗೃಹ, ಹೊಲಗದ್ದೆ, ಆಳು, ಕಾಳುಗಳು. ಅಂತಃಪುರದ ತೋಟದಲ್ಲಿ ಬುಟ್ಟಿ ತುಂಬ ಹೂವು ಕುಯ್ಯುತ್ತಿದ್ದಳು. ಉಪ್ಪು, ಮೆಣಸಿನಕಾಯಿ, ಕೊತ್ತುಂಬರಿ ಸೊಪ್ಪು ಹಾಕಿ ಎಳೆಯ ಹುಣಿಸೆಕಾಯಿ ತಿಂದು ಅಪಥ್ಯಮಾಡುವಳು, ಎಳಚೀಹಣ್ಣು ಕಿತ್ತು ಕೂಡಿಹಾಕುವಳು, ವೈಶಾಖ ಜ್ಯೇಷ್ಠಗಳ ಬಿರುಗಾಳಿಯಲ್ಲಿ ಮಾವಿನ ತೋಟದಲ್ಲಿ ಉದುರಿದ ಮಾವಿನಕಾಯಿ ಆರಿಸುವಳು. ತೋಟದ ಪೂರ್ವದಿಕ್ಕಿನಲ್ಲಿ ಬತ್ತದ ಗಿರಣಿ. ಅಲ್ಲಿ ಹಬ್ಬ ಹುಣ್ಣಿಮೆಗಳ ಸಮಯದಲ್ಲಿ ಉಂಡೆ ಕಟ್ಟುವ ಹೆಂಗಸರ ಸಂಭ್ರಮ ಕೋಲಾಹಲಗಳಲ್ಲಿ ಇವಳಿಗೂ ಸ್ವಲ್ಪ ಭಾಗವಿತ್ತು. ಸುತ್ತಲೂ ಹಸುರು ಪಾಚಿಯಿಂದಾವೃತವಾದ ಪೌಳೀಗೋಡೆಯಿದ್ದ ಹಿತ್ತಲ ಕಡೆಯ ಕೊಳ ಘನವಾದ ಛಾಯೆಯಲ್ಲಿ ಸ್ನಿಗ್ಧವಾಗಿತ್ತು. ಕೋಗಿಲೆ, ಕಪೋತ, ಮೈನಾ, ಗೀಜುಗದ ಹಕ್ಕಿಗಳ ಇಂಚರದಿಂದ ತುಂಬಿತ್ತು. ಇಲ್ಲಿಯೇ ಅವಳು ಪ್ರತಿನಿತ್ಯ ಈಜುತ್ತಾ ಕಾಲ ಕಳೆಯುವಳು. ಕನ್ನೈದಿಲೆ ಹೂಗಳನ್ನು ಕೀಳುವಳು. ಸೋಪಾನಗಳ ಮೇಲೆ ಕೂತು ಹಗಲುಗನಸು ಕಾಣುವಳು....ಅನನ್ಯ ಮನಸ್ಕಳಾಗಿ ಒಬ್ಬಳೇ ಕುಳಿತು ಮಖಮಲ್ಲಿನ ಮೇಲೆ ಕಸೂತಿ ಹಾಕುವಳು. ಋತುವಿನಿಂದ ಋತುವಿಗೆ, ತಿಂಗಳು ತಿಂಗಳಿಗೂ ಪ್ರಕೃತಿಯ ಉತ್ಸವದ ಸಂಗಡವೇ ಮನುಷ್ಯರೂ ಒಂದೊಂದು ಪರ್ವ ದಿನಗಳನ್ನು ರೂಢಿಸಿರುವರು. ಅಕ್ಷ ತದಿಗೆಯಿಂದ ಹಿಡಿದು ಹೋಳೀಹಬ್ಬ, ವಸಂತ ಪೂಜೆಯವರೆಗೂ ಎಷ್ಟೋ ಹಬ್ಬಗಳು. ಮನುಷ್ಯನೂ ಪ್ರಕೃತಿಯೂ ಕೈ ಹಿಡಿದುಕೊಂಡು ಇಡೀ ವರ್ಷವನ್ನು ಕುಶಲ ಶಿಲ್ಪದಿಂದ ಸಜ್ಜುಗೊಳಿಸಿರುವರು. ಎಲ್ಲವೂ ಸುಂದರವಾದುವು, ಎಲ್ಲವೂ ಸುಖಮಯವಾದುವು ಎಂದು ಹೇಳಲಾಗುವುದಿಲ್ಲ. ಮೀನಿನ ಹಂಚುವಿಕೆ, ಪೂಜೆಯ ದಕ್ಷಿಣೆ, ಯಜಮಾನಿಯ ಪಕ್ಷಪಾತ, ಸಣ್ಣ ಮಕ್ಕಳ ಜಗಳ, ತಮ್ಮ ತಮ್ಮ ಮಕ್ಕಳ ಪಕ್ಷವಹಿಸಿ ವಾದ ಮಾಡುವ ಹೆಂಗಸರ ನೀರವವಾದ ಈರ್ಷ್ಯೆ, ಅಥವಾ ತಾರಸ್ವರದಲ್ಲಿ ಪ್ರಲಾಪ, ಕಿವಿ-ಕಿವಿಗಳಲ್ಲಿ ಪರರ ವಿಷಯವಾಗಿ ಚರ್ಚೆ ಅಥವಾ ಮುಕ್ತ ಕಂಠದಿಂದ ಅಪವಾದದ ಪ್ರಚಾರ—ಇವೆಲ್ಲಾ ಸಾಕಷ್ಟು ಪ್ರಮಾಣದಲ್ಲಿ ಇದ್ದೇ ಇರುತ್ತವೆ.

ಎಲ್ಲಕ್ಕಿಂತಲೂ ಹೆಚ್ಚಾಗಿ ನಿತ್ಯ ನೈಮಿತ್ತಿಕ ಕೆಲಸದ ವ್ಯಸ್ತತೆಯಲ್ಲಿ ಒಳಗೊಳಗೇ ಏನೋ ಒಂದು ಕೊರಗು. ಯಜಮಾನರು ಯಾವಾಗ ಏನಾದರೂ ಹೇಳುತ್ತಾರೋ, ಅವರ ಹೊರ ಬೈಠಕ್ಕಿನಲ್ಲಿ ಯಾವಾಗ ಏನು ದುರ್ಯೋಗ ಆರಂಭವಾಗುತ್ತದೋ ಎಂಬ ಭಯ. ಯಾವುದಾದರೂ ಆರಂಭ ವಾದರೆ ಸರಿ, ದಿವಸಗಳಾದ ಮೇಲೆ ದಿವಸಗಳು, ಶಾಂತಿಯೇ ಇಲ್ಲ. ಕುಮುದಿನಿಯ ಎದೆ ಹೊಡೆದು ಕೊಳ್ಳುವುದು. ಮನೆಯೊಳಗೆಲ್ಲೋ ಅಡಗಿ ಅಮ್ಮ ಗುಟ್ಟಾಗಿ ಅಳುವಳು. ಮಕ್ಕಳ ಮುಖ ಕಳೆಗುಂದಿರುವುದು.....ಹೀಗೆ ಶುಭಾಶುಭಗಳಿಂದಲೂ, ಸುಖ ದುಃಖಗಳಿಂದಲೂ ಈ ಪ್ರಕಾಂಡ ಸಂಸಾರ ಯಾತ್ರೆಯು ಸರ್ವದಾ ಆಂದೋಳಿತವಾಗಿತ್ತು.

ಇವುಗಳ ಮಧ್ಯದಿಂದ ಕುಮುದಿನಿ ಕಲಿಕತ್ತೆಗೆ ಬಂದಳು. ಇದೊಂದು ದೊಡ್ಡ ಸಮುದ್ರ. ಆದರೆ ದಾಹವನ್ನಡಗಿಸಲು ಒಂದು ತೊಟ್ಟು ನೀರು ಕೂಡ ಎಲ್ಲಿ? ಅವಳ ಊರಿನಲ್ಲಾದರೋ ಆಕಾಶದ ಗಾಳಿಯಲ್ಲಿಯೂ ಒಂದು ಗುರುತಾದ ಚಹರೆಯಿತ್ತು. ಗ್ರಾಮದ ದಿಗಂತದಲ್ಲಿ ಒಂದು ಕಡೆ ದಟ್ಟವಾದ ಅಡವಿ, ಒಂದು ಕಡೆ ಮರಳು ಬಯಲು, ನದಿಯ ಜಲರೇಖೆ, ದೇವಾಲಯದ ಗೋಪುರ, ಶೂನ್ಯವಾದ, ವಿಶಾಲವಾದ ಹುಲ್ಲುಗಾವಲು, ಕಾಡು ಪೊದೆಗಳ ಸಮೂಹ, ಜಾಡು ಬಿದ್ದ ಕಾಲು ಹಾದಿ, ಇವುಗಳೆಲ್ಲ ನಾನಾ ರೇಖೆಗಳಿಂದ, ನಾನಾ ವರ್ಣಗಳಿಂದ, ವಿಚಿತ್ರವಾಗಿ ಸುತ್ತುಗಟ್ಟಿ ಪರಿಚಿತವಾದ ಆಕಾಶಕ್ಕೆ ಒಂದು ಹೊಸ ಶೋಭೆಯನ್ನು ಕೊಟ್ಟಿದ್ದವು. ಸೂರ್ಯನ ಬೆಳಕು ಕೂಡ ಹಾಗೆಯೇ ಹೊಸ ಕಾಂತಿಯನ್ನು ಪಡೆದಿತ್ತು. ಸರೋವರದಿಂದ, ಹೊಲದ ಪೈರು ಪಚ್ಚೆಗಳಿಂದ, ಬೆತ್ತದ ಗಿಡಗಳಿಂದ, ಬೆಸ್ತರ ದೋಣಿಯ ಕಾಚಿನ ರಂಗಿನ ಪಟದಿಂದ, ಎಳೆ ಬಿದಿರಿನ ಚಿಗುರೆಲೆಗಳಿಂದ, ಹಲಸಿನ ಮರದ ಘನವಾದ ಹಸುರಿನಿಂದ, ಆಚೆಯ ಬದಿಯಲ್ಲಿನ ಮರಳು ತೀರದ ಮಾಸಲು ಹಳದಿಯಿಂದ, ಇವೆಲ್ಲವುಗಳೊಡನೆ ನಾನಾ ಭಾವದಲ್ಲಿ ಬೆರತು ಆ ಬೆಳಕು ಚಿರ ಪರಿಚಿತವಾದೊಂದು ರೂಪವನ್ನು ಧರಿಸಿತ್ತು, ಕಲಿಕತ್ತೆಯ ಈ ಗುರುತಿಲ್ಲದ ಅಂತಸ್ತುಗಳ ಬಿಸಿಲು ಮಾಳಿಗೆಯಲ್ಲಿ, ಗೋಡೆಗಳಲ್ಲಿ, ಕೋಣವಾದ, ಒರಟು ರೇಖೆಯ ಆಘಾತದೊಡನೆ ನಾನಾ ಭಾಗಗಳಾಗಿ ಅದೇ ಚಿರದಿನಗಳ ಆಕಾಶದ ಬೆಳಕು ಅವಳನ್ನು ಹೊಸಬರಂತೆ ಕ್ರೂರ ದೃಷ್ಟಿ ಯಿಂದ ನೋಡುತ್ತಿತ್ತು....ಇಲ್ಲಿನ ದೇವತೆಗಳೂ ಕೂಡ ಅವಳನ್ನು ಒತ್ತಟ್ಟಿಗಿಟ್ಟುಬಿಟ್ಟಿದ್ದರು.

ವಿಪ್ರದಾಸನು ಅವಳನ್ನು ಕುರ್ಚಿಯ ಬಳಿ ಮೆಲ್ಲಗೆ ಎಳೆದುಕೊಂಡು "ಏನಮ್ಮಾ ಕುಮೂ, ಮನಸ್ಸಿಗೆ ಬೇಜಾರಾಗುತ್ತದೇಯೇ ?" ಎಂದನು,

ಕುಮುದಿನಿ ನಗುತ್ತಾ "ಇಲ್ಲಣ್ಣಾ, ಸ್ವಲ್ಪವೂ ಇಲ್ಲ" ಎಂದಳು.

"ಮ್ಯೂಜಿಯಮ್ ನೋಡಿಕೊಂಡು ಬರುತ್ತೀಯಾ ?"

" ಹೂಂ.,..ಹೋಗುತ್ತೇನೆ."

ಅವಳು ಹಾಗೆ ಹೇಳಿದ ಉತ್ಸಾಹ ನೋಡಿದರೆ, ವಿಪ್ರದಾಸನು ಗಂಡಸಾಗಿಲ್ಲದೆ ಹೋಗಿದ್ದರೆ ಅದು ಸ್ವಾಭಾವಿಕವಲ್ಲವೆಂದು ಹೇಳಿಬಿಡಬಹುದಾಗಿತ್ತು. ಮ್ಯೂಜಿಯಮ್ಮಿಗೆ ಹೋಗದಿದ್ದರೇನೆ ಅವಳಿಗೆ ನೆಮ್ಮದಿ, ಹೊರಗಿನ ಜನಗಳ ಗುಜುಗುಂಪಿನಲ್ಲಿ ಹೋಗಿ ತಿರುಗಾಡುವ ಅಭ್ಯಾಸವಿಲ್ಲದುದರಿಂದ ಜನ ಸಮಾಗಮದ ಮಧ್ಯೆ ಹೋಗುವುದೆಂದರೆ ಅವಳ ಸಂಕೋಚಕ್ಕೆ ಕೊನೆಯಿಲ್ಲ. ಕೈ ಕಾಲು ತಣ್ಣಗಾಗಿ ಹೋಗುವುವು. ಕಣ್ಣುಗಳನ್ನು ಚೆನ್ನಾಗಿ ಬಿಟ್ಟು ನೋಡಲು ಆಗುತ್ತಲೇ ಇರ ಲಿಲ್ಲ.

ವಿಪ್ರದಾಸನು ಅವಳಿಗೆ ಚದುರಂಗ ಕಲಿಸಿದನು. ಅವನು ಅಸಾಮಾನ್ಯ ಆಟಗಾರ. ಕುಮೂವಿನ ತಪ್ಪು ಆಟ ನೋಡಿ ಅವನಿಗೆ ಬಹಳ ತಮಾಷೆ. ಬರಬರುತ್ತಾ ನಿತ್ಯವೂ ಕ್ಲುಪ್ತವಾಗಿ ಆಡಿ ಆಡಿ ಕುಮು ಎಷ್ಟರಮಟ್ಟಿಗೆ ಪಳಗಿದಳೆಂದರೆ ವಿಪ್ರದಾಸನು ಎಚ್ಚರಿಕೆಯಿಂದ ಆಡಬೇಕಾಗುತ್ತಿತ್ತು. ಕಲಿಕತ್ತೆಯಲ್ಲಿ ಕುಮುದಿನಿಗೆ ಸಮವಯಸ್ಕರಾದ ಹೆಣ್ಣು ಸಂಗಾತಿಯರಿಲ್ಲದೆ ಈ ಅಣ್ಣ ತಂಗಿಯರಿಬ್ಬರೂ ಅಣ್ಣತಮ್ಮಂದಿರಂತೆ ಸಲಿಗೆಯಾಗಿ ಇರತೊಡಗಿದರು. ಸಂಸ್ಕೃತ ಸಾಹಿತ್ಯ ಕಂಡರೆ ವಿಪ್ರದಾಸನಿಗೆ ಬಹಳ ಆಸಕ್ತಿ. ಕುಮು ಒಂದೇ ಮನಸ್ಸಿನಿಂದ ಅವನ ಬಳಿ ವ್ಯಾಕರಣ ಕಲಿತಳು. ಕುಮಾರಸಂಭವ ಓದಿದಾಗಿನಿಂದ ಅವಳು ಶಿವಪೂಜೆ ಮಾಡುವಾಗ ತಪಸ್ವಿನಿ ಪಾರ್ವತಿಯ ತಪೋಧನನಾದ ಪರಶಿವನನ್ನು ಕಂಡುಕೊಂಡಳು. ಈ ಕುಮಾರಿಯ ಧ್ಯಾನದಿಂದ ಅವಳ ಭಾವೀ ಪತಿಯು ಪವಿತ್ರತೆಯ ದೈವ ಜ್ಯೋತಿಯಿಂದ ಪ್ರಕಾಶಮಾನನಾಗಿ ದರ್ಶನ ಕೊಟ್ಟನು.

ವಿಪ್ರದಾಸನಿಗೆ ಫೋಟೋ ತೆಗೆಯುವ ಹವ್ಯಾಸವಿತ್ತು. ಕುಮುವೂ ಅದನ್ನು ಕಲಿತಳು. ಅವರಲ್ಲಿ ಒಬ್ಬರು ಫೋಟೋ ತೆಗೆದರೆ ಇನ್ನೊಬ್ಬರು ಅದನ್ನು ತೊಳೆದು ಪ್ರತಿಗಳನ್ನು ತೆಗೆಯುವರು. ಬಂದೂಕಿನಲ್ಲಿ ವಿಪ್ರದಾಸನದು ಪಳಗಿದ ಕೈ....ಉತ್ಸವಗಳ ಸಮಯದಲ್ಲಿ ಊರಿಗೆ ಹೋದಾಗ ಹಿತ್ತಲ ಕಡೆಯ ಕೊಳದಲ್ಲಿ ಎಳನೀರಿನ ಬುರುಡೆ, ಬಿಲ್ವಫಲದ ಚಿಪ್ಪು, ಅಖರೋಟ್ ಮೊದಲಾದುವುಗಳನ್ನು ತೇಲಿಬಿಟ್ಟು ಪಿಸ್ತೂಲಿನಿಂದ ಗುರಿಹೊಡೆಯುವ ಅಭ್ಯಾಸ ಮಾಡುತ್ತಿದ್ದನು. ಕುಮೂವನ್ನು ಕೂಗಿ "ಬಾರೇ ಕುಮು, ಒಂದೇಟು ನೋಡುತ್ತೀಯಾ ?" ಎನ್ನುವನು.

ಅಣ್ಣನಿಗೆ ಆಸಕ್ತಿಯಿದ್ದುದೆಲ್ಲವನ್ನೂ ಕುಮು ಅಭ್ಯಾಸಮಾಡಿಕೊಂಡು ತನ್ನದಾಗಿ ಮಾಡಿಕೊಂಡುಬಿಟ್ಟಳು. ಅಣ್ಣನ ಬಳಿ ಏಸ್‌ರಾಜ್ ಕಲಿತು ಎಷ್ಟರಮಟ್ಟಿಗೆ ನುಡಿಸುತ್ತ ಇದ್ದಳೆಂದರೆ ವಿಪ್ರದಾಸನು "ನಾನೇ ಸೋತೆ" ಎಂದು ಒಪ್ಪಿಕೊಂಡುಬಿಡುತ್ತಿದ್ದನು.

ಹೀಗೆಯೇ ಬಾಲ್ಯದಿಂದಲೂ ಯಾವ ಅಣ್ಣನಮೇಲೆ ಎಲ್ಲರಿಗಿಂತಲೂ ಹೆಚ್ಚು ಭಯ, ಭಕ್ತಿಗಳನ್ನಿಟ್ಟಿದ್ದಳೋ, ಕಲಿಕತ್ತೆಗೆ ಬಂದು ಆತನನ್ನು ಎಲ್ಲರಿಗಿಂತಲೂ ಹೆಚ್ಚು ಆಪ್ತನನ್ನಾಗಿ ಮಾಡಿಕೊಂಡುಬಿಟ್ಟಳು. ಕಲಿಕತ್ತೆಗೆ ಬಂದುದು ಸಾರ್ಥಕವಾಯಿತು. ಕುಮು ಸ್ವಭಾವತಃ ಮನಸ್ಸಿನೊಳಗೆ ಏಕಾಂಗಿ. ಪರ್ವತವಾಸಿನಿಯಾದ ಗೌರಿಯಂತೆ ಅವಳು ಮಾನಸ ಸರೋವರದ ದಡದಲ್ಲಿನ ಒಂದು ಕಲ್ಪಿತ ತಪೋವನದಲ್ಲಿ ವಾಸಮಾಡುತ್ತಿದ್ದಳು. ಹೀಗೆ ಬಾಲ್ಯದಿಂದ ಏಕಾಕಿಯಾಗಿದ್ದವರಿಗೆ ಮುಕ್ತ ಆಕಾಶದ ವಿಶಾಲ ನಿರ್ಜನತೆಯು ಆವಶ್ಯಕ. ಅಲ್ಲದೆ ಇವುಗಳ ಸಂಗಡ ತಮ್ಮ ಸಮಸ್ತ ಮನಪ್ರಾಣಗಳಿಂದ ಪೂಜಿಸಲು ಅರ್ಹರಾದ ಇನ್ನೊಬ್ಬ ವ್ಯಕ್ತಿಯೂ ಇರಬೇಕು.

ಹತ್ತಿರದ ಸಂಸಾರವನ್ನು ಬಿಟ್ಟು ಹೀಗೆ ದೂರವಾಗಿರುವುದು ತಮಗೆ ತಕ್ಕುದಲ್ಲವೆಂದು ಹೆಂಗಸರು ಸಾಧಾರಣವಾಗಿ ಒಪ್ಪುವುದಿಲ್ಲ. ಇದನ್ನು ಅವರು ಅಹಂಕಾರವೆಂದೂ, ಇಲ್ಲವೆ ಹೃದಯಹೀನತೆಯೆಂದೂ ಅಂದುಕೊಳ್ಳುವರು. ಅದಕ್ಕಾಗಿಯೇ ಊರಿನಲ್ಲಿದ್ದಾಗಲೂ ಜೊತೆಗಾರ್ತಿಯರ ಗುಂಪಿನಲ್ಲಿ ಕುಮುದಿನಿಗೆ ಸರಿಯಾದ ಗೆಳತಿಯರು ಸಿಕ್ಕಲಿಲ್ಲ.

ತಂದೆ ಇದ್ದಾಗಲೇ ವಿಪ್ರದಾಸನ ಮದುವೆಯು ನಿಷ್ಕರ್ಷೆಯಾಗಿತ್ತು. ಆ ಸಮಯದಲ್ಲಿ ಮಂಗಳಸ್ನಾನಕ್ಕೆ ಎರಡು ದಿನ ಮುಂಚೆಯೇ ವಧುವು ಜ್ವರವಿಕಾರದಿಂದ ಸತ್ತುಹೋದಳು. ಆಗ ಭಟ್ಟರ ಕೇರಿಯಲ್ಲಿ ವಿಪ್ರದಾಸನ ಕುಂಡಲಿ ಪರೀಕ್ಷೆಯಿಂದ ವಿವಾಹ ಸ್ಥಾನದಲ್ಲಿದ್ದ ಕುಗ್ರಹದ

ಭೋಗಕ್ಷಯವಾಗಲು ನಿಧಾನವಾಗುವುದೆಂದು ತಿಳಿಯಬಂತು. ವಿವಾಹ ಮುಂದುಹಾಕಲ್ಪಟ್ಟಿತು. ಇಷ್ಟರಲ್ಲಿ ತಂದೆಯ ಸಾವೂ ಆಯಿತು. ಆ ತರುವಾಯ ಮಧ್ಯಸ್ತಗಾರರ ಉದ್ಯೋಗಕ್ಕೆ ಅನುಕೂಲವಾಗುವ ಸಮಯವು ವಿಪ್ರದಾಸನ ಮನೆಯಲ್ಲಿ ಬರಲಿಲ್ಲ. ಒಂದುಸಲ ಮಧ್ಯಸ್ತಗಾರನೊಬ್ಬ ದೊಡ್ಡದೊಂದು ವರದಕ್ಷಿಣೆಯ ಆಸೆಯನ್ನು ತೋರಿಸಲು ಬಂದ. ಅದರಿಂದ ಅಪೇಕ್ಷಿಸಿದುದಕ್ಕೆ ವಿರುದ್ಧವಾದ ಫಲ ಸಿಕ್ಕಿತು. ನಡುಗುವ ಕೈಯಿಂದ ಹುಕ್ಕಾವನ್ನು ಗೋಡೆಗೆ ಒರಗಿಸಿ ಅತಿ ವೇಗದಿಂದ ಹೆಜ್ಜೆಹಾಕುತ್ತಾ ಆ ಮಧ್ಯಸ್ತಗಾರನು ರಸ್ತೆಯಲ್ಲಿ ಹೊರಬೀಳಬೇಕಾಯಿತು.

## ಒಂಭತ್ತನೆಯ ಅಧ್ಯಾಯ

ಸುಬೋಧನ ಕಾಗದ ವಿಲಾಯತಿಯಿಂದ ನಿಯಮಿತವಾಗಿ ಬರುತ್ತಿತ್ತು. ಈಗ ಸ್ವಲ್ಪದಿನಗಳಿಂದ ಆಗಾಗ ತಡವಾಗುತ್ತಿತ್ತು. ಕುಮು ಟಪಾಲನ್ನು ವ್ಯಗ್ರಳಾಗಿ ಎದುರು ನೋಡುತ್ತಾ ಇದ್ದಳು. ಚಾಕರನು ಈಸಲ ಅವಳ ಕೈಗೇ ಕಾಗದ ಕೊಟ್ಟನು. ವಿಪ್ರದಾಸನಾಗ ಕನ್ನಡಿಯ ಮುಂದೆ ಕೂತು ಮುಖಕ್ಷೌರ ಮಾಡಿಕೊಳ್ಳುತ್ತಿದ್ದನು. ಕುಮು ಓಡಿಬಂದು "ಅಣ್ಣಾ, ಸುಬೋಧನ ಕಾಗದ" ಎಂದಳು.

ಮುಖಕ್ಷೌರ ಮುಗಿಸಿ ಆರಾಮ ಕುರ್ಚಿಯಮೇಲೆ ಕೂತು ವಿಪ್ರದಾಸನು ಅಂಜುತ್ತ ಅಂಜುತ್ತಲೇ ಪತ್ರ ಒಡೆದನು. ಓದಿ ಆದಮೇಲೆ ತೀವ್ರವೇದನೆಯನ್ನನುಭವಿಸಿದಂತೆ ಕಾಗದವನ್ನು ಹಾಗೆಯೇ ಅದುಮಿ ಹಿಡಿದುಕೊಂಡನು.

ಕುಮುದಿನಿ ಹೆದರಿ "ಚಿಕ್ಕಣ್ಣನಿಗೆ ಅಸ್ವಸ್ಥವಿಲ್ಲತಾನೆ?" ಎಂದು ಕೇಳಿದಳು.

"ಇಲ್ಲ....ಅವನು ಚೆನ್ನಾಗಿಯೇ ಇದಾನೆ."

"ಕಾಗದದಲ್ಲಿ ಏನು ಬರೆದಿದಾನೆ ಹೇಳಣ್ಣ."

"ಓದು ಬರೆಹದ ಸಂಗತಿ."

ಈಚೆಗೆ ಕೆಲವು ದಿನಗಳಿಂದ ವಿಪ್ರದಾಸನು ಸುಬೋಧನ ಕಾಗದನ್ನು ಕುಮುವಿಗೆ ಓದಲು ಕೊಡುತ್ತಿರಲಿಲ್ಲ. ಅಲ್ಪ ಸ್ವಲ್ಪ ತಾನೇ ಓದಿಹೇಳುತ್ತಿದ್ದ. ಈಗ ಅದೂ ಇಲ್ಲ. ಕಾಗದನ್ನು ಕೇಳಿ ತೆಗೆದುಕೊಳ್ಳಲು ಅವಳಿಗೆ ಸಾಹಸ ಬರಲಿಲ್ಲ. ಮನಸ್ಸು ತಲ್ಲಣಿಸುತ್ತಿತ್ತು.

ಸುಬೋಧ ಮೊದಲು ಮೊದಲು ಲೆಕ್ಕಾಚಾರವಾಗಿ ಖರ್ಚುಮಾಡುತ್ತಿದ್ದ. ಮನೆಯ ಕಷ್ಟದ ವಿಷಯ ಮನಸ್ಸಿನಲ್ಲಿ ಇನ್ನೂ ಹೊಸದಾಗಿಯೇ ಇತ್ತು. ಈಗ ಅದು ದೂರದ ನೆರಳಿನಂತೆ ಆದ ಹಾಗೆಲ್ಲ ಖರ್ಚು ಅದಕ್ಕನುಗುಣವಾಗಿ ಏರುತ್ತ ಬಂದಿತ್ತು. ದೊಡ್ಡಸ್ತಿಕೆಯ ರೀತಿಯಲ್ಲಿ ಜೀವಿಸದಿದ್ದರೆ ಇಂದಿನ ಕಾಲದ ಸಾಮಾಜಿಕ ತುದಿಯಂತಸ್ತಿನ ವಾತಾವರಣಕ್ಕೆ ಹತ್ತಲಾಗುವುದಿಲ್ಲ ಎಂದು ಬರೆದಿದ್ದನು. ಹಾಗೆ ಹತ್ತಲಾಗದಿದ್ದರೆ ವಿಲಾಯತಿಗೆ ಬರುವುದೂ ವ್ಯರ್ಥವೆಂದು ಅವನ ಅಭಿಪ್ರಾಯ. ವಿಧಿಯಿಲ್ಲದೆ ಒಂದೆರಡುಸಲ ವಿಪ್ರದಾಸನು ತಂತಿಯ ಮೂಲಕ ಕೇಳಿದಷ್ಟು ಹಣವನ್ನು ಕಳುಹಿಸಿಯಾಗಿತ್ತು. ಈಸಲ ಕೇಳಿರುವುದು ಸಾವಿರ ಪೌಂಡುಗಳಷ್ಟು—ಬಹಳ ತುರುತಿನ ಆವಶ್ಯಕತೆಯೆಂದು.

ವಿಪ್ರದಾಸನು ತಲೆಯಮೇಲೆ ಕೈಯಿಟ್ಟು "ಎಲ್ಲಿಂದ ತರಲಿ? ಮೈಯಲ್ಲಿನ ರಕ್ತವನ್ನು ನೀರು

ಮಾಡಿ ಕುಮುವಿನ ಲಗ್ನಕ್ಕೋಸ್ಕರ ಹಣ ಕೂಡಿಹಾಕುತ್ತಿದ್ದೇನೆ. ಕಡೆಗೆ ಆ ಹಣಕ್ಕೂ ಬರ ಬೇಕೇ ಕಾಲ ? ಕುಮುದಿನಿಯ ಭವಿಷ್ಯ ಹಾಳುಮಾಡಿ ಸುಬೋಧನ ಬ್ಯಾರಿಸ್ಟರಿ ಮಾಡಿಸುವುದಾದರೂ ಪ್ರಯೋಜನವೇನು ?" ಎಂದುಕೊಳ್ಳುವನು.

ಆ ರಾತ್ರಿ ವಿಪ್ರದಾಸನು ವರಾಂಡದಲ್ಲಿ ಶತಪದ ತಿರುಗುತ್ತಿದ್ದನು. ಕುಮುದಿನಿಗೂ ನಿದ್ದೆಯಿಲ್ಲವೆಂದು ಅವನಿಗೆ ತಿಳಿಯದು. ಒಂದುಸಲ ತಡೆಯಲಶಕ್ಯವಾಗಿ ಕುಮುದಿನಿಯು ಓಡಿಬಂದು ಅಣ್ಣನ ಕೈಯನ್ನು ಹಿಡಿದು "ಸತ್ಯವಾಗಿ ಹೇಳಣ್ಣ, ಚಿಕ್ಕಣ್ಣನಿಗೆ ಏನಾಗಿದೆ ? ನಿನ್ನ ಕಾಲಿಗೆ ಬೀಳುತ್ತೇನೆ. ನನ್ನಿಂದ ಮುಚ್ಚಿಡಬೇಡ" ಎಂದು ಅಂಗಲಾಚಿದಳು.

ಇನ್ನು ಮುಚ್ಚಿಟ್ಟರೆ ಕುಮುದಿನಿಯ ಶಂಕೆಯು ಮತ್ತೂ ಹೆಚ್ಚುವುದೆಂದು ವಿಪ್ರದಾಸನು ತಿಳಿದುಕೊಂಡನು.

ಸ್ವಲ್ಪ ಸುಮ್ಮನಿದ್ದು ಆ ಮೇಲೆ "ಸುಬೋಧ ಹಣ ಬೇಕೆಂದು ಬರೆದಿದಾನೆ. ಅವನು ಕೇಳಿದಷ್ಟು ಹಣ ಕೊಡುವ ಶಕ್ತಿ ನನಗಿಲ್ಲ" ಎಂದನು.

ಕುಮುದಿನಿಯು ಮತ್ತೆ ಅಣ್ಣನ ಕೈಹಿಡಿದು "ಅಣ್ಣಾ, ಒಂದು ಮಾತು ಹೇಳುತ್ತೇನೆ. ಕೋಪ ಮಾಡುವುದಿಲ್ಲ ಅಂದರೆ....!"

"ಕೋಪ ಬರುವ ಮಾತಂದರೆ ಕೋಪ ಮಾಡಿಕೊಳ್ಳದೆ ಬದುಕುವುದು ಹೇಗೆ ಕುಮೂ ?"

"ಇಲ್ಲಣ್ಣ, ತಮಾಷೆ ಬೇಡ. ನನ್ನ ಮಾತು ಕೇಳು, ಅಮ್ಮನ ಒಡವೆಗಳೆಲ್ಲಾ ನನಗೋಸ್ಕರವಾಗಿಯೇ ಇವೆ....ಅವನ್ನು ತೆಗೆದು...."

"ಛೀ....ಸುಮ್ಮನಿರು, ಸಾಕು....ನಿನ್ನ ಒಡವೆಗಳ ಮೇಲೆ ಕೈ ಹಾಕಲಾಗುತ್ತದೆಯೇ ?"

"ನನ್ನಿಂದ ಆಗುತ್ತಲ್ಲಾ ?"

"ಇಲ್ಲ. ನಿನ್ನಿಂದ ಆಗುವುದಿಲ್ಲ. ಆ ಮಾತೆಲ್ಲಾ ಹಾಗಿರಲಿ. ನೀನು ಹೋಗಿ ಮಲಗಿಕೋ."

ಕಲಿಕತ್ತಾ ಶಹರಿನ ಪ್ರಾತಃಕಾಲ ಕಾಗೆಗಳ ಕೂಗಿನೊಡನೆ ಮತ್ತು ನಗರ ಶುದ್ಧಿಯ ಗಾಡಿಗಳ ಗಡಗಡ ಶಬ್ದದೊಡನೆ ಕತ್ತಲು ಜಾರಿಹೋಯಿತು. ದೂರದಲ್ಲಿ ಆಗಾಗ ಜಹಜಿನ ಶಬ್ದ, ಆಗಾಗ ಎಣ್ಣೆಯ ಗಿರಣಿಯ ಶಿಲ್ಲು. ಮನೆಯ ಇದಿರಿನ ರಸ್ತೆಯಲ್ಲಿ ಮನುಷ್ಯನೊಬ್ಬ ಹೆಗಲಮೇಲೆ ಏಣಿ ಹೊತ್ತುಕೊಂಡು ಜ್ವರಾರಿ ಮಾತ್ರೆಗಳ ಜಾಹೀರಾತನ್ನು ಗೋಡೆಗಳಿಗೆ ಅಂಟಿಸುತ್ತಾ ಹೋಗುತ್ತಿದ್ದಾನೆ. ಖಾಲೀ ಗಾಡಿಯ ಎತ್ತುಗಳೆರಡು ಗಾಡಿ ಹೊಡೆಯುವವನ ಕೈಯಿಂದ ಏಟುತಿಂದು ಬೇಗ ಬೇಗ ಓಡಲು ಆರಂಭಿಸಿವೆ. ಕೊಳಾಯಿಯಿಂದ ನೀರು ತುಂಬಿಸಿಕೊಳ್ಳುವ ಸ್ಪರ್ಧೆಗಾಗಿ ಹಿಂದುಸ್ಥಾನಿ ಹೆಂಗಸೊಬ್ಬಳಿಗೂ ಉಡಿಯಾ ಬ್ರಾಹ್ಮಣನೊಬ್ಬನಿಗೂ ವಾಗ್ವಾದ ಕಾದಾಟಗಳು ನಡೆಯುತ್ತಿವೆ.

ವಿಪ್ರದಾಸನು ವರಾಂಡದಲ್ಲಿ ಕೂತಿದ್ದಾನೆ. ಗುಡುಗುಡಿಯ ಕೊಳವೆ ಕೈಯಲ್ಲಿ. ಇನ್ನೂ ಓದದೆ ಇರುವ ವೃತ್ತಪತ್ರಿಕೆಯು ನೆಲದಮೇಲೆ ಬಿದ್ದಿದೆ.

ಕುಮೂ ಹತ್ತಿರ ಬಂದು "ಅಣ್ಣಾ, ಆಗೋಲ್ಲ ಅನ್ನಬೇಡ" ಎಂದಳು.

"ನನ್ನ ಅಭಿಪ್ರಾಯ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುತ್ತೀಯೇನೇ ? ನಿನ್ನ ಇಷ್ಟಾನುಸಾರ ರಾತ್ರಿಯನ್ನು ಹಗಲು ಮಾಡಬೇಕು, 'ಊಹೂಂ' ಅನ್ನುವುದನ್ನು 'ಹೂಂ' ಮಾಡಬೇಕಲ್ಲವೇ ?"

"ಇಲ್ಲ - ನೀನು ಕೇಳಲೇಬೇಕು. ನನ್ನ ಒಡವೆಗಳಿಂದ ನಿಮ್ಮ ದುಗುಡ ಕಳೆಯಲಿ."

" ಅದು ಕಳೆಯುವುದು ಅಷ್ಟು ಸುಲಭವೇನೆ ಹುಡುಗಿ ? ನಿನ್ನ ಒಡವೆ ತೆಗೆದುಕೊಂಡುಬಿಟ್ಟರೆ ನನ್ನ ಚಿಂತೆ ದೂರವಾಗುತ್ತೆ ಅಂತ ಯಾರೇ ಹೇಳಿದರು ನಿನಗೆ ?"

" ನನಗೆ ಗೊತ್ತಿಲ್ಲ. ಆದರೆ ಹೀಗೆ ನೀನು ಯೋಚನೆ ಮಾಡುತ್ತ ಕೂಡುವುದು ನನಗೆ ಸಹಿಸುವುದಿಲ್ಲ."

ಯೋಚನೆ ಮಾಡಿದರೆ ತಾನೇ ಯೋಚನೆಯನ್ನು ತೀರಿಸುವುದು....ಅದನ್ನು ಮೋಸದಿಂದ ತೀರಿಸಲಿಕ್ಕೆ ಹೋದರೆ ವಿಪರೀತವಾದೀತು. ಸ್ವಲ್ಪ ಧೈರ್ಯ ತಂದುಕೋ. ಏನಾದರೂ ವ್ಯವಸ್ಥೆ ಮಾಡೋಣಂತೆ."

ವಿಪ್ರದಾಸನು ಅದೇ ಟಪಾಲಿನಲ್ಲಿ " ಹಣ ಕುಳಹಿಸಬೇಕಾದರೆ ಕುಮುವಿನ ಲಗ್ನದ ಹಣಕೆ ಕೈಹಾಕಬೇಕಾಗುತ್ತೆ. ಅದು ಸಾಧ್ಯವಿಲ್ಲದ ಮಾತು "ಎಂದು ತಮ್ಮನಿಗೆ ಬರೆದುಬಿಟ್ಟನು.

ಯಥಾ ಸಮಯದಲ್ಲಿ ಉತ್ತರವೂ ಬಂತು. " ಕುಮುವಿನ ಮದುವೆಯ ಹಣ ಅವನಿಗೆ ಬೇಕಿಲ್ಲ. ಆಸ್ತಿಯಲ್ಲಿ ಅವನ ಅರ್ಧಭಾಗವನ್ನು ಮಾರಿ ಹಣ ಕಳುಹಿಸುವುದು !" ಹೀಗೆಂದು ಬರೆದು ಸುಬೋಧನು ಪವರ್ ಆಫ್ ಅಟೋರ್ನಿ (ವ್ಯವಹಾರ ಸ್ವಾತಂತ್ರ್ಯವನ್ನು ಕೊಡುವ ದಸ್ತಾವೇಜು) ಕೂಡ ಪತ್ರದ ಜೊತೆಯಲ್ಲಿ ಕಳುಹಿಸಿದ್ದ.

ಈ ಕಾಗದ ವಿಪ್ರದಾಸನ ಎದೆಗುಲ್ಲಿ ಬಾಣದಂತೆ ನೆಟ್ಟಿತು. ಇಷ್ಟು ಮಹಾ ನಿಷ್ಠುರವಾದ ಕಾಗದ ಹೇಗೆತಾನೇ ಬರೆದ ಸುಬೋಧ ! ತಕ್ಷಣವೇ ಮುದಿ ದಿವಾನಜೀಯನ್ನು ಕರೆಯಿಸಿದ. ಅವರು ಬಂದೊಡನೆ " ಭೂಷಣ ರಾಯರು ಕರೀಮ್ ಹಾಟಿಯ ತಾಲ್ಲೂಕನ್ನು ಗುತ್ತಿಗೆ ಕೇಳಿದ್ದರಲ್ಲವೇ ? ಎಷ್ಟು ಕೊಡುವುದಕ್ಕೆ ಸಿದ್ಧವಾಗಿದಾರೆ ?" ಎಂದು ಕೇಳಿದನು.

ದಿವಾನನು " ಇಪ್ಪತ್ತು ಸಾವಿರದವರೆಗೂ ಎಬ್ಬಿಸಬಹುದು" ಎಂದ.

" ಭೂಷಣರಾಯರಿಗೆ ಹೇಳಿಕಳುಹಿಸಿ. ಮಾತು ಕಥೆ ಆಗಲಿ."

ವಿಪ್ರದಾಸನು ವಂಶದ ಹಿರಿಯ ಮಗ. ಅವನು ಹುಟ್ಟಿದ ಸಮಯದಲ್ಲಿ ಅವನ ಪಿತಾಮಹ ಈ ತಾಲ್ಲೂಕನ್ನು ಸ್ವತಂತ್ರವಾಗಿ ಅವನ ಹೆಸರಿಗೇ ದಾನಮಾಡಿದ್ದನು. ಭೂಷಣರಾಯರು ದೊಡ್ಡ ಲೇವಾದೇವಿಯವರು. ಇಪ್ಪತ್ತು-ಇಪ್ಪತ್ತೈದು ಲಕ್ಷಗಳವರೆಗೂ ಅವರ ವ್ಯವಹಾರ. ಅವರ ಜನ್ಮಸ್ಥಳ ಕರೀಮ್‌ಹಾಟಿ, ಈ ಕಾರಣದಿಂದಲೇ ಸ್ವಂತ ಹುಟ್ಟಿದೂರಿನ ಭೋಗ್ಯ ತೆಗೆದುಕೊಳ್ಳಬೇಕೆಂದು ಪ್ರಯತ್ನಮಾಡುತ್ತಿದ್ದರು. ಹಣದ ಮುಗ್ಗಟ್ಟಿನಿಂದ ವಿಪ್ರದಾಸನು ಒಪ್ಪುವುದರಲ್ಲಿದ್ದಾಗ ರೈತರು ಬಂದು ಗೋಳಿಡುತ್ತಿದ್ದರು. " ಅವರನ್ನೆಂದಿಗೂ ನಾವು ಜಮೀನ್ದಾರರೆಂದು ಒಪ್ಪಿಕೊಳ್ಳಲಾರೆವು" ಎಂದು ಹೇಳುತ್ತಿದ್ದರು. ಇದರಿಂದ ಪ್ರಸ್ತಾಪ ಅಲ್ಲಿಗೇ ನಿಂತುಹೋಗಿತ್ತು. ಈಸಲ ಮಾತ್ರ ವಿಪ್ರದಾಸನು ಗಟ್ಟಿ ಮನಸ್ಸು ಮಾಡಿದನು. ಸುಬೋಧನ ಹಣದ ಜರೂರಿ ಇಷ್ಟಕ್ಕೆ ನಿಲ್ಲುವುದಿಲ್ಲವೆಂದು ಅವನಿಗೆ ಗೊತ್ತಿತ್ತು. ಆದರೂ ಮನಸ್ಸಿನಲ್ಲಿ "ನನ್ನ ತಾಲ್ಲೂಕಿನ ಗುತ್ತಿಗೆಯ ಹಣ ಸುಬೋಧನಿಗಾಗಲಿ. ಇದಾದಮೇಲೆ ನೋಡೋಣಂತೇ" ಎಂದುಕೊಂಡನು.

ದಿವಾನನು ವಿಪ್ರದಾಸನ ಮಾತಿಗೆ ಪ್ರತಿ ಹೇಳಲು ಸಾಹಸಪಡಲಿಲ್ಲ. ಗುಟ್ಟಾಗಿ ಕುಮೂ ಬಳಿ ಹೋಗಿ " ಅಮ್ಮಾ, ನಿನ್ನ ಮಾತು ಕೇಳುತ್ತಾನೆ ನಿಮ್ಮ ಅಣ್ಣ. ಬೇಡ ಎಂದು ಹೇಳು ಅವನಿಗೆ. ಇಲ್ಲದೆ ಹೋದರೆ ಬಹಳ ಅನ್ಯಾಯವಾಗುತ್ತೆ" ಎಂದನು.

ವಿಪ್ರದಾಸನನ್ನು ಮನೆಯಲ್ಲಿ ಎಲ್ಲರೂ ಪ್ರೀತಿಸುತ್ತಿದ್ದರು. ಗೌರವಿಸುತ್ತಿದ್ದರು. ಯಾರಿಗೋ

ಸ್ಕರವಾದರೂ ಸ್ವಂತ ಆಸ್ತಿಯನ್ನು ಕಳೆದುಕೊಳ್ಳುವುದು ಅವರಿಗೆ ಯಾರಿಗೂ ಸಹಿಸಲಿಲ್ಲ. ಹೊತ್ತೇರುತ್ತಿತ್ತು. ವಿಪ್ರದಾಸನು ಆ ತಾಲ್ಲೂಕಿನ ಖಾತಾಪತ್ರಗಳನ್ನು ನೋಡುತ್ತ ಕೂತಿದ್ದನು. ಇನ್ನೂ ಸ್ನಾನಾಹಾರಗಳಾಗಿಲ್ಲ. ಕುಮೂ ಬಾರಿಬಾರಿಗೂ ಅವನಿಗೆ ಹೇಳಿಕಳುಹಿಸಿದಳು. ಒಣಗಿದ ಮುಖದಿಂದ ಒಂದು ಸಲ ತಾನೇ ಒಳಗೆ ಬಂದಳು. ಸಿಡಿಲು ಹೊಡೆದು ಎಲೆಸುಟ್ಟಗಿಡದಂತಿತ್ತು ಅವಳ ಮುಖ ಅವಳ ಎದೆಯಲ್ಲಿ ಶೂಲ ನೆಟ್ಟಂತಾಗಿತ್ತು.

ಸ್ನಾನಾಹಾರಗಳಾದ ಮೇಲೆ ವಿಪ್ರದಾಸನು ಗುಡುಗುಡಿಯ ಕೊಳವೆಯನ್ನು ಕೈಯಲ್ಲಿ ಹಿಡಿದುಕೊಂಡು ಮಂಚದ ಸುಪ್ಪತ್ತಿಗೆಯಮೇಲೆ ಕಾಲು ಚಾಚಿಕೊಂಡು ದಿಂಬಿನಮೇಲೆ ಒರಗಿಕೊಂಡು ಕೂತಿದ್ದಾಗ ಕುಮು ಅವನ ತಲೆಯ ಬಳಿ ಬಂದು ಕೂತು ನಿಧಾನವಾಗಿ ಅವನ ಕೂದಲ ಮೇಲೆ ಕೈಯಾಡಿಸುತ್ತಾ ಮೃದುವಾಗಿ "ಅಣ್ಣಾ, ನಿನ್ನ ತಾಲ್ಲೂಕನ್ನು, ನೀನು ಭೋಗ್ಯಕ್ಕೆ ಕೊಡಬೇಕಾಗಿಲ್ಲ" ಎಂದಳು.

"ನಿನಗೇನಾದರೂ ನವಾಬ್ ಸಿರಾಜುದ್ದೌಲನ ಪಿಶಾಚ ಹಿಡಿದಿದೆಯೇನೇ? ಎಲ್ಲ ವಿಷಯಕ್ಕೂ ಜುಲುಂ ಮಾಡುವುದಕ್ಕೆ ಬರುತ್ತೀಯಲ್ಲಾ ?"

"ಹೋಗಣ್ಣಾ ! ಮಾತು ಮರೆಯಿಸಬೇಡ."

ಆಗ ವಿಪ್ರದಾಸನಿಗೆ ತಡೆಯಲು ಆಗದೆ ನೆಟ್ಟಗೆ ಕೂತು ಕುಮುವನ್ನು ತಲೆಯ ಕಡೆಯಿಂದ ಜರುಗಿಸಿ ಎದುರಿಗೆ ಕೂಡಿಸಿಕೊಂಡು ರುದ್ಧ ಸ್ವರವನ್ನು ಸರಿಮಾಡಿಕೊಳ್ಳಲು ಒಂದೆರಡು ಸಲ ಕೆಮ್ಮಿ "ಸುಬೋಧ ಏನು ಬರೆದಿದಾನೆ ಗೊತ್ತೇ ನಿನಗೆ? ಇಗೋ ನೋಡು" ಎಂದ.

ಜುಬ್ಬದ ಜೇಬಿನಿಂದ ಅವನ ಕಾಗದವನ್ನು ತೆಗೆದು ಅವಳ ಕೈಯಲ್ಲಿಟ್ಟನು. ಕುಮು ಓದಿ ಎರಡು ಕೈಗಳಿಂದಲೂ ಮುಖ ಮುಚ್ಚಿಕೊಂಡು "ಅಮ್ಮಮ್ಮಾ, ಚಿಕ್ಕಣ್ಣ ಇಂತಹ ಕಾಗದ ಹೇಗೆ ಬರೆದ?" ಎಂದಳು.

ವಿಪ್ರದಾಸನು "ಅವನ ಸ್ವಂತ ಆಸ್ತಿ, ಮತ್ತು ನನ್ನ ಆಸ್ತಿ ಎಂದು ಯಾವಾಗ ಅವನು ಭೇದ ತೋರಿಸಿದ, ಇನ್ನು ನನ್ನ ಸ್ವಂತ ತಾಲ್ಲೂಕನ್ನು ಬೇರೆಯಾಗಿ ಹೇಗೆ ಇಟ್ಟುಕೊಳ್ಳಲಿ ಹೇಳು......? ಇವತ್ತು ಅವನಿಗೆ ತಂದೆಯಿಲ್ಲ. ಕಷ್ಟಕಾಲದಲ್ಲಿ ನಾನು ಕೊಡದೆ ಹೋದರೆ ಬೇರೆ ಯಾರು ಕೊಡುತಾರೆ, ಹೇಳು, ನೀನೇ!" ಎಂದ. ಇದರ ಮೇಲೆ ಕುಮು ಹೆಚ್ಚು ಮಾತಾಡಲಾಗದೆ ನೀರವವಾಗಿದ್ದಳು. ಅವಳ ಕಣ್ಣುಗಳಲ್ಲಿ ನೀರು ತುಂಬಿ ಹರಿಯಲಾರಂಭವಾಯಿತು. ವಿಪ್ರದಾಸನು ಮತ್ತೆ ದಿಂಬಿಗೆ ಒರಗಿಕೊಂಡು ಕಾಲು ಚಾಚಿ ಕಣ್ಣು ಮುಚ್ಚಿಕೊಂಡು ಸುಮ್ಮನಿದ್ದನು.

ಬಹಳ ಹೊತ್ತು ಅಣ್ಣನ ಕಾಲನ್ನು ನೇವರಿಸುತ್ತಿದ್ದು ಕೊನೆಗೆ ಕುಮು "ಅಣ್ಣಾ, ಅಮ್ಮನ ಹಣವಿನ್ನೂ ಅಮ್ಮನದಾಗಿಯೇ ಇದೆ. ಹೀಗಿರುವಾಗ ಆ ಒಡವೆಗಳನ್ನು ನೀನು ಯಾಕಣ್ಣಾ—" ಎನ್ನುವಷ್ಟರಲ್ಲಿ ವಿಪ್ರದಾಸನು ಬೆಚ್ಚಿ ಬಿದ್ದು ಕೂತು "ಇನ್ನೂ ನೀನು ಸ್ವಲ್ಪವೂ ಅರ್ಥಮಾಡಿಕೊಂಡಿಲ್ಲಮ್ಮಾ. ನಿನ್ನ ಒಡವೆಗಳನ್ನು ತೆಗೆದುಕೊಂಡು ಸುಬೋಧ ಇವತ್ತು ವಿಲಾಯತಿಯಲ್ಲಿ ನಾಟಕ ಕಾರ್ಸರ್ಕಸ್ಸುಗಳನ್ನು ನೋಡುತ್ತಾ ಅಲೆದುಕೊಂಡಿದ್ದರೆ, ನಾಳೆ ನಾನು ಹೇಗೆ ಅವನ ಮುಖ ನೋಡಲಿ ಹೇಳು....ಇಲ್ಲ, ಅವನು ತಾನೇ ಎಂದಾದರೂ ತಲೆಯೆತ್ತಿಕೊಂಡು ನಿಲ್ಲುತಾನೆಯೇ? ...,ಅವನಿಗೆ ಯಾಕಮ್ಮಾ ಅಂತಹ ಶಿಕ್ಷೆ ಹೇಳು ಮತ್ತೆ?" ಎಂದನು. ಕುಮು ಸುಮ್ಮನೆ ಕೂತಿದ್ದಳು. ಯಾವ ದಾರಿಯೂ ತೋಚಲಿಲ್ಲ. ಆಗ ಹಿಂದೆ ಅನೇಕ ಬಾರಿ ಅಂದುಕೊಂಡ ಹಾಗೆ

ಈಗಲೂ ಅದೇ ರೀತಿ ಯೋಚಿಸಲು ತೊಡಗಿದಳು. "ಅಸಂಭವವಾದುದೇನಾದರೂ ಒಂದು ಆಗಬಾರದೇ ಈಗ! ಆಕಾಶದ ಯಾವುದಾದರೂ ಗ್ರಹವೇ ಆಗಲಿ, ಒಂದು ಕ್ಷಣದಲ್ಲಿ ನಮ್ಮ ಸಂಕಟ ತೀರಿಸಬಾರದೆ?..."

ಕೆಲವು ದಿನಗಳಿಂದ ಶುಭ ಶಕುನ ಕಾಣಬರುತ್ತಿದೆ. ಅವಳ ಎಡಗಣ್ಣು ಬಾರಿ ಬಾರಿಗೂ ಅದುರುತ್ತಿತ್ತು. ಇದಕ್ಕೆ ಮುಂಚೆ ಎಷ್ಟೋಸಲ ಎಡಗಣ್ಣು ಅದುರುತ್ತಿತ್ತು. ಆದರೆ ಅದನ್ನು ಕುರಿತು ಹೆಚ್ಚಾಗಿ ಯೋಚಿಸಲು ಅಗತ್ಯವಿರಲಿಲ್ಲ. ಈಸಲ ಶಕುನವನ್ನು ಮನಸ್ಸಿನಲ್ಲಿಯೇ ಭದ್ರವಾಗಿ ನಂಬಿ ಇಟ್ಟುಕೊಂಡಳು....ಅದರ ಫಲಿತಾಂಶ ಆಗಲೇಬೇಕು....ಶಕುನದ ಸತ್ಯ ಭಂಗವಾಗಬಾರದು....ಇದು ಅವಳಿಗೆ ಖಂಡಿತವಾಗಿತ್ತು.

# ಹತ್ತನೆಯ ಅಧ್ಯಾಯ

ಮೋಡಗಳು ಕವಿದಿವೆ. ವಿಪ್ರದಾಸನ ಮೈಯೇಕೋ ಚೆನ್ನಾಗಿಲ್ಲ. ದುಂಡು ದಿಂಬನ್ನು ತಲೆಯ ಹಿಂದೆ ಇಟ್ಟುಕೊಂಡು ಅರ್ಧ ಮಲಗಿಕೊಂಡು ವೃತ್ತಪತ್ರಿಕೆಯನ್ನೋದುತ್ತ ಇದ್ದಾನೆ.... ಕಮುದಿನಿಯ ಸಾಕು ಬೆಕ್ಕು ದಿಂಬಿನ ಒಂದು ಕೊನೆಯಲ್ಲಿ ಸುರುಳಿ ಸುತ್ತಿಕೊಂಡು ಮಲಗಿ ನಿದ್ರಿಸುತ್ತಿದೆ. ವಿಪ್ರದಾಸನ ಸಾಕುನಾಯಿ ವಿಧಿಯಿಲ್ಲದೆ ಬೆಕ್ಕಿನ ಸ್ಪರ್ಧೆಯನ್ನು ಸಹಿಸಿಕೊಂಡು ಯಜಮಾನನ ಕಾಲ ಬಳಿ ಮಲಗಿ ಕನಸಿನಲ್ಲಿಯೇ ಒಂದೊಂದು ಸಲ 'ಗೋಂ—ಗೋಂ' ಎಂದು ಗೊರಗುಟ್ಟುತ್ತಾ ಇದೆ.

ಈ ಸಮಯದಲ್ಲಿ ಇನ್ನೊಬ್ಬ ಲಗ್ನದ ಮಧ್ಯಸ್ತಗಾರ ಬಂದನು.

"ನಮಸ್ಕಾರ."

"ಯಾರು ನೀವು?"

"ಅಪ್ಪಣೆಯಾದರೆ....? ಏನೂ ಇಲ್ಲ....ದೊಡ್ಡ ಯಜಮಾನರಿಗೆ ನನ್ನ ಗುರುತು ಚೆನ್ನಾಗಿತ್ತು. (ಇದು ಶುದ್ಧ ಸುಳ್ಳು) ತಾವು ಆಗಿನ್ನೂ ಎಳೆಯ ಹುಡುಗರು, ನನ್ನ ಹೆಸರು ನೀಲಮಣಿ ಘಟಿಕ. ಸ್ವರ್ಗೀಯ ಗಂಗಾಮಣಿ ಘಟಿಕರ ಮಗ."

"ಏನು ಕೆಲಸ?"

"ಉತ್ತಮನಾದ ವರನ ಸಂಧಾನವಿದೆ. ತಮ್ಮ ವಂಶ ಸರಿಯಾದ ಪಾತ್ರ."

ವಿಪ್ರದಾಸನು ಚಮಕಿತನಾಗಿ ಎದ್ದು ಕೂತನು. ಈ ಮಧ್ಯಸ್ತಗಾರನು ರಾಜಾಮಧುಸೂದನ ಘೋಷಾಲರ ಹೆಸರು ಹೇಳಿದ್ದನು.

ವಿಪ್ರದಾಸನು ವಿಸ್ಮಿತನಾಗಿ "ಅವರಿಗೆ ಮಕ್ಕಳಿದಾರೇನು?" ಎಂದು ಕೇಳಿದನು.

ಮಧ್ಯಸ್ತಗಾರನು ನಾಲಿಗೆ ಕಚ್ಚಿಕೊಂಡು "ಇಲ್ಲ....ಅವರು ಲಗ್ನವೇ ಮಾಡಿಕೊಂಡಿಲ್ಲ. ಅಪಾರ ಐಶ್ವರ್ಯ, ಸ್ವತಃ ವ್ಯಾಪಾರ ವಹಿವಾಟು ನೋಡಿಕೊಳ್ಳುವುದನ್ನು ಬಿಟ್ಟುಬಿಟ್ಟಿದಾರೆ. ಈಗ ಸಂಸಾರ ನಡೆಸುವುದಕ್ಕೆ ಇಷ್ಟ ಅವರಿಗೆ" ಎಂದನು.

ವಿಪ್ರದಾಸನು ಸ್ವಲ್ಪ ಹೊತ್ತು ಗುಡುಗುಡಿಯಿಂದ ಹೊಗೆಯೆಳೆಯುತ್ತಾ ಹಠಾತ್ತಾಗಿ ಒಂದು ಸಲ ಜೋರಾಗಿ "ಅವರ ವಯಸ್ಸಿಗೆ ತಕ್ಕಂತಹ ಹೆಣ್ಣು ನಮ್ಮ ಮನೆಯಲ್ಲಿ ಇಲ್ಲ..." ಎಂದು

ಕೂಗುತ್ತಾ ಎದ್ದನು.

ಮಧ್ಯಸ್ತಗಾರನು ಅಲ್ಲಿಗೇ ಬಿಡಲಿಲ್ಲ. ವರನ ಐಶ್ವರ್ಯದ ಪರಿಮಾಣವೆಷ್ಟು, ಮತ್ತು ಗವರ್ನರನ ದರ್ಬಾರಿನಲ್ಲಿ ಅವರಿಗಿರುವ ಗೌರವ...ಇತ್ಯಾದಿಯೆಲ್ಲವನ್ನು ರೂಢಿಸಿ ಕಲ್ಪಿಸಿ ವ್ಯಾಖ್ಯಾನ ಮಾಡುತ್ತಾ ಹೋದನು.

ವಿಪ್ರದಾಸನು ಪುನಃ ಸ್ತಂಭಿತನಾಗಿ ಕೂತಿದ್ದನು. ಮತ್ತೆ ಅನಾವಶ್ಯಕವಾದ ಜೋರಿನಿಂದ "ವಯಸ್ಸು ಕೂಡುವುದಿಲ್ಲವಲ್ಲರೀ!" ಎಂದನು.

ಮಧ್ಯಸ್ತಗಾರನು "ಯೋಚಿಸಿ ನೋಡಿ, ಸ್ವಾಮಿ, ಮೂರು ನಾಲ್ಕು ದಿನಗಳಾದ ಮೇಲೆ ಮತ್ತೆ ದರ್ಶನ ತೆಗೆದುಕೊಳ್ಳುತ್ತೇನೆ" ಎಂದು ಎದ್ದು ಹೊರಟನು.

ವಿಪ್ರದಾಸನು ದೀರ್ಘವಾಗಿ ನಿಟ್ಟುಸಿರುಬಿಟ್ಟು ಮತ್ತೆ ಮಲಗಿದನು.

ಅಣ್ಣನಿಗೆ 'ಚಾ' ತಯಾರು ಮಾಡಿಕೊಂಡು ಬಂದು ಕುಮು ಒಳಗೆ ಬರುವುದರಲ್ಲಿದ್ದು ಬಾಗಿಲ ಹೊರಗೆ ನೆನೆದ ಹರಕಲು ಕೊಡೆಯೊಂದನ್ನೂ, ಕೆಸರು ಹತ್ತಿಕೊಂಡ ಮೆಟ್ಟಿನ ಜತೆಯೊಂದನ್ನೂ ನೋಡಿ ಅಲ್ಲೇ ನಿಂತುಬಿಟ್ಟಿದ್ದಳು. ಒಳಗೆ ಆಡುತ್ತಿದ್ದ ಮಾತು ಕಥೆಗಳಲ್ಲಿ ಎಷ್ಟೋ ಕಿವಿಯಲ್ಲಿ ಬಿದ್ದಿತ್ತು.

ಆಗ ಮಧ್ಯಸ್ಥಗಾರನು ಹೇಳುತ್ತಿದ್ದುದು ಇದು. ರಾಜಾ ಬಹದ್ದೂರ್‌ರವರು ಈ ವರ್ಷವಾಗುವ ಮೊದಲೇ ಮಹಾರಾಜರಾಗುವರು. ಈ ಸುದ್ದಿ ಖುದ್ದಾಗಿ ಗವರ್ನರರ ಬಾಯಿಂದ ಬಂದ ಮಾತು. ಅದಕ್ಕೋಸ್ಕರವಾಗಿಯೇ ಅವರಿಗೆ ಅನ್ನಿಸಿರುವುದು, ಮಹಾರಾಣಿಯ ಸ್ಥಳವನ್ನು ಇನ್ನು ಹೆಚ್ಚು ದಿನ ಕಾಲಿಯಾಗಿಟ್ಟಿರಕೂಡದೆಂದು....ತಮ್ಮ ಮನೆಯ ಜೋಯಿಸರು ಕಿನೂ ಭಟ್ಟಾಚಾರ್ಯ ದೂರ ಸಂಬಂಧದಲ್ಲಿ ನನ್ನ ಬಂಧುವೇ.... ಅವರ ಹತ್ತಿರ ತಮ್ಮ ಕನ್ಯೆಯ ಕುಂಡಲಿಯಿತ್ತು. ನೋಡಿದೆ. ರಾಜಬಹದ್ದೂರರ ಜಾತಕಕ್ಕೆ ಸರಿಯಾಗಿ ಹೊಂದಿಕೊಳ್ಳುತ್ತೆ....ಇದಕ್ಕೋಸ್ಕರವೇ ಈ ಇಡೀ ಊರಿನ ಹುಡುಗಿಯರ ಜಾತಕಗಳನ್ನೆಲ್ಲಾ ನೋಡಿ ಆಯಿತು...ಇಂತಹ ಜಾತಕ ಇದುವರೆಗೂ ನಮ್ಮ ಕೈಗೆ ಬಿದ್ದಿಲ್ಲ....ಇಲ್ಲಿ ನೋಡಿ, ನಾನು ನಿಮ್ಮ ಹತ್ತಿರ ಹೇಳಿದ್ದೇನೆ ಈ ಸಂಬಂಧ ಆಗಿಯೇ ಹೋಗಿದೆ. ಇದು ಬ್ರಹ್ಮಗಂಟು."

ಸರಿಯಾಗಿ ಈ ಸಮಯದಲ್ಲಿಯೇ ಕುಮುದಿನಿಯ ಎಡಗಣ್ಣು ಪುನಃ ಅದುರಿತು. ಶುಭ ಲಕ್ಷಣದ ಅದ್ಭುತ ರಹಸ್ಯವೆಂದರೆ ಹೀಗೆ! ಕಿನೂ ಆಚಾರ್ಯರು ಎಷ್ಟು ಸಲ ಅವಳ ಕೈ ನೋಡಿ ಹೇಳಿದಾರೆ ನೀನು ಮಹಾರಾಣಿಯಾಗುವೆಯೆಂದು. ಗ್ರಹಕುಂಡಲಿಗಳ ಪರಿಣತ ಫಲ ತಾನಾಗಿಯೇ ಅವಳ ಬಳಿ ನಿಂತಿದೆ. ಅವರ ಜೋಯಿಸರು ಕೆಲವು ದಿನಗಳ ಹಿಂದೆ ತಮ್ಮ ವಾರ್ಷಿಕ ಆದಾಯವನ್ನು ಇವರಿಂದ ವಸೂಲು ಮಾಡಿಕೊಳ್ಳಲು ಕಲಿಕತ್ತೆಗೆ ಬಂದಿದ್ದರು. ಅವರು ಹೇಳಿ ಹೋಗಿದ್ದರು. ಈ ಸಲ ಆಷಾಢ ಮಾಸದಿಂದ ವೃಷಭರಾಶಿಯಲ್ಲಿ ರಾಜ ಸನ್ಮಾನ, ಸ್ತ್ರೀಯರಿಂದ ಅರ್ಥಲಾಭ, ಶತ್ರುನಾಶ...ಕೆಡಕುಗಳಲ್ಲಿ ಹೆಂಡತಿಗೆ ಅಸ್ವಸ್ಥತೆ, ಪತ್ನೀ ವಿಯೋಗವಾದರೂ ಸಾಧ್ಯ. ....ವಿಪ್ರದಾಸನದು ವೃಷಭರಾಶಿ. ಮಧ್ಯೆ ಮಧ್ಯೆ ದೇಹಕ್ಕೆ ಕಾಯಿಲೆಯೆಂದು ಕೂಡ ಹೇಳಿದೆ. ಅದರ ಪ್ರಮಾಣವೋ ಏನೋ ಎಂಬಂತೆ ಹಿಂದಿನ ದಿನ ರಾತ್ರಿಯಿಂದ ನೆಗಡಿಯ ಲಕ್ಷಣ. ಆಷಾಢ ಮಾಸವೂ ಆರಂಭವಾಯಿತು. ಹೆಂಡತಿಯ ಕಾಯಿಲೆ, ವಿಯೋಗದ ವಿಷಯ ಯೋಚಿಸುವುದೇಕೆ? ಮಿಕ್ಕ ಎಲ್ಲಾ ವಿಷಯಗಳಲ್ಲೂ ಕಾಲ ಚೆನ್ನಾಗಿದೆಯೆಂದೇ ಕುಮುದಿನಿ ಭಾವಿಸಿದಳು.

ಕುಮು ಅಣ್ಣನ ಪಕ್ಕದಲ್ಲಿ ಕೂತು "ತಲೆ ನೋಯುತ್ತಿಯೇ ಅಣ್ಣಾ?" ಎಂದು ಕೇಳಿದಳು.

ಅಣ್ಣ "ಇಲ್ಲ" ಎಂದನು.

"ಚಾ ತಣ್ಣಗಾಗಿ ಹೋಗಿರಲಿಲ್ಲವಲ್ಲಾ? ನಿನ್ನ ಕೋಣೆಯೊಳಗೆ ಯಾರೋ ಹೊಸಬರನ್ನು ನೋಡಿ ಒಳಗೆ ಬರಲಾಗಲಿಲ್ಲ."

ವಿಪ್ರದಾಸನು ಕುಮುವಿನ ಮುಖದ ಕಡೆ ನೋಡುತ್ತ ದೀರ್ಘ ನಿಶ್ವಾಸಬಿಟ್ಟನು....... ಅದೃಷ್ಟದ ನಿಷ್ಠುರತೆ ಎಲ್ಲಕ್ಕಿಂತಲೂ ಸಹನಾತೀತವಾದ್ದು. ಅದು ಚಲಿಸದೆ ಇರುವ ಚಕ್ರವುಳ್ಳ ಚಿನ್ನದ ರಥವನ್ನು ತಂದಾಗಂತೂ ಹೆಚ್ಚು ಅಸಹನೀಯ....ಅಣ್ಣನ ಮುಖಭಂಗಿಯಿಂದ ಅವನಲ್ಲಿ ಈ ಬಗೆಯ ವೇದನೆಯೇ ಅವಳಿಗೆ ಕಂಡು ಬಂದುದು. ನೋಡಿ ಅವಳಿಗೂ ಸಂಕಟವಾಯಿತು. ದೈವದ ದಾನವನ್ನೇಕೆ ಅಣ್ಣ ಹೀಗೆ ಸಂದೇಹದಿಂದ ನೆಡುತ್ತಿದ್ದಾನೆ" ವಿವಾಹದ ವಿಷಯದಲ್ಲಿ ಸ್ವಂತ ಇಷ್ಟಕ್ಕೆ ಬೆಲೆ ಕೊಡಬೇಕೆನ್ನುವ ಯೋಚನೆ ಇದುವರೆಗೆ ಎಂದೂ ಅವಳ ತಲೆಯಲ್ಲಿ ಹೊಳೆದಿರಲಿಲ್ಲ. ಚಿಕ್ಕಂದಿನಿಂದ ಒಂದಾದ ಮೇಲೊಂದು ತನ್ನ ನಾಲ್ಕು ಅಕ್ಕಂದಿರ ಮದುವೆಗಳನ್ನು ನೋಡಿದ್ದಾಳೆ. ಎಲ್ಲರನ್ನೂ ಕುಲೀನರ ಮನೆಗಳಿಗೆ ಕೊಟ್ಟು ಮದುವೆಯಾಗಿತ್ತು. ಕುಲ ಒಂದು ಬಿಟ್ಟರೆ ಹೇಳಿಕೊಳ್ಳುವಂತಹುದು ಯಾವುದೂ ಆ ಸಂಬಂಧಗಳಲ್ಲಿರಲಿಲ್ಲ.,...ಮಕ್ಕಳು, ಮರಿಗಳೊಂದಿಗೆ ಅವರೂ ಹೇಗೋ ಸಂಸಾರ ನಡೆಸಿಕೊಂಡು ಬರುತ್ತಿದ್ದಾರೆ....ಹೇಗೋ ದಿನ ಕಳೆಯುತ್ತಾರೆ. ದುಃಖವುಂಟಾದಾಗ ಎದುರು ಬೀಳುವುದಿಲ್ಲ. ಇದು ಹೊರತು ಬೇರೆ ದಾರಿ ಏನಾದರೂ ಇದೆಯೇ ಎಂಬ ಯೋಚನೆಯು ಅವರ ತಲೆಯಲ್ಲಿ ಬಾರದು. ತಾಯಿಯೇನಾದರೂ ಮಕ್ಕಳನ್ನು ಹುಡುಕಿ ತರುವಳೇ? ಕುಪುತ್ರನಾದರೂ ಆಗಬಹುದು, ಸುಪುತ್ರನಾದರೂ ಸರಿ. ಗಂಡನ ವಿಷಯದಲ್ಲಿಯೂ ಹಾಗೆಯೇ. ವಿಧಾತನೇನು ಅಂಗಡಿಯನ್ನು ತೆರೆದಿಲ್ಲ. ಭಾಗ್ಯವನ್ನು ಪ್ರಶ್ನೆಮಾಡುವ ಆಧಿಕಾರ ಯಾರಿಗಿದೆ?

ಇಷ್ಟು ದಿನಗಳಾದಮೇಲೆ ಕುಮುದಿನಿಯ ಕನಸಿನ ರಾಜಪುತ್ರನು ಅವಳ ಮಂದಭಾಗ್ಯದ ಮರುಭೂಮಿಯನ್ನು ದಾಟಿ ವೇಷಮರೆಸಿಕೊಂಡು ಬಂದಿದ್ದಾನೆ, ಅವನ ರಥ ಚಕ್ರದ ಶಬ್ದವನ್ನು ಕುಮುದಿನಿ ತನ್ನ ಹೃದಯ ಸ್ಪಂದನದ ಮಧ್ಯೆ ಕೇಳುತ್ತಿದ್ದಾಳೆ. ಹೊರಗಿನ ಸುಳ್ಳು, ವೇಷವನ್ನು ಅವಳು ಬೇಕೆಂದೇ ಪರೀಕ್ಷೆ ಮಾಡಲಿಷ್ಟಪಡಲಿಲ್ಲ.

ಆತುರಾತುರವಾಗಿ ಒಳಗೆ ಹೋಗಿ ಪಂಚಾಂಗ ತೆರೆದು ನೋಡಿದರೆ ಆದಿನ ತನ್ನ ಮನೋರಥದ ಬಿದಿಗೆಯ ತಿಥಿ. ಮನೆಯಲ್ಲಿ ಕೆಲಸದವರ ಮಧ್ಯೆ ಬ್ರಾಹ್ಮಣರೆಷ್ಟು ಜನವಿದ್ದರೋ ಎಲ್ಲರನ್ನೂ ಸಂಜೆಯವೇಳೆ ಕರೆಯಿಸಿ ಅವರಿಗೆ ಉಪಹಾರ ಮಾಡಿಸಿದಳು. ಯಥಾಶಕ್ತಿ ಸ್ವಲ್ಪ ದಕ್ಷಿಣೆಯನ್ನೂ ಕೊಟ್ಟಳು. ಎಲ್ಲರೂ ರಾಜನ ರಾಣಿಯಾಗೆಂದೂ, ಧನ ಪುತ್ರ ಲಕ್ಷ್ಮೀಭಾಗ್ಯ ಬರಲೆಂದೂ ಹರಸಿದರು.

ಎರಡನೆಯ ಸಲ ವಿಪ್ರದಾಸನ ಬೈಠಕುಖಾನೆಗೆ ಮಧ್ಯಸ್ತಗಾರರ ಆಗಮನವಾಯಿತು. ಚುಟಿಕೆ ಹೊಡೆದು 'ಶಿವ, ಶಿವ' ಎಂದು ಮುದುಕ ದೊಡ್ಡದಾಗಿ ಆಕಳಿಸಿದನು. ಈಸಲ ಅಸಮ್ಮತಿ ತೋರಿ ಮಾತನ್ನು ಮುಗಿಸಿಬಿಡಲು ವಿಪ್ರದಾಸನು ಸಾಹಸಪಡಲಿಲ್ಲ. ಇಷ್ಟು ಭಾರಿ ಹೊಣೆಯನ್ನು ಹೇಗೆ ಹೊರಲಿ ಎಂದು ಭಾವಿಸಿದನು. ಕುಮುವಿನ ದೃಷ್ಟಿಯಿಂದ ಈ ಸಂಬಂಧ ಎಲ್ಲಕ್ಕಿಂತಲೂ

ಒಳ್ಳೆಯದಲ್ಲ ಎಂಬುದನ್ನು ನಿಶ್ಚಯವಾಗಿ ತಿಳಿಯುವುದು ಹೇಗೆ? ನಾಳಿದ್ದು ಕೊನೆಯ ಉತ್ತರ ಹೇಳುತ್ತೇನೆಂದು ಮಧ್ಯಸ್ತಗಾರನನ್ನು ಕಳುಹಿಸಿಬಿಟ್ಟನು.

## ಹನ್ನೊಂದನೆಯ ಅಧ್ಯಾಯ

ಸಂಜೆಯ ಕತ್ತಲೆಯು ಮೋಡಗಳ ಛಾಯೆ ಮತ್ತು ಹುಯ್ಯುತ್ತಿರುವ ಮಳೆಯ ನೀರಿನಿಂದ ನಿಬಿಡವಾಗಿತ್ತು. ಕುಮುದಿನಿಯ ಸಾಮಾನುಗಳು ಹೆಚ್ಚೇನೂ ಇರಲಿಲ್ಲ. ಇಂದು ಪಕ್ಕದಲ್ಲಿ ಸಣ್ಣ ಮಂಚ, ಅಲಮಾರಿನಲ್ಲಿ ನೆರಿ ಹಿಡಿದ ಮೂರು ನಾಲ್ಕು ಸೀರೆಗಳು ಮತ್ತು ಸಂಪಿಗೆ ಬಣ್ಣದ ಒಂದು ಚೌಕ. ಮೂಲೆಯಲ್ಲಿ ಹಲಸಿನ ಹಲಗೆಯ ಪೆಟ್ಟಿಗೆಯೊಂದು. ಅದರಲ್ಲಿ ಅವಳ ನಿತ್ಯ ಉಡುವ ಬಟ್ಟೆಗಳು, ಮಂಚದ ಕೆಳಗೆ ಹಸುರು ಟಿನ್ನಿನ ಪೆಟ್ಟಿಗೆಯಲ್ಲಿ ತಾಂಬೂಲ ಸಜ್ಜುಮಾಡುವ ಸಾಮಾನುಗಳು, ಮತ್ತೊಂದು ಪೆಟ್ಟಿಗೆಯಲ್ಲಿ ಹೆರಳು ಹಾಕಿಕೊಳ್ಳುವ ಸಾಮಾನುಗಳು.,..ಗೋಡೆಯ ಗೂಡಿನಲ್ಲಿ ಮರದ ಹಲಗೆಗಳ ಮೇಲೆ ಕೆಲವು ಪುಸ್ತಕಗಳು, ಮಸಿಕುಡಿಕೆ, ಲೇಖನಿ, ಬರೆಯುವ ಕಾಗದ, ತಾಯಿಯು ಕೈಯಿಂದ ಹೆಣಿಗೆ ಕೆಲಸ ಮಾಡಿದ್ದ, ಅಪ್ಪ ಸರ್ವದಾ ಉಪಯೋಗಿಸುತ್ತಿದ್ದ, ಬಿದಿರಿನ ಪಾದರಕ್ಷೆಗಳ ಜೊತೆ. ಮಲಗುವ ಮಂಚದ ತಲೆದೆಸೆಯಲ್ಲಿ ರಾಧಾಕೃಷ್ಣನ ಯುಗಳರೂಪದ ಪಟ....ಗೋಡೆಯ ಮೂಲೆಯಲ್ಲಿ ಒರಗಿಸಿಟ್ಟಿದ್ದ ಒಂದು ಏಸ್‌ರಾಜ್ (ಪಿಟೀಲು).

ಮನೆಯಲ್ಲಿ ಕುಮು ಇನ್ನೂ ದೀಪ ಹಚ್ಚಿಲ್ಲ. ಮರದ ಪೆಟ್ಟಿಗೆಯಮೇಲೆ ಕೂತು ಕಿಟಕಿಯ ಹೊರಗೆ ನೋಡುತ್ತಾ ಇದ್ದಾಳೆ. ಎದುರಿಗೆ ಇಟ್ಟಿಗೆಯ ಕಳೇಬರವುಳ್ಳ ಕಲಿಕತ್ತಾ ನಗರಿ, ಅನಾದಿ ಕಾಲದ ದಪ್ಪಚರ್ಮದ ಅತಿಕಾಯ ಪೆಡಂಭೂತದಂತೆ ಆ ಮಳೆಯಲ್ಲಿ ಮಂಕು ಮಂಕಾಗಿ ಕಾಣ ಬರುತ್ತಿತ್ತು. ಮಧ್ಯೆಮಧ್ಯೆ ಅದರ ಮೈಮೇಲೆ ಬೆಳಕಿನ ಕಿರಣಗಳು ಆಟವಾಡುತ್ತಿದ್ದುವು. ಕುಮುವಿನ ಮನಸ್ಸು ಆಗ ತನ್ನ ಅದೃಷ್ಟ ಗೊತ್ತುಮಾಡಿದ್ದ ಭಾವೀಲೋಕದ ಮಧ್ಯೆ ಲೀನವಾಗಿತ್ತು. ಆಗಿನ ಕಾಲದ ಮನೆ-ಮಠ, ನೆಂಟರಿಷ್ಟರು ಎಲ್ಲವನ್ನೂ ಅವಳು ತನ್ನ ಆದರ್ಶಕ್ಕೆ ಹೆಣೆದುಕೊಂಡಿದ್ದಳು. ಅವುಗಳ ಮಧ್ಯೆ ತಾನೇ ಪ್ರತಿಷ್ಠಿಸಿದ್ದ ಸತೀ ಲಕ್ಷ್ಮಿಯ ರೂಪಕ್ಕೆ ಅದೆಷ್ಟು ಭಕ್ತಿ, ಎಷ್ಟು ಪೂಜೆ, ಎಷ್ಟು ಸೇವೆ ಸಲ್ಲಿಸಿದ್ದಾಳೋ! ಅವಳ ಸ್ವಂತ ತಾಯಿಯ ಪುಣ್ಯಚರಿತೆಯಲ್ಲಿ ಕೂಡ ಒಂದು ಗಭೀರಕ್ಷತಿಯಿತ್ತು. ಆಕೆಯೊಂದು ಬಾರಿ ಸ್ವಾಮಿಯ ಅಪರಾಧದ ದೆಸೆಯಿಂದ ಸ್ವಲ್ಪ ಕಾಲವಾದರೂ ಧೈರ್ಯಗೆಟ್ಟಿದ್ದಳು. ಕುಮು ಎಂದಿಗೂ ಆ ತಪ್ಪನ್ನು ಮಾಡಳು.

ವಿಪ್ರದಾಸನ ಕಾಲು ಸಪ್ಪಳ ಕೇಳಿ ಕುಮುದಿನಿ ಬೆಚ್ಚಿ ನಿಂತಳು. ಅಣ್ಣನನ್ನು ನೋಡಿದೊಡನೆ "ದೀಪ ಹಚ್ಚಲೇನು" ಎಂದು ಕೇಳಿದಳು.

"ಬೇಡ ಕುಮೂ, ಅವಸರವೇನಿಲ್ಲ" ಎಂದು ಹೇಳಿ ವಿಪ್ರದಾಸನು ಪೆಟ್ಟಿಗೆಯ ಮೇಲೆ ಅವಳ ಪಕ್ಕದಲ್ಲಿ ಬಂದು ಕೂತನು. ಕುಮು ಬೇಗ ಎದ್ದು ನೆಲದ ಮೇಲೆ ಇಳಿದು ನಿಧಾನವಾಗಿ ಆತನ ಕಾಲುಗಳನ್ನು ಒತ್ತುತ್ತಾ ಕೂತಳು.

ವಿಪ್ರದಾಸನು ಮೃದುಸ್ವರದಲ್ಲಿ "ಬೈಟಕು ಖಾನೆಯಲ್ಲಿ ಯಾರೋ ಬಂದು ಕೂತಿದ್ದರು. ಅದಕ್ಕೇ ನಿನಗೆ ಹೇಳಿ ಕಳುಹಿಸಲಿಲ್ಲ. ಇಷ್ಟು ಹೊತ್ತೂ ಒಬ್ಬಳೇ ಕೂತಿದ್ದೆಯೇನು?" ಎಂದನು.

ಕುಮೂ ಲಜ್ಜಿತಳಾಗಿ "ಇಲ್ಲಣ್ಣ, ಕ್ಷೇಮಾ ಅತ್ತೆ ಬಹಳ ಹೊತ್ತು ಜತೆಯಲ್ಲಿದ್ದಳು" ಎಂದು ಮಾತು ತಿರುಗಿಸಲು "ಬೈಟಕುಖಾನೆಗೆ ಬಂದಿದ್ದವರು ಯಾರಣ್ಣಾ ?" ಎಂದು ಕೇಳಿದಳು.

"ಅದೇ ವಿಷಯವಾಗಿಯೇ ನಿನಗೆ ಹೇಳುವುದಕ್ಕೆ ಬಂದೆ. ಈ ವರ್ಷದ ಜೇಷ್ಠಮಾಸಕ್ಕೆ ನಿನಗೆ ಹದಿನೆಂಟು ತುಂಬಿ ಹತ್ತೊಂಬತ್ತನೆಯ ವರುಷ, ಅಲ್ಲವೇನೆ ಕುಮೂ ?"

"ಹೂಂ...ಅಣ್ಣಾ....ಅದರಲ್ಲಿ ದೋಷವೇನಣ್ಣಾ ?"

"ದೋಷದ ಮಾತಲ್ಲ....ಕುಮೂ ತಮಾಷೆಯಲ್ಲ....ಇವತ್ತು ನೀಲಮಣಿ ಘಟಿಕರು ಬಂದಿದ್ದರು. ನೀನು ಲಕ್ಷ್ಮಿಯಂತಹ ತಂಗಿ. ಮಗೂ, ನಾಚಿಕೋಬೇಡ. ಅಪ್ಪ ಬದುಕಿದ್ದಾಗ ನಿನ್ನ ವಯಸ್ಸು ಹತ್ತೇ....ಆಗಲೇ ಮದುವೆ ನಿಷ್ಕರ್ಷೆ ಆಗುವುದರಲ್ಲಿತ್ತು, ಆಗಿಯೇ ಬಿಟ್ಟಿದ್ದರೆ ನಿನ್ನ ಅಭಿಪ್ರಾಯವನ್ನು ಯಾರೂ ಕೇಳುತ್ತಿರಲಿಲ್ಲ. ಆದರೆ ಈಗ ನಾನು ಹಾಗೆ ಮಾಡುವುದಿಲ್ಲ. ರಾಜಾ ಮಧುಸೂದನ ಘೋಷಾಲರ ಹೆಸರನ್ನು ಖಂಡಿತ ಕೇಳಿಯೇ ಇದ್ದೀಯ. ವಂಶ ಮರ್ಯಾದೆಯಲ್ಲಿ ಅವರೇನೂ ಕಮ್ಮಿಯಿಲ್ಲ. ಆದರೆ ವಯಸ್ಸಲ್ಲಿ ಮಾತ್ರ ನಿನಗೆ ಈಡಿಲ್ಲ. ನನಗೆ ಒಪ್ಪಿಗೆ ಕೊಡಲು ಆಗಲಿಲ್ಲ. ಈಗ ನಿನ್ನ ಬಾಯಿಂದ ಒಂದು ಮಾತು ಹೇಳಿದರೆ ನಾನು ಏನೊಂದನ್ನೂ ತೀರ್ಮಾನಿಸಬಹುದು....ಏನಮ್ಮಾ? ನಾಚುಗೆ ಪಡಬೇಡ.-..ಕುಮೂ."

"ಇಲ್ಲ....ನಾಚುಕೆಯಿಲ್ಲಣ್ಣಾ...." ಎಂದು ಹೇಳಿ ಕುಮು ಸ್ವಲ್ಪ ಹೊತ್ತು ಸುಮ್ಮನಿದ್ದಳು. ಆ ಮೇಲೆ ಇದ್ದಕ್ಕಿದ್ದ ಹಾಗೆ ಧೈರ್ಯಹೊಂದಿ "ಯಾರ ವಿಷಯ ಹೇಳುತ್ತಿದ್ದೀಯೋ, ಅವರ ಸಂಗಡವೇ ನನ್ನ ಸಂಬಂಧ ನಿಶ್ಚಯವಾಗಿಬಿಟ್ಟಿದೆಯಣ್ಣಾ...." ಎಂದು ಹೇಳಿಬಿಟ್ಟಳು.....ಇದು ಅದೇ ಮಧ್ಯಸ್ತಗಾರನ ಮಾತಿನ ಪ್ರತಿಧ್ವನಿ! ಯಾವ ಕ್ಷಣದಲ್ಲೋ ಆ ಮಾತು ಇವಳ ಮನಸ್ಸಿನ ಆಳದೊಳಗೆ ಹೋಗಿ ನಾಟಿಕೊಂಡುಬಿಟ್ಟಿತ್ತು !

ವಿಪ್ರದಾಸನು ಆಶ್ಚರ್ಯಚಕಿತನಾಗಿ " ಅದು ಹೇಗೆ ನಿಶ್ಚಯವಾಯಿತು ?" ಎಂದನು.

ಕುಮು ಸುಮ್ಮನೆ ಇದ್ದಳು. ವಿಪ್ರದಾಸನು .ಅವಳ ತಲೆಯ ಮೇಲೆ ಕೈಯಾಡಿಸುತ್ತಾ "ಹುಡುಗಾಟಿಕೆ ಬೇಡಮ್ಮಾ, ಕುಮೂ" ಎಂದನು.

ಕುಮುದಿನಿ " ಇಲ್ಲಣ್ಣಾ....ನಿನಗೆ ಗೊತ್ತಿಲ್ಲಣ್ಣಾ....ನಾನು ಸ್ವಲ್ಪವೂ ಹುಡುಗಾಟಿಕೆಯಾಡುತ್ತಿಲ್ಲ" ಎಂದಳು. ಅಣ್ಣನ ಮೇಲೆ ಅವಳಿಗೆ ಅಪಾರ ಭಕ್ತಿ. ಆದರೆ ಈ ಅಣ್ಣ ದೈವವಾಣಿಯನ್ನು ನಂಬುವುದಿಲ್ಲ. ಈ ವಿಷಯದಲ್ಲಿ ಮಾತ್ರ ಅಣ್ಣನ ದೃಷ್ಟಿಯಲ್ಲಿ ಒಂದು ಕೊರತೆಯುಂದು ಅವಳಿಗೆ ಗೊತ್ತು.

ವಿಪ್ರದಾಸನು "ನೀನು ಅವನನ್ನು ನೋಡಿಯೇ ಇಲ್ಲವಲ್ಲ, ಕುಮೂ ?" ಎಂದನು.

"ಅದೇನೇ ಇರಲಿ.....ನನಗಂತೂ ಚೆನ್ನಾಗಿ ತಿಳಿದು ಹೋಗಿದೆ."

ವಿಪ್ರದಾಸನಿಗೆ ಈ ವಿಷಯದಲ್ಲಿ ಮಾತ್ರ, ಅಣ್ಣ ತಂಗಿಯರ ಮಧ್ಯೆ ಪಾರವಿಲ್ಲದ ವ್ಯತ್ಯಾಸವಿದೆಯೆಂದು ಚೆನ್ನಾಗಿ ಗೊತ್ತು.

ಕುಮುದಿನಿಯ ಮನಸ್ಸಿನ ಈ ಅಂಧಕಾರದ ಮಹಲಿನೊಳಗೆ ಅಣ್ಣನ ಅಧಿಕಾರ ನಡೆಯುವುದಿಲ್ಲ. ಆದರೂ ವಿಪ್ರದಾಸನು ಇನ್ನೊಂದು ಸಲ " ನೋಡಮ್ಮಾ ಕುಮೂ, ಇದು ಚಿರಜೀವನದ ವಿಷಯ. ಚಟ್ಟೆಂದು ಯಾವುದೋ ಆವೇಶದಲ್ಲಿ ಹೇಳಿಬಿಟ್ಟು ಖಂಡಿತ ಮಾಡಿಕೊಂಡು ಕೂಡುವ ಸಂಗತಿಯಲ್ಲ." ಎಂದನು.

ಕುಮು ವ್ಯಾಕುಲಳಾಗಿ " ಆವೇಶವಲ್ಲ ಅಣ್ಣಾ, ಆವೇಶವಲ್ಲ. ನಾನು ನಿನ್ನ ಕಾಲು ಮುಟ್ಟಿ ಹೇಳುತ್ತೇನೆ. ನಾನು ಬೇರೆ ಯಾರನ್ನೂ ಮದುವೆಮಾಡಿಕೊಳ್ಳಲಾರೆ."—ಎಂದಳು.

ವಿಪ್ರದಾಸನು ಚಮಕಿತನಾದನು. ಯಾವ ಕಡೆ ಕಾರ್ಯ ಕಾರಣಗಳ ಸಂಪರ್ಕವಿಲ್ಲವೋ ಅಂತಹ ಕಡೆಯಲ್ಲಿ ಯಾವುದನ್ನು ಕುರಿತು ತರ್ಕಮಾಡುವುದು ? ಅಮಾವಾಸ್ಯೆಯ ಸಂಗಡ ಕುಸ್ತಿ ಮಾಡಲು ಸಾಧ್ಯವೇ ? ಈ ಕುಮುದಿನಿ ಯಾವುದೋ ಒಂದು ದೈವಸಂಕೇತವನ್ನು ಮನಸ್ಸಿನ ಮಧ್ಯೆ ಕಲ್ಪಿಸಿಟ್ಟುಕೊಂಡಿದ್ದಾಳೆಂದು ವಿಪ್ರದಾಸನಿಗೆ ತಿಳಿಯಿತು. ಈ ಮಾತೇನೋ ಸತ್ಯ. ಅಂದು ಬೆಳಿಗ್ಗೆಯೇ ದೇವರನ್ನು ಕುರಿತು ಮನಸ್ಸಿನಲ್ಲಿಯೇ " ಈ ಹೂಗಳನ್ನು ಜೋಡಿಯಾಗಿ ತೆಗೆದಿಟ್ಟ ಮೇಲೆ ಕೊನೆಯಲ್ಲಿ ಉಳಿಯುವ ಹೂವಿನ ಬಣ್ಣ ದೇವರ ವರ್ಣದಂತೆ ನೀಲಮೇಘವಾದರೆ ಆಗ ಇದು ನಿನ್ನ ಇಚ್ಛೆಯೆಂದೇ ತಿಳಿಯುತ್ತೇನೆ" ಎಂದುಕೊಂಡಿದ್ದಳು, ಹಾಗೆಯೇ ಕಟ್ಟಕಡೆಯಲ್ಲಿ ಉಳಿದ ಹೂವು ನೀಲಿಯ ಬಣ್ಣದ ಅಪರಾಜಿತಾ ಪುಷ್ಪ !

ಸ್ವಲ್ಪದೂರದಲ್ಲಿಯೇ ಮಲ್ಲಿಕರವರ ಮನೆಯಲ್ಲಿ ಸಂಜೆಯ ಮಂಗಳಾರತಿಯ ಕಂಚಿನ ಗಂಟೆ, ಜಾಗಟೆಗಳ ಶಬ್ದ ಕೇಳಬಂತು. ಕುಮುದಿನಿ ಕೈಜೋಡಿಸಿ ಪ್ರಣಾಮ ಮಾಡಿದಳು. ವಿಪ್ರ ದಾಸನು ಬಹಳ ಹೊತ್ತು ಹಾಗೆಯೇ ಕೂತಿದ್ದನು. ಕ್ಷಣಕ್ಷಣಕ್ಕೂ ಮಿಂಚು ಹೊಳೆಯುತ್ತಿತ್ತು. ಹೊಡೆಯುತ್ತಿದ್ದ ಮಳೆಗೆ ವಿರಾಮವೇ ಇಲ್ಲ.

## ಹನ್ನೆರಡನೆಯ ಅಧ್ಯಾಯ

ವಿಪ್ರದಾಸನು ಇನ್ನೂ ಹಲವುಬಾರಿ ಕುಮುದಿನಿಗೆ ತಿಳಿಯಹೇಳಲು ಪ್ರಯತ್ನಮಾಡಿದನು. ಕುಮು ಉತ್ತರವನ್ನೇ ಹೇಳದೆ ಸುಮ್ಮನೆ ಮುಖ ತಗ್ಗಿಸಿಕೊಂಡು ಸೆರಗನ್ನು ಹೊಸೆಯುತ್ತಿದ್ದಳು.

ಮದುವೆಯೇನೋ ನಿಶ್ಚಿತವಾಯಿತು. ಮದುವೆ ಎಲ್ಲಿ ನಡೆಯಬೇಕೆಂಬ ವಿಷಯದಲ್ಲಿ ಮಾತ್ರ ಎರಡು ಪಕ್ಷಗಳಲ್ಲೂ ಸ್ವಲ್ಪವಾಗ್ವಾದ ನಡೆದಿತ್ತು. ಕಲಿಕತ್ತೆಯ ಮನೆಯಲ್ಲಿಯೇ ಆಗ ಬೇಕೆಂದು ವಿಪ್ರದಾಸನ ಇಷ್ಟ. ಮಧುಸೂದನನ ಹಠ ನೂರ್‌ನಗರದಲ್ಲಿಯೇ ಆಗಬೇಕೆಂದು. ಕಡೆಗೆ ವರನ ಪಕ್ಷದಂತೆಯೇ ಗೊತ್ತಾಗಿ ಹೋಯಿತು.

ಮದುವೆಯ ಏರ್ಪಾಡುಗಳನ್ನು ಮಾಡುವ ಸಲುವಾಗಿ ಸ್ವಲ್ಪದಿನಗಳ ಮುಂಚೆಯೇ ಎಲ್ಲರೂ ನೂರ್‌ನಗರಕ್ಕೆ ಬರಬೇಕಾಯಿತು. ವೈಶಾಖ ಜೇಷ್ಠದ ಸೆಕೆಯನಂತರ ಆಷಾಢದ ಮಳೆ ಬಂದರೆ ಭೂಮಿ ಕ್ರಮವಾಗಿ ಹಸುರು ಬಣ್ಣವನ್ನು ತಾಳುವಂತೆ, ಕುಮುದಿನಿಯ ಒಳಗೂ ಹೊರಗೂ ನೂತನ ಪ್ರಾಣವೊಂದರ ರಂಗು ಕಾಣಿಸಿಕೊಂಡಿತು. ತನ್ನ ಮನಸ್ಸಿನಲ್ಲಿ ಸೃಷ್ಟಿಸಿಕೊಂಡ ವ್ಯಕ್ತಿ ಯೊಂದಿಗೆ ಮಿಲನವಾಗುವ ಆನಂದ ಅವಳನ್ನು ಪ್ರತಿಕ್ಷಣವೂ ಪುಳಕಿತ ಮಾಡಿದ್ದಿತು. ಶರತ್ಕಾಲದ ಬಂಗಾರದ ಬೆಳಕು ಅವಳ ಸಂಗಡ ಮಾತಾಡುತ್ತಿತ್ತು....ಯಾವುದೋ ಅನಾದಿಕಾಲದ ಮನದ ಮಾತು. ಮಲಗುವ ಮನೆಯ ಎದುರಿನ ವರಾಂಡದಲ್ಲಿ ಕುಮು ಪುರಿಯನ್ನು ಎರಚುತ್ತಿದ್ದಳು. ಹಕ್ಕಿಗಳು ಹಾರಿಬಂದು ತಿನ್ನುತ್ತಿದ್ದುವು. ರೊಟ್ಟಿಯ ತುಣುಕುಗಳನ್ನಿಡುವಳು. ಅಳಿಲು ಚಂಚಲ ದೃಷ್ಟಿಯಿಂದ ನಾಲ್ಕೂ ಕಡೆ ನೋಡಿ ವೇಗವಾಗಿ ಓಡಿಬಂದು ದಪ್ಪವಾದ ಬಾಲದಮೇಲೆ ಊರಿ ನಿಂತುಕೊಳ್ಳುವುದು. ಮುಂದಿನ ಎರಡು ಕಾಲುಗಳನ್ನೇ ಕೈಮಾಡಿಕೊಂಡು ರೊಟ್ಟಿಯನ್ನೆತ್ತಿ

ಹಿಡಿದುಕೊಂಡು ಕುಟುರ್-ಕುಟುರ್ ಎಂದು ತಿನ್ನುವುದು. ಕುಮುದಿನಿಯು ಹಿಂದೆ ಕೂತು ಆನಂದದಿಂದ ನೋಡುತ್ತಿರುವಳು. ಇಡೀ ವಿಶ್ವದಮೇಲೆ ಅವಳ ಮನಸ್ಸಿನಲ್ಲಿಂದು ಒಂದು ಬಗೆಯ ದಾಕ್ಷಿಣ್ಯ ತುಂಬಿದೆ.

ಸಂಜೆ ಮೈ ತೊಳೆಯುವಾಗ ಹಿತ್ತಲಕಡೆಯ ಕೊಳದಲ್ಲಿ ಕತ್ತಿನವರೆಗೂ ಮುಳುಗಿ ಸುಮ್ಮನೆ ಕೂಡುವಳು....ಕೊಳದ ನೀರು ಅವಳ ಸರ್ವಾಂಗಗಳೊಂದಿಗೂ ಮಾತಾಡುತ್ತಿರುವಂತೆ ಭಾವಿಸು ವಳು. ಸಂಜೆಯ ಡೊಂಕು ಬೆಳಕು ಕೊಳದ ಪಶ್ಚಿಮ ದಡದ ಮೇಲಿನ ಚಕ್ಕೋತನಗಿಡದ ರೆಂಬೆಯ ಮೇಲಿಂದ ಬಂದು ಘನನೀಲ ಜಲರಾಶಿಯಮೇಲೆ ಬಿದ್ದು ಚಿನ್ನದ ಎಳೆಯಂತೆ ಝಗ ಝಗಿಸುತ್ತಿರುವುದು. ಅದನ್ನು ನಿಟ್ಟಿಸಿ ನಿಟ್ಟಿಸಿ ನೋಡುವಳು. ಆ ಬೆಳಕು ನೆರಳುಗಳಲ್ಲಿ ಅವಳ ಮೈಮೇಲೆಲ್ಲಾ ಹೇಳಲಾಗದ ಪುಳಕದ ಕಂಪನವುಕ್ಕಿ ಹರಿಯುವುದು.

ಮಧ್ಯಾಹ್ನ ಮನೆಯ ಬಿಸಿಲು ಮಾಳಿಗೆಯ ಮೇಲೆ ಎತ್ತರವಾದ ಸ್ಥಳದಲ್ಲಿ ಒಂಟಿಯಾಗಿ ಕೂಡುವಳು. ಪಾರ್ಶ್ವದ ಸೀಬೆಯ ಮರದಿಂದ ಮೈನಾಹಕ್ಕಿಯ ಕೂಗು ಕಿವಿಯಲ್ಲಿ ಬೀಳುತ್ತಿತ್ತು. ಅವಳ ಯೌವನ ಮಂದಿರದಲ್ಲಿ ಇಂದು ಯಾವ ದೇವತೆಯ ಪ್ರತಿಷ್ಠೆಯಾಗಿತ್ತೋ ಅದು ಭಾವ ಘನ ರಸಗಳ ರೂಪ ತಾಳಿ ಮೆರೆದಿತ್ತು. ರಾಧಾ ಕೃಷ್ಣರ ಯುಗಳ ರೂಪದ ಮಾಧುರ್ಯ ಅದ ರೊಡನೆ ಸೇರಿತ್ತು. ಬಿಸಿಲು ಮಾಳಿಗೆಯ ಮೇಲೆ ಏಸರಾಜನನ್ನು ತೆಗೆದುಕೊಂಡು ಮೆಲ್ಲಮೆಲ್ಲನೆ ನುಡಿಸುವಳು. ಅಣ್ಣನಿಗೆ ಬಹಳ ಪ್ರಿಯವಾದ ಭೂಪಾಳಿ ರಾಗದ ಕೀರ್ತನೆ....

“ಆಜಿ ಮೋರ್ ಘರೇ ಆಯಿಲೋ
ಪಿಯರಬಯಾ...,
ರೋಮೇ ರೋಮೇ ಹರಖೀಲಾ....”

(ಪ್ರಿಯನಿಂದು ಬಂದನೋ ಮನೆಗೆ....ರೋಮ ರೋಮದಲಿ ಹರುಷ ಮೂಡಿತೋ....)

ರಾತ್ರಿ ಹಾಸುಗೆಯ ಮೇಲೆ ಕೂತು ಪ್ರಣಾಮ ಮಾಡುವಳು. ಬೆಳಿಗ್ಗೆ ಎದ್ದು ಹಾಸುಗೆಯ ಮೇಲೆ ಕೂತು ಮತ್ತೆ ಪ್ರಣಾಮಮಾಡುವಳು. ಯಾರಿಗೆ ಕೈಮುಗಿಯುವಳೋ ಅದು ಗೊತ್ತಿಲ್ಲ. ಯಾವ ಗುರಿಯೂ ಇಲ್ಲದ ಭಕ್ತಿಯೊಂದರ ಸ್ವತಃಸ್ಫೂರ್ತ ಉಚ್ಛ್ವಾಸ!

ಆದರೆ ಮನದಲ್ಲಿ ಅಧಿಷ್ಠಿತವಾಗಿರುವ ಮೂರ್ತಿಯ ಮಂದಿರದ್ವಾರ ಚಿರದಿನವೂ ಮುಚ್ಚಿರ ಲಾಗುವುದಿಲ್ಲ. ಕಿವಿ ಕಿವಿಗಳಲ್ಲಿ ಓಡಾಡುವ ಪಿಸುಮಾತಿನ ಉಸಿರಿನ ಕಾವಿನಿಂದ ಮತ್ತು ಚುರುಕಿ ನಿಂದ ಆ ಮೂರ್ತಿಯ ಲಾವಣ್ಯ ಗಾಯಪಡೆಯಲು ಆರಂಭವಾದರೆ ಆ ದೇವತೆಯ ರೂಪ ಉಳಿ ಯುವುದಾದರೂ ಹೇಗೆ? ಆ ಸಮಯದಲ್ಲಂತೂ ಭಕ್ತಳ ದುಃಖಕ್ಕೆ ಕೊನೆಯಿಲ್ಲ.

ಒಂದು ದಿನ ಗಾಣಿಗರ ಕೇರಿಯ ಮುದುಕಿ ತೀನ್‌ಕಡೀ ಬಂದು ಕುಮುದಿನಿಯ ಮುಖದ ಎದುರಿಗೇ “ಆಹಾ....ನೋಡಿರೇ....ನಮ್ಮ ಕುಮುವಿನ ಅದೃಷ್ಟಕ್ಕೆ? ಎಂತಹ ಘರಮಾಯಿಷಿ ರಾಜಾ ಸಿಕ್ಕಿದ?....

“ಏಕ್ ಜೋ ಛಿಲೋ - ಕುಕುರ್....ಚಾಟಾ
ಶೇಯಾಲ್ - ಕಾಂಟಾರ್ ವನ್,
ಕೇಟೇ ಕರ್‌ಲೇ ಸಿಂಹಾಸನ್”

(ನಾಯೊಂದಿತ್ತೂ ಕುಂಟು ನಾಯೀ....ಕಾಡು ಕತ್ತಾಳೆ-ಕುರುಚಲ ಕಡಿದೂ ಮಾಡಿತು

ತನಗೇ ಸಿಂಹಾಸನ)

ಇವನೇ ಆ ಕತ್ತಾಳೀ ವನದ ರಾಜ. ಇವನೇ ಅಲ್ಲವೇ ರಜಬಪುರದ ಅಂದೋ ಗುಮಾಸ್ತೆಯ ಮಗ ಮಾಧೂ....ದೇಶದಲ್ಲಿ ಆವಾಗ ಬರ ಬಂದಿತ್ತಲ್ಲಾ....? ಆಗ ಬರ್ಮಾದಿಂದ ಅಕ್ಕಿ ತರಿಸಿ ಮಾರಿದ್ದಲ್ಲವಾ ಅವನ ಹಣ ?....ಯಾಕೆ ಇವನ ಹಣ....? ಮುದಿ ತಾಯೀನ ಸಾಯುವವರೆಗೂ ಒಲೆಮುಂದೆ ಕೂರಿಸಿ ಕೊಂದುಹಾಕಿದ ಇವನೂ...." ಎಂದೆಲ್ಲಾ ಒದರುವಾಗ ಹೆಣ್ಣುಮಕ್ಕಳೆಲ್ಲಾ ಉತ್ಸುಕರಾಗಿ ಅವಳ ಸುತ್ತ ನೆರೆಯುವರು. ಅವಳನ್ನು ಚುಚ್ಚಿ ಚುಚ್ಚಿ "ಮದುವೆ ಗಂಡು ಗೊತ್ತೇನೆ ಮುದುಕಿ, ನಿನಗೆ ?" ಎಂದು ಕೇಳುವರು.

"ಆಹಾ....ಯಾಕಮ್ಮಾ ಗೊತ್ತಿಲ್ಲ....? ಅವರಮ್ಮ ನಮ್ಮ ಕೇರಿಯಲ್ಲಿ ಹುಟ್ಟಿದವಳೇ ಅಲ್ಲವೇ ? ಪುರೋಹಿತ ಚಕ್ರವರ್ತಿಗಳ ಮನೆ ಹೆಣ್ಣಲ್ಲವೇ ? (ದನಿ ಸಣ್ಣದಾಗಿ ಮಾಡಿ) ಸತ್ಯವಾದ ಮಾತು ಹೇಳಲೇ... ಒಳ್ಳೇ ಬ್ರಾಹ್ಮಣರು ಅವರ ಸಂಗಡ ಸಂಬಂಧ ಮಾಡುವುದೇ ಇಲ್ಲ. ಆದರೇ ನೀಗ ? ಲಕ್ಷ್ಮಿ ಕೇಳುತಾಳೆಯೇ, ಜಾತಿ, ಕುಲ ?"

ಕುಮುದಿನಿಯ ಮನಸ್ಸು ಈಗಿನ ಕಾಲದ ಅಚ್ಚಿನಲ್ಲಿ ತಯಾರಾದದ್ದಲ್ಲವೆಂದು ಮೊದಲೇ ಹೇಳಿದೆ. ಜಾತಿ, ಕುಲಗಳ ಪವಿತ್ರತೆ ಆವಳ ದೃಷ್ಟಿಯಲ್ಲಿ ಒಂದು ಅತಿ ವಾಸ್ತವವಾದ ವಿಷಯ ವಾಗಿತ್ತು. ಮನಸ್ಸು ಅದರಿಂದ ಅಷ್ಟೇ ಸಂಕುಚಿತದಾದರೂ, ಅವುಗಳನ್ನು ನಿಂದೆ ಮಾಡುವವರ ಮೇಲೆ ಅಷ್ಟಕ್ಕಷ್ಟು ಕೋಪ ಬರುತ್ತಿತ್ತು.

ಈಗ ಅಂತಹ ನಿಂದೆಯನ್ನು ಕೇಳಿ ಹಠಾತ್ತಾಗಿ ಅಳು ಬಂದು ಆ ಸ್ಥಳ ಬಿಟ್ಟು ಹೊರಗೆ ಎಲ್ಲಾದರೂ ಹೋಗಿಬಿಡುತ್ತಿದ್ದಳು. ಎಲ್ಲರೂ ಪರಸ್ಪರ ಮೈ ಚುಚ್ಚಿ "ಆಹಾಹಾ ! ಆಗಲೇ ಇವಳ ಅಭಿಮಾನ ನೋಡಿರೇ ? ಇವಳೇನು ದಕ್ಷಯಜ್ಞದ ಸತಿಗೆ ಕಡಿಮೆಯಿಲ್ಲ ಅಂತ ಕಾಣುತ್ತೆ!" ಎಂದು ಆಡಿಕೊಳ್ಳುತ್ತಿದ್ದರು.

ವಿಪ್ರದಾಸನ ಮನೋವೃತ್ತಿ ಈಗಿನ ಕಾಲದ್ದಾದರೂ ಜಾತಿ, ಕುಲಗಳ ಹೀನತೆಯು ಅವ ನನ್ನು ಅಸಹಾಯನನ್ನಾಗಿ ಮಾಡಿಬಿಡುವುದು. ಆದುದರಿಂದಲೇ ಅಪವಾದವನ್ನು ಅಡಗಿಸಡಲು ಆದಷ್ಟು ಪ್ರಯತ್ನ ಮಾಡುವನು. ಆದರೆ ಹರಿದು ಹೋದ ದಿಂಬನ್ನು ಅದುಮಿದಷ್ಟು ಅದರೊಳಗಿನ ಹತ್ತಿಯು ಹೊರಗೆ ಹರಡುವಂತೆ ಆಯಿತು.

ಈ ಕಡೆ ಮುದಿರೈತ ದಾಮೋದರ ವಿಶ್ವಾಸನ ಬಳಿಯಿಂದ ಘೋಷಾಲ ವಂಶಸ್ಥರು ಬಹಳ ಹಿಂದೆ ನೂರ್‌ನಗರದ ಪಕ್ಕದ ಗ್ರಾಮವಾದ ಶೇಯಾಕುಲಿಯ ಒಡೆಯರಾಗಿದ್ದರೆಂದು ಸಮಾಚಾರ ತಿಳಿಯಿತು. ಈಗ ಅದು ಚಟರ್ಜಿಯವರ ವಶದಲ್ಲಿದೆ. ದುರ್ಗಾಪ್ರತಿಮೆಯ ವಿಸರ್ಜನೆಯ ಬಗ್ಗೆ ಮೊಕದ್ದಮೆಯಾಗಿ ಯಾವ ರೀತಿಯಾಗಿ ಅದು ಘೋಷಾಲ ವಂಶದವರ ವಿಸರ್ಜನೆ ಯಲ್ಲಿಯೇ ಕೊನೆಗೊಂಡಿತು, ಯಜಮಾನರ ಪೂರ್ವಿಕರು ಯಾವ ತಂತ್ರದಿಂದ ಅವರನ್ನು ಊರಿ ನಿಂದ ಹೊರಡಿಸಿದ್ದೇ ಅಲ್ಲದೆ ಸಮಾಜದಿಂದಲೂ ಬಹಿಷ್ಕಾರ ಮಾಡಿಸಿದರು, ಎಂಬುದನ್ನು ವರ್ಣಿ ಸುತ್ತ ದಾಮೋದರನ ಮುಖವು ಭಕ್ತಿಯಿಂದ ಉಜ್ವಲವಾಗಿ ಹೋಗುವುದು,ಘೋಷಾಲನ ಮನೆಯ ವರು ಒಂದು ಕಾಲದಲ್ಲಿ ಧನದಲ್ಲಿ, ಮಾನದಲ್ಲಿ, ಮತ್ತು ಕುಲದಲ್ಲಿ ಕೂಡ ಚಟರ್ಜಿಯವರ ಸಮ ದರ್ಜೆಯವರೆಂದು ಕೇಳಲು ಸಂತೋಷವೇ ಆದರೂ ವಿಪ್ರದಾಸನ ಮನಸ್ಸಿನಲ್ಲಿ ಈ ಮದುವೆ ಪುರಾತನ ಕಾಲದ ವ್ಯಾಜ್ಯದ ಮುಂದಿನ ಹಂತವಲ್ಲ ತಾನೇ, ಎಂಬ ಭಯವೂ ಹುಟ್ಟಿಕೊಂಡಿತು.

# ಹದಿಮೂರನೆಯ ಅಧ್ಯಾಯ

ಮಾರ್ಗಶಿರ ಮಾಸದಲ್ಲಿ ಮದುವೆ. ಆದರೆ ಆಶ್ವಯುಜದ ಇಪ್ಪತ್ತೈದನೆಯ ದಿನವೇ ಲಕ್ಷ್ಮೀ ಪೂಜೆಯಾಯಿತು, ಹಠಾತ್ತಾಗಿ ಆಶ್ವಯುಜದ ಇಪ್ಪತ್ತೇಳನೆಯ ದಿವಸ ಡೇರಾ ಸಾಮಾನುಗಳು ಮತ್ತು ಇತರ ನಾನಾ ಬಗೆಯ ಸರಂಜಾಮುಗಳೊಡನೆ ಘೋಷಾಲ ಕಂಪನಿಯ ಇಂಜನೀಯರಿಂಗ್ ಇಲಾಖೆಯ ಓವರ್ಸಿಯರನು ಬಂದು ಸಿದ್ಧನಾದನು. ಸಂಗಡ ಒಂದು ಪಶ್ಚಿಮ ಪ್ರಾಂತದ ಕೂಲಿಯಾಳುಗಳ ತಂಡ....ಏನಪ್ಪಾ, ಅಂತಹ ವಿಶೇಷ! ಶೇಯಾಕುಲಿಯಲ್ಲಿ ಘೋಷಾಲ್ ಕೊಳದ ದಡದಲ್ಲಿ ಗುಡಾರ ಹಾಕಿ ವರನೂ, ವರನ ಪರಿವಾರವೂ ಲಗ್ನಕ್ಕೆ ಕೆಲವು ದಿನ ಮುಂಚೆ ಅಲ್ಲಿ ಬಂದು ತಂಗುವರೆಂದು ತಿಳಿಯಿತು.—ಎಂತಹ ಮಾತು? ವಿಪ್ರದಾಸನು ರೇಗಿ "ಅವರೆಷ್ಟೇ ಜನವಿರಲಿ, ಖುಷಿಯಿದ್ದಷ್ಟು ದಿನಗಳಿರಲಿ, ನಾವೇ ಏರ್ಪಾಡು ಮಾಡುತ್ತೇವೆ. ಡೇರಾದ ಆವಶ್ಯಕತೆ ಏಕೆ? ನಮ್ಮದೇ ಸ್ವತಂತ್ರ ಮನೆ ಇದೆ. ಅದನ್ನೇ ಖಾಲಿ ಮಾಡಿ ಕೊಡುತ್ತೇವೆ" ಎಂದನು.

ಅದಕ್ಕೆ ಆ ಓವರ್ಸಿಯರನು "ರಾಜಾ ಬಹದ್ದೂರರ ಹುಕುಮು ಸ್ವಾಮಿ! ಕೊಳದ ನಾಲ್ಕೂ ಕಡೆಯ ಕಾಡು ಅಡವಿಗಳನ್ನು ಹೊಡೆದುಹಾಕಿ ಚೊಕ್ಕಟ ಮಾಡಬೇಕೆಂದು ಹೇಳಿದ್ದಾರೆ. ತಾವು ಜಮೀನ್ದಾರರು. ತಮ್ಮ ಅನುಮತಿ ಬೇಕು" ಎಂದನು.

ವಿಪ್ರದಾಸನ ಮುಖ ಕೆಂಪೇರಿ "ಇದು ಉಚಿತವೇ ಅವರಿಗೆ? ಜಂಗಲನ್ನು ನಾವೇ ಕಡಿದು ಚೊಕ್ಕಟಮಾಡಲಾಗುತ್ತದೆ." ಎಂದನು.

ಓವರ್ಸಿಯರನು ವಿನೀತ ಭಾವದಲ್ಲಿ ಉತ್ತರ ಕೊಟ್ಟನು. "ಆ ಸ್ಥಳದಲ್ಲಿಯೇ ರಾಜಾ ಬಹದ್ದೂರರ ಪೂರ್ವಿಕರ ಮನೆ ಮಠಗಳಿದ್ದುವಂತೆ. ಆದ್ದರಿಂದ ತಾವೇ ಅದನ್ನೆಲ್ಲಾ ಪರಿಷ್ಕಾರ ಮಾಡಬೇಕೆಂದು ಅವರಿಗೆ ಒಂದು ಬಗೆಯ ಹಠವಾಗಿದೆ."

ಈ ಮಾತು ಅಷ್ಟೇನೂ ಅಸಂಗತವಲ್ಲವಾದರೂ ಇವರ ಕಡೆಯ ಬಂಧು ಜನಗಳು ಗೊಣಗುಟ್ಟಲಾರಂಭಿಸಿದರು. ಇವರ ಕಡೆಯ ರೈತರುಗಳು "ಇದೆಲ್ಲಾ ನಮ್ಮ ದಣಿಗಳ ಮೇಲೆ ಛಲ ತೋರಿಸುವ ಪ್ರಯತ್ನ. ಹಠಾತ್ತಾಗಿ ದುಡ್ಡು ಸೇರಿಬಿಟ್ಟಿದೆ. ಅದನ್ನು ಮರೆಸಿಡಲು ಸಾಧ್ಯವಿಲ್ಲ. ಅದನ್ನು ಹೀಗೆ ಡಂಗುರ ಹೊಡೆಯುವುದಕ್ಕೇ ಇದೆಲ್ಲಾ ಚೇಷ್ಟೆ. ಹಿಂದಿನ ಕಾಲವಾಗಿದ್ದಿದ್ದರೆ ಮದುಮಗನನ್ನೂ ಸೇರಿಸಿ ದಿಬ್ಬಣದವರನ್ನು ವೈತರಣೀ ನದಿ ದಾಟಿಸಲು ವಿಳಂಬವಾಗುತ್ತಿರಲಿಲ್ಲ. ನಮ್ಮ ಚಿಕ್ಕ ಬಾಬುಗಳಿದ್ದಿದ್ದರೆ ಅವರು ಇಂತಹುದೆಲ್ಲಾ ಸೈರಿಸುತ್ತಿರಲಿಲ್ಲ,....ಈ ಬಾಬುಗಳೂ ಅವರ ಡೇರಾದವರೂ ಎಲ್ಲಿರುತ್ತಿದ್ದರೋ ಆಗ!" ಎಂದು ಹೇಳಿಕೊಂಡರು.

ರೈತರೆಲ್ಲಾ ವಿಪ್ರದಾಸನಲ್ಲಿಗೆ ಬಂದು "ಅವರುಗಳೆದುರಿಗೆ ನಾವು ತಲೆ ಬಾಗಿಸಕೂಡದು. ಖರ್ಚು ಎಷ್ಟೇ ಆದರೂ ನಾವು ಕೊಡುತ್ತೇವೆ" ಎಂದರು.

ಆಸ್ತಿಯ ಆರಾಣೆ ಭಾಗದ ಮಾಲೀಕನಾದ ನವಗೋಪಾಲನು ಬಂದು "ವಂಶದ ಅವಮರ್ಯಾದೆ ಸಹಿಸುವುದಕ್ಕಾಗದು. ಒಂದಾನೊಂದು ಕಾಲದಲ್ಲಿ ನಮ್ಮ ಪೂರ್ವಿಕರು ಇದೇ ಘೋಷಾಲರ ಮನೆಯವರ ಮೂಳೆ ಹೊರಗೆ ಬರುವ ಹಾಗೆ ಮಾಡಿದ್ದರು. ಈಗ ಅವರು ನಮ್ಮ ಎಲ್ಲೆಯನ್ನು ಮುತ್ತಿ ಹಣದ ಡೌಲನ್ನು ತೋರಿಸಲು ಬಂದಿದ್ದಾರೆ. ಬರಲೇಳಿ.... ನೀವು ಭಯ

ಪಡಬೇಡಿ, ಅಣ್ಣಾ, ಖರ್ಚು ಎಷ್ಟಾದರೂ ಆಗಲಿ, ನಾವುಗಳಿದ್ದೇವೆ. ಆಸ್ತಿ ಭಾಗವಾದರೇನಂತೆ, ವಂಶ ಮರ್ಯಾದೆ ಭಾಗವಾಗಲಿಲ್ಲವಲ್ಲ!" ಎಂದನು. ಹೀಗೆ ಹೇಳಿ ನವಗೋಪಾಲನೂ ಕೂಗಿ ಹಾರಾಡಿ ಮದುವೆಯ ಕೆಲಸಗಳ ಯಜಮಾನಿಕೆ ವಹಿಸಿಕೊಂಡನು.

ವಿಪ್ರದಾಸನಿಗೆ ಕೆಲವು ದಿನಗಳು ಕುಮುವಿನ ಬಳಿ ಹೋಗಲಾಗಲಿಲ್ಲ. ಅವಳ ಮುಖವನ್ನು ನೋಡುವುದಾದರೂ ಹೇಗೆ? ಕುಮುವಿನ ಬಳಿ ಹೋಗಿ ವರನ ಪಕ್ಷದವರ ಈ ದರ್ಪದ ವಿಷಯವಾಗಿ ಯಾರೂ ಅತಿಶಯೋಕ್ತಿ ಮಾಡಬಾರದೆಂಬ ಸೂಕ್ಷ್ಮತೆಯೂ, ದೊಡ್ಡತನವೂ ಸಮಾಜದಲ್ಲಿಲ್ಲ. ಅದನ್ನೇ ಉಪ್ಪು ಕಾರ ಹಚ್ಚಿ ಹೋಗಿ ಹೇಳಿ ಬಿಡುವರು. ಈ ಹೆಂಗಸರ ಕೋಪವೂ ಅವಳ ಮೇಲೆ ತಾನೇ? ಅವಳ ಸಲುವಾಗಿಯೇ ಅಲ್ಲವೇ, ಪೂರ್ವಿಕರ ತಲೆ ತಗ್ಗಿರುವುದು?....ಆಹಾ... ಏನು ಹೇಳೋಣವೋ ರಾಜಶೀವಿ!

ಜಾತಿ ಕುಲಗಳ ಮಾತನ್ನು ಕುಮು ತನ್ನ ಭಕ್ತಿಯಿಂದ ಮುಚ್ಚಿದ್ದಳು.—ಆದರೆ ಧನದ ಮದದಿಂದ ಮಾವನವರ ಮನೆಯನ್ನು ಅವಮಾನ ಪಡಿಸುವ ಸಣ್ಣತನವನ್ನು ನೋಡಿ ಅವಳ ಮನಸ್ಸು ವಿಷಾದದಿಂದ ತುಂಬಿಹೋಯಿತು. ಜನಗಳ ಸನಿಯದಿಂದಲೇ ದೂರ ಓಡುತ್ತಿದ್ದಳು. ಘೋಷಾಲರ ಅಪಮಾನ ಈಗ ತನ್ನ ಅಪಮಾನವೇ. ಅಣ್ಣನ ಬಾಯಿಂದ ಏನಾದರೂ ಕೇಳಬೇಕೆಂದು ಮನಸ್ಸು ತವಕಗೊಳ್ಳುತ್ತಿತ್ತು. ಆದರೆ ಅಣ್ಣ ಕಾಣಬರಲೇ ಇಲ್ಲ. ಒಳಗಿನ ಮಹಲಿಗೆ ಊಟಕ್ಕೆ ಕೂಡ ಬರುತ್ತಿರಲಿಲ್ಲ.

ಒಂದು ದಿನ ವಿಪ್ರದಾಸನು ಅಂತಃಪುರದ ಹೂದೋಟದಲ್ಲಿ ಮದುವೆಗೆ ಅಡಿಗೆಯವರಿಗೆ ಚಪ್ಪರ ಹಾಕಿಸಲು ನೆಲ ಸರಿಮಾಡುವುದಕ್ಕೆಂದು ಹೋಗಿ ಹಠಾತ್ತಾಗಿ, ಕುಮು ಹಿತ್ತಿಲು ಕಡೆಯ ಕೊಳದ ಸೋಪಾನದ ಮೇಲೆ ತಲೆ ತಗ್ಗಿಸಿಕೊಂಡು ಕೂತು ನೀರಿನ ಕಡೆ ಸುಮ್ಮನೆ ನೋಡುತ್ತಿದ್ದುದನ್ನು ಕಂಡನು. ಅಣ್ಣನನ್ನು ನೋಡಿದ ತಕ್ಷಣ ಕುಮು ಬೇಗಬೇಗ ಅವನ ಹತ್ತಿರ ಬಂದು ಗಂಟಲು ಬಿಗಿದ ಧ್ವನಿಯಿಂದ "ಅಣ್ಣಾ ನನಗೇನೂ ಅರ್ಥವಾಗುತ್ತಿಲ್ಲ" ಎಂದು ಮುಖವನ್ನು ಸೆರಗಿನಿಂದ ಮುಚ್ಚಿಕೊಂಡು ಅಳತೊಡಗಿದಳು.

ಅಣ್ಣನು ಮೃದುವಾಗಿ ಅವಳ ಬೆನ್ನಮೇಲೆ ಕೈಯಿಂದ ನೇವರಿಸುತ್ತಾ "ಜನಗಳಾಡುವುದನ್ನೆಲ್ಲಾ ಯಾಕಮ್ಮಾ ಕಿವಿಗೆ ಹಾಕಿಕೊಳ್ಳುತ್ತೀಯಾ?" ಎಂದನು.

"ಆದರೆ ಅವರೇಕೆ ಹೀಗೆಲ್ಲಾ ಮಾಡುವುದು? ಇದರಿಂದ ನಿಮಗೆ ಮಾನ ಉಳಿಯುತ್ತೆಯೇ?"

"ಅವರ ದೃಷ್ಟಿಯಿಂದಲೂ ಗಮನಿಸಿ ನೋಡು. ಅವರ ಪೂರ್ವಿಕರು ಬಾಳಿ ಬದುಕಿದ ಸ್ಥಳಕ್ಕೆ ಬಂದಿದ್ದಾರೆ. ಸ್ವಲ್ಪ ಧೂಮ್‌ಧಾಮ್ ಮಾಡಬೇಡವೇ? ಮದುವೆ ವಿಷಯದಿಂದ ಇದನ್ನು ಪ್ರತ್ಯೇಕ ಮಾಡಿ ಬೇರೆಯಾಗಿ ನೋಡು...."ಕುಮೂ ಸುಮ್ಮನೆ ಇದ್ದಳು. ವಿಪ್ರದಾಸನಿಗೆ ತಡೆಯಲಾಗಲಿಲ್ಲ. ಹತಾಶನಾಗಿ "ನಿನ್ನ ಮನಸ್ಸಿನಲ್ಲಿ ಎಳ್ಳಷ್ಟಾದರೂ ಆಕ್ಷೇಪಣೆಯಿದ್ದರೆ ಮದುವೆಯನ್ನು ಈಗಲೂ ನಿಲ್ಲಿಸಬಲ್ಲೆ. ಏನಂತಿ?" ಎಂದನು.

ಕುಮುದಿನಿಯು ಬೆಚ್ಚಿ ಜೋರಾಗಿ ತಲೆಯಲ್ಲಾಡಿಸಿ "ಛೀ ಛೀ! ಎಲ್ಲಾದರೂ ಉಂಟೆ?" ಎಂದಳು.

ಅಂತರ್ಯಾಮಿಯೆದುರು ಸತ್ಯವಾದ ಮದುವೆಯು ಗಂಟು ಬಿದ್ದಾಗಿ ಹೋಗಿದೆ. ಉಳಿದುದೆಲ್ಲಾ ಬಾಹ್ಯದ ಕರ್ಮಗಳು.

ವಿಪ್ರದಾಸನ ಇಂದಿನ ಕಾಲದ ಮನಸ್ಸು ಇಂತಹ ನಿಷ್ಠೆಯಿಂದ ಅಧೈರ್ಯಗೊಂಡಿತು. ಅವನು "ಎರಡು ಪಕ್ಷಗಳೂ ಸತ್ಯವಾಗಿದ್ದರಲ್ಲವೇ ವಿವಾಹ ಬಂಧನವೂ ಸತ್ಯ, ನುಡಿಸುವ ಬೆರಳಲ್ಲಿ ಸ್ವರವಿಲ್ಲದೆ ಹೋದರೆ ಏಸ್‌ರಾಜ್ ಎಷ್ಟು ಶ್ರುತಿಬದ್ಧವಾಗಿದ್ದರೇನು? ಪುರಾಣದಲ್ಲಿ ಏನಿದೆ ನೋಡು, ಸೀತೆ ಹೇಗಿದ್ದಳೋ ಹಾಗೆಯೇ ರಾಮ....ಮಹಾದೇವ ಹೇಗಿದ್ದನೋ ಹಾಗೆಯೇ ಸತೀ...ಅರುಂಧತಿ ಹೇಗೆಯೋ ಹಾಗೆಯೇ ವಸಿಷ್ಠ! ಇಂದಿನ ಕಾಲದ ನಾಗರೀಕರು ತಮ್ಮಲ್ಲಿ ಪುಣ್ಯವಿಲ್ಲದೆ ಹೋದರೂ ಹೆಂಡತಿಯರಿಗೆ ಮಾತ್ರ ಸತೀತ್ವ ಬೋಧನೆ ಮಾಡುವರು. ಅವರ ಕೈಯಿಂದ ಎಣ್ಣೆಯ ಸರಬರಾಯಿ ಇಲ್ಲ. ದೀವಿಗೆ ಮಾತ್ರ ಉರಿಯಬೇಕು. ಒಣಗಿದ ಜೀವದಿಂದಲೇ ಉರಿಯುತ್ತ, ಉರಿಯುತ್ತ ಬೂದಿಯಾಗಬೇಕು." ಎಂದನು.

ಕುಮುದಿನಿಗೆ ಹೇಳುವುದು ವ್ಯರ್ಥ. ಈಗಲಿಂದಲೂ ಅವಳು ಮನಸ್ಸಿನಲ್ಲಿ "ಆತನು ಒಳ್ಳೆಯವನಾಗಲಿ, ಕೆಟ್ಟವನಾಗಲಿ...,ಆತನೇ ನನ್ನ ಪರಮ ಗತಿ" ಎಂದು ಸತತವಾಗಿ ಜಪಿಸಲು ತೊಡಗಿದಳು.

"ದುಃಖೇಷ್ವನುದ್ವಿಗ್ನ ಮನಾ ಸುಖೇಷು ವಿಗತಸ್ಪೃಹಃ, ವೀತ ರಾಗ ಭಯ ಕ್ರೋಧಃ"

ಇದು ಕೇವಲ ಯತಿಧರ್ಮವಲ್ಲ. ಸತೀ ಧರ್ಮವೂ ಇದೇ ಲಕ್ಷಣ. ಸುಖ ದುಃಖಗಳಿಗೆ ಅತೀತವಾದುದೇ ಧರ್ಮ....ಅದರಲ್ಲಿ ಕ್ರೋಧವಿಲ್ಲ, ಭಯವಿಲ್ಲ....ಮತ್ತೆ ಅನುರಾಗವೋ? ಅದರ ಆವಶ್ಯಕತೆಯಾದರೂ ಏಕೆ? ಅನುರಾಗದಲ್ಲಿ ಬಯಸುವ, ಪಡೆಯುವ ಲೆಕ್ಕಾಚಾರವಿದೆ. ಭಕ್ತಿಯು ಅದಕ್ಕಿಂತಲೂ ದೊಡ್ಡದು. ಅದರಲ್ಲಿ ಆವೇದನವಿಲ್ಲ. ನಿವೇದನವಿದೆ...ಸತೀ ಧರ್ಮವು ನಿರ್ವ್ಯಕ್ತಿಕ....ಇಂಗ್ಲೀಷಿನಲ್ಲಿ ಅದನ್ನು "Impersonal" ಎನ್ನುತ್ತಾರೆ. ಮಧುಸೂದನನೆಂಬ ವ್ಯಕ್ತಿಯಲ್ಲಿ ದೋಷವಿರಲಿಕ್ಕೆ ಸಾಧ್ಯ. ಆದರೆ 'ಸ್ವಾಮಿ' ಎಂಬ ಹೆಸರಿನ ಭಾವ ಮಾತ್ರ ನಿರ್ವಿಕಾರ, ನಿರಂಜನ. ಅಂತಹ ವ್ಯಕ್ತಿತ್ವಹೀನ, ಧ್ಯಾನ ರೂಪದ ಮುಂದೆ ಕುಮುದಿನಿಯು ಒಂದೇ ಮನಸ್ಸಿನಿಂದ ತನ್ನನ್ನೇ ಸಮರ್ಪಣೆ ಮಾಡಿಕೊಂಡಳು.

## ಹದಿನಾಲ್ಕನೆಯ ಅಧ್ಯಾಯ

ಘೋಷಾಲ್ ದಿಘಿ ಎಂಬ ಕೊಳದ ದಡದಲ್ಲಿನ ಜಂಗಲನ್ನು ಕತ್ತರಿಸಿ ಪರಿಷ್ಕಾರ ಮಾಡಲಾಯಿತು. ಗುರುತೇ ಸಿಕ್ಕುವಂತಿರಲಿಲ್ಲ. ನೆಲ ತಟ್ಟೆಯಂತೆ ಒಂದೇ ಸಮನಾಗಿತ್ತು, ಮಧ್ಯೆ ಮಧ್ಯೆ ಇಟ್ಟಿಗೆಯ ಹುಡಿ ಹಾಕಿ ಹದ ಮಾಡಿದ್ದ ರಸ್ತೆಯ ಎರಡು ಕಡೆಯೂ ದೀಪದ ಕಂಬಗಳು. ಕೆರೆಯ ಕೊಳೆಯನ್ನೆಲ್ಲಾ ತೆಗೆದು ಶುದ್ಧಿಮಾಡಿದ್ದರು. ಘಟ್ಟದ ಹತ್ತಿರ ಪ್ರಕಾಶಮಾನವಾದ ಹೊಸ ವಿಲಾಯತಿಯ ತೆಪ್ಪಗಳ (yacht) ಎರಡು. ಅವುಗಳ ಮೈಮೇಲೆ "ಮಧುಮತಿ" "ಮಧುಕರಿ" ಎಂದು ಕೆತ್ತಲ್ಪಟ್ಟಿತ್ತು. ರಾಜಾಬಹದ್ದೂರರು ಸ್ವತಃ ಇರುತ್ತಿದ್ದ 'ತಂಬೂ'ವಿನ ಮೇಲೆ ಚೌಕಟ್ಟು ಹಾಕಿದ ಹಳದಿಯ ಬನಾತಿನಮೇಲೆ ಕೆಂಪುರೇಶ್ಮೆಯಲ್ಲಿ "ಮಧು ಚಕ್ರ"ವೆಂದು ಬರೆದಿತ್ತು. ಅಂತಃಪುರದವರಿಗೆ ಒಂದು ಡೇರಾ. ಅಲ್ಲಿಂದ ಕೊಳದ ಸೋಪಾನಗಳವರೆಗೆ ಚಾಪೆಗಳಿಂದ ಮರೆಮಾಡಿದ ಹಾದಿಯನ್ನು ಮಾಡಲಾಗಿತ್ತು....ಘಟ್ಟದಮೇಲೆಯೂ ದೊಡ್ಡ ಬೇವಿನ ಮರದಮೇಲೆ ಹಲಗೆಯೊಂದರ ಮೇಲೆಯೂ 'ಮಧುಸಾಗರ' ಎಂದು ಬರೆದಿತ್ತು. ಹತ್ತಿರದ ಬಯಲಲ್ಲಿ ನಾನಾ ಆಕಾರದ

ಪಾತಿಗಳಲ್ಲಿ ಸೂರ್ಯಮುಖಿ, ಸುಗಂಧರಾಜ, ರಜನೀಗಂಧ, ಕ್ಯಾನಾ ಮತ್ತು ಕರ್ಣಕುಂಡಲ ಹೂವಿನ ಗಿಡಗಳು ಪುಷ್ಪಭರಿತವಾಗಿ ಕಂಗೊಳಿಸುತ್ತಿದ್ದುವು. ಮರದ ಚಚ್ಚೌಕವಾದ ಪೆಟ್ಟಿಗೆಗಳಲ್ಲಿ ವಿವಿಧ ವರ್ಣದ ವಿಲಾಯತಿಯ ಹೂಗಳು. ಮಧ್ಯೆ ಒಂದು ಚಿಕ್ಕ ಸಿಮೆಂಟಿನ ಕಟ್ಟೆ ಹಾಕಿದ ಜಲಾಶಯ. ಅದರಲ್ಲಿ ಚಿಮ್ಮುವ ನೀರಿನ ಕಾರಂಜಿ. ಈ ಸ್ಥಳಕ್ಕೆ ಮಧುಕುಂಜವೆಂದು ಹೆಸರು....ಪ್ರವೇಶದ ದಾರಿಯಲ್ಲಿ ನಮೂನೆಯಾಗಿ ಚಿತ್ರಕೆಲಸ ಮಾಡಿದ್ದ ಕಬ್ಬಿಣದ ಬಾಗಿಲುಗಳು. ಅವುಗಳ ಮೇಲೆ ಬಾವುಟ ಹಾರುತ್ತಿದೆ. ಬಾವುಟದ ಮೇಲೆ "ಮಧುಪುರಿ" ಎಂದು ಹೆಣೆದಿದೆ... ನಾಲ್ಕೂಕಡೆ "ಮಧು"ಹೆಸರಿನ ಪ್ರಭಾವವೇ ! ನಾನಾವರ್ಣದ ಬಟ್ಟೆಗಳಿಂದ ನಿರ್ಮಿತವಾದ ಡೇರೆಯ ವಿಶಾಲವಾದ ಮೇಲು ಹೊದಿಕೆಯಿಂದಲೂ, ಗಾಳಿಗೆ ಹಾರಾಡುತ್ತಿರುವ ದೊಡ್ಡಬಾವುಟದಿಂದಲೂ, ಬಣ್ಣದ ಹೂಗಳಿಂದಲೂ, ರಂಗುರಂಗಿನ ಚೀಣಾ ದೀವಿಗೆಗಳಿಂದಲೂ ಮೆರೆಯುತ್ತ ಹಠಾತ್ತಾಗಿ ತಯಾರಾದ ಈ ಮಾಯಾನಗರಿಯನ್ನು ನೋಡಲು ದೂರದಿಂದ ಜನಗಳು ಗುಂಪು ಗುಂಪಾಗಿ ಬರಲಾರಂಭಿಸಿದರು. ಈ ಕಡೆ ಥಳ ಥಳ ಹೊಳೆಯುವ ಬಿಲ್ಲೆಗಳನ್ನು ಜೋಲಾಡಿಸುತ್ತ ಹಳದಿಯ ಕೆಂಪುಬಟ್ಟೆಗೆ ಅಂಚು ಹೆಣೆದ ಪಗಡಿ ಧರಿಸಿ, ಜರತಾರಿಯ ಕೆಂಪು ಬನಾತಿನ 'ಯೂನಿಫಾರಂ' ತೊಟ್ಟ ಚಪ್ರಾಸಿಗಳ ದಳವು ವಿಲಾಯತಿಯ ಮೆಟ್ಟನ್ನು ಶಬ್ದಮಾಡುತ್ತಾ ಓಡಾಡುತ್ತಿದ್ದರು. ಸಂಜೆಯವೇಳೆ ಬಂದೂಕಿನಲ್ಲಿ ಖಾಲಿ ತೋಟಾ ಹಾಕಿ ಹಾರಿಸಿ ಶಬ್ದಮಾಡುವರು. ಹಗಲು, ರಾತ್ರಿ ಪ್ರಹರವಾದಮೇಲೆ ಪ್ರಹರಕ್ಕೆ ಘಂಟೆ ಬಾರಿಸುವರು! ಅವರಲ್ಲಿ ಕೆಲವರ ಚರ್ಮದ ನಡುಕಟ್ಟಿಗೆ ಸಿಕ್ಕಿಸಿ ಜೋಲಾಡುತ್ತಿದ್ದ ವಿಲಾಯತಿಯ ಕತ್ತಿಗಳು ಜಮೀದಾರರ ಭೂಮಿಯನ್ನು ಅಡಿಗಡಿಗೂ ಒದೆಯುತ್ತಿದ್ದುವು. ಚಟರ್ಜಿಯವರ ಹಳೆಯಕಾಲದ ಹರಕಲು ಉಡಿಗೆ ತೊಡಿಗೆ ಧರಿಸಿದ ಬರಕಂದಾಜ ದಳದವರು ನಾಚುಗೆಯಿಂದ ಮನೆಯ ಹೊರಗೇ ಬರುತ್ತಿರಲಿಲ್ಲ. ಈ ಕಾಂಡವನ್ನು ನೋಡಿ ಚಟರ್ಜಿ ಪರಿವಾರದವರ ಮೈಉರಿಯಿತು. ನೂರ್‌ನಗರದವರ ಅಸ್ಥಿಪಂಜರದ ನಡುವೆ ಚುಚ್ಚಿದ ಭರ್ಜಿಯ ತುದಿಯಲ್ಲಿ ಇಂದುಘೋಷಾಲ್ ವಂಶಸ್ಥರ ಜಯಪತಾಕೆ ಹಾರುತ್ತಿದೆ.

ಶುಭ ಪರಿಣಯದ ಸೂಚನೆ ಇದೇ !

## ಹದಿನೈದನೆಯ ಅಧ್ಯಾಯ

ವಿಪ್ರದಾಸನು ನವಗೋಪಾಲನನ್ನು ಕರೆದು "ಇಲ್ಲಿ ನೋಡು, ನಾವೂ, ಆಡಂಬರದಲ್ಲಿ ಪೈಪೋಟಿ ಹೂಡುವುದು ನಮ್ಮಂತಹವರಿಗೆ ಸರಿಯಲ್ಲ. ಸಾಮಾನ್ಯರ ಕೆಲಸ ಅದು" ಎಂದನು.

ನವಗೋಪಾಲನು "ಚತುರ್ಮುಖನು ಕಾಲು ಝಾಡಿಸಿಯೇ ಹೆಚ್ಚು ಮನುಷ್ಯರನ್ನು ಸೃಷ್ಟಿಸಿದಾನೆ. ನಾಲ್ಕು ಮುಖಗಳು ಕೇವಲ ದೊಡ್ಡ ದೊಡ್ಡ ಮಾತುಗಳಾಡುವುದಕ್ಕೆ ಮಾತ್ರ. ಹದಿನೈದೂವರೆ ಆಣೆಯಷ್ಟು ಜನರು ಸಾಮಾನ್ಯರೇ. ಅವರ ಹತ್ತಿರ ಗೌರವ ಉಳಿಸಿಕೊಳ್ಳಬೇಕೆಂದರೆ ಅವರ ಹಾದಿಯಲ್ಲಿಯೇ ಹೋಗಬೇಕು." ಎಂದು ಉತ್ತರ ಕೊಟ್ಟ.

ವಿಪ್ರದಾಸನು "ಅದರಲ್ಲೂ ನೀನು ಗೆಲ್ಲಲಾರೆ. ಅದಕ್ಕೆ ಬದಲು ಸಾತ್ವಿಕ ರೀತಿಯಲ್ಲಿಯೇ ಕೆಲಸ ಮಾಡು, ಅದು ಚೆನ್ನಾಗಿ ಕಾಣುತ್ತೆ. ಸಂಪನ್ನರಾದ ಬ್ರಾಹ್ಮಣ ಪಂಡಿತರನ್ನು ಕರೆಸಿ ನಮ್ಮ ಸಾಮವೇದದ ಅನುಸಾರ ವಿಶುದ್ಧ ಭಾವದಲ್ಲಿ ಅನುಷ್ಠಾನವನ್ನು ಪಾಲನೆ ಮಾಡೋಣ. ಅವರು

ರಾಜರಾಗಿರುವುದರಿಂದ ಆಡಂಬರ ಮಾಡಿಕೊಳ್ಳಲಿ, ನಾವಂತೂ ಬ್ರಾಹ್ಮಣರು. ನಮ್ಮದು ಪುಣ್ಯ ಕರ್ಮ." ಎಂದನು.

ನವಗೋಪಾಲನು "ಅಣ್ಣಾ, ಪಂಚಾಂಗವನ್ನೇ ಮರೆತಿದ್ದೀಯೆ. ಇದು ಸತ್ಯಯುಗವಲ್ಲ. ನೀರಿನಲ್ಲಿ ನಡೆಸುವ ನೌಕೆಯನ್ನು ಕೆಸರಿನಲ್ಲಿ ಓಡಿಸಲು ಸಾಧ್ಯವೇ ? ನಿನಗೆ ರೈತರಿದ್ದಾರೆ. ತಿನೂ ಸರಕಾರನು ನಿಮ್ಮ ತಾಲ್ಲೋಕುದಾರ....ಭಾದೂ ಪ್ರಮಾಣಿಕ್, ಕಮರುದ್ದೀನ್ ಬಿಸ್ವಾಸ್, ಪಾಂಚೂ ಮಂಡಲ್,....ಇವರುಗಳೆಲ್ಲಾ ನಿಮ್ಮ ಆ ಬಾಳೇಕಾಯಿ ಅನ್ನದಲ್ಲಿ ಹೋಮ ಮಾಡುವ ಬ್ರಾಹ್ಮಣರ ಒಂದು ಅಕ್ಷರವನ್ನಾದರೂ ಕೇಳುತ್ತಾರೆ ಅಂದುಕೊಂಡೆಯೇನು? ಕೇಳಿದರೂ ಅರ್ಥವಾದೀತೇ ಅವರಿಗೆ....ಹೋಗು ಹೋಗಣ್ಣ ! ಇವರೇನು ಯಾಜ್ಞವಲ್ಕರ ಮರಿಮಕ್ಕಳು ಕೆಟ್ಟುಹೋದರೇ?... ಅವರ ಎದೆ ಒಡೆದು ಒಡೆದು ಹೋಗುತ್ತಾ ಇದೆ!....ನೀನು ಸುಮ್ಮನೆ ಇರಣ್ಣ, ನಾವು ನೋಡಿಕೊಳ್ಳುತ್ತೇವೆ. ನೀನೇನೂ ಹೆದರಬೇಡ." ಎಂದನು.

ನವಗೋಪಾಲನು ರೈತಾಪಿ ಜನಗಳ ಸಂಗಡ ಕಲೆತು ಓಡಾಡಿದನು. ಎಲ್ಲರೂ ಎದೆ ತಟ್ಟಿಕೊಂಡು ನಾನು ತಾನೆಂದು ಹಣ ಒದಗಿಸಲು ಬಂದರು.....ಆಳು ಕಾಳುಗಳು, ಭರ್ಜಿಯವರು, ಬಂದೂಕಿನವರು ಎಲ್ಲರ ಮೈಮೇಲೂ ಕೆಂಪು ಬನಾತಿನ ಚಾದರ, ಬಣ್ಣದ ಧೋತರ ಬಂತು. ಕೆಂಪು ಬಟ್ಟೆ ಸುತ್ತಿ ಝುಮಕಿ ಜೋಲಾಡುತ್ತಾ ಧ್ವಜ ಹಾರುವ ನವಬತ್‌ಖಾನೆ ಸಿದ್ಧವಾಯಿತು. ಏಳು ಕ್ರೋಶ ದೂರದಿಂದ ಅದರ ಗೋಪುರ ಕಾಣಿಸುತ್ತಿತ್ತು. ಜ್ಞಾತಿಗಳ ಎರಡು ತಂಡದವರೂ ಕೂಡಿ ನಾಲ್ಕೆಂಟು ಆನೆಗಳನ್ನು ಹೊರಡಿಸಿದರು. ಅವುಗಳ ಮೈಮೇಲೆ ವಿತರಣೆಯಿಂದ ಅಲಂಕಾರ ಮಾಡಲಾಯಿತು. ನಡು ನಡುವೆ ಕಾರಣವಿಲ್ಲದೆ ಘೋಷಾಲ ಕೆರೆಯ ಎದುರು ರಸ್ತೆಯಲ್ಲಿ ಅವು ಸೊಂಡಿಲನ್ನು ಎತ್ತಿಕೊಂಡು ಹಿಂದೆ ಮುಂದೆ ಗಸ್ತು ತಿರುಗುತ್ತಿದ್ದುವು. ಕತ್ತಿನಲ್ಲಿ ಕಟ್ಟಿದ್ದ ಗಂಟೆಯನ್ನು 'ಟಂಗ್, ಟಂಗ್' ಎಂದು ಶಬ್ದ ಮಾಡುತ್ತಿದ್ದುವು...." ಏನು ಮಾಡಿದರೇನು.... ಸೆಣಬಿನ ಚೀಲದಿಂದ ಆನೆ ಹೊರಗೆ ಬರುತ್ತದೆಯೇ ?" ಹೀಗೆಂದು ಎಲ್ಲರೂ ಹಾಸ್ಯಮಾಡುತ್ತಾ ತೊಡೆ ತಟ್ಟಿಕೊಂಡು ಹೋ, ಹೋ, ಎಂದು ಕೇಕೆ ಹಾಕತೊಡಗಿದರು.

ಮಾರ್ಗಶಿರ ಮಾಸದ ಇಪ್ಪತ್ತೇಳನೆಯ ದಿವಸ ಮದುವೆಯ ಲಗ್ನ. ಇನ್ನೂ ಎಂಟು ಹತ್ತು ದಿವಸಗಳಿವೆ. ಇಂತಹ ಸಮಯದಲ್ಲಿ ರಾಜಾ ಬಹದ್ದೂರರು ಪರಿವಾರ ಸಮೇತವಾಗಿ ಬರಲಿರುವರೆಂದು ಜನಗಳ ಬಾಯಿಂದ ಸುದ್ದಿ ಬಂತು. ಈಗಿನ ಕರ್ತವ್ಯವೇನು ಎಂದು ಯೋಚನೆಗಿಟ್ಟುಕೊಂಡಿತು. ಮಧುಸೂದನನು ಇವರಿಗಂತೂ ಯಾವ ಸಮಾಚಾರವನ್ನೂ ತಿಳಿಸಲಿಲ್ಲ. ಮರ್ಯಾದೆ ಅನ್ನುವುದು ಸಾಮಾನ್ಯ ಜನರಿಗಾಗಿಯೇ....ಅವಮರ್ಯಾದೆಯು ರಾಜೋಚಿತ ಎಂದು ತಿಳಿದುಕೊಂಡರೇನೋ....ಇಂತಹ ಪರಿಸ್ಥಿತಿಯಲ್ಲಿ ತಾವೇ ಮೇಲೆ ಬಿದ್ದು ಸ್ಟೇಷನ್ನಿಗೆ ಹೋಗಿ ಅವರುಗಳನ್ನು ಇದಿರುಗೊಳ್ಳುವುದು ಸರಿಯಾದೀತೆ? ಸಮಾಚಾರ ತಿಳಿಸದಿದ್ದುದಕ್ಕೆ ಉಚಿತವಾಗಿ ಪ್ರತ್ಯುತ್ತರ ಸುದ್ದಿಯನ್ನು ನಿರ್ಲಕ್ಷ ಮಾಡುವುದೇ?

ಎಲ್ಲಾ ಸರಿಯೇ, ಆದರೆ ಈ ಬಗೆಯ ಯುಕ್ತಿಯ ಮೂಲಕ ಪ್ರಪಂಚದ ದುಃಖವನ್ನು ನಿವಾರಿಸಲು ಸಾಧ್ಯವೇ? ಕುಮುವಿನ ಮೇಲೆ ವಿಪ್ರದಾಸನಿಗೆ ಅತ್ಯಂತ ಪ್ರೀತಿ. ಹಿಂದಿನಿಂದ ಅವಳನ್ನು ಯಾರಾದರೂ ಯಾವ ನೆಪದಿಂದಾದರೂ ನೋಯಿಸಿಯಾರು ಎಂಬ ಭಯವು ಕರ್ತವ್ಯವನ್ನು ಓಡಿಸಿಬಿಡುವುದು. ಹೆಣ್ಣು ಮಕ್ಕಳನ್ನು ಪೀಡಿಸುವುದು ಎಷ್ಟು ಸುಲಭ? ಅವರ ಸೂಕ್ಷ್ಮ ಹೃದಯ

ನಾಲ್ಕು ಕಡೆಯೂ ರಕ್ಷಣೆಯಿಲ್ಲದೆ ಇರುವುದು....ಜಬರದಸ್ತಿಯವರ ಕೈಯಲ್ಲೇ ಸಮಾಜದ ಚಾವಟಿಯನ್ನು ಕೊಡಲಾಗಿದೆ....ಮತ್ತು ಅಸಹಾಯರಾಗಿ ಏಟು ತಿನ್ನುವ ಬಡಪಾಯಿಗಳ ಬೆನ್ನು ನೋಡಿ 'ಅಯ್ಯೋ' ಎನ್ನುವುದಕ್ಕೆ ಯಾವ ವಿಧಿಯ ಕಾನೂನೂ ಗಮನ ಕೊಡುವುದಿಲ್ಲ....ಇಂತಹ ಅವಸ್ಥೆಯಲ್ಲಿ ಸ್ನೇಹಧನವನ್ನು ರೋಷ ವಿದ್ವೇಷಗಳ ಬಿರುಗಾಳಿಯಲ್ಲಿ ಹಾರಿಸಿಬಿಟ್ಟು ಸ್ವಂತ ಗೌರವವನ್ನು ಕಾಪಾಡಿಕೊಳ್ಳಲು ಹೋಗುವುದು ಶುದ್ಧ ಹೇಡಿತನ. ವಿಪ್ರದಾಸನೂ ಹೀಗೆಯೇ ಯೋಚಿಸಿದನು.

ವಿಪ್ರದಾಸನು ಯಾರಿಗೂ ಹೇಳದೆ ಕುದುರೆಯ ಮೇಲೆ ಹತ್ತಿ ಸ್ಟೇಷನ್ನಿಗೆ ಹೋದನು..., ಗಾಡಿ ಬಂದು ನಿಂತಿತು. ಆಗ ಐದು ಘಂಟೆ. ಸೆಲೂರ್ ಗಾಡಿಯಿಂದ ರಾಜಾಬಹದ್ದೂರರು ದಳ ಬಲಗಳೊಡನೆ ಇಳಿದರು. ವಿಪ್ರದಾಸನನ್ನು ನೋಡಿ ಒಣನಮಸ್ಕಾರದ ಶಾಸ್ತ್ರಮಾಡಿ "ಏನಿದು, ನೀವೇಕೆ ಸುಮ್ಮನೆ ತೊಂದರೆ ತೆಗೆದುಕೊಂಡಿರಿ ?" ಎಂದನು.

"ಲಕ್ಷಣವಾಯಿತು ! ಇದೇ ಮೊದಲ ಸಲ ನಮ್ಮ ಸ್ಥಳಕ್ಕೆ ಬರುವುದು ! ಎದುರುಗೊಂಡು-ಕರೆದುಕೊಂಡು ಹೋಗಬೇಡವೇ ?"

"ನಿಮ್ಮದು ತಪ್ಪು ಅಭಿಪ್ರಾಯ. ನಿಮ್ಮ ಸ್ಥಳಕ್ಕೆ ಇನ್ನೂ ಬಂದಿಲ್ಲ. ಅದು ಲಗ್ನದ ದಿವಸ." ವಿಪ್ರದಾಸನಿಗೆ ಮಾತಿನ ಸೂಕ್ಷ್ಮವನ್ನು ಅರ್ಥ ಮಾಡಿಕೊಳ್ಳಲಾಗಲಿಲ್ಲ. ಸ್ಟೇಷನ್ನಿನಲ್ಲಿ ನೆರೆದ ಗುಂಪಿನ ಎದುರಿಗೆ ತರ್ಕಮಾಡುವುದು ಸರಿಯಲ್ಲವೆಂದು "ಘಟ್ಟದ ಹತ್ತಿರ ತೆಪ್ಪ ತಯಾರಾಗಿದೆ" ಎಂದನು.

ರಾಜಾಬಹದ್ದೂರರು "ಆವಶ್ಯಕತೆಯಿಲ್ಲ....ನಮ್ಮ ಸ್ಟೀಮ್‌ಲಾಂಚ್ (ಆವಿಯ ದೋಣಿ) ಬಂದಿದೆ," ಎಂದರು.

ವಿಪ್ರದಾಸನು ಇದೇನೋ ಸರಿಯಿಲ್ಲ ಎಂದುಕೊಂಡನು. ಆದರೂ ಸುಮ್ಮನಿರದೆ ಇನ್ನೊಂದು ಸಲ "ಊಟ ತಿಂಡಿಗಳಿಗೆ ಬೇಕಾದ ದಿನಸಿ ಅಡಿಗೆಗೆಂದೇ ಒಂದು ನೌಕೆ ತಯಾರಾಗಿದೆ...." ಎಂದನು.

"ಇಷ್ಟೆಲ್ಲಾ ಗಲಾಟೆ ಏಕೆ ಹಚ್ಚಿಕೊಂಡಿರಿ ! ಯಾವುದೂ ಬೇಕಾಗುವುದಿಲ್ಲ. ಯಾವುದೂ ನೋಡಿ, ಒಂದು ವಿಷಯ ಮನಸ್ಸಿನಲ್ಲಿಡಿ. ನಾನೀಗ ಬಂದಿರುವುದು, ನಮ್ಮ ಪೂರ್ವಿಕರ ಸ್ಥಳಕ್ಕೆ ...ನಿಮ್ಮ ಸ್ಥಳಕ್ಕಲ್ಲ....ಮುಹೂರ್ತದ ದಿವಸ ಅಲ್ಲಿಗೆ ಬರುವ ಏರ್ಪಾಡಾಗುತ್ತೆ."

ವಿಪ್ರದಾಸನು ಇನ್ನು ಯಾವುದರಿಂದಲೂ ಇವರು ಮೆತ್ತಗಾಗುವ ಭರವಸೆಯಿಲ್ಲವೆಂದು ತಿಳಿದು ಕೊಂಡನು. ಎದೆಯೊಳಗಿನ ಉಸಿರೇ ಉಡುಗಿ ಹೋಯಿತು: ಸ್ಟೇಷನ್ನಿನ ವೇಟಿಂಗ್ ರೂಮಿನಲ್ಲಿ ಆರಾಮ ಕುರ್ಚಿಯ ಮೇಲೆ ಹೋಗಿ ಬಿದ್ದುಕೊಂಡನು. ಶೀತಕಾಲದ ಸಂಜೆ, ಕತ್ತಲಾಗುತ್ತ ಬಂದಿದೆ. ಉತ್ತರ ದಿಕ್ಕಿನಿಂದ ಗಾಡಿ ಬರುವುದಕ್ಕೆ ಘಂಟೆ ಬಾರಿಸಿದರು. ಸ್ಟೇಷನ್ನಿನ ದೀಪ ಹಚ್ಚಿದರು. ಲಗಾಮನ್ನು ಬಿಟ್ಟು ಕುದುರೆಯನ್ನು ಅದರ ಇಚ್ಛೆಯಂತೆ ಹೋಗಲು ಬಿಟ್ಟು ವಿಪ್ರ ದಾಸನು ಮನೆಗೆ ಹಿಂದಿರುಗುವ ಹೊತ್ತಿಗೆ ರಾತ್ರಿ ಬಹಳವಾಗಿತ್ತು. ಎಲ್ಲಿಗೆ ಹೋಗಿದ್ದುದು, ಏನಾಯಿತು ಎನ್ನುವುದನ್ನು ಯಾರಿಗೂ ಏನೂ ಹೇಳಲಿಲ್ಲ.

ಅಂದಿನ ರಾತ್ರಿಯೇ ಅವನಿಗೆ ಶೀತವಾಗಿ ಕೆಮ್ಮಲೂ ಆರಂಭವಾಯಿತು. ಕ್ರಮವಾಗಿ ಹೆಚ್ಚಾಯಿತು. ಉಪೇಕ್ಷೆಮಾಡಿ ಕಾಯಲೆಯನ್ನು ಕೆರಳಿಸಿಕೊಂಡನು. ಕಡೆಗೆ ಕುಮು ಅವನನ್ನು

ಬಲವಂತ ಮಾಡಿ ಕರೆದುಕೊಂಡು ಬಂದು ಹಾಸುಗೆಯಲ್ಲಿ ಮಲಗಿಸಿದಳು. ಮದುವೆ ಕೆಲಸಗಳ ಹೊರೆಯೆಲ್ಲಾ ನವಗೋಪಾಲನ ಮೇಲೆ ಬಿದ್ದಿತು.

## ಹದಿನಾರನೆಯ ಅಧ್ಯಾಯ

ಎರಡು ದಿನಗಳಾದ ಮೇಲೆ ನವಗೋಪಾಲನು ಬಂದು "ಏನು ಮಾಡಲಿ....ಸ್ವಲ್ಪ ಸಲಹೆ ಹೇಳು" ಎಂದನು.

ವಿಪ್ರದಾಸನು ವ್ಯಸ್ತನಾಗಿ "ಯಾಕೆ ?ಏನಾಯಿತು ?"ಎಂದು ಕೇಳಿದನು.

"ಅವರ ಜೊತೆಯಲ್ಲಿ ಕೆಲವರು ಸಾಹೇಬ್ ಜನರಿದ್ದಾರೆ. ದಳ್ಳಾಳಿಗಳೋ ಅಥವಾ ಮದ್ಯ ದಂಗಡಿಯ ವಿಲಾಯತೀ ಈಡಿಗರೋ....ನಿನ್ನೆ ಪೀರ್‌ಪುರದ ಹುಲ್ಲುಗಾವಲಿಗೆ ಹೋಗಿ ಏನಿಲ್ಲ ವೆಂದರೂ ಇನ್ನೂರು ಹಕ್ಕಿಗಳನ್ನು ಹೊಡೆದುಕೊಂಡು ಬಂದರು. ಇವತ್ತು ಚಂದನದಹದ ಕೊಲ್ಲಿಯ ಕಡೆ ಹೊರಟಿದ್ದಾರೆ. ಈ ಶೀತದ ಕಾಲದಲ್ಲಿಯೇ ಹಂಸಗಳು ಮರಿ ಹಾಕುವ ಸಮಯ, ಈ ರಾಕ್ಷಸರಿಂದ ಅವುಗಳ ಜೀವಹತ್ಯವಾಗುತ್ತೆ. ಹೈರಾವಣ, ಮೈರಾವಣ, ಹಿಡಿಂಬ, ಘಟೋತ್ಕಚ, ಇವರಿಂದ ಮೊದಲಾಗಿ ಕುಂಭಕರ್ಣನವರೆಗೂ ಪಿಂಡ ಹಾಕುವಷ್ಟು ಆಗುತ್ತೆ....ನರಕದಲ್ಲಿ ಹತ್ತು ತಲೆಯ ರಾವಣನ ಗಂಟಲುಗಳೂ ಕೂಡ ಬಿರಿಯುವಷ್ಟು ಅಂತ ಇಟ್ಟುಕೋ."

ವಿಪ್ರದಾಸನು ಸ್ತಂಭಿತನಾದನು. ಏನೂ ಹೇಳದೆ ಸುಮ್ಮನೆ ಕೂತನು.

ನವಗೋಪಾಲನು ಮತ್ತೆ "ನೀನೇ ಹುಕುಂ ಮಾಡಿದ್ದೆಯಲ್ಲಣ್ಣಾ, ಆ ಕೊಲ್ಲಿಯಲ್ಲಿ ಯಾರೂ ಶಿಕಾರಿ ಮಾಡಕೂಡದು ಅಂತ? ಆ ಸಲ ಜಿಲ್ಲಾ ಮ್ಯಾಜಿಸ್ಟ್ರೇಟರಿಗೂ ಕೂಡ ತಡೆಯಲಿಲ್ಲವೇ ? ನಾವೆಲ್ಲಾ ಹೆದರಿದ್ದೆವು, ನಿನ್ನನ್ನು ಕೂಡ ನಿರ್ಲಕ್ಷ್ಯ ಮಾಡಿ ನಿಮ್ಮ ರಾಜಹಂಸವನ್ನೂ ಮರೆತು ಗೋಲಿ ಹೊಡೆಯುವರೆಂದು.,..ಪಾಪ, ಅವರು ದೊಡ್ಡ ಮನುಷ್ಯರು, ಅದಕ್ಕೇ ಸುಮ್ಮನೆ ಹೊರಟು ಹೋದರು. ಆದರೆ ಈ ಜನ ಗೋವು, ಜಿಂಕೆ, ದ್ವಿಜರು ಯಾವುದನ್ನೂ ಲಕ್ಷ್ಯಮಾಡುವವರಲ್ಲ. ಆದರೂ ಬೇಡ ಅಂತ ಒಂದು ಮಾತು ಹೇಳಿ ನೋಡಿದರೆ...." ಎಂದನು.

ವಿಪ್ರದಾಸನು ವ್ಯಸ್ತನಾಗಿ "ಬೇಡ, ಬೇಡ, ಏನೂ ಹೇಳುವುದು ಬೇಡ...." ಎಂದನು.

ವಿಪ್ರದಾಸನು ಹುಲಿಯ ಬೇಟೆಯಲ್ಲಿ ಆ ಜಿಲ್ಲೆಯಲ್ಲೆಲ್ಲಾ ಬಹಳ ಹೆಸರಾದವನು. ಯಾವಾಗಲೋ ಒಂದು ಸಲ ಅಕಸ್ಮಾತ್ತಾಗಿ ಹಕ್ಕಿಯೊಂದನ್ನು ಹೊಡೆದು ಅವನಿಗೆ ಎಷ್ಟು ಸಂಕಟವಾಯಿತೋ....ಅಂದಿನಿಂದ ಜಮೀನ್ದಾರಿಯಲ್ಲಿ ಎಲ್ಲೂ ಯಾರೂ ಹಕ್ಕಿಗಳನ್ನು ಕೊಲ್ಲಕೂಡದೆಂದು ಅಪ್ಪಣೆ ಮಾಡಿಬಿಟ್ಟಿದ್ದನು.

ಕುಮು ಬಂದು ವಿಪ್ರದಾಸನ ತಲೆಯ ಮೇಲೆ ಕೈಯಿಂದ ನೇವರಿಸುತ್ತಾ ಕೂತಳು. ನವಗೋಪಾಲನು ಹೊರಟು ಹೋದ ತಕ್ಷಣ ಅವಳು ಮುಖ ಗಂಟುಹಾಕಿಕೊಂಡು "ಅಣ್ಣಾ, ಬೇಡ ಎಂದು ಹೇಳಿ ಕಳುಹಿಸು." ಎಂದಳು.

"ಏನು ಬೇಡ ಎನ್ನುವುದು ?"

"ಹಕ್ಕಿ ಹೊಡೆಯುದನ್ನ."

"ಅವರು ತಪ್ಪು ತಿಳಿದುಕೋತಾರೆಯೇ, ಕುಮು, ಸಹಿಸುವುದಿಲ್ಲ."

"ತಪ್ಪು ತಿಳಿದುಕೊಳ್ಳಲಿ....ಮಾನಾಪಮಾನ ಅವರೊಬ್ಬರಿಗೇ ಅಲ್ಲ!"

ವಿಪ್ರದಾಸನು ಕುಮುವಿನ ಮುಖದ ಕಡೆ ನೋಡಿ ಮನಸ್ಸಿನಲ್ಲಿಯೇ ನಕ್ಕನು. ಈ ಕುಮು ಕಠಿಣ ನಿಷ್ಠೆಯಿಂದ ಮನಸ್ಸಿನಲ್ಲಿಯೇ ಸತೀ ಧರ್ಮವನ್ನು ಪಾಲನೆ ಮಾಡುತ್ತಿದ್ದಾಳೆ. "ಛಾಯೇವಾನುಗತಾ ಸ್ವಚ್ಛಾ" ಎನ್ನುವಂತೆ. ಸಾಮಾನ್ಯ ಹಕ್ಕಿಯ ಪ್ರಾಣವನ್ನು ಕುರಿತು ಕಾಯದೊಡನೆ ಛಾಯೆಯ ಪಥಭೇದವಾದೀತೇನೋ!

ವಿಪ್ರದಾಸನು ಸ್ನೇಹದ ದನಿಯಲ್ಲಿ "ಕೋಪ ಮಾಡಿಕೊಳ್ಳಬೇಡ ಕುಮೂ, ನಾನೂ ಒಂದು ದಿನ ಹಕ್ಕಿ ಹೊಡೆಯಲಿಲ್ಲವೆ? ಆಗ ಅದು ಅನ್ಯಾಯ ಅಂತ ಅರ್ಥವಾಗಲಿಲ್ಲ. ನನಗೆ—ಇವರ ಸ್ಥಿತಿಯೂ ಹಾಗೆಯೇ ತಾನೇ!" ಎಂದನು.

ಆಯಾಸವಿಲ್ಲದ ಉತ್ಸಾಹದೊಡನೆ ಶಿಕಾರಿ ನಡೆಯಿತು. ಪಿಕ್‌ನಿಕ್ (ವನಭೋಜನ), ಸಾಯಂಕಾಲ ಬ್ಯಾಂಡಿನ ಸಂಗೀತ ಸಂಯೋಗದಲ್ಲಿ ಆಂಗ್ಲೇಯ ಅತಿಥಿಗಳ ಕುಣಿತದ ಕೂಟ.... ಕೂಡ ನಡೆದುವು. ಸಾಯಂಕಾಲ ಟೆನ್ನಿಸ್, ಅಲ್ಲದೆ ಕೊಳದ ಮೇಲೆ ಮೂರು ನಾಲ್ಕು ಪರದೆಗಳನ್ನು ಎತ್ತಿ ಕಟ್ಟಿ ಪಂದ್ಯದ ಮೇಲೆ ದೋಣಿಗಳ ಓಟದ ಸ್ಪರ್ಧೆ....ಅವುಗಳನ್ನು ನೋಡಲು ಕೊಳದ ಸುತ್ತಲೂ ಗ್ರಾಮದ ಜನಗಳು ಕಿಕ್ಕಿರಿದು ನೆರೆಯುತ್ತಿದ್ದರು....ರಾತ್ರಿ ಊಟವಾದಮೇಲೆ "ಫಾರ್ ಹಿ ಈಸ್ ಎ ಗುಡ್ ಫೆಲೋ...." ಎಂಬ ಮದ್ಯ ಪಾತ್ರೆ ಕೈಯಲ್ಲಿ ಹಿಡಿದು ಹಾಡುವ ಚೀರಾಟ....ಈ ವಿಲಾಸಗಳ ಪ್ರಧಾನ ನಾಯಕ ನಾಯಕಿಯರು ಸಾಹೇಬ ಗಂಡಸರು, ಮತ್ತು ಅವರ ಹೆಂಗಸರು, ಅವರನ್ನು ನೋಡಿಯೇ ಗ್ರಾಮದ ಜನರು ಬೆರಗಾಗಿರುವುದು. ಇವರು ತಲೆಯ ಮೇಲೆ ಸೋಲಾ ಟೋಪಿ ಧರಿಸಿ ನೀರಿನಲ್ಲಿ ಗಾಳವೆಸೆದು ಮೀನು ಹಿಡಿಯುವುದೂ ಅಪೂರ್ವ ದೃಶ್ಯ......ಎದುರು ಪಕ್ಷದಲ್ಲಿ ನಡೆಯುತ್ತಿದ್ದ ಲಾಠೀವರಿಸೆ, ಕುಸ್ತೀ, ತೆಪ್ಪೋತ್ಸವ, ಅಟ್ಟದಾಟ, ಮತ್ತು ನಾಲ್ಕು ಆನೆಗಳ ನೋಟ ಇವೆಲ್ಲಾ ಈ ದೃಶ್ಯಗಳ ಮುಂದೆ ಏನು ಕಳೆ ಕಟ್ಟೀತು?

ವಿವಾಹಕ್ಕೆ ಎರಡು ದಿನ ಮುಂಚೆ ವಧುವಿಗೆ ಅರಿಶಿನ ಹಚ್ಚುವ ಶಾಸ್ತ್ರ. ಬೆಲೆಯಾದ ನಾನಾ ವಿಧವಾದ ಒಡವೆಗಳಲ್ಲದೆ ಆಟದ ಬೊಂಬೆಗಳು ಮೊದಲುಗೊಂಡು ಬೇರೆ ಬೇರೆ ಬಾಗಿನದ ಸಾಮಾನುಗಳನ್ನು ವರನ ಬಿಡಾರದಿಂದ ಕಳುಹಿಸಲಾಯಿತು. ಅವುಗಳ ಮೆರವಣಿಗೆಯನ್ನು ನೋಡಿ ಎಲ್ಲರೂ ಅವಾಕ್ಕಾದರು. ಅದನ್ನು ಹೊತ್ತುಕೊಂಡು ಬಂದವರು ಎಷ್ಟು ಮಂದಿ? ಚಟರ್ಜಿಯವರು ಬಹಳ ಧಾರಾಳವಾಗಿ ಅವರನ್ನೆಲ್ಲಾ ಉಪಚರಿಸಿ ಕಳುಹಿಸಿದರು.

ಕೊನೆಯಲ್ಲಿ ಸಾಧಾರಣ ಜನಗಳ ಊಟದ ವ್ಯವಸ್ಥೆಯನ್ನು ಕುರಿತು ವೈವಾಹಿಕ ಕುರುಕ್ಷೇತ್ರದ ದ್ರೋಣಪರ್ವವಾಗಿ ಹೋಯಿತು.

ಆ ದಿನ ಡಂಗೂರ ಹೊಡೆಯಿಸಿ ಎಲ್ಲಾ ಜನಗಳನ್ನೂ ಮಧುಸಾಗರ ತೀರದ ಮಧುಪುರಿಗೆ ಭೋಜನಕ್ಕೆ ನಿಮಂತ್ರಣ ಮಾಡಿದರು. ಕರೆದವರೂ ಕರೆಯದವರೂ ಎಲ್ಲರೂ ಬರಬಹುದೆಂದು ಸಾರಿದರು. ನವಗೋಪಾಲನು ಕೋಪದಿಂದ ಬೆಂಕಿಯಾದನು. ಇದೇತಹ ಉದ್ಧಟತನ! ಇಲ್ಲಿ ಜಮೀನ್ದಾರರು ನಾವು. ನಮ್ಮ ಜಮೀನಿನ ಮಧ್ಯೆ ಇವನದೆಂತಹ ಮಧುಪುರಿ?

ಈ ಕಡೆ ಊಟದ ಏರ್ಪಾಡು ಬಹಳ ಅದ್ದೂರಿಯಾಗಿ, ಬಹಳ ಭಾರಿಯಾಗಿ, ಎಲ್ಲರಿಗೂ ಕಣ್ಣಿಗೆ ಕಟ್ಟುವಂತಿತ್ತು. ಬರಿಯ ಫಲಹಾರವಲ್ಲ. ಮತ್ಸ್ಯ, ಮೊಸರು, ಹಾಲು, ಸಂದೇಶ

ತುಪ್ಪ, ಮೈದಾಹಿಟ್ಟು, ಸಕ್ಕರೆ ಎಲ್ಲಾ ತುಂಬಿಹೋಗಿತ್ತು. ಮರಗಳ ಕೆಳಗೆ ದೊಡ್ಡ ದೊಡ್ಡ ಒಲೆಗಳನ್ನು ಅಗೆದು ಮಾಡಿದ್ದರು. ಅಡಿಗೆಗಾಗಿ ನಾನಾ ಅಳತೆಯ ಹಂಡೆ, ಕಡಾಯಿ, ಕೊಳಗ ತಪ್ಪಲೆ, ತಟ್ಟೆಗಳು ಇತ್ಯಾದಿಯೆಲ್ಲಾ ಸಿದ್ಧವಾಗಿದ್ದುವು. ಸಾಲಾಗಿ ನಿಂತಿದ್ದ ಎತ್ತಿನ ಬಂಡಿಗಳಲ್ಲಿ ಉರುಳುಗಡ್ಡೆ, ಬದನೆಕಾಯಿ, ಬಾಳೇಕಾಯಿ, ಸೊಪ್ಪುಗಳು ಎಲ್ಲಾ ತರಿಸಲ್ಪಟ್ಟಿದ್ದುವು. ಊಟ, ಸಾಯಂಕಾಲ ಗ್ಯಾಸ್ ದೀಪಗಳ ಬೆಳಕಿನಲ್ಲಿ.

ಈ ಕಡೆ ಚಟರ್ಜಿಗಳ ಮನೆಯಲ್ಲಿ ಮಧ್ಯಾಹ್ನದ ಊಟ. ರೈತರುಗಳು ತಾವೇ ಗುಂಪು ಗುಂಪಾಗಿ ಏರ್ಪಾಡು ಮಾಡಿಕೊಂಡಿದ್ದರು. ಹಿಂದುಗಳಿಗೂ, ಮುಸಲ್ಮಾನರಿಗೂ ಪ್ರತ್ಯೇಕ ಏರ್ಪಾಡು. ಮುಸಲ್ಮಾನ ರೈತರ ಸಂಖ್ಯೆಯು ಹೆಚ್ಚು. ಬೆಳಕಾಗುವ ಮುಂಚೆಯೇ ಅವರೆಲ್ಲಾ ಅಡುಗೆ ಶುರುಮಾಡಿಬಿಟ್ಟಿದ್ದರು. ಅಡುಗೆಯ ಉಪಕರಣಗಳು ಅಷ್ಟೇನೂ ಹೆಚ್ಚಿಲ್ಲದಿದ್ದರೂ ಚಟರ್ಜಿಯವರ ಹೆಸರಿನ ಮೇಲೆ ಜಯಕಾರಗಳು ಆಗಾಗ ಅಂತರಿಕ್ಷದಲ್ಲಿ ಪ್ರತಿಧ್ವನಿತವಾಗುತ್ತಿದ್ದುವು. ಸ್ವಯಂ ನವಗೋಪಾಲ ಬಾಬುಗಳು ಸಂಜೆ ಐದು ಘಂಟೆಯವರೆಗೂ ಊಟವಿಲ್ಲದೆ ಅಲ್ಲಿ ಹಾಜರಿದ್ದು ಎಲ್ಲರನ್ನೂ ವಿಚಾರಿಸಿ ಬಡಿಸಿಸಿದರು. ಎಲ್ಲಾ ಆದಮೇಲೆ ದೀನ ದರಿದ್ರರಿಗೆ ಊಟ. ಗಣ್ಯರಾದ ರೈತರು ತಾವೇ ದಾನ ವಿತರಣೆಗಳನ್ನು ವ್ಯವಸ್ಥೆಮಾಡಿದರು. ಕಲಧ್ವನಿಯಿಂದ, ಜಯ ಘೋಷದಿಂದ ಆಕಾಶದಲ್ಲಿ ಸಮುದ್ರ ಮಥನವಾಯಿತು.

ಮಧುಪುರಿಯಲ್ಲಿ ಇಡೀ ಹಗಲು ಅಡುಗೆಯಾಗುತ್ತಲಿದೆ. ಅಡಿಗೆಯ ಸುವಾಸನೆ ಬಹು ದೂರದವರೆಗೂ ಪಸರಿಸಿದೆ. ಮಣ್ಣಿನ ಕುಡಿಕೆ ಮಡಕೆಗಳೂ, ಬಾಳೆ ಎಲೆಗಳೂ, ಬೆಟ್ಟದಂತೆ ರಾಶಿಯಾಗಿ ಬಿದ್ದಿವೆ. ಬಿಸಾಡಿದ್ದ ತರಕಾರಿಯ ಸಿಪ್ಪೆಗಳು ಮತ್ತು ಮೀನಿನ ಎಲಬುಗಳ ಮೇಲೆ ಕಾಗೆಗಳು ವಿರಾಮವಿಲ್ಲದೆ ಕೋಲಾಹಲ ಮಾಡುತ್ತಿವೆ. ಪ್ರಾಂತದ ನಾಯಿಗಳೆಲ್ಲಾ ಸೇರಿ ಪರಸ್ಪರ ಬಗುಳುತ್ತಾ, ಕಚ್ಚುತ್ತಾ ಕಿವಿ ಚಿಟ್ಟೆನ್ನಿಸುತ್ತಿವೆ.... ಊಟದ ಹೊತ್ತಾಯಿತು. ಗ್ಯಾಸ್ ದೀಪಗಳು ಉರಿಯುತ್ತಾ ಇವೆ. ಮೇಟಿಯಾ ಬುರುಜ್‌ಷಹರಿನ ರೋಷನ್ ಚೌಕಿಯವರು ಯಮುನ್ ಕಲ್ಯಾಣದಿಂದ ಕೇದಾರರಾಗದವರೆಗೂ ವಾದ್ಯಗಳನ್ನು ಬಾರಿಸಲು ಶುರು ಮಾಡಿದ್ದಾರೆ....ಅನುಚರರು ಉದ್ವಿಗ್ನ ಭಾವದಿಂದ ರಾಜಾ ಬಹದ್ದೂರರವರ ಕಿವಿಯಲ್ಲಿ ಇನ್ನೂ ಬರಬೇಕಾದಷ್ಟು ಜನ ಬಂದಿಲ್ಲವೆಂದು ಪಿಸುಮಾತಿನಲ್ಲಿ ತಿಳಿಸುತ್ತಿದ್ದಾರೆ. ಆ ದಿನ ಸಂತೆಯಾದುರಿಂದ ಸುತ್ತಮುತ್ತಲಿನ ಗ್ರಾಮಗಳವರೂ ಸಂತೆಯಿಂದ ಮನೆಗಳಿಗೆ ಹೋಗುತ್ತಿದ್ದರು. ಬಡಿಸಿ ಸಿದ್ಧವಾಗಿದ್ದ ಎಲೆಗಳನ್ನು ಕಂಡು ಲಕ್ಷಣವಾಗಿ ಊಟಕ್ಕೆ ಕುಳಿತುಕೊಂಡರು. ಭಿಕ್ಷುಕರು ಮಾತ್ರ ಎಲ್ಲೋ ಕೆಲವು ಜನ. ರಾಜಾಬಹದ್ದೂರರು ನಿರ್ಜನವಾಗಿದ್ದ ಡೇರಾದಲ್ಲಿ ಹೊಕ್ಕು ಮುಖ ಕಪ್ಪು ಮಾಡಿಕೊಂಡು ಉಡುಗಿದ ಧ್ವನಿಯಲ್ಲಿ "ಹುಂ" ಎಂದರು. ಅವರ ತಮ್ಮ ರಾಧು ಹತ್ತಿರ ಬಂದು "ಅಣ್ಣಾ, ಇನ್ನು ನೋಡುವುದೇನು. ನಡಿ, ಹೊರಡೋಣ." ಎಂದನು.

"ಎಲ್ಲಿಗೆ ?"

"ಕಲಿಕತ್ತೆಗೆ ವಾಪಸು ಹೋಗೋಣ. ಇವರೆಲ್ಲಾ ಬದಮಾಷ್ ಜನಗಳು. ನಿಮ್ಮ ಕಿರುಬೆರಳು ಹಾಗೆಂದರೆ ಇವರಪ್ಪನಂತಹ ಹೆಣ್ಣುಗಳು ಬರಲು ಕಾದಿವೆ. ಒಂದು ಸಲ ಹೂಂ. ಅಂದರೆ ಸಾಕು."

ಮಧುಸೂದನನು "ಹೊರಡಾಚೆಗೆ" ಎಂದು ಗರ್ಜಿಸಿ ಎದ್ದನು.

ಒಂದು ನೂರು ವರ್ಷಗಳ ಹಿಂದೆ ಹೇಗೆ ಆಗಿತ್ತೋ ಇಂದೂ ಹಾಗೆಯೇ ಆಯಿತು. ಈಗಲೂ ಒಂದು ಪಕ್ಷದವರ ಆಡಂಬರವನ್ನು ಮೀರಿಸಲು ಎದುರು ಪಕ್ಷದವರು ಕಲ್ಪಿಸಿದ ರೀತಿಯ ಔನ್ನತ್ಯವನ್ನು ತಡೆಗಟ್ಟಲಾಗಿತ್ತು. ಆದರೆ ನಿಜವಾದ ಸೋಲು ಗೆಲುವುಗಳು ಹೊರಗಿನಿಂದ ಕಾಣ ಬರುತ್ತಿರಲಿಲ್ಲ. ಅವುಗಳ ಕ್ಷೇತ್ರವೇ ಜನರ ಕಣ್ಣಿಗೆ ಅಗೋಚರ.

ಚಟರ್ಜಿಯವರ ಪ್ರಜೆಗಳು ಚೆನ್ನಾಗಿ ನಕ್ಕರು. ವಿಪ್ರದಾಸನು ಕಾಯಿಲೆಯಿಂದ ಹಾಸುಗೆ ಹಿಡಿದಿದಾನೆ. ಅವನ ಕಿವಿಗೆ ಇದಾವುದೂ ಬೀಳಲೇ ಇಲ್ಲ.

## ಹದಿನೇಳನೆಯ ಅಧ್ಯಾಯ

ಮದುವೆಯ ದಿನ ರಾಜಾ ಬಹದ್ದೂರರ ಹುಕುಮಿಗನುಸಾರ, ಹೆಣ್ಣಿನ ಮನೆಗೆ ಹೋಗುವಾಗ ಆಡಂಬರವೇನೂ ಇರಕೂಡದೆಂದು ಆಗಿತ್ತು. ದೀವಟಿಗೆಗಳಿರಲಿಲ್ಲ. ವಾದ್ಯ ಬಾರಿಸಲಿಲ್ಲ. ಜೊತೆಯಲ್ಲಿ ಕೇವಲ ಮನೆಯ ಪುರೋಹಿತ ಮತ್ತು ಇಬ್ಬರು ಭಟ್ಟರು. ಪಲ್ಲಕ್ಕಿಯಲ್ಲಿ ಕೂತು ನಿಶ್ಯಬ್ದವಾಗಿ ವರನು ಮದುವೆಯ ಮನೆಗೆ ಬಂದನು. ಜನಗಳು ಮಂಕು ಬಡಿದಂತೆ ನೋಡು ತ್ತಿದ್ದರು. ಆ ಕಡೆ ಮಧುಪುರಿಯ ಡೇರಾದಲ್ಲಿ ಗ್ಯಾಸ್ ದೀಪಗಳ ಬೆಳಕಿನಲ್ಲಿ ಬ್ಯಾಂಡ್‌ವಾದನ ದೊಡನೆ ವರನ ಕಡೆಯ ವಿದೇಶೀ ಅತಿಥಿಗಳು ಊಟ ವಿಲಾಸಗಳಲ್ಲಿ ಮುಳುಗಿದ್ದರು. ಇದು ಹಿಂದಿನ ದಿನದ ಸೋಲಿಗೆ ಜವಾಬೆಂದು ನವಗೋಪಾಲನು ತಿಳಿದುಕೊಂಡನು. ಇಂತಹ ಸಮಯ ದಲ್ಲಿ ಹೆಣ್ಣಿನ ಕಡೆಯವರು ಗಂಡಿನವರ ಕೈ ಕಾಲು ಹಿಡಿದುಕೊಂಡು ಮನ್ನಣೆ ಬೇಡುವರು, ನವ ಗೋಪಾಲನು ಹಾಗೇನೂ ಮಾಡಲಿಲ್ಲ. ಒಂದು ಸಲವೂ ವರನ ಪರಿವಾರದವರೆಲ್ಲೆಂದು ಕೇಳ ಲಿಲ್ಲ.

ಕುಮುದಿನಿಯು ಚೆನ್ನಾಗಿ ಶೃಂಗಾರ ಮಾಡಿಕೊಂಡು ಲಗ್ನ ಮುಹೂರ್ತಕ್ಕೆ ಮುಂಚಿತವಾಗಿ ತಂದೆಯ ಸ್ಥಾನದಲ್ಲಿದ್ದ ಅಣ್ಣನಿಗೆ ಪ್ರಣಾಮ ಮಾಡಿ ಆಶೀರ್ವಾದ ಪಡೆಯಲು ಬಂದಳು. ಅವಳ ಮೈಯೆಲ್ಲಾ ನಡುಗುತ್ತಿತ್ತು. ವಿಪ್ರದಾಸನಿಗೆ ಆಗ ನೂರೈದು ಡಿಗ್ರಿಗಳಷ್ಟು ಜ್ವರ. ಎದೆಗೂ ಬೆನ್ನಿಗೂ ಸಾಸುವೆಯ ಪೋಲ್ಟೀಸ್ ಕಟ್ಟಿದ್ದರು! ಕುಮುದಿನಿಯು ಅವನ ಕಾಲಮೇಲೆ ತಲೆಯಿಟ್ಟು ಇನ್ನು ತಡೆಯಲಾಗದೆ ಬಿಕ್ಕಿ ಬಿಕ್ಕಿ ಅಳುವುದಕ್ಕೆ ಶುರುಮಾಡಿದಳು. ಕ್ಷೇಮಾ ಅತ್ತೆ ಅವಳ ಮುಖ ವನ್ನು ಕೈಯಿಂದ ಮುಚ್ಚಿ "ಛೀ ಛೀ, ಹಾಗೆಲ್ಲಾ ಅಳುತ್ತಾರೆಯೇ ಎಲ್ಲಾದರೂ, ಬೇಡಮ್ಮ" ಎಂದಳು.

ವಿಪ್ರದಾಸನು ಸ್ವಲ್ಪ ಮೇಲಕ್ಕೆದ್ದು ಕೂತು ಕುಮುವನ್ನು ಕೈಹಿಡಿದು ಹತ್ತಿರ ಕೂಡಿಸಿ ಕೊಂಡು ಅವಳ ಮುಖದ ಕಡೆ ಸ್ವಲ್ಪ ಹೊತ್ತು ಸುಮ್ಮನೆ ನೋಡುತ್ತಿದ್ದನು. ಅವನ ಕಣ್ಣು ಗಳಿಂದಲೂ ನೀರು ತುಂಬಿ ಹರಿಯಲಾರಂಭಿಸಿತು. ಕ್ಷೇಮಾ ಅತ್ತೆ "ಇನ್ನು ಮುಹೂರ್ತದ ಹೊತ್ತಾಯಿತಪ್ಪ" ಎಂದಳು.

ವಿಪ್ರದಾಸನು ಕುಮುವಿನ ತಲೆಯ ಮೇಲೆ ಕೈಯಿಟ್ಟು ರುದ್ಧ ಸ್ವರದಲ್ಲಿ "ಸರ್ವಶುಭದಾತೃವು ನಿನಗೆ ಕಲ್ಯಾಣವುಂಟುಮಾಡಲಿ." ಎಂದು ಹರಸಿ ಝಪ್ಪೆಂದು ಪುನಃ ಹಾಸುಗೆಯ ಮೇಲೆ ಒರಗಿ ದನು.

ಲಗ್ನದ ಸಮಯವೆಲ್ಲಾ ಕುಮುವಿನ ಕಣ್ಣುಗಳಿಂದ ನೀರು ಹರಿಯುತ್ತಲೇ ಇತ್ತು. ವರನ ಕೈಯಲ್ಲಿ ಕೈಯಿಟ್ಟಾಗ ಅವಳ ಕೈ ಹಿಮದಂತೆ ತಣ್ಣಗಿತ್ತು. . ಥರ ಥರ ನಡುಗುತ್ತಿತ್ತು. ಶುಭ ದೃಷ್ಟಿಯ ಸಮಯದಲ್ಲಿ ಅವಳು ಸ್ವಾಮಿಯ ಮುಖವನ್ನು ನೋಡಿದಳೆ? ಬಹುಶಃ ನೋಡಿರಲಾರಳು. ಅವರ ಇಷ್ಟು ದಿನಗಳ ನಡೆವಳಿಕೆಯಿಂದ ಅವಳಿಗೆ ಗಂಡನ ವಿಷಯದಲ್ಲಿ ಭಯ ಹುಟ್ಟಿಕೊಂಡಿತು. ಪಕ್ಷಿಯ ಮನಸ್ಸಿನಲ್ಲಿ ತನಗೆ ಕಾದಿರುವುದು ವಾಸದ ಗೂಡಲ್ಲ, ಕತ್ತಿಗೆ ಉರುಲು ಎಂದೆನ್ನಿಸಿದೆ.

ಮಧುಸೂದನನು ನೋಡಲು ಕುರೂಪಿಯಲ್ಲದಿದ್ದರೂ, ಅವನದು ಬಹಳ ಕಠಿಣ ಸ್ವರೂಪ. ಕಪ್ಪು ಮುಖದ ಮಧ್ಯೆ ಮೊದಲು ಕಣ್ಣಿಗೆ ಬೀಳುತ್ತಿದ್ದುದು ಹಕ್ಕಿಯ ಕೊಕ್ಕಿನಂತಿದ್ದ ಬಹಳ ದೊಡ್ಡ ಮೂಗು. ಅದು ಮೇಲ್ತುಟಿಯ ಮುಂದಿನವರೆಗೆ ಚಾಚಿದ್ದು ಪಹರೆ ಕಾಯುತ್ತಿರುವಂತೆ ಬಾಗಿತ್ತು. ಅಗಲವಾದ, ಉನ್ನತವಾದ ಹಣೆ, ದಟ್ಟದಾದ ಹುಬ್ಬುಗಳ ಮೇಲುಗಡೆ ಕಟ್ಟೆ ಹಾಕಲ್ಪಟ್ಟ ಪ್ರವಾಹದಂತೆ ಉಬ್ಬಿಕೊಂಡಿತ್ತು. ಅದೇ ಹುಬ್ಬುಗಳ ತಳದಲ್ಲಿ ಕಪ್ಪಾದ ಸಣ್ಣಕಣ್ಣುಗಳ ದೃಷ್ಟಿ ತೀವ್ರವಾಗಿತ್ತು. ಮೀಸೆಗಡ್ಡಗಳನ್ನು ಬೋಳಿಸಿದ್ದನು. ಚಪ್ಪಟೆಯಾದ ತುಟಿಗಳು. ಕೆನ್ನೆಗಳು ಮಾತ್ರ ತುಂಬಿಕೊಂಡಿದ್ದುವು. ತಲೆಕೂದಲು ಒರಟಾಗಿ ಕಾಫಿರ್ ಜನರ ಕೂದಲಂತೆ ಬಹಳ ಗುಂಗುರಾಗಿದ್ದುವು. ದೃಢವಾದ ಮೈಕಟ್ಟುಳ್ಳವನು. ವಯಸ್ಸಾಗಿರುವುದಕ್ಕಿಂತಲೂ ಕಡಿಮೆ ಹೇಳಬಹುದು. ಕಿವಿಗಳೆರಡರ ಪಕ್ಕದಲ್ಲಿ ಕೂದಲು ಸ್ವಲ್ಪ ನರೆತಂತಿತ್ತು. ಸ್ವಲ್ಪ ಕುಳ್ಳ. ಸುಮಾರು ಕುಮುದಿನಿಯಷ್ಟು ಎತ್ತರವಿರಬಹುದು. ಕೈಗಳೆರಡೂ ಕೂದಲಿಂದ ತುಂಬಿತ್ತು. ಮತ್ತು ದೇಹಕ್ಕೆ ತಕ್ಕಂತೆ ಮೋಟು....ಎಲ್ಲವನ್ನೂ ನೋಡಿದರೆ ಮನುಷ್ಯ ಬಹಳ ಒರಟನಂತೆ ಕಾಣುತ್ತಿದ್ದ. ತಲೆಯಿಂದ ಕಾಲಿನವರೆಗೂ ಏನೋ ಒಂದು ಪ್ರತಿಜ್ಞೆಯ ಗುರಿಯನ್ನು ಸ್ಥಿರಪಡಿಸಿಕೊಂಡಂತಿದ್ದನು. ಭಾಗ್ಯದೇವತೆಯ ತುಪಾಕಿನಿಂದ ಹೊರಬಿದ್ದು ನೇರವಾಗಿ ಗುರಿಯಕಡೆ ಹೋಗುತ್ತಿದ್ದ ಉಗ್ರವಾದ ಗೋಲಿಯಂತಿದ್ದ,.... ನೋಡಿದರೆ ವ್ಯರ್ಥವಾದ ಮಾತುಕಥೆ, ಕೆಲಸಕ್ಕೆ ಬಾರದ ವಿಚಾರ, ಮನಸ್ಸಿಗೆ ಹಿಡಿಸದ ಜನರು, ಇಂತಹ ಕಡೆ ಗಮನಕೊಡಲು ಅವನಿಗೆ ಎಳ್ಳಷ್ಟೂ ಅವಕಾಶವಿಲ್ಲ ಎಂದು ಕಾಣುತ್ತಿತ್ತು.

ಅಂತೂ ಮದುವೆ ಯಾವರೀತಿಯೋ ಆಯಿತು. ಎಲ್ಲರ ಮನಸ್ಸೂ ಕೆಟ್ಟುಹೋಗಿತ್ತು. ವರಪಕ್ಷ ಕನ್ಯಾಪಕ್ಷಗಳ ಮೊದಲನೆಯ ಸಂಸ್ಪರ್ಶದಿಂದಲೇ ಅಪಸ್ವರವೊಂದು ಹೊರಬಿದ್ದು ಉತ್ಸವದ ಸಂಗೀತವೆಲ್ಲೋ ಉಡುಗಿಹೋಯಿತು. ಮೇಲಿಂದ ಮೇಲೆ ಕುಮುವಿನ ಮನಸ್ಸಿನಲ್ಲಿ "ದೇವರು ಹಾಗಾದರೆ ನನ್ನನ್ನು ಮರೆತುಬಿಟ್ಟನೇ ?" ಎಂಬ ಪ್ರಶ್ನೆಯು ಮೂಡುತ್ತಿತ್ತು. ಸಂಶಯವನ್ನು ಪ್ರಯಾಸಪಟ್ಟು ಹಾಗೆಯೇ ತುಳಿದುಕೊಳ್ಳುವಳು. ಬಾಗಿಲು ಮುಚ್ಚಿ ಒಬ್ಬಳೇ ಕೂತು ಬಾರಿಬಾರಿಗೂ ನೆಲದಮೇಲೆ ತಲೆಯಿಟ್ಟು ಪ್ರಣಾಮಮಾಡುವಳು. "ನನ್ನ ಮನಸ್ಸು ದುರ್ಬಲವಾಗದಿರಲಿ, ದೇವರೇ" ಎಂದುಕೊಳ್ಳುವಳು. ಅಣ್ಣನ ಹತ್ತಿರ ಈ ಸಂಶಯವನ್ನು ಮರೆಮಾಚುವುದು ಬಹಳ ಕಠಿಣವಾದ ಕೆಲಸವಾಗಿತ್ತು:

ತಾಯಿಯ ಮರಣವಾದನಂತರ ಕುಮುದಿನಿಯ ಶುಶ್ರೂಷೆಯಮೇಲೆಯೇ ವಿಪ್ರದಾಸನು ಸಂಪೂರ್ಣವಾಗಿ ನಂಬಿದ್ದನು. ಬಟ್ಟೆ ಬರೆ, ಆಯಾದಿನದ ಖರ್ಚಿಗೆ ಹಣಕಾಸು, ಪುಸ್ತಕದ ಅಲಮಾರು, ಕುದುರೆಗೆ ಹುರುಳಿ, ಬಂದೂಕಿನ ಚೊಕ್ಕಟ, ನಾಯಿಯ ಸೇವೆ, ಕ್ಯಾಮರಾದ ಜೋಪಾನ,

ಸಂಗೀತದ ವಾದ್ಯಗಳನ್ನು ಸರಿಯಾಗಿಡುವಿಕೆ, ಮಲಗುವ ಮನೆ, ಕೂಡುವ ಮನೆಗಳನ್ನು ಸಜ್ಜು ಮಾಡುವಿಕೆ, ಎಲ್ಲವೂ ಕುಮುವಿನ ಕೈಯಲ್ಲೇ ಇತ್ತು. ಇದರಲೆಲ್ಲಾ ಎಷ್ಟರಮಟ್ಟಿಗೆ ಅಭ್ಯಾಸ ವಾಗಿತ್ತೆಂದರೆ ಪ್ರತಿದಿನದ ವ್ಯವಹಾರದಲ್ಲಿ ಕುಮುವಿನ ಕೈವಾಡವೆಲ್ಲೂ ಕಾಣಬರದೆ ಹೋದರೆ ಅವನಿಗೆ ನಡೆಯುವ ಹಾಗೆಯೇ ಇಲ್ಲ. ಅಂತಹ ಅಣ್ಣ ಕಾಯಿಲೆ ಮಲಗಿರುವಾಗ ಅವನನ್ನು ಕಡೆಯಸಲ ಬೀಳ್ಕೊಡುವುದಕ್ಕೆ ಮುಂಚೆ ಕೆಲವು ದಿನಗಳಾದರೂ ಮಾಡುವ ಶುಶ್ರೂಷೆಯಲ್ಲಿ ತನ್ನ ದುಶ್ಚಿಂತೆಯ ಛಾಯೆ ಯಾವುದೂ ಕಾಣಬರದಿರಲೆಂದು ಅವಳು ಎಲ್ಲಾ ಪ್ರಯತ್ನವನ್ನೂ ಮಾಡು ವಳು.

ಕುಮುವಿಗೆ ಏಸ್‌ರಾಜ್ ನುಡಿಸುವುದರಲ್ಲಿದ್ದ ಪ್ರವೀಣತೆಯನ್ನು ಕಂಡು ವಿಪ್ರದಾಸನಿಗೆ ಬಹಳ ಹೆಮ್ಮೆ. ಸಂಕೋಚ ಪ್ರಕೃತಿಯುಳ್ಳ ಕುಮು ತಾನಾಗಿ ನುಡಿಸುವುದಕ್ಕೆ ಇಷ್ಟಪಡುತ್ತಿರ ಲಿಲ್ಲ. ಈ ಎರಡು ದಿನಗಳೂ ಅವಳು ತಾನಾಗಿಯೇ ಏಸ್‌ರಾಜನ್ನು ತೆಗೆದುಕೊಂಡು ಕಾನಡಾ, ಮಾಲ್‌ಕೋಸ್ ರಾಗಗಳನ್ನು ನುಡಿಸಿ ಅಣ್ಣನನ್ನು ತೃಪ್ತಿಪಡಿಸಿದಳು. ಆ ಆಲಾಪನೆಗಳ ಮಧ್ಯೆಯೇ ಅವಳ ದೇವತೆಯ ಸ್ತುತಿ, ಅವಳ ಪ್ರಾರ್ಥನೆ. ಅವಳ ಭಯ, ಶಂಕೆಗಳು, ಅವಳ ಆತ್ಮನಿವೇದನೆ ವಿಪ್ರದಾಸನು ಕಣ್ಣುಮುಚ್ಚಿಕೊಂಡು ಸುಮ್ಮನೆ ಕೇಳುತ್ತಿದ್ದನು. ಮತ್ತು ಮಧ್ಯೆ ಮಧ್ಯೆ ಸಿಂಧು, ಬೇಹಾಗ್, ಭೈರವಿ ರಾಗಗಳನ್ನು ನುಡಿಸೆಂದು ಕೇಳುವನು,....ಆ ರಾಗಗಳ ಮಧ್ಯೆ ವಿಚ್ಛೇದ ವೇದನೆಯ ಗೋಳು ಧ್ವನಿಸುವುದು. ಈ ರಾಗಸ್ವರಗಳಲ್ಲಿ ಅಣ್ಣತಂಗಿಯರ ವ್ಯಥೆಯು ಒಂದಾಗಿ ಬೆರೆಯುತ್ತಿತ್ತು. ಬಾಯಿಮಾತಿನಲ್ಲಿ ಮಾತ್ರ ಇಬ್ಬರೂ ಏನೂ ಹೇಳಲಿಲ್ಲ. ಒಬ್ಬರಿಗೊಬ್ಬರು ಸಮಾಧಾನ ಮಾಡಿಕೊಳ್ಳಲಿಲ್ಲ. ದುಃಖ ತೋಡಿಕೊಳ್ಳಲಿಲ್ಲ.

ವಿಪ್ರದಾಸನ ಜ್ವರ, ಕೆಮ್ಮು, ಎದೆಯ ನೋವು ಕಡಿಮೆಯಾಗಲಿಲ್ಲ; ಇನ್ನೂ ಹೆಚ್ಚಾಯಿತು. ಡಾಕ್ಟರು ಬಂದು ಇನ್‌ಫ್ಲೂಯಂಜಾ ಎಂದರು. ಬಹುಶಃ ನ್ಯೂಮೋನಿಯಾಗೆ ಕೂಡ ತಿರುಗ ಬಹುದು....ಬಹಳ ಹುಷಾರಾಗಿರಬೇಕು....ಎಂದು ಎಚ್ಚರಿಕೆ ಕೊಟ್ಟರು. ಕುಮುವಿನ ಮನದ ಉದ್ವೇಗಕ್ಕೆ ಕೊನೆಯೆಲ್ಲಿ. ನಿಷೇಕ ಪ್ರಸ್ಥದ ಕಾಳರಾತ್ರಿಯನ್ನು ಇಲ್ಲಿಯೇ ಕಳೆದು ಎರಡು ದಿನ ಗಳಿಗೆ ಕಲಿಕತ್ತೆಗೆ ಹೊರಡುವುದೆಂದು ಮೊದಲು ನಿಶ್ಚಯವಾಗಿತ್ತು. ಆದರೆ ಇದ್ದಕ್ಕಿದ್ದ ಹಾಗೆ ಮಧುಸೂದನನು ಧಾರೆಯ ಮರುದಿನವೇ ಅವಳನ್ನು ಕಲಿಕತ್ತೆಗೆ ಕರೆದುಕೊಂಡುಹೋಗಬೇಕೆಂದು ಹಠತೊಟ್ಟನು. ಅವಳಿಗೆ ಅನ್ನಿಸಿತು...ಇದು ಪದ್ಧತಿಗೋಸ್ಕರವಲ್ಲ, ಪ್ರಯೋಜನಕ್ಕಾಗಿಯೂ ಅಲ್ಲ, ಪ್ರೇಮಕ್ಕಾಗಿ ಮೊದಲೇ ಅಲ್ಲ ...ಕೇವಲ ಶಿಕ್ಷೆ....ಶಿಕ್ಷೆಗೋಸ್ಕರವಾಗಿಯೇ ಎಂದು. ಇಂತಹ ಅವಸ್ಥೆಯಲ್ಲಿ ಅನುಗ್ರಹಕ್ಕಾಗಿ ಬೇಡುವುದು ಅಭಿಮಾನಶಾಲಿಯಾದ ಅವಳ ತಲೆಗೆ ಸಿಡಿಲು ಬಡಿ ದಂತೆ. ಆದರೂ ಕೂಡ ಕುಮೂ ತಲೆ ತಗ್ಗಿಸಿಕೊಂಡು, ನಾಚುಗೆಯನ್ನು ತೊರೆದು, ನಡುಗುವ ಧ್ವನಿಯಲ್ಲಿ, ಲಗ್ನದ ರಾತ್ರಿ ಗಂಡನ ಬಳಿ, ಇನ್ನೆರಡು ದಿನಗಳು ತನ್ನನ್ನು ತಂದೆಯ ಮನೆಯಲ್ಲಿಯೇ ಇರಲು ಬಿಡಬೇಕೆಂದೂ, ಅಣ್ಣನಿಗೆ ಸ್ವಲ್ಪ ವಾಸಿಯಾದುದನ್ನು ನೋಡಿ ಹೊರಡುವುದಾಗಿಯೂ ಪ್ರಾರ್ಥನೆ ಮಾಡಿಕೊಂಡಳು.

ಮಧುಸೂದನನು ಸಂಕ್ಷೇಪವಾಗಿ "ಎಲ್ಲಾ ಏರ್ಪಾಡಾಗಿ ಹೋಗಿದೆ" ಎಂದನು. ಎಂತಹ ವಜ್ರದಂತೆ ಕಠಿಣವಾದ ಏರ್ಪಾಡು....! ಅದರ ಮಧ್ಯೆ ಕುಮುವಿನ ಮರ್ಮಾಂತಿಕ ವೇದನೆಗೆ ಕೂಡ ಎಳ್ಳಷ್ಟೂ ಜಾಗವಿಲ್ಲ. ಅನಂತರ ಆ ರಾತ್ರಿ ಮಧುಸೂದನನು ಅವಳನ್ನು ಮಾತನಾಡಿಸಲು

ಪ್ರಯತ್ನಪಟ್ಟನು. ಅವಳು ಯಾವ ಜವಾಬನ್ನೂ ಕೊಡಲಿಲ್ಲ. ಹಾಸುಗೆಯ ಮೇಲೆ ಮುಖ ತಿರುಗಿಸಿಕೊಂಡು ಮಲಗಿದ್ದಳು....ಇನ್ನೂ ಕತ್ತಲು ಕತ್ತಲಾಗಿದ್ದಾಗಲೇ, ಮೊದಲ ಕಾಗೆಯ ಕೂಗು ಕೇಳಿದೊಡನೆಯೇ ಎದ್ದು ಹೊರಟುಹೋದಳು.

ವಿಪ್ರದಾಸನು ರಾತ್ರಿಯೆಲ್ಲಾ ನರಳುತ್ತಿದ್ದನು. ಸಾಯಂಕಾಲ ಜ್ವರದಲ್ಲಿಯೇ ಲಗ್ನಮಂಟಪಕ್ಕೆ ಹೋಗಬೇಕೆಂದು ಆತುರಪಟ್ಟನು. ಡಾಕ್ಟರು ಬಹಳವಾಗಿ ಹೇಳಿ ತಡೆದರು....ಒಬ್ಬರಾದ ಮೇಲೆ ಒಬ್ಬರನ್ನು ಕಳುಹಿಸಿ ಸಮಾಚಾರ ತಿಳಿದುಕೊಳ್ಳುತ್ತಿದ್ದನು....ಸಮಾಚಾರವೆಲ್ಲಾ ಯುದ್ಧದಲ್ಲಿ ಪ್ರಕಟವಾಗುವ ಸುದ್ದಿಯಂತೆಯೇ....ಹೆಚ್ಚುಭಾಗ ಕಲ್ಪಿತ...ವಿಪ್ರದಾಸನು "ವರ ಯಾವಾಗ ಬಂದಿದ್ದು...?ಓಲಗದ ಶಬ್ದವೇ ಕೇಳುವುದಿಲ್ಲವಲ್ಲ?" ಎಂದು ಕೇಳಿದನು.

ಸಮಾಚಾರ ತಂದ ಶಿವೂ "ಅಳಿಯಂದಿರು ಬಹಳ ಬುದ್ಧಿಶಾಲಿಗಳು....ಮನೆಯಲ್ಲಿ ಕಾಯಿಲೆಯವರು ಇರುವರೆಂದು ತಿಳಿದು ಎಲ್ಲಾ ನಿಲ್ಲಿಸಿಬಿಟ್ಟರು. ಗಂಡಿನ ಕಡೆಯವರ ಕಾಲು ಸಪ್ಪಳ ಕೂಡ ಕೇಳಬರದಿರುವಷ್ಟು ನಿಶ್ಶಬ್ದ" ಎಂದನು.

"ಲೋ ಶಿವೂ, ಊಟದ ಪದಾರ್ಥಗಳೆಲ್ಲಾ ಸರಿಹೋದುವೇನೋ, ನನಗೆ ಅದೇ ಯೋಚನೆಯಾಗಿತ್ತು—ಇದೇನು ಕಲಿಕತ್ತೆಯಲ್ಲ ನೋಡು."

"ಸರಿಹೋಗುವುದೇ....ಏನು ಹೇಳೋಣ....ಧಣಿಗಳೇ, ಎಷ್ಟು ತಿಂದು ಬಿಸಾಟದ್ದು, ಏನು ಕಥೆ! ಇನ್ನೂ ಅಷ್ಟು ಜನಕ್ಕೆ ಮಾಡಿ ಬಡಿಸುವಷ್ಟು ಸಾಮಾನುಗಳು ಉಳಿದುಹೋಗಿವೆ."

"ಅವರೆಲ್ಲಾ ತೃಪ್ತಿಯಾದರು ತಾನೆ?"

"ಯಾರಿಂದಲೂ ಒಂದಿಷ್ಟು ದೂರು ಇಲ್ಲ. ಯಾರೂ ಆಕ್ಷೇಪಣೆ ಮಾಡಲಿಲ್ಲ....ತುಟಿಪಿಟಕ್ಕೆನ್ನಲಿಲ್ಲ....ನಾನೂ ಎಷ್ಟೋ ಮದುವೆಗಳನ್ನು ನೋಡಿದ್ದೀನಿ. ಗಂಡಿನ ಕಡೆಯವರ ಆರ್ಭಟದಿಂದ ಹೆಣ್ಣಿನ ಕಡೆಯವರು ಹುಚ್ಚಾಗಿಬಿಡುತ್ತಾರೆ. ಆದರೆ ಇವರುಗಳೋ....ಎಷ್ಟು ನಿಶ್ಶಬ್ದ....ಏನು ಕಥೆ....ಅವರು ಇದ್ದಾರೋ ಇಲ್ಲವೋ ಅನ್ನಿಸುತ್ತೆ."

"ಅವರು ಕಲಿಕತ್ತೆಯವರು ಅಲ್ಲವೇನೋ? ಆದುದರಿಂದಲೇ ಗೌರವಸ್ಥರ ನಡೆವಳಿಕೆ ಗೊತ್ತು, ಹೆಣ್ಣು ತಂದ ಮನೆಗೆ ಅವಮಾನವಾದರೆ ತಮಗೂ ಅವಮಾನ ಅಂತ ಅವರಿಗೆ ಗೊತ್ತಿರುತ್ತೆ."

"ಆಹಾ....ಧಣಿಗಳು ಹೇಳಿದ ಮಾತನ್ನು ಅವರ ಕಡೆಯವರಿಗೆ ಹಾಗೇ ಕಿವಿಗೆ ಹಾಕುತ್ತೇನೆ. ಕೇಳಿ ನಿಜವಾಗಿ ಖುಷಿಯಾಗುತ್ತೆ ಅವರಿಗೆ."

* * * *

ಕುಮು ಹಿಂದಿನ ಸಂಜೆಯೇ ಅಣ್ಣನಿಗೆ ಕಾಯಿಲೆ ಹೆಚ್ಚಾಗುವ ಹಾಗಿದೆಯೆಂದು ಹೆದರಿದ್ದಳು. ಅಷ್ಟಾದರೂ ತಾನು ಅಣ್ಣನ ಸೇವೆ ಮಾಡಲಾಗುವುದಿಲ್ಲವಲ್ಲ ಎಂಬ ದುಃಖ ಸರ್ವದಾ ಅವಳ ಎದೆಯಲ್ಲಿ ಪಂಜರದಲ್ಲಿ ಸಿಕ್ಕಿಬಿದ್ದ ಹಕ್ಕಿಯಂತೆ ತಳಮಳಿಸುತ್ತಿತ್ತು. ಅವಳ ಕೈಯ ಶುಶ್ರೂಷೆ ಅಣ್ಣನಿಗೆ ಔಷಧಿಗಿಂತಲೂ ಹೆಚ್ಚು ಫಲಕಾರಿಯೆಂದು ಅವಳಿಗೆ ಗೊತ್ತು.

ಸ್ನಾನಮಾಡಿ ದೇವರಿಗೆ ಹೂವು ಸಮರ್ಪಿಸಿ ಕುಮು ಅಣ್ಣನ ಕೋಣೆಗೆ ಬಂದಾಗ ಸೂರ್ಯನಿನ್ನೂ ಹುಟ್ಟಿರಲಿಲ್ಲ. ಕಠಿಣ ರೋಗದೊಡನೆ ಬಹಳಹೊತ್ತು ಹೋರಾಡಿ ಕ್ಷಣಕಾಲ ಪುರು

ಸೊತ್ತು ಪಡೆಯುವಾಗ ನಿತ್ರಾಣದ ವೈರಾಗ್ಯ ಬರುತ್ತದೆ. ಅಂತಹ ವೈರಾಗ್ಯದಿಂದ ವಿಪ್ರದಾಸನ ಮನಸ್ಸು ಆಗ ಶಿಥಿಲವಾಗಿತ್ತು. ಬದುಕಿನಲ್ಲಿ ಆಸಕ್ತಿ, ಸಂಸಾರದ ಯೋಚನೆ ಎಲ್ಲಾ ಅವನ ದೃಷ್ಟಿಯಲ್ಲಿ ಹಸುರಿಲ್ಲದ ಬಂಜರು ಭೂಮಿಯಂತೆ ಮಂಕುಮಂಕಾಗಿತ್ತು.

ರಾತ್ರಿಯೆಲ್ಲಾ ಬಾಗಿಲು ಮುಚ್ಚಿತ್ತು. ಡಾಕ್ಟರು ಬೆಳಕು ಹರಿಯುವ ಮುಂಚೆಯೇ ಪೂರ್ವ ದಿಕ್ಕಿನ ಕಿಟಕಿಯ ಬಾಗಿಲನ್ನು ತೆಗೆದಿದ್ದರು. ಅಶ್ವತ್ಥಮರದ ಮಂಜಿನಲ್ಲಿ ಮಿಂದ ಎಲೆಗಳ ಮರೆಯಿಂದ ಕೆಂಪಡರಿದ ಆಕಾಶದ ಬೆಳಕು ನಿದಾನವಾಗಿ ಬಿಳುಪಾಗುತ್ತಿತ್ತು...,.ಅನತಿ ದೂರದಲ್ಲಿ ಹರಿಯುತ್ತಿದ್ದ ನದಿಯಲ್ಲಿ ವ್ಯಾಪಾರಿಗಳ ನೌಕೆಗಳ ಧ್ವಜಪಟಗಳು ಆ ಕೆಂಪೇರಿದ ಆಕಾಶದ ಬೆಳಕಿನಲ್ಲಿ ಉಬ್ಬಿಕೊಂಡಿದ್ದುವು. ನೌಬತ್‌ಖಾನೆಯಿಂದ ಕರುಣಾಸ್ವರದಲ್ಲಿ ರಾಮ್‌ಕೇಲಿ ಬಾರಿಸುವುದು ಕೇಳಬರುತ್ತಿದೆ.

ಪಕ್ಕದಲ್ಲಿ ಕೂತು ಕುಮೂ ತನ್ನ ತಣ್ಣಗಿರುವ ಎರಡು ಕೈಗಳಲ್ಲೂ ಅಣ್ಣನ ಸುಡುವ ಕೈಯನ್ನು ಹಿಡಿದುಕೊಂಡಳು. ವಿಪ್ರದಾಸನ ಸಾಕುನಾಯಿ ಮಂಚದ ಕೆಳಗೆ ಉದಾಸಭಾವದಲ್ಲಿ ಸುಮ್ಮನೆ ಮಲಗಿತ್ತು. ಕುಮು ಮಂಚದ ಮೇಲೆ ಬಂದು ಕೂತಾಗ ಅದು ಎದ್ದು ನಿಂತು ಎರಡು ಕಾಲುಗಳನ್ನೂ ತೊಡೆಯ ಮೇಲಿಟ್ಟು ಬಾಲವಾಡಿಸುತ್ತಾ ಕರುಣಾದೃಷ್ಟಿಯಿಂದ ಕ್ಷೀಣವಾದ ಆರ್ತಸ್ವರ ಮಾಡುತ್ತಾ ಅವಳನ್ನೇನೋ ಪ್ರಶ್ನೆಮಾಡುವಂತೆ ನೋಡಿತು.

ವಿಪ್ರದಾಸನ ಮನಸ್ಸಿನಲ್ಲಿ ಒಳಗೊಳಗೇ ಯಾವುದೋ ಒಂದು ಚಿಂತೆಯ ಸುಳಿಯುಂಟಾಗಿತ್ತು. ಅದರಿಂದಲೇ ಹಠಾತ್ತಾಗಿ, ಅಸಂಬದ್ಧವಾದ ಯಾವುದೋ ಯೋಚನೆಯ ಜಾಡಿನಲ್ಲಿ "ಮಗೂ, ಒಟ್ಟಿನಲ್ಲಿ ಯಾವುದೂ ಇಲ್ಲ....ಯಾರು ದೊಡ್ಡವರು....ಯಾರು ಚಿಕ್ಕವರು....ಯಾರು ಮೇಲು....ಯಾರು ಕೀಳು....ಇವೆಲ್ಲಾ ಕಲ್ಪಿತ ಕಥೆ....ನೊರೆಯ ಗುಳ್ಳೆಗಳಲ್ಲಿ ಯಾವುದರ ಸ್ಥಾನ ಎಲ್ಲಿ ಎನ್ನುವುದರಿಂದ ಬರುವುದಾದರೂ ಏನು, ನಿನ್ನ ಮನಸ್ಸಿನಲ್ಲಿ ನೀನು ಸಹಜವಾಗಿದ್ದುಬಿಡು, ಯಾವುದರಿಂದಲೂ ನಿನಗೆ ಘಾಸಿಯಾಗುವುದಿಲ್ಲ."

"ನನಗೆ ಆಶೀರ್ವಾದ ಮಾಡಣ್ಣಾ....ನನಗೆ ಆಶೀರ್ವಾದ ಮಾಡು." ಎಂದು ಕುಮೂ ಎರಡು ಕೈಗಳಿಂದಲು ಮುಖ ಮುಚ್ಚಿಕೊಂಡು ಅಳು ತಡೆದುಕೊಂಡಳು. ವಿಪ್ರದಾಸನು ದಿಂಬಿಗೆ ಒರಗಿಕೊಂಡು ಸ್ವಲ್ಪ ಎದ್ದುಕೂತು ಅವಳ ಮುಖವನ್ನು ತಗ್ಗಿಸಿ ಹಿಡಿದುಕೊಂಡು ಅವಳ ಹಣೆಯನ್ನು ಚುಂಬಿಸಿದನು. ಡಾಕ್ಟರನ್ನು ಕೋಣೆಯೊಳಗೆ ಪ್ರವೇಶಿಸಿ "ಇನ್ನು ಸಾಕಮ್ಮಾ....ಕುಮುದಿನಿ....ಅವರಿಗೆ ವಿಶ್ರಾಂತಿ ಕೊಡುವುದು ಅವಶ್ಯಕ." ಎಂದರು.

ಕುಮು ರೋಗಿಯ ದಿಂಬನ್ನು ಸ್ವಲ್ಪ ಸರಿಯಾಗಿಟ್ಟು ಮೈಮೇಲೆ ಕಂಬಳಿಯನ್ನು ಸರಿಯಾಗಿ ಹೊದಿಸಿ ಪಕ್ಕದಲ್ಲಿನ ಟೀಪಾಯಿಯ ಅವ್ಯವಸ್ಥೆಯನ್ನ ಸರಿಮಾಡಿ ಅಣ್ಣನ ಕಿವಿಯ ಬಳಿ ಮೃದುಸ್ವರದಲ್ಲಿ "ವಾಸಿಯಾದಮೇಲೆ ಕಲಿಕತ್ತೆಗೇ ಬಂದುಬಿಡಣ್ಣ. ಅಲ್ಲಿ ನಾನು ನಿನ್ನನ್ನು ನೋಡುತ್ತಿರಬಹುದು." ಎಂದಳು.

ವಿಪ್ರದಾಸನು ತನ್ನ ದೊಡ್ಡದೊಡ್ಡ ಸ್ನಿಗ್ಧವಾದ ಕಣ್ಣುಗಳನ್ನು ಕುಮುವಿನ ಮುಖದ ಕಡೆ ಅರಳಿಸಿ "ಪಶ್ಚಿಮದ ಮೇಘ ಪೂರ್ವದ ಕಡೆ ಹೋಗುತ್ತೆ. ಪೂರ್ವದ ಮೇಘ ಹಾಗೆಯೇ ಪಶ್ಚಿಮಕ್ಕೆ....ಸಂಸಾರದಲ್ಲೂ ಅದೇ ಗಾಳಿಯೇ ಬೀಸುತ್ತದೆ. ಮೇಘ ಹೇಗೆ ಸೈರಿಸುತ್ತದೆಯೋ ನೀನೂ ಹಾಗೆ ಇದನ್ನು ಸೈರಿಸಿಕೊಳ್ಳಮ್ಮಾ....ಇನ್ನು ಮೇಲೆ ನಮ್ಮಗಳ ವಿಷಯವಾಗಿ ಹೆಚ್ಚು ಯೋಚಿಸ

ಬೇಡ. ನೀನು ಹೋಗುತ್ತಿರುವ ಕಡೆಯೇ ಲಕ್ಷ್ಮಿಯ ಪೀಠವನ್ನು ಸೃಷ್ಟಿಸಿಟ್ಟುಕೋ. ಇದೇ ಮನಃಪೂರ್ವಕವಾದ ಹರಕೆ. ನಿನ್ನಿಂದ ನಾನು ಬೇರೆ ಯಾವುದೂ ಬೇಡುವುದಿಲ್ಲ."

ಅಣ್ಣನ ಕಾಲ ಬಳಿಯೇ ಕುಮು ತಲೆಯಿಟ್ಟು ಹಾಗೆಯೇ ಬಿದ್ದಿದ್ದಳು...." ಇಂದಿನಿಂದ ನನ್ನ ಹತ್ತಿರ ಇವರು ಬಯಸಬೇಕಾದುದೇನೂ ಇಲ್ಲ....ಇಲ್ಲಿನ ನಿತ್ಯದ ಬಾಳಿನ ಯಾತ್ರೆಯಲ್ಲಿ ನನ್ನ ಕೈವಾಡ ಏನೂ ಇರುವುದಿಲ್ಲ." ಒಂದೇ ಕ್ಷಣದಲ್ಲಿ ಇಷ್ಟು ದೊಡ್ಡ ವಿಚ್ಛೇದದ ಮಾತನ್ನು ಮನಸ್ಸಿನಲ್ಲಿ ಹೇಗೆ ತಾನೇ ಒಪ್ಪಿಕೊಳ್ಳುವುದು....? ಬಿರುಗಾಳಿಯು ನೌಕೆಯನ್ನು ದಡದಿಂದ ಬಲವಾಗಿ ಎಳೆದುಕೊಂಡು ಹೋಗುವಾಗ ಲಂಗರು ಮಣ್ಣನ್ನು ಕಟ್ಟಿಕೊಂಡು ಇರಲು ಬಯಸುವಂತೆ ಅಣ್ಣನ ಕಾಲಬಳಿ ಕುಮುವು ಕಟ್ಟಕಡೆಯ ವ್ಯಗ್ರತೆಯಲ್ಲಿ ಬಲವಾಗಿ ಬಂಧಿಸಲ್ಪಟ್ಟಿದ್ದಳು.

ಡಾಕ್ಟರು ಮತ್ತೊಮ್ಮೆ ಬಂದು ನಿದಾನವಾಗಿ " ಇನ್ನು ಸಾಕಮ್ಮಾ, ಕುಮು" ಎಂದನು. ಹೀಗೆ ಹೇಳಿ ತಾನೇ ನೀರು ತುಂಬಿದ ತನ್ನ ಕಣ್ಣನ್ನು ಒರೆಸಿಕೊಂಡನು. ಕೋಣೆಯಿಂದ ಹೊರಗೆ ಹೊರಟು ಕುಮುದಿನಿಯು ಬಾಗಿಲ ಹೊರಗೆ ಇದ್ದ ಕುರ್ಚಿಯ ಮೇಲೆ ಕೂತು ಸೆರಗಿನಿಂದ ಮುಖ ಮುಚ್ಚಿಕೊಂಡು ಅಳಲಾರಂಭಿಸಿದಳು. ಇದ್ದಕ್ಕಿದ್ದ ಹಾಗೆ ಒಂದು ಬಾರಿ 'ಬೆಸ್ಸಿ' ಎಂಬ ಕುದುರೆಗೆ ಕೊನೆಯ ಸಲ ತಿನ್ನಿಸಿಹೋಗಬೇಕೆಂಬ ಆಸೆಯಿಂಧ ಹಿಂದಿನದಿನ ಹಿಟ್ಟು ಮತ್ತು ಬೆಲ್ಲದಲ್ಲಿ ರೊಟ್ಟಿ ಮಾಡಿಟ್ಟಿದ್ದುದು ಜ್ಞಾಪಕಕ್ಕೆ ಬಂದು ಲಾಯದಕಡೆ ಅವಸರವಸರವಾಗಿ ಹೋದಳು. ಲಾಯದ ಆಳು ಅಂದು ಮುಂಜಾನೆಯೇ ಹಿತ್ತಲಿನ ತೋಟದಲ್ಲಿ ಕಟ್ಟಿ ಬಂದಿದ್ದನು. ಕುಮು ಅಲ್ಲಿಗೆ ಹೋದಾಗ ಅದು ಆಲದ ಮರದ ಬುಡದಲ್ಲಿ ಹುಲ್ಲು ಮೇಯುತ್ತಿತ್ತು. ದೂರದಿಂದ ಕುಮುವಿನ ಕಾಲಸಪ್ಪಳ ಕೇಳಿ ಕಿವಿಗಳನ್ನು ನಿಮಿರಿಸಿಕೊಂಡು ಅವಳ ಕಡೆ ನೋಡಿ 'ಚಿಂಹೀ....ಚಿಹೀ....' ಎಂದು ಕೆನೆಯುತ್ತಾ ಓಡಿ ಬಂದಿತು. ಕುಮೂ ಎಡಕ್ಕೈಯನ್ನು ಅದರ ಹೆರಳಮೇಲಿಟ್ಟು ಬಲಗೈಯಿಂದ ರೊಟ್ಟಿಯನ್ನು ಅದರ ಬಾಯಿಯ ಹತ್ತಿರ ಹಿಡಿದು ತಿನ್ನಿಸುವುದಕ್ಕೆ ಆರಂಭಿಸಿದಳು. ಅದು ತಿನ್ನುತ್ತಾ ತಿನ್ನುತ್ತಾ ತನ್ನ ದೊಡ್ಡ ದೊಡ್ಡ ಕಪ್ಪಾದ ಸ್ನಿಗ್ಧ ನೇತ್ರಗಳಿಂದ ಕುಮುವಿನ ಮುಖದ ಕಡೆ ನೋಡುತ್ತಾ ಇತ್ತು. ಎಲ್ಲಾ ತಿಂದಾದನಂತರ ಬೆಸ್ಸಿಯ ಕಣ್ಣುಗಳ ಮಧ್ಯದ ಪ್ರಶಸ್ತವಾದ ಹಣೆಯ ಮೇಲೆ ಮುದ್ದಿಟ್ಟು ಕುಮು ಓಡಿಬಂದುಬಿಟ್ಟಳು.

## ಹದಿನೆಂಟನೆಯ ಅಧ್ಯಾಯ

ವಿಪ್ರದಾಸನ ಮನಸ್ಸಿನಲ್ಲಿ ಮಧುಸೂದನನು ಈ ನಾಲ್ಕುದಿನಗಳಲ್ಲಿ ಎಂದಾದರೂ ತನ್ನನ್ನು ನೋಡಿಕೊಂಡು ಹೋಗಲು ಬರುವನೆಂದು ನಿಶ್ಚಯಮಾಡಿಕೊಂಡಿದ್ದನು. ಯಾವಾಗ ಅವನು ಬರುವುದಿಲ್ಲವೆಂದು ಖಂಡಿತವಾಯಿತೋ ಆಗ ತಮ್ಮ ಎರಡು ಪರಿವಾರಗಳ ಈ ವಿವಾಹದ ಸಂಬಂಧವಾಗಿಯೇ ಪರಸ್ಪರ ವಿಚ್ಛೇದದ ಖಡ್ಗವೂ ತಯಾರಾಗಿಹೋಗಿರುವುದೆಂದು ಅರಿತನು. ರೋಗದಿಂದ ಅತ್ಯಂತ ನಿಶ್ಶಕ್ತಿಯಾಗಿದ್ದಾಗ ಕೂಡ ಈ ಹೊಸ ಆಘಾತವನ್ನು ಸಹಜಭಾವದಲ್ಲಿಯೇ ಸ್ವರಿಸಿದನು. ಡಾಕ್ಟರನ್ನು ಕರೆದು " ಸ್ವಲ್ಪ ಏಸ್‌ರಾಜ್ ಬಾರಿಸಬಹುದೆ?"ಎಂದು ಕೇಳಿದನು. ಡಾಕ್ಟರು " ಇವತ್ತು ಬೇಡ" ಎಂದನು.

" ಹಾಗಾದರೆ ಕುಮುವನ್ನು ಕೂಗಿ. ಅವಳು ನುಡಿಸಲಿ. ಯಾರಿಗೆ ಗೊತ್ತು....ಇನ್ನು ಮತ್ತೆ

ಅವಳು ನುಡಿಸುವುದನ್ನು ಕೇಳುತ್ತೇನೋ ಇಲ್ಲವೋ ?"

ಡಾಕ್ಟರು "ಇವತ್ತು ಬೆಳಿಗ್ಗೆ ಒಂಬತ್ತರ ಗಾಡಿಯಲ್ಲಿ ಅವರೆಲ್ಲಾ ಹೊರಡಬೇಕಾಗಿದೆ. ಇಲ್ಲದೆ ಹೋದರೆ ಸಂಜೆಗೆ ಮುಂಚೆಯೇ ಕಲಿಕತ್ತೆಯನ್ನು ತಲುಪಲು ಸಾಧ್ಯವಿಲ್ಲ. ಕುಮುವಿಗೆ ಇನ್ನು ಪುರಸೊತ್ತಿಲ್ಲ" ಎಂದನು.

ವಿಪ್ರದಾಸನು ನಿಟ್ಟುಸಿರು ಬಿಟ್ಟು "ಹೌದು....ಅವಳಿಗೆ ಇನ್ನು ಸಮಯವಿಲ್ಲ. ಹತ್ತೊಂಬತ್ತು ವರುಷಗಳೂ ಇಲ್ಲಿ ಕಳೆದಿದ್ದಾಯಿತು. ಇನ್ನು ಒಂದು ಗಂಟೆಕೂಡ ಹೆಚ್ಚು ಕಳೆಯಬೇಕಾಗಿಲ್ಲ."

ಬೀಳ್ಕೊಡುವ ಸಮಯ ಗಂಡಹೆಂಡಿರಿಬ್ಬರೂ ಜತೆಯಾಗಿ ಪ್ರಣಾಮ ಮಾಡಲು ಬಂದರು. ಮಧುಸೂದನನು ಮರ್ಯಾದೆ ತೋರುವ ನೆಪದಲ್ಲಿ "ನಿಮ್ಮ ಮೈ ಸ್ವಸ್ಥವಿದ್ದಹಾಗೆ ಕಾಣುವುದಿಲ್ಲ ವಲ್ಲ ?" ಎಂದನು. ವಿಪ್ರದಾಸನು ಅವನಿಗೇನೂ ಉತ್ತರ ಕೊಡದೆ "ದೇವರು ನಿಮಗೆ ಮಂಗಳ ಮಾಡಲಿ" ಎಂದು ಆಶೀರ್ವಾದ ಮಾಡಿದನು.

"ಅಣ್ಣಾ, ನಿನ್ನ ಮೈ ಹುಷಾರಾಗಿ ನೋಡಿಕೋಬೇಕು." ಎಂದು ಮತ್ತೊಮ್ಮೆ ಅವನ ಕಾಲ ಮೇಲೆ ಮುಖವಿಟ್ಟು ಕುಮು ಅತ್ತಳು.

ಹುಲುಧ್ವನಿ, ಶಂಖಧ್ವನಿ, ತಮಟೆ, ತುತೂರಿ, ಕಹಳೆ, ನೌಬತ್ತು ಮುಂತಾದ ವಾದ್ಯಗಳೆಲ್ಲಾ ಒಟ್ಟಿಗೇ ಮೊಳಗಿ ಶಬ್ದದ ಸುಂಟರಗಾಳಿಯೇ ಅಂತರಿಕ್ಷದಲ್ಲಿ ಊರಿತು. ಅವರುಗಳು ಪ್ರಯಾಣ ಮಾಡಿದರು.

ಗಂಡ ಹೆಂಡಿರು ಸೆರಗು ಅಂಗವಸ್ತ್ರದ ತುದಿಗಳ ಗಂಟು ಹಾಕಿಕೊಂಡು ಹೊರಟುಹೋಗುತ್ತಿದ್ದ ಆ ದೃಶ್ಯವಿಂದು, ಯಾಕೋ ಯಾರಿಗೆ ಗೊತ್ತು, ವಿಪ್ರದಾಸನಿಗೆ ಬೀಭತ್ಸವಾಗಿ ಕಂಡಿತು. ತೈಮೂರ್, ಚಂಗೀಸ್‌ಖಾನ್ ಮುಂತಾದ ಪ್ರಾಚೀನ ಇತಿಹಾಸದ ವೀರರು ಲೆಕ್ಕವಿಲ್ಲದಷ್ಟು ಮನುಷ್ಯರ ಮೂಳೆಗಳ ಸ್ತಂಭಗಳನ್ನು ರಚಿಸಿದ್ದರು. ಆದರೆ ಈ ಸೆರಗು ಅಂಗವಸ್ತ್ರಗಳ ಗಂಟು ಅದರಿಂದ ಸೃಷ್ಟಿಯಾಗುವ ಜೀವನ - ಮೃತ್ಯುವಿನ ಜಯತೋರಣವನ್ನು ಒಂದು ಪಕ್ಷ ಅಳೆಯುವುದಾದರೆ ಅದರ ತುದಿ ಯಾವ ನರಕದಲ್ಲಿ ಹೋಗಿ ಮುಟ್ಟುತ್ತದೋ ? ಆದರೆ ಇಂದೇನು ಇಂತಹ ಭಾವನೆ ಬಂತು ಅವನ ಮನಸ್ಸಿಗೆ ?

ಪೂಜಾರ್ಚನೆಯಲ್ಲಿ ವಿಪ್ರದಾಸನಿಗೆ ಎಂದೂ ಉತ್ಸಾಹವಿರಲಿಲ್ಲ. ಆದರೂ ಇಂದು ಕೈ ಜೋಡಿಸಿ ಮನಸ್ಸಿನಲ್ಲಿಯೇ ಪ್ರಾರ್ಥನೆ ಮಾಡಲು ತೊಡಗಿದನು. ಒಂದುಸಲ ಚಮಕಿತನಾಗಿ ಎದ್ದು ಕೂತು "ಡಾಕ್ಟರೇ,..ದಿವಾನರನ್ನು ಕರೆಯಿರಿ ಮತ್ತೆ...." ಎಂದನು.

ವಿಪ್ರದಾಸನಿಗೆ ಹಠಾತ್ತಾಗಿ ನೆನಪಾಯಿತು. ಮದುವೆಗೆ ಈ ಊರಿಗೆ ಬರಲು ಸ್ವಲ್ಪದಿನಗಳ ಮುಂದೆ ತಮ್ಮ ಸುಬೋಧನಿಗೆ ಹಣ ಕಳುಹಿಸುವ ಬಗ್ಗೆ ಮನಸ್ಸಿನಲ್ಲಿ ದುಗಡವಾಗಿ ಕಾಗದ ಪತ್ರಗಳನ್ನು ತಿರುವಿ ಹಾಕುತ್ತಿದ್ದಾಗ ಹನ್ನೊಂದು ಘಂಟೆ ಹೊಡೆಯಿತು—ಆ ಸಮಯದಲ್ಲಿ ಅತ್ಯಂತ ಕೊಳಕು ಮತ್ತು ಅವ್ಯವಸ್ಥೆಯಲ್ಲಿದ್ದ ಒಬ್ಬ ಮನುಷ್ಯ ಎದುರಿಗೆ ಬಂದು ನಿಂತಿದ್ದ, ಬಹಳ ದಿನಗಳಿಂದ ಮುಖಕ್ಷೌರ ಮಾಡದೆಯಿದ್ದ ಗಡ್ಡಮೀಸೆಗಳ ಕೃಶವಾದ ಮುಖ, ಎಲಬುಗಳು ನರಗಳು ಕಾಣಿಸುವ ಕೈ ಕಾಲುಗಳು,...ಕೊಳಕಾದ ಒಂದು ಅಂಗವಸ್ತ್ರ, ಹರಿದು ಚಿಂದಿಯಾದ ಧೋತರವುಟ್ಟು, ಕಿತ್ತುಹೋದ ಹಳೆಯ ಮೆಟ್ಟನ್ನು ಕಾಲಲ್ಲಿ ತೊಟ್ಟು ನಿಂತಿದ್ದ. ನಮಸ್ಕಾರ ಮಾಡಿ "ಯಜಮಾನರಿಗೆ ಜ್ಞಾಪಕವಿದೆಯೇ ?" ಎಂದು ಕೇಳಿದ.

ವಿಪ್ರದಾಸನು ಸ್ವಲ್ಪಹೊತ್ತು ನಿಟ್ಟಿಸಿನೋಡಿ "ಯಾರು, ವೈಕುಂಠನೇನು?" ಎಂದನು.

ವಿಪ್ರದಾಸನು ಹುಡುಗನಾಗಿದ್ದಾಗ ಓದುತ್ತಿದ್ದ ಶಾಲೆಯ ಕಟ್ಟಡಕ್ಕೆ ಸೇರಿದಂತೆ ಇದ್ದ ಒಂದು ಸಣ್ಣ ಹಳೆಯ ಮನೆಯಲ್ಲಿ ಇದೇ ವೈಕುಂಠನು ಶಾಲೆಯ ಹುಡುಗರಿಗೆ ಬೇಕಾದ ನೋಟ್ ಪುಸ್ತಕಗಳು, ಪೇನಾ ಪೆನ್ಸಿಲ್, ಚೆಂಡು, ದಾಂಡು—ಮತ್ತು ಜೊತೆಯಲ್ಲಿ ಕಡಲೆಪುರಿ, ನೆಲಗಡಲೆ ಕಾಯಿ ಮುಂತಾದುವುಗಳನ್ನು ಮಾರುತ್ತಿದ್ದನು. ಅವನ ಮನೆಯಲ್ಲಿ ದೊಡ್ಡ ಹುಡುಗರು ಸಭೆ ಸೇರುತ್ತಿದ್ದರು....ವಿಧವಿಧವಾದ ಅದ್ಭುತ ಕಥೆಗಳನ್ನು ಹೆಣೆದು ಹೇಳುವುದರಲ್ಲಿ ವೈಕುಂಠನಿಗೆ ಸಮಾನರಾರೂ ಇರಲಿಲ್ಲ ಆಗ.

ವಿಪ್ರದಾಸನು ಅವನನ್ನು ನೋಡಿ "ನಿನಗೆ ಇಂತಹ ಅವಸ್ಥೆಯಾಕಾಯಿತು?" ಎಂದನು.

ಕೆಲವು ವರ್ಷಗಳ ಹಿಂದೆ ಚೆನ್ನಾಗಿ ಸ್ಥಿತಿಗತಿಗಳಿದ್ದ ಸಂಪನ್ನರ ಮನೆಗೆ ಮಗಳನ್ನು ಕೊಟ್ಟು ಮದುವೆ ಮಾಡಿದ್ದ. ಅವರಿಗೆ ವರದಕ್ಷಿಣೆಯೇನೂ ಅಷ್ಟಾಗಿ ಆವಶ್ಯಕವಿಲ್ಲದಿದ್ದ ಕಾರಣ ವರೋಪಚಾರ ಮಾತ್ರ ಸ್ವಲ್ಪ ಹೆಚ್ಚಾಗಿಯೇ ಆಗಬೇಕಾಯಿತು. ಸಾವಿರದಿನ್ನೂರು ರೂಪಾಯಿಗಳವರೆಗೂ ಅವರಿಗೆ ಬೇಕಾದ ಸಾಮಾನುಗಳಲ್ಲದೆ ಎಂಭತ್ತು ತೊಲಾ ಬಂಗಾರದ ನಗಗಳು—ಇಷ್ಟು ಕೇಳಿದಾಗ ಇದ್ದುದೊಂದು ಮಗಳಲ್ಲಾ ಎಂದು ಎಷ್ಟೇ ಕಷ್ಟವಾದರೂ ಒಪ್ಪಿಕೊಂಡಿದ್ದ. ಒಂದೇಸಲಕ್ಕೆ ಅಷ್ಟು ಹಣ ಕೂಡಿಸಲು ಆಗಲಿಲ್ಲ. ಆದುದರಿಂದ ಹುಡುಗಿಗೆ ಹಿಂಸೆ ಕೊಟ್ಟು ಕೊಟ್ಟು ಅವಳ ತಂದೆಯ ರಕ್ತವನ್ನು ಹೀರುತ್ತಿದ್ದರು. ಸದ್ಯಕ್ಕೆ ಸುಮಾರು ಎಲ್ಲಾ ತೀರುತ್ತ ಬಂದಿತ್ತು. ಇನ್ನೂ ಇನ್ನೂರೈವತ್ತು ರೂಪಾಯಿಗಳು ಬಾಕಿಯಿತ್ತು. ಈ ಸಲ ಹುಡುಗಿಯ ಅಪಮಾನಕ್ಕೆ ಅಂತ್ಯವಿರಲಿಲ್ಲ. ತಡೆಯಲಾರದೆ ತಂದೆಯ ಮನೆಗೆ ಓಡಿಬಂದಿದ್ದಳು....ಅದರಿಂದ....ಅಪರಾಧಿ ಜೈಲಿನಿಂದ ತಪ್ಪಿಸಿಕೊಂಡು ಬಂದಂತೆ ಅಪರಾಧವೂ ಹೆಚ್ಚಾಗಿತ್ತು. ಈಗ ಆ ಇನ್ನೂರೈವತ್ತು ರೂಪಾಯಿಗಳನ್ನೂ ಅವರ ಮುಂದೆ ಬಿಸಾಡಿದರೆ ಹುಡುಗಿಯನ್ನು ಹೇಗೋ ಉಳಿಸಬಹುದೆಂದು ಅವರಪ್ಪ ಜೀವಬಿಡುವವರೆಗೂ ಯೋಚನೆ ಮಾಡುವಂತಾಯಿತು.

ವಿಪ್ರದಾಸನು ಕಥೆ ಕೇಳಿ ಖೇದದ ನಗೆಯಿಂದ, ಆವಶ್ಯಕವಾದಷ್ಟು ಸಹಾಯ ಮಾಡುವ ಯೋಚನೆ ಕೂಡ ಮಾಡುವ ಸ್ಥಿತಿಯಲ್ಲಿರಲಿಲ್ಲವಾದುದರಿಂದ. ಸ್ವಲ್ಪಹೊತ್ತು ಹಾಗೆ ಹೀಗೆ ನೋಡಿ, ಎದ್ದು ಪೆಟ್ಟಿಗೆ ತೆಗೆದು ಹತ್ತುರೂಪಾಯಿಗಳ ನೋಟೊಂದನ್ನು ತೆಗೆದು ಅವನ ಕೈಯಲ್ಲಿಟ್ಟು "ಇನ್ನೂ ನಾಲ್ಕು ಐದು ಕಡೆ ಹೋಗಿ ಪ್ರಯತ್ನ ಮಾಡು. ಇದಕ್ಕಿಂತ ಹೆಚ್ಚಾಗಿ ನನಗೆ ಸಾಧ್ಯವಿಲ್ಲ" ಎಂದಿದ್ದನು.

ವೈಕುಂಠನು ಆ ಮಾತನ್ನು ಸ್ವಲ್ಪವೂ ನಂಬಲಿಲ್ಲ. ಕಾಲೆಳೆಯುತ್ತಾ ಎಳೆಯುತ್ತಾ ಹೊರಟು ಹೋದನು. ಅವನ ಕಿತ್ತುಹೋದ ಮೆಟ್ಟುಗಳ ಶಬ್ದವು ಕಿವಿಗೆ ಕಠೋರವಾಗಿತ್ತು.

ಅಂದಿನ ಈ ಸಂಗತಿಯನ್ನು ಮರೆತು ಹೋಗಿದ್ದನು. ಇಂದು ಹಠಾತ್ತಾಗಿ ಅದು ಜ್ಞಾಪಕಕ್ಕೆ ಬಂತು. ದಿವಾನರನ್ನು ಕರೆದು ವೈಕುಂಠನಿಗೆ ಇಂದೇ ಇನ್ನೂರೈವತ್ತು ರೂಪಾಯಿ ಕಳುಹಿಸುವ ಏರ್ಪಾಡಾಗಬೇಕೆಂದು ಅಪ್ಪಣೆಮಾಡಿದನು. ದಿವಾನನು ಸುಮ್ಮನೆ ನಿಂತು ತಲೆ ಕೆರೆಯುತ್ತಾ ಇದ್ದನು,...ಪೈಪೋಟಿಯಲ್ಲಿ ಹದ್ದಿಲ್ಲದೆ ಖರ್ಚುಮಾಡಿ ಮದುವೆಯೇನೋ ಸಾಂಗವಾಗಿ ಮಾಡಿ ಮುಗಿಸಿದ್ದಾಗಿದೆ.....ಆದರೆ ವೆಚ್ಚಕ್ಕಾದ ಸಾಲವನ್ನು ಸೇರಿಸಬೇಕಾದರೆ ಎಷ್ಟು ದಿನಗಳು ಹಿಡಿಯುತ್ತದೋ ?: ಈಗಿರುವ ಸ್ಥಿತಿಯಲ್ಲಿ ಮನೆಯ ಖರ್ಚೇ ಕಷ್ಟವಾಗಿರುವಾಗ ಇನ್ನೂರೈವತ್ತು

ರೂಪಾಯಿ ಆ ಲೆಕ್ಕಾಚಾರದಲ್ಲಿ ಬಹಳದೊಡ್ಡ ಹಣ.... ಎಲ್ಲಿಂದ ತರುವುದು ?

ದಿವಾನರ ಮುಖದ ಭಾವವನ್ನು ನೋಡಿ ವಿಪ್ರದಾಸನು ಕೈಬೆರಳಿಂದ ವಜ್ರದ ಉಂಗುರವನ್ನು ಕಳಚಿ ಅವನ ಕೈಗೆ ಕೊಟ್ಟು "ಚಿಕ್ಕ ಬಾಬುಗಳ ಹೆಸರಿನಲ್ಲಿ ಹಣ ಬ್ಯಾಂಕಿನಲ್ಲಿಟ್ಟಿದೀರಲ್ಲಾ....? ಅದರಿಂದ ಇನ್ನೂರೈವತ್ತು ರೂಪಾಯಿ ತೆಗೆದು ಕಳುಹಿಸಿ. ಅದಕ್ಕೆ ಬದಲು ಈ ಉಂಗುರವನ್ನು ಬ್ಯಾಂಕಿನಲ್ಲಿ ಒತ್ತೆಯಿಡಿ....ವೈಕುಂಠನಿಗೆ ಕುಮುವಿನ ಹೆಸರಿನಲ್ಲಿ ಹಣ ಕಳುಹಿಸಬೇಕು." ಎಂದನು.

## ಹತ್ತೊಂಭತ್ತನೆಯ ಅಧ್ಯಾಯ

ಮದುವೆಯ ಲಂಕಾಕಾಂಡದ ಕಟ್ಟ ಕಡೆಯ ಅಧ್ಯಾಯ ಇನ್ನೂ ಬಾಕಿಯಿತ್ತು.

ಬೆಳಗ್ಗೆ ಕುಶಾಂಡಿಕಾ ಹೋಮ ಮಾಡಿಕೊಂಡು ವಧೂವರರು ಪ್ರಯಾಣ ಮಾಡಬೇಕೆಂದು ಮೊದಲು ನಿಶ್ಚಯವಾಗಿತ್ತು, ನವಗೋಪಾಲನು ಅದಕ್ಕೆ ಬೇಕಾದ ಸಲಕರಣೆಗಳೆಲ್ಲವನ್ನೂ ಅಣಿ ಮಾಡಿಟ್ಟಿದ್ದನು. ಈ ಸಮಯದಲ್ಲಿ ವಿಪ್ರದಾಸನ ಕೋಣೆಯಿಂದ ಬೀಳ್ಕೊಂಡು ಹೊರಗೆ ಬಂದು ರಾಜಾಬಹದ್ದೂರರವರು "ಕುಶಾಂಡಿಕಾ ಹೋಮ ಅಲ್ಲಿ ಆಗುತ್ತೆ....ಮಧುಪುರಿಯಲ್ಲಿ" ಎಂದು ಹೇಳಿಬಿಟ್ಟರು.

ಈ ಮಾತಿನ ಔದ್ಧತ್ಯವು ನವಗೋಪಾಲನಿಗೆ ಸಹಿಸಲಾಗಲಿಲ್ಲ. ಬೇರೆ ಯಾರಾದರೂ ಆಗಿದ್ದರೆ ಇದೇ ನೆಪದಲ್ಲಿ ಕ್ರಿಮಿನಲ್ ಮೊಕದ್ದಮೆಯಾಗುತ್ತಿತ್ತು....ಆದರೂ ನವಗೋಪಾಲನು ಉತ್ತರ ಕೊಟ್ಟ ಮಾತಿನ ಜೋರು ಲಾಠೀ ಹಿಡಿದಿದ್ದ ಅನುಚರರ ಮೈ ನಡುಗಿಸುವಷ್ಟರವರೆಗೆ ಹೋಗಿ ನಿಂತಿತ್ತು.

ಅಂತಃಪುರದಲ್ಲಿ ಅವಮಾನದ ಏಟು ಚೆನ್ನಾಗಿ ಹರಡಿ ನೋಯಿಸಿತು. ಬಹಳ ದೂರದಿಂದ ಆತ್ಮೀಯರೂ, ಅವರ ಕುಟುಂಬಗಳೂ, ಎಲ್ಲರೂ ಬಂದಿದ್ದರು. ಅವರುಗಳ ಮಧ್ಯೆ ಇವರಿಗಾಗದವರ ಅಭಾವವಿರಲಿಲ್ಲ. ಅವರೆಲ್ಲರೆದುರಿಗೂ ಈ ಅವಮಾನ! ಕ್ಷೇಮಾ ಅತ್ತೆ ಮುಖ ಗಂಟು ಹಾಕಿಕೊಂಡು ಕೂತಿದ್ದಳು. ವಧೂ ವರರು ಬೀಳ್ಕೊಳ್ಳಲು ಬಂದಾಗ ಆಕೆಯ ಮುಖದಿಂದ ಆಶೀರ್ವಾದ ಹೊರಡುವುದೇ ಕಷ್ಟವಾದಂತೆ ತೋರಿತು, ಈ ಕರ್ಮವನ್ನು ಕಲಿಕತ್ತೆಗೆ ಹೋಗಿಯಾದರೂ ಮಾಡಿದ್ದಿದ್ದರೆ ಯಾವ ಆಕ್ಷೇಪಣೆಯೂ ಇರುತ್ತಿರಲಿಲ್ಲ,....ತಂದೆಯ ಮನೆಗಾದ ಅಪಮಾನದಿಂದ ಕುಮು ವಿಪರೀತ ನಾಚಿಕೊಂಡಳು....ತನ್ನ ಪೂರ್ವಿಕರಿಗಾದ ಈ ಎಲ್ಲಾ ಅವಮಾನಕ್ಕೂ ತಾನೇ ಕಾರಣಳೆಂದುಕೊಂಡಳು. ಮನಸ್ಸಿನಲ್ಲಿಯೇ ದೇವರನ್ನು ಸ್ಮರಿಸಿಕೊಂಡು ಬಾರಿಬಾರಿಗೂ " ನಾನು ನಿನ್ನ ಬಳಿ ಯಾವ ಘೋರವಾದ ಅಪರಾಧ ಮಾಡಿದ್ದೇನೆಂದು ನನಗೆ ಇಂತಹ ಭಯಂಕರ ಶಿಕ್ಷೆ, ದೇವರೆ ? ನಾನು ಮೊದಲಿಂದಲೂ ನಿನ್ನನ್ನು ನಂಬಿಯೇ ಎಲ್ಲವನ್ನೂ ತಲೆಯಮೇಲೆ ಹೊತ್ತು ಬಂದಿದ್ದೇನೆ" ಎಂದು ಕೇಳಿಕೊಂಡಳು.

ವಧೂವರರು ಗಾಡಿ ಹತ್ತಿದರು. ಕಲಿಕತ್ತೆಯಿಂದ ಮಧುಸೂದನನು ಕರೆದುಕೊಂಡು ಬಂದಿದ್ದ ವಿದೇಶೀ ಬ್ಯಾಂಡ್ ಉಚ್ಚಸ್ವರದಿಂದ ನರ್ತನದ ಮಟ್ಟೊಂದನ್ನು ಬಾರಿಸಿತು....

ದೊಡ್ಡದೊಂದು ಚಪ್ಪರದ ಕೆಳಗೆ ಹೋಮದ ಏರ್ಪಾಡಾಗಿತ್ತು, ಆಂಗ್ಲೇಯ ಗಂಡಸರೂ,

ಹೆಂಗಸರೂ ಇತರ ಅತಿಥಿಗಳೂ ಮೆತ್ತೆ ಹಾಕಿದ ಕುರ್ಚಿಗಳ ಮೇಲೆ ಕೂತರು. ಅವರಲ್ಲಿ ಕೆಲವರು ಹೋಮಕುಂಡದ ಹತ್ತಿರ ಬಂದು ಬಗ್ಗಿ ನೋಡುತ್ತಿದ್ದರು. ಅವರಿಗೆಲ್ಲರಿಗೂ ಬಿಸ್ಕತ್ತು ಚಾ ಒದಗಿಸಲಾಯಿತು. ಒಂದು ಟೀಪಾಯಿಯಮೇಲೆ ದೊಡ್ಡದೊಂದು ವೆಡ್ಡಿಂಗ್ ಕೇಕ್ ಕೂಡ ಸಿದ್ಧವಾಗಿತ್ತು....ವಿಧಿಯೆಲ್ಲವೂ ಸಾಂಗವಾಗಿ ಆದಮೇಲೆ ಅವರೆಲ್ಲಾ ಅಭಿನಂದಿಸಲು ಬಂದಾಗ ಕುಮು ಮುಖ ಕೆಂಪಗೆ ಮಾಡಿಕೊಂಡು ತಲೆ ತಗ್ಗಿಸಿ ನಿಂತಿದ್ದಳು. ಒಬ್ಬ ಸ್ಥೂಲಾಕಾರದ ಪ್ರೌಢ ಇಂಗ್ಲೀಷ್ ಹೆಂಗಸು ಕುಮು ಉಟ್ಟಿದ್ದ ಬನಾರಸೀ ಸೀರೆಯ ಅಂಚನ್ನು ಕೈಯಲ್ಲಿ ಹಿಡಿದೆತ್ತಿ ಪರೀಕ್ಷೆ ಮಾಡಿನೋಡಿದಳು. ಅವಳ ಕೈಗೆ ಹಾಕಿದ್ದ ದಪ್ಪವಾದ ಬಾಜಿ ಬಂದನ್ನು ತಿರುವಿ ತಿರುವಿ ನೋಡುವುದರಲ್ಲೂ ಆ ಹೆಂಗಸಿಗೆ ಬಹಳ ಕುತೂಹಲವಾಯಿತು ಅನುಷ್ಠಾನವನ್ನು ಕುರಿತು ಇಂಗ್ಲಿಷಿನಲ್ಲಿ "How interesting" (ಎಷ್ಟು ಚೆನ್ನಾಗಿದೆ) ಎಂದು ಕೆಲವರು ಪ್ರಶಂಸೆ ಮಾಡಿದರು. ಇನ್ನೊಬ್ಬ ಹೆಂಗಸು "Isn't it ?" ( ಅಲ್ಲವೇ ಮತ್ತೆ ?) ಎಂದು ಉತ್ತರ ಕೊಟ್ಟಳು.

ಇದೇ ಮಧುಸೂದನನು ತನ್ನ ಅಣ್ಣನೊಂದಿಗೆ ಮತ್ತು ಇತರ ಆತ್ಮೀಯರೊಂದಿಗೆ ವ್ಯವಹರಿಸುವ ರೀತಿ ಕುಮೂ ಚೆನ್ನಾಗಿ ನೋಡಿದ್ದಾಳೆ. ಇಂದು ಅದೇ ಮಧುಸೂದನನು ಆಂಗ್ಲೇಯ ಆತ್ಮೀಯರ ಮಧ್ಯೆ ನಡೆದುಕೊಳ್ಳುವ ರೀತಿಯನ್ನೂ ನೋಡಿದಳು. ಅತಿ ಗೌರವದಿಂದ ಅತ್ಯಂತ ವಿನಯ ನಮ್ರತೆಗಳನ್ನು ಹೊರಸೂಸುತ್ತಾ ಸರ್ವದಾ ಮುಗುಳ್ನಗೆಯಿಂದ ಅರಳಿದ್ದ ಮುಖದಿಂದ ಅವರೊಂದಿಗೆ ವ್ಯವಹರಿಸುತ್ತಿದ್ದಾನ. ಚಂದ್ರನಿಗೆ ಹೇಗೆ ಒಂದುಕಡೆ ಬೆಳಕು ಮತ್ತೊಂದುಕಡೆ ಕತ್ತಲೆ ಇರುವುದೋ ಹಾಗೆಯೇ ಮಧುಸೂದನನ ನಡೆವಳಿಕೆ ಕೂಡ. ಆಂಗ್ಲೇಯ ಸ್ನೇಹಿತರೆದುರಿನಲ್ಲಿ ಅವನ ಉಲ್ಲಾಸ ಪೂರ್ಣಚಂದ್ರನಂತೆ ಉಜ್ವಲ ಮತ್ತು ಸ್ನಿಗ್ಧ. ಬೇರೊಂದುಕಡೆ ಅವನ ಸ್ವಭಾವವು ದುರ್ಗಮವಾಗಿದ್ದು, ನೋಡಲು ಕಠೋರ ಮತ್ತು ಹೆಪ್ಪುಗಟ್ಟಿದ ಹಿಮದ ನಿಶ್ಚಲತೆಯಂತೆ ದುರ್ಭೇದ್ಯ.

ಸೆಲೂರ್ನ ಗಾಡಿಯಲ್ಲಿ ಆಂಗ್ಲೇಯ ಸ್ನೇಹಿತರೊಂದಿಗೆ ಮಧುಸೂದನ ಹತ್ತಿ ಕೂತನು. ಬೇರೊಂದು ರಿಜರ್ವ್ ಬಂಡಿಯಲ್ಲಿ ಹೆಂಗಸರ ತಂಡದೊಂದಿಗೆ ಕುಮು ಕೂತುಕೊಂಡಳು. ಅವರಲ್ಲಿ ಕೆಲವರು ಅವಳ ಕೈಯನ್ನು ಅದುಮಿ ಅದುಮಿ ನೋಡುವರು. ಮತ್ತೊಬ್ಬಳು ಗಲ್ಲವೆತ್ತಿ ಹಿಡಿದು ಮುಖದ ಅಂದವನ್ನು ವಿಮರ್ಶೆ ಮಾಡುವಳು. ಒಬ್ಬಳು 'ತುಂಬಾ ಎತ್ತರ' ಎನ್ನುವಳು; ಇನ್ನೊಬ್ಬಳು 'ರೋಗದ ಮುಖ' ಎನ್ನುವಳು. ಮತ್ತೊಬ್ಬಳು ಅತಿ ಒಳ್ಳೆಯವಳಂತೆ, ಏನೂ ಅರಿಯದವಳಂತೆ, "ಏನಮ್ಮಾ, ಮೈಗೆ ಯಾವ ಬಣ್ಣ ಬಳಿದುಕೊಳ್ಳುತ್ತೀ? ವಿಲಾಯತಿಯಿಂದ ನಿಮ್ಮಣ್ಣ ಏನಾದರೂ ಕಳುಹಿಸುತ್ತಾನೇನೋ" ಎಂದು ಕೇಳಿದಳು. ಎಲ್ಲರೂ ಅವಳ ರೂಪರೇಖೆಗಳನ್ನು ವಿಮರ್ಶೆಮಾಡುತ್ತಾ ಕಣ್ಣುಗಳು ಅಷ್ಟು ದೊಡ್ಡದಲ್ಲ, ಮೈಯ ಅಳತೆ ಹೆಂಗಸರಿಗಿಷ್ಟು ಇರಬಾರದು, ಎಂದೆಲ್ಲಾ ಹೇಳಿಕೊಂಡರು. ಮೈಮೇಲಿನ ಪ್ರತಿಯೊಂದು ಒಡವೆಯನ್ನೂ ಹಾಗೆ ಹೀಗೆ ನೋಡಿ 'ಅಯ್ಯೊ, ಪುರಾತನ ಕಾಲದ್ದು ಒಡವೆಗಳು!....ಸುಮ್ಮನೆ ತೂಕ ಅಷ್ಟೆ, ಚಿನ್ನವೇನೋ ಅಪರಂಜಿ, ಆದರೇನು? ಏನು ಫ್ಯಾಷನ್ನೊ,....ಹೊಡಕೊಂಡ ಹಾಗಿದೆ!" ಎಂದರು.

ಅವರ ಗಾಡಿಯಲ್ಲಿ ಪ್ಲಾಟ್‌ಫಾರಮ್ಮಿನ ಎದುರು ಕಡೆಯ ಕಿಟಕಿ ತೆರೆದಿತ್ತು. ಕುಮು ಅದರ ಹೊರಗೆ ನೋಡುತ್ತಿದ್ದಳು. ಹೇಗಾದರೂ ಅವರ ಮಾತುಗಳು ಕಿವಿಗೆ ಬೀಳದಿರಲೆಂದು ಅವಳ ಉದ್ದೇಶ....ಹೊರಗಡೆ ಒಂದುಕಾಲು ಕುಂಟಾದ ನಾಯಿಯೊಂದು ಉಳಿದ ಮೂರು ಕಾಲುಗಳಲ್ಲಿ

ಕುಂಟುತ್ತಾ ಕುಂಟುತ್ತಾ ನೆಲ ಮೂಸಿನೋಡುತ್ತಾ ಓಡಾಡುತ್ತಿತ್ತು. ಅಯ್ಯೋ, ಪಾಪ,...ಅದಕ್ಕೆ ಏನಾದರೂ ಹಾಕೋಣವೆಂದರೆ ಕೈಯಲ್ಲಿ ಏನೂ ತಿನ್ನುವ ಪದಾರ್ಥವಿಲ್ಲ.... ಛೆ, ಪಾಪ....ಅದಕ್ಕೆ ಯಾವುದೆಲ್ಲವೂ ಸಹಜವಾಗಿತ್ತೋ ಈಗ ಅಷ್ಟೂ ಕಠಿಣವಾಗಿ ಹೋಗಿದೆ, ಎಂದು ಪೇಚಾಡು ತ್ತಿರುವಾಗ ಸೆಲೂರ್ ಗಾಡಿಯೆದುರಿಗೆ ಪ್ಲಾಟ್‌ಫಾರಂ ಮೇಲೆ ನಿಂತಿದ್ದ ಒಬ್ಬ ದೊಡ್ಡ ಮನುಷ್ಯ "ನೋಡಿ, ಪಾಪ, ಈ ರೈತರ ಹೆಂಗಸನ್ನು ಏಮಾರಿಸಿ ದಳ್ಳಾಳಿಗಳು ಅಸ್ಸಾಮಿನ ಟೀ ತೋಟಗಳಿಗೆ ಕರೆದುಕೊಂಡು ಹೋಗುತ್ತಿದ್ದಾಗ ತಪ್ಪಿಸಿಕೊಂಡು ಓಡಿ ಬಂದಿದಾಳೆ. ಗೋಲಂದಾವರೆಗೆ ಇವ ಳಿಗೆ ಟಿಕೆಟ್ಟಿಗೆ ದುಡ್ಡಿದೆ. ಅವಳ ಊರು ದುಮರಾವ್, ಯಾರಾದರೂ ಸಹಾಯ ಮಾಡಿದರೆ ಬಚಾವಾಗ್ತಾಳೆ." ಎಂದು ಹೇಳುತ್ತಿದ್ದುದು ಅವಳ ಕಿವಿಗೆ ಬಿತ್ತು. ಜೊತೆಯಲ್ಲಿಯೇ ಸೆಲೂರ್ ಗಾಡಿಯೊಳಗಿಂದ ಗಟ್ಟಿಯಾಗಿ ಗದರಿದ ಗಡಸು ಧ್ವನಿಯೊಂದು ಕೂಡ ಕೇಳಿ ಬಂತು. ಅವಳಿಗಿನ್ನು ತಡೆಯಲಾಗಲಿಲ್ಲ. ಕೂಡಲೆ ಬಲ ಪಾರ್ಶ್ವದ ಕಿಟಕಿಯನ್ನು ತೆರೆದು ತನ್ನ ಗಂಟು ಹಾಕಿದ ಕೈ ಚೀಲದಿಂದ ಹತ್ತು ರೂಪಾಯಿ ತೆಗೆದು ಆ ಹೆಂಗಸಿನ ಕೈಯಲ್ಲಿಟ್ಟು ಕಿಟಕಿಯ ಬಾಗಿಲನ್ನು ಮತ್ತೆ ಮುಚ್ಚಿಬಿಟ್ಟಳು. ಇದನ್ನು ನೋಡಿ ಮತ್ತೆ ಗಾಡಿಯೊಳಗಿದ್ದ ಒಬ್ಬ ಹೆಂಗಸು "ಆಹಾ....ನಮ್ಮ ಸೊಸೆ ಕೈ ಸ್ವಲ್ಪ ಧಾರಾಳವೇ ಕಣಮ್ಮ?" ಎಂದಳು..."ಆಹಾ ಧಾರಾಳವಲ್ಲದೆ?....ದ್ವಾರ! ಇರುವ ಲಕ್ಷ್ಮಿಯನ್ನು ಹೊರಗೆ ಕಳಿಸುವುದಕ್ಕೆ ದ್ವಾರ!" ಎಂದಳು ಇನ್ನೊಬ್ಬ ಗರತಿ. ಮತ್ತೊಬ್ಬ ಹೆಂಗಸು "ದುಡ್ಡು ಕರಗಿಸುವುದು ಕಲಿತಿದಾಳೆ....ಕೂಡಿಡುವುದು ಕಲಿತಿದ್ದರೆ ಚೆನ್ನಾಗಿರುತ್ತಿತ್ತು," ಎಂದಳು. ಇದೊಂದು ಬಗೆಯ ದಿಮಾಕೆಂದು ಅವರೆಲ್ಲ ಗಣಿಸಿದರು....ಯಜಮಾನರು ಯಾರಿಗೆ ಮೂರು ಕಾಸು ಕೂಡ ಕೊಡಲಿಲ್ಲವೋ ಅವಳಿಗೆ ಇವಳು ಎಷ್ಟು ಜೋರಿಂದ ರೂಪಾಯಿ ಎಸೆದಳು ನೋಡಿ, ಇದೆಂತಹ ಅಹಂಕಾರ! ಇದುಕೂಡ ಘೋಷಾಲ—ಚಟರ್ಜಿ ವಂಶಗಳ ಮಧ್ಯೆ ಹಿಂದಿನಿಂದ ನಡೆದು ಬಂದಿದ್ದ ಪೋಟಾಪೋಟಿಯ ಒಂದು ಅಂಗವೆಂದು ಅವರೆಲ್ಲ ಎಣಿಸಿದರು.

ಈ ಸಮಯದಲ್ಲಿ ಅವರ ಮಧ್ಯೆ ಒಬ್ಬ ಗಿಡ್ಡನೆಯ, ಸ್ಥೂಲಾಕಾರದ, ಕಪ್ಪಾದ ಮುಖವುಳ್ಳ ಹೆಂಗಸೊಬ್ಬಳು ಮುಂದೆ ಬಂದಳು. ವಿಶಾಲವಾದ ಭಾವತುಂಬಿದ ಕಣ್ಣುಗಳು..,,ಸ್ನೇಹಭರಿತ ವಾದ ಮುಖಭಾವ,....ಕುಮುದಿನಿಯ ಸಮ ವಯಸ್ಕಳಿರಬಹುದು. ಅವಳು ಕುಮುವಿನ ಸಮೀ ಪಕ್ಕೆ ಬಂದು ಬಹುಮೆಲ್ಲಗೆ "ಮನಸ್ಸಿಗೆ ಹೇಗೆನ್ನಿಸುತ್ತಕ್ಕಾ ? ಇವರ ಮಾತುಗಳನ್ನೆಲ್ಲಾ ಕಿವಿಗೆ ಹಾಕಿಕೋಬೇಡ....ಎರಡು ದಿನ ಹೀಗೆಲ್ಲಾ ಹರಟಿಕೋತಾರೆ....ಆಮೇಲೆ ಗಂಟಲಲ್ಲಿರುವ ವಿಷ ವೆಲ್ಲಾ ಇಳಿದು ಹೋಯಿತೆಂದರೆ ತೆಪ್ಪಗಾಗುತಾರೆ...." ಎಂದಳು. ಈಕೆಯೇ ಕುಮುದಿನಿಯ ಚಿಕ್ಕ ಓರಗಿತ್ತಿ....ಮೈದುನ ನವೀನನ ಹೆಂಡತಿ. ಹೆಸರು ನಿಸ್ತಾರಿಣಿ. ಅವಳನ್ನು ಎಲ್ಲರೂ "ಮೋತಿಯ ಅಮ್ಮ" ಎಂದು ಕರೆಯುವರು. ಮೋತಿಯ ಅಮ್ಮ ಮಾತು ಬದಲಾಯಿಸಿ "ಅವತ್ತು ನೂರ್‌ನಗರಕ್ಕೆ ಬಂದೆವಲ್ಲಾ....ಸ್ಟೇಷನ್ನಿಗೆ ನಿಮ್ಮ ಅಣ್ಣನವರು ಬಂದಿದ್ದನ್ನು ನೋಡಿದೆ" ಎಂದಳು.

ಕುಮುವಿಗೆ ಆಶ್ಚರ್ಯವಾಯಿತು. ಅಣ್ಣ ಇವರನ್ನೆಲ್ಲಾ ಎದುರುಗೊಳ್ಳುವುದಕ್ಕೆ ಸ್ಟೇಷನ್ನಿಗೆ ಹೋಗಿದ್ದನೆ? ಈ ವಿಷಯವನ್ನು ಈಗಲೇ ಕೇಳಿದುದು ಇವಳು.

"ಆಹಾ....ಎಂತಹ ಅಂದದ ಗಂಡಸು....ಅಂತಹವರನ್ನೆಂದೂ ಕಣ್ಣಲ್ಲಿ ನೋಡಿಲ್ಲ ನಾನು....ಅದೇ ಕೀರ್ತನೆಯಲ್ಲಿ ಹೇಳಿದ ಹಾಗೆ " ಗೋರಾರ್ ರೂಪೇ ಲಾಗಲೋ ರಸೇರ್ ಬಾಣ್,

ಭಾಸಿಯೇ ನಿಯೇ ಜಾಯ್ ನದಿಯಾಯ್ ಪುರನಾರೀರ್ ಪ್ರಾಣ್" (ಗೌರಾಂಗನ ರೂಪದಲಿ ರಸದ ಹೊಳೆಯೇರಿ ಕೊಚ್ಚಿಹೋಯಿತು, ನದಿಯಲಿ ಪುರಾಂಗನೆಯರ ಪ್ರಾಣ)....ನನ್ನ ಮನಸ್ಸಿಗೂ ಹಾಗೆಯೇ ಅನ್ನಿಸಿತು."

ಒಂದು ಕ್ಷಣದಲ್ಲಿ ಕುಮುವಿನ ಮನಸ್ಸು ಕರಗಿಹೋಯಿತು. ಮುಖವನ್ನು ಮರೆಮಾಡಿಕೊಂಡು ಕಿಟಕಿಯ ಕಡೆ ನೋಡುತ್ತ ಇದ್ದಳು. ಹೊರಗಡೆಯ ಬಯಲು, ಅರಣ್ಯ, ಮತ್ತು ಆಕಾಶ....ಎಲ್ಲಾ ಕಣ್ಣೀರಿನಿಂದ ಮಸಕು ಮಸಕಾಗಿ ಕಾಣುತ್ತಿದ್ದುವು.

ಕುಮುವಿನ ನೋವಿಗೆ ಕಾರಣವೇನೆಂಬುದನ್ನು ತಿಳಿದುಕೊಳ್ಳಲು ಮೋತಿಯಮ್ಮನಿಗೆ ಹೆಚ್ಚು ನಿದಾನವಾಗಲಿಲ್ಲ....ಅದಕ್ಕೆ ನಾನಾರೀತಿಯಾಗಿ ಅವಳ ಅಣ್ಣನ ವಿಷಯವಾಗಿ ವಿಚಾರಿಸಿದಳು. " ಮದುವೆಯಾಗಿದೆ ತಾನೇ " ಎಂದು ಕೇಳಿದಳು.

"ಇಲ್ಲ "ಎಂದು ಹೇಳಿದಳು ಕುಮು.

ಮೋತಿಯಮ್ಮ "ಒಳ್ಳೇ ಚೆನ್ನಾಗಿದೆ! ಅಂತಹ ದೇವತೆಯ ಹಾಗೆ ರೂಪವಿಟ್ಟುಕೊಂಡು.... ಇನ್ನೂ ಮನೆ ಬರಿದೆ ?....ಯಾವ ಭಾಗ್ಯವತಿಯ ಅದೃಷ್ಟದಲ್ಲಿ ಬರೆದಿದೆಯೋ ಇಂತಹ ಗಂಡನನ್ನು ಪಡೆಯುವುದಕ್ಕೆ ?" ಎಂದು ಅಚ್ಚರಿಪಟ್ಟಳು.

ಕುಮು ಆ ಸಮಯದಲ್ಲಿ ಯೋಚಿಸುತ್ತಿದ್ದಳು. "ಆಹಾ...ಅಣ್ಣ...ತನ್ನ ಸಮಸ್ತ ಬಿಗುಮಾನವನ್ನೆಲ್ಲಾ ತಳ್ಳಿಹಾಕಿ ಸ್ಟೇಷನ್ನಿಗೆ ಹೋಗಿದ್ದುದು ನನಗೋಸ್ಕರವಾಗಿ....ಕೇವಲ ನನಗೋಸ್ಕರವಾಗಿ....ಇಷ್ಟಾದರೂ ಇವರು ಅವನನ್ನು ನೋಡುವುದಕ್ಕೆ ಒಂದುಸಲವೂ ಬರಲಿಲ್ಲ. ಕೇವಲ ದುಡ್ಡಿನ ಬಲದಿಂದ ಇಂತಹ ಮನುಷ್ಯನನ್ನೂ ಕೂಡ ಉಪೇಕ್ಷೆ ಮಾಡುವಷ್ಟು ಸಾಹಸವಾಯಿತು ಇವರಿಗೆ! ಬಹುಶಃ ಇದಕ್ಕೋಸ್ಕರವೇ ಅಣ್ಣನ ಮೈ ಹಾಗೆ ಅಸ್ವಸ್ಥವಾದದ್ದು ?"

ವ್ಯರ್ಥವಾದ ಆಕ್ಷೇಪದಿಂದ ಬಾರಿಬಾರಿಗೂ " ಈ ಅಣ್ಣ ಯಾಕೆ ಹೋಗಬೇಕಾಗಿತ್ತು ಸ್ಟೇಷನ್ನಿಗೆ ?...,ಯಾಕೆ ತನ್ನನ್ನು ತಾನೇ ಹಾಗೆ ಕೀಳು ಮಾಡಿಕೊಂಡ ?....ನನಗೋಸ್ಕರವೇ? ನಾನೇಕೆ ಸಾಯಲಿಲ್ಲ ?" ಎಂದು ಮನಸ್ಸಿನಲ್ಲೇ ಅಂದುಕೊಳ್ಳಲು ಆರಂಭಿಸಿದಳು.

ಯಾವುದು ಆಗಿ ಹೋಗಿತ್ತೋ, ಪುನಃ ಹಿಂದಿರುಗಿಸಲು ಅಸಾಧ್ಯವೋ, ಅದನ್ನು ಕುರಿತೇ ಅವಳ ಮನಸ್ಸು ತಲೆಯನ್ನು ಕುಟ್ಟಲಾರಂಭಿಸಿತು. ಆ ರೋಗದಿಂದ ಕಂಗೆಟ್ಟ ಶಾಂತಮುಖ ಆ ಆಶೀರ್ವಾದಭರಿತ ಸ್ನಿಗ್ಧಗಂಭೀರವಾದ ಕಣ್ಣುಗಳೆರಡು...ಅವಳ ಮನಸ್ಸಿನಲ್ಲಿ ಮತ್ತೆ ಮತ್ತೆ ಬರಲಾರಂಭಿಸಿದುವು.

## ಇಪ್ಪತ್ತನೆಯ ಅಧ್ಯಾಯ

ರೈಲು ಗಾಡಿಯು ಹೌರಾವನ್ನು ತಲುಪಿತು. ಆಗ ಮಧ್ಯಾಹ್ನ ನಾಲ್ಕು ಘಂಟೆ. ಯಥಾಪ್ರಕಾರ ವಧೂವರರು ಸೆರಗು ಅಂಗವಸ್ತ್ರಗಳ ಕೊನೆಯ ಗಂಟು ಹಾಕಿಕೊಂಡು ಸಾರೋಟಿನಲ್ಲಿ ಹೋಗಿ ಕೂತರು. ಕಲಿಕತ್ತೆಯ ಹಗಲಿನಲ್ಲಿ ಜನಗಳ ಲೆಕ್ಕವಿಲ್ಲದಷ್ಟು ಕಣ್ಣುಗಳ ಮುಂದೆ ಕುಮುವು ದೇಹ ಮನಸ್ಸುಗಳನ್ನು ಸಂಕುಚಿತ ಮಾಡಿಕೊಂಡು ಕೂತಿದ್ದಳು.

ಈ ಹತ್ತೊಂಬತ್ತು ವರ್ಷಗಳ ಕನ್ಯಾ ಜೀವನದಲ್ಲಿ ಯಾವುದೊಂದು ಅತಿಶಯವಾದ

ಶುಚಿತ್ವಭಾವವು ಅವಳ ಅಂಗಾಂಗಗಳಲ್ಲಿಯೂ ಗಭೀರವಾಗಿ ವ್ಯಾಪಿಸಿತ್ತೋ, ಅದು ಕರ್ಣನ ಸಹಜವಾದ ಕವಚದಂತೆಇತ್ತು. ಹೇಗೆ ತಾನೇ ಅದು ಹಠಾತ್ತಾಗಿ ಭಿನ್ನವಾಗಲು ಸಾಧ್ಯ? ನಿಮಿಷ ಮಾತ್ರದಲ್ಲಿ ತಾನಾಗಿಯೇ ಕವಚ ಕಳಚಿ ಬೀಳುವಂತೆ ಮಾಡುವ ಮಂತ್ರವೂ ಇದೆ. ಆದರೆ ಅಂತಹ ಮಂತ್ರವಿನ್ನೂ ಹೃದಯದಂತರದಲ್ಲಿ ಅವಿರ್ಭಾವವಾಗಿಲ್ಲ. ಪಕ್ಕದಲ್ಲಿ ಕೂತಿರುವ ಮನುಷ್ಯನಿನ್ನೂ ಅವಳ ಮನಸ್ಸಿನೊಳಗೆ ಹೊರಗಿನವನೇ. ಅವನು ತನ್ನವನಾಗಬೇಕಾದರೆ ಕೇವಲ ಅವನ ಕಡೆಯಿಂದಲೇ ನಾನಾ ಅಡ್ಡಿ ಆತಂಕಗಳು ಬರುತ್ತಿವೆ. ಅವನ ಭಾವ ವ್ಯವಹಾರಗಳಲ್ಲಿ ಕಾಣಬರುತ್ತಿರುವ ಒಂದು ಬಗೆಯ ಒರಟುತನವು ಕುಮುವನ್ನು ತಳ್ಳಿ, ತಳ್ಳಿ ಇನ್ನೂ ದೂರಕ್ಕೆ ಸರಿಸುತ್ತಿದೆ. ಈಕಡೆ ಮಧುಸೂದನನಿಗೆ ಕುಮುವು ಹೊಸದಾಗಿ ಕಂಡು ಹಿಡಿದ ಒಂದು ವಸ್ತು ವಂತೆ. ಹೆಂಗಸರ ಪರಿಚಯ ಮಾಡಿಕೊಳ್ಳಲು ಈ ಕಾರ್ಯತತ್ಪರನಾದ ಗಂಡಸಿಗೆ ವಿರಾಮ ಸ್ವಲ್ಪವೂ ಇರಲಿಲ್ಲ. ಅವನು ಮುಳುಗಿದ್ದ ಬೆಲೆ ದರಗಳ ಪ್ರಪಂಚದ ಮಧ್ಯೆ ಬೆಲೆವೆಣ್ಣುಗಳ ನೆರಳು ಕೂಡ ಅವನಿಗೆ ಎಂದೂ ತಗುಲಿರಲಿಲ್ಲ. ಯಾವ ಹೆಂಗಸೂ ಅವನ ಮನಸ್ಸನ್ನು ವಿಚಲಿತ ಗೊಳಿಸಿಲ್ಲವೆನ್ನುವ ಮಾತು ನಿಜವಲ್ಲವಾದರೂ, ಭೂಕಂಪವಾಗುವಷ್ಟು ಮಾತ್ರ ನಡೆದಿತ್ತು. ಕಟ್ಟಡ ಕ್ಕೆಂದೂ ಪೆಟ್ಟು ತಗುಲಿರಲಿಲ್ಲ. ಮಧುಸೂದನನು ಮನೆಯ ಹೆಂಗಳ ಸಂಗಡ ಬಹು ಸಂಕ್ಷೇಪವಾದ ವ್ಯವಹಾರವಿಟ್ಟುಕೊಂಡಿದ್ದನು. ಅವರ ಮೇಲೆ ಒಂದು ಬಗೆಯಾದ ತುಚ್ಛ ಭಾವನೆ. ಅವರು ಮನೆ ಕೆಲಸಗಳನ್ನು ಮಾಡುವವರು....ಕಿವಿ ಕಿವಿಗಳಲ್ಲಿ ಪಿಸುಮಾತಾಡುವರು. ಕಾದಾಡುವರು, ಕಾರಣವಿಲ್ಲದೆ, ಅಥವಾ ಸ್ವಲ್ಪ ಕಾರಣಕ್ಕಾಗಿ, ಕಂಬನಿ ಸುರಿಸುವರು...ಇಂತಹವರ ಮಧ್ಯೆ ಅವನ ಸಂಪರ್ಕ ಬಹಳ ಸಾಮಾನ್ಯ....ಎಷ್ಟು ಆವಶ್ಯಕವೋ ಅಷ್ಟು. ತನ್ನ ಹೆಂಡತಿಯೂ ಈ ಜಗತ್ತಿನ ಇದೇ ಲೆಕ್ಕಕ್ಕಿಲ್ಲದ ವಿಭಾಗದಲ್ಲೆಲ್ಲೋ ಹೋಗಿ ಇರುವವಳು, ಮತ್ತು ನಿತ್ಯದ ಸಾಂಸಾರಿಕ ತುಚ್ಛ ತೆಯಲ್ಲಿ ನೆರಳಿನಂತೆ ಆಗಿ ಹೋಗಿ, ಗೋಡೆಯ ಮರೆಯಲ್ಲಿ ಯಜಮಾನನ ಕಟಾಕ್ಷಕ್ಕೆ ತಕ್ಕಂತೆ ಬದುಕು ಕಳೆಯುವವಳೆಂಬುದಕ್ಕಿಂತ ಹೆಚ್ಚಾಗಿ ಬೇರೆ ಅವನೇನೂ ಭಾವಿಸಿರಲಿಲ್ಲ. ಸ್ತ್ರೀಯರ ಸಂಗಡ ವ್ಯವಹಾರ ಮಾಡುವುದರಲ್ಲೂ ಒಂದು ಬಗೆಯ ಕಲಾ ನೈಪುಣ್ಯವಿದೆ, ಅವರ ಮಧ್ಯೆಯೂ ಸೋಲು ಗೆಲುವುಗಳ ಕಠಿಣ ಸಮಸ್ಯೆಯೊಂದು ಇರಲು ಸಾಧ್ಯ ಎಂಬ ಯೋಚನೆ, ಲೆಕ್ಕಾಚಾರದಲ್ಲಿ ದಕ್ಷನಾದ ಅವನ ತರ್ಕಬದ್ಧ ತಲೆಯಲ್ಲಿ ಸ್ವಲ್ಪವೂ ಸುಳಿಯಲಿಲ್ಲ. ತರು, ಲತೆಗಳ ದೃಷ್ಟಿಯಲ್ಲಿ ದುಂಬಿಯು ಅನಾವಶ್ಯಕವಿರಬಹುದು. ಆದರೂ ದುಂಬಿಯ ಸಂಸರ್ಗವನ್ನು ಅವು ಹೇಗೋ ಅಂಗೀಕರಿಸ ಬೇಕು. ಭಾವೀ ಹೆಂಡತಿಯ ವಿಚಾರದಲ್ಲಿ ಮಧುಸೂದನನೂ ಹಾಗೆಯೇ ಅಂಗೀಕರಿಸಬೇಕೆಂಬ ಭಾವನೆ ಅವನಿಗೆ ಇತ್ತು.

ಮದುವೆಯಾದ ಮೇಲೆ ಅವನು ಕುಮುವನ್ನು ಮೊದಲ ಬಾರಿ ನೋಡಿದನು. ಒಂದು ಬಗೆ ಯಾದ ಸೌಂದರ್ಯವಿದೆ. ಅದೊಂದು ದೇವರ ವರದಂತೆ. ಪೃಥಿವಿಯ ಸಾಧಾರಣ ವಸ್ತುಗಳಿ ಗಿಂತಲೂ ಅಸಾಧಾರಣ ಅಳತೆಯಲ್ಲಿ ಹೆಚ್ಚು. ಅದು ಪ್ರತಿಕ್ಷಣವೂ ಪ್ರತ್ಯಾಶೆಗೆ ಅತೀತವಾಗಿ ಹೋಗುತ್ತಿರುವುದು....ಕುಮುದಿನಿಯ ಸೌಂದರ್ಯ ಆ ಮಟ್ಟದ್ದು. ಮುಂಬೆಳಗಿನ ಶುಕ್ರ ತಾರೆ ಯಂತೆ, ರಾತ್ರಿಯ ಪ್ರಪಂಚದಿಂದ ಸ್ವತಂತ್ರ....ಮತ್ತು ಹಗಲಿನ ಪ್ರಪಂಚಕ್ಕೆ ಬಹು ದೂರ. ಮಧುಸೂದನನು ತನ್ನ ಚೇತನ ಶೂನ್ಯವಾದ ಮನಸ್ಸಿನಲ್ಲಿ ತನಗೇ ಅಗೋಚರಳಾದ ಕುಮು ದಿನಿಯನ್ನು ಒಂದು ಬಗೆಯಾದ ಅಸ್ಪಷ್ಟ ಭಾವದಲ್ಲಿ ತನಗಿಂತಲೂ ಶ್ರೇಷ್ಠಳೆಂದು ತಿಳಿದನು.

ಕಡೆಗೆ ಅವನಿಗೆ ಯೋಚನೆಯೊಂದಿಟ್ಟುಕೊಂಡಿತು. ಇವಳೊಡನೆ ಯಾವ ರೀತಿಯಾಗಿ ವ್ಯವಹರಿಸಬೇಕು...ಯಾವ ಮಾತನ್ನು ಹೇಗೆ ಆಡಿದರೆ ಸರಿಹೋಗುತ್ತದೆ...?

ಮಾತು ಕಥೆ ಹೇಗೆ ಶುರುಮಾಡಲಿ ಎಂದು ಯೋಚಿಸುತ್ತ ಯೋಚಿಸುತ್ತ ಮಧುಸೂದನನು ಹಠಾತ್ತಾಗಿ ಒಂದುಸಲ ಕುಮುವನ್ನು ಕುರಿತು "ಈಕಡೆಯಿಂದ ಬಿಸಿಲು ಬೀಳುತ್ತಿದೆಯಲ್ಲವೇ ?" ಎಂದು ಪ್ರಶ್ನೆಮಾಡಿದನು. ಕುಮು ಯಾವ ಜವಾಬೂ ಕೊಡಲಿಲ್ಲ. ಮಧುಸೂದನನು ಬಲ ಗಡೆಯ ಪರದೆಯನ್ನು ಎಳೆದುಬಿಟ್ಟನು.

ಸ್ವಲ್ಪ ಹೊತ್ತು ಮತ್ತೆ ಮೌನ. ಮತ್ತೆ ಇದ್ದಕ್ಕಿದ್ದ ಹಾಗೆ "ಚಳಿಯಾಗುವುದಿಲ್ಲವೇ ಎಂದನು. ಹೀಗೆ ಹೇಳಿ ಉತ್ತರವನ್ನು ನಿರೀಕ್ಷಿಸದೆಯೇ ಎದುರುಗಡೆಯ ಆಸನದಿಂದ ವಿಲಾಯ ತಿಯ ಕಂಬಳಿಯನ್ನು ಎಳೆದು ತೆಗೆದು ಕುಮುವಿನ ಮತ್ತು ತನ್ನ ಕಾಲುಗಳಮೇಲೆ ಹೊದಿಸಿ, ಜೊತೆ ಯಲ್ಲಿಯೇ ಒಂದೇ ಹೊದಿಕೆಯೊಳಗಣ ಸಹಯೋಗಿತೆಯನ್ನು ಸ್ಥಾಪನೆ ಮಾಡಿದನು. ಮೈ, ಮನಸ್ಸು ಪುಳಕಿತವಾದುವು. ಬೆಚ್ಚಿಬಿದ್ದು ಕುಮುದಿನಿಯು ಕಂಬಳಿಯನ್ನು ತಳ್ಳಿಹಾಕಲು ಹೋದಳು. ಕೂಡಲೇ ತನ್ನನ್ನೇ ತಡೆದುಕೊಂಡು ಆಸನದ ಒಂದು ಮೂಲೆಗೆ ಜರುಗಿ ಕೂತಳು.

ಸ್ವಲ್ಪ ಹೊತ್ತು ಇದೇ ಭಾವದಲ್ಲಿಯೇ ಕಳೆದು ಮೇಲೆ ಇದ್ದಕ್ಕಿದ್ದಹಾಗೆ ಕುಮುವಿನ ಕೈಕಡೆ ಮಧುಸೂದನನ ದೃಷ್ಟಿ ಹೋಯಿತು. "ಎಲ್ಲಿ ಎಲ್ಲಿ...,?" ಎಂದು ಹಠಾತ್ತಾಗಿ ಅವಳ ಎಡಗೈ ಯನ್ನು ಕಣ್ಣಬಳಿ ಎತ್ತಿ ಹಿಡಿದುಕೊಂಡು "ನಿನ್ನ ಬೆರಳಲ್ಲಿರುವ ಈ ಉಂಗುರವು ಏತರದು ? ಪಚ್ಚೆ ಯದೇ?"ಎಂದನು.

ಕುಮು ಮಾತಾಡಲಿಲ್ಲ.

"ನೋಡು, ಪಚ್ಚೆ ಎಂದರೆ ಆಗುವುದಿಲ್ಲ ನನಗೆ. ಅದನ್ನು ನೀನು ತೆಗೆದುಹಾಕಿಬಿಡು."

ಯಾವುದೋ ಒಂದು ಕಾಲದಲ್ಲಿ ಮಧುಸೂದನನು ಪಚ್ಚೆಯೊಂದನ್ನು ಕೊಂಡಿದ್ದನು. ಅದೇ ವರ್ಷ ಸಣಬು ಹೇರಿದ್ದ ಮಾಲುದೋಣಿಯೊಂದು ಹೌರಾ ಸೇತುವೆಗೆ ತಗುಲಿ ಮುಳುಗಿ ಹೋಗಿತ್ತು, ಅಂದಿನಿಂದ ಪಚ್ಚೆಯ ಹರಳನ್ನು ಕಂಡರೆ ಆಗದು ಅವನಿಗೆ.

ಕುಮುದಿನಿಯು ಮೆಲ್ಲಮೆಲ್ಲಗೆ ಕೈಯನ್ನು ಬಿಡಿಸಿಕೊಳ್ಳಲು ಪ್ರಯತ್ನಿಸಿದಳು. ಮಧುಸೂದ ನನು ಕೈಬಿಡಲಿಲ್ಲ. "ಇದನ್ನು ನಾನು ತೆಗೆದಿಟ್ಟುಕೊಳ್ಳುತ್ತೇನೆ" ಎಂದನು. ಕುಮು ಬೆಚ್ಚಿಬಿದ್ದು "ಹಾಗೇ ಇರಲಿ ಬಿಡಿ" ಎಂದಳು. ಒಂದುಸಲ ಚದುರಂಗವಾಡುವಾಗ ಅವಳು ಗೆದ್ದಿದ್ದಳು. ಆಗ ಅಣ್ಣನು ಸ್ವಂತ ಕೈಯಿಂದ ಉಂಗುರ ತೆಗೆದು ಬಹುಮಾನವಾಗಿ ಅವಳಿಗೆ ಕೊಟ್ಟಿದ್ದನು.

ಮಧುಸೂದನನು ಮನಸ್ಸಿನಲ್ಲಿಯೇ ನಕ್ಕನು. ಉಂಗುರದ ಮೇಲೆ ವಿಪರೀತವಾದ ಆಸೆ ಯಿದೆ ಅಂದುಕೊಂಡನು. ಈ ವಿಷಯದಲ್ಲಿ ತನ್ನ ಸಂಗಡ ಕುಮುವಿನ ಏಕಮತದ ಪರಿಚಯ ಹೊಂದಿ ಮನಸ್ಸಿಗೆ ಸ್ವಲ್ಪ ನಿಶ್ಚಿಂತೆಯಾಯಿತು. ಸಮಯ ಬಂದಾಗ, ಬಾರದಾಗ ಕೂಡ ಬೆಂಡೋಲೆ, ಕಂಠಹಾರ, ಬಳೆ, ಬಾಜೂಬಂದು ಇವುಗಳ ವಿಷಯದಲ್ಲಿ ಈ ಅಭಿಮಾನಿನಿಯ ಸಂಗಡ ವ್ಯವಹಾರ ಮಾಡುವ ಸುಯೋಗವು ಲಭಿಸುವುದೆಂದು ಎಣಿಸಿದನು, ಈ ವಿಷಯದಲ್ಲಿ ಮಧುಸೂದನನ ಹಿರಿಮೆಯನ್ನು ಅವಳು ಒಪ್ಪಲೇ ಬೇಕಾಗುತ್ತದೆ...ವಯಸ್ಸಿನಲ್ಲಾದರೂ ದೊಡ್ಡ ವನು ತಾನೇ !

ತನ್ನ ಕೈಯಿಂದ ಕಮಲ ವಜ್ರದ ದೊಡ್ಡ ಉಂಗುರವೊಂದನ್ನು ಕಳಚಿ ಮಧುಸೂದನನು

ನಗುತ್ತಾ "ಹೆದರಬೇಡ...ಅದರ ಬದಲಾಗಿ ಇಗೋ ಬೇರೆ ಉಂಗುರವನ್ನು ನಿನಗೆ ತೊಡಿಸುತ್ತೇನೆ" ಎಂದನು.

ಕುಮುವಿಗೆ ಆಗ ತಡೆಯಲಾಗಲಿಲ್ಲ. ಸ್ವಲ್ಪ ಜೋರಿನಿಂದಲೇ ಕೈ ಎಳೆದುಕೊಂಡುಬಿಟ್ಟಳು. ಆಗ ಮಧುಸೂದನನ ಮನಸ್ಸೂ ಬೇಸರಗೊಂಡಿತು. ತನ್ನ ಯಜಮಾನಿಕೆಯ ಅಸಡ್ಡೆ ಅವನಿಗೆ ಸಹಿಸದು. ಒಣಗಿದ ಗಂಟಲಿನಿಂದ "ಇಲ್ಲಿ ನೋಡು, ಆ ಉಂಗುರವನ್ನು ನೀನು ತೆಗೆಯಲೇ ಬೇಕು," ಎಂದು ಜೋರಾಗಿಯೇ ಹೇಳಿದನು. ಕುಮುದಿನಿಯು ತಲೆತಗ್ಗಿಸಿಕೊಂಡು ಸುಮ್ಮನೆಯೇ ಕೂತಿದ್ದಳು, ಮುಖ ಕೆಂಪಗಾಗುತ್ತಿತ್ತು. ಮಧುಸೂದನನು ಮತ್ತೆ "ಕೇಳಿತೋ ಇಲ್ಲವೋ! ನಾನು ಹೇಳ್ತೇನೆ...ಅದನ್ನು ಕಳಚಿ ಬಿಸಾಡುವುದು ಒಳ್ಳೇದು ಅಂತೇನೆ....ಕೊಡು ನನಗದನ್ನ." ಎಂದನು. ಹೀಗೆಂದು ಕೈಯನ್ನು ಎಳೆದು ಹಿಡಿದುಕೊಳ್ಳಲು ಹೋದನು. ಕುಮು ಕೈಯನ್ನು ಹಿಂದಕ್ಕೆಳೆದುಕೊಂಡು "ನಾನೇ ತೆಗೆಯುತ್ತೇನೆ" ಎಂದಳು. ಹೀಗೆಂದು ಉಂಗುರವನ್ನು ಕಳಚಿಬಿಟ್ಟಳು.

"ಕೊಡು ಅದನ್ನ ಈ ಕಡೆ.. ನನ್ನ ಕೈಗೆ ಕೊಡು."

"ಇಲ್ಲ....ಅದನ್ನ ನಾನೇ ಇಟ್ಟುಕೊಂಡಿರುತ್ತೇನೆ."

ಮಧುಸೂದನನು ಕೋಪಗೊಂಡು ಗದರಿದನು. "ಇಟ್ಟುಕೊಂಡು ಏನು ಮಾಡುತ್ತಿ? ಅದೇನು ಅಷ್ಟು ಭಾರಿ ಅಂತ ಅಂದುಕೊಂಡೆಯೇನು? ಏನುಮಾಡಿದರೂ ಅದನ್ನು ನೀನು ಹಾಕಿಕೊಳ್ಳಲೇ ಕೂಡದು. ಹೇಳಿಬಿಟ್ಟಿದ್ದೇನೆ."

"ಇಲ್ಲ...,ನಾನು ಹಾಕಿಕೊಳ್ಳುವುದಿಲ್ಲ." ಹೀಗೆ ಹೇಳಿ ಅವಳು ಅದನ್ನು ಮಣಿಗಳಿಂದ ಹೆಣೆದಿದ್ದ ಕೈಚೀಲದೊಳಗೆ ಇಟ್ಟುಬಿಟ್ಟಳು.

"ಯಾಕೆ...ಆ ಸಾಮಾನ್ಯ ಪದಾರ್ಥದಮೇಲೆ ಯಾಕಷ್ಟು ಅಭಿಮಾನ? ನಿನಗೆ ಹಠ ಏನೂ ಕಮ್ಮಿ ಇಲ್ಲ."

ಮಧುಸೂದನನ ಧ್ವನಿ ನಡುಗುತ್ತಿತ್ತು. ಉಪ್ಪು ಕಾಗದವನ್ನು ತಗಡಿನ ಮೇಲೆ ಉಜ್ಜಿದಂತೆ ಕಿವಿಗೆ ಹೊಡೆಯುತ್ತಿತ್ತು. ಕುಮುದಿನಿಯ ಮೈ ನಡುಗಿತು.

"ಈ ಉಂಗುರ ಕೊಟ್ಟವರು ಯಾರು ನಿನಗೆ?" ಕುಮುದಿನಿಯು ಸುಮ್ಮನೆಯೇ ಇದ್ದಳು.

"ನಿಮ್ಮ ತಾಯಿ ಅಲ್ಲವೇ?"

ಇನ್ನು ಉತ್ತರ ಕೊಡಲೇ ಬೇಕಾದ ಸಂದರ್ಭ ಬಂತೆಂದು ತಿಳಿದು ಅಸ್ಪಷ್ಟವಾದ ದನಿಯಲ್ಲಿ "ನಮ್ಮಣ್ಣ" ಎಂದಳು.

"ಅಣ್ಣ! ಅದು ಗೊತ್ತಾಗುತ್ತೆ, ಈ ಅಣ್ಣನ ದೆಸೆ ಯಾವ ಸ್ಥಿತಿಯಲ್ಲಿದೆ ಎಂಬುದು ಮಧುಸೂದನನಿಗೆ ಗೊತ್ತು. ಇಂತಹ ಅಣ್ಣನ ಉಂಗುರವೆಂದರೆ ಶನಿಕಾಟದ ಕತ್ತರಿಯೇ ಸರಿ. ಅದು ಮನೆಯೊಳಗೆ ಬರಲೇ ಕೂಡದು. ಆದರೆ ಇವಕ್ಕಿಂತಲೂ ಹೆಚ್ಚಾಗಿ ನೋಯಿಸುತ್ತಿದ್ದುದು ಇನ್ನೂ ಕುಮುದಿನಿಯ ಮನಸ್ಸಿನಲ್ಲಿ ಅಣ್ಣನೇ ಹೆಚ್ಚಾಗಿರುವ ವಿಷಯ. ಅದು ಸ್ವಾಭಾವಿಕವೆಂದೇ ಅದನ್ನು ಸಹಿಸಲು ಕಷ್ಟವಾಗಿತ್ತು. ಹಳೆಯ ಜಮೀನ್ದಾರನ ಜಮೀನನ್ನು ಹೊಸದಾಗಿ ಧನಿಕನಾದ ವರ್ತಕನು ಹರಾಜಲ್ಲಿ ಕೊಂಡಾಗ ಹಳೆಯ ಧಣಿಯನ್ನು ಕುರಿತು ಭಕ್ತರಾದ ರೈತರು ಗೋಳಾಡುತ್ತಾ ಇದ್ದರೆ ನೋಡಿ ಹೊಸಮಾಲೀಕನ ಮೈ ಉರಿಯುವುದಿಲ್ಲವೇ, ಹಾಗೆಯೇ. ಇಂದಿನಿಂದ ಅವಳಿಗೆ

ನಾನೊಬ್ಬನೇ ಎಲ್ಲವೂ. ಈ ಮಾತನ್ನು ಅವಳಿಗೆ ಎಷ್ಟು ಶೀಘ್ರವಾದರೆ ಅಷ್ಟುಬೇಗ. ..ತಿಳಿಯಪಡಿಸಲೇಬೇಕು.

ಅದಲ್ಲದೆ ವಧುವಿಗೆ ಅರಿಶಿನ ಹಚ್ಚುವ ದಿನ ಜನಗಳಿಗೆ ಸಂತರ್ಪಣೆ ಮಾಡಿದಾಗ ತನಗೆ, ತನ್ನಕಡೆಯವರಿಗೆ, ಆದ ಅಪಮಾನಕ್ಕೆ ವಿಪ್ರದಾಸನು ಕಾರಣನಲ್ಲ ಎಂದು ನಂಬಲು ಅಸಾಧ್ಯ. ಆದರೆ ನವಗೋಪಾಲನು ಲಗ್ನದ ಮಾರನೆಯ ದಿನ ಅವನ ಬಳಿ ಬಂದು "ಭಾವ, ಮದುವೆಯ ಮನೆಯಲ್ಲಿ ನೀವುಗಳು ಇಷ್ಟುದಿವಸ ಯಾವರೀತಿಯಾಗಿ ಸಂತೆಪಾಳದ ನಡೆವಳಿಕೆಯನ್ನು ಆಚರಣೆಗೆ ತಂದಿದ್ದೀರೋ ಆ ವಿಷಯದ ಸೂಚನೆ ಕೂಡ ನಮ್ಮಣ್ಣನ ಕಿವಿಗೆ ಹಾಕೀರಿ, ಜೋಕೆ.... ಆತನಿಗೆ ಈ ವಿಷಯ ಏನೂ ಗೊತ್ತಿಲ್ಲ. ಆತನ ಆರೋಗ್ಯ ವಿಪರೀತ ಕೆಟ್ಟಿದೆ. ಹೀಗೆಂದು ಜೋರಿನ ಮಾತಾಡಿದ್ದ. ಉಂಗುರದ ಮಾತನ್ನು ಸದ್ಯಕ್ಕೆ ಅಲ್ಲಿಯೇ ನಿಲ್ಲಿಸಿದ್ದಾಯಿತು. ಆದರೆ ಅದು ಮನಸ್ಸಿನಲ್ಲಿ ಮಾತ್ರ ನಿಂತುಹೋಯಿತು.

ಈ ಕಡೆ ಸೌಂದರ್ಯವಲ್ಲದೆ ಬೇರೊಂದು ಕಾರಣದಿಂದಲೂ ಕುಮುದಿನಿಯ ಬೆಲೆ ಹೆಚ್ಚಾಗಿ ಹೋಗಿತ್ತು. ಆ ಸಲ ಅಗಸೆಬೀಜದ ವ್ಯಾಪಾರದಲ್ಲಿ ಸುಮಾರು ಇಪ್ಪತ್ತು ಲಕ್ಷ ರೂಪಾಯಿಯಷ್ಟು ನಫೆಯಾಯಿತೆಂಬ ಸುದ್ದಿ ನೂರ್‌ನಗರದಲ್ಲಿದ್ದಾಗ, ಸರಿಯಾಗಿ ಲಗ್ನದ ದಿನವೇ, ತಂತಿಯ ಮೂಲಕ ಬಂದಿತ್ತು. ಇದು ಹೊಸ ಮದುವಣಗಿತ್ತಿಯ ಅದೃಷ್ಟವೇ ಎನ್ನಲು ಸಂದೇಹವಿರಲಿಲ್ಲ. ಹೆಣ್ಣಿನ ಅದೃಷ್ಟದಿಂದಲೇ ಹೊನ್ನಿನ ಲಾಭವೆನ್ನುವುದಕ್ಕೆ ಪ್ರಮಾಣ ಕೈಯಲ್ಲಿಯೇ ಇತ್ತು. ಅದಕ್ಕೇ ಕುಮುವನ್ನು ಪಕ್ಕದಲ್ಲಿ ಕೂಡಿಸಿಕೊಂಡು ಗಾಡಿಯಲ್ಲಿ ಹೋಗುತ್ತಿದ್ದರೆ, ಭಾರಿ ಲಾಭದ್ದೊಂದು ಜೀವಂತವಾದ, ವಿಧಿದತ್ತ ಅದೃಷ್ಟ ದಂಡವನ್ನು ಮನೆಗೆಕೊಂಡುಹೋಗುತ್ತಿರುವಂತೆ ಮನಸ್ಸಿನಲ್ಲಿ ಬಹಳ ತೃಪ್ತಿಪಟ್ಟುಕೊಂಡನು....ಹಾಗಲ್ಲದೆ ಹೋಗಿದ್ದಿದ್ದರೆ ಇಂದಿನ ಈ ಸಾರೋಟಿನ ರಥಯಾತ್ರೆ, ಹಿಮ್ಮುಖವಾಗುವ ಅಪಾಯಕ್ಕೆ ಈಡಾಗುತ್ತಿತ್ತು.

## ಇಪ್ಪತ್ತೊಂದನೆಯ ಅಧ್ಯಾಯ

ರಾಜಾ ಎಂಬ ಬಿರುದು ಬಂದ ಮೇಲಿಂದ ಕಲಿಕತ್ತೆಯ ಘೋಷಾಲರ ಮನೆಯ ದ್ವಾರದ ಮೇಲೆ 'ಮಧು ಪ್ರಸಾದ' ವೆಂದು ಹೆಸರು ಕೆತ್ತಲ್ಪಟ್ಟಿತ್ತು. ಅದೇ ಪ್ರಾಸಾದದ ಕಬ್ಬಿಣದ ಗೇಟಿನ ಒಂದು ಕಡೆ ನಮ್ಮ ಕಡೆಯ ಓಲಗವು ಸಿದ್ಧವಾಗಿತ್ತು. ಮತ್ತು ತೋಟದಲ್ಲಿ ಹಾಕಿದ್ದ ಒಂದು ಡೇರಾದಲ್ಲಿ ವಿದೇಶೀ ಬ್ಯಾಂಡ್ ಬಾರಿಸಲ್ಪಡುತ್ತಿತ್ತು. ಗೇಟಿನ ಮೇಲುಗಡೆ ಅರ್ಧ ಚಂದ್ರಾಕಾರದಲ್ಲಿ ಗ್ಯಾಸ್ ದೀಪದ ಅಕ್ಷರಗಳಲ್ಲಿ "ಪ್ರಜಾಪತಯೇ ನಮಃ" ಎಂದು ಬರೆದಿತ್ತು. ಸಂಜೆಯ ಹೊತ್ತು ಬೆಳಕಿನ ಉರಿಯಿಂದ ಈ ಅಕ್ಷರಗಳು ಉಜ್ವಲವಾಗುತ್ತಿದ್ದುವು. ಗೇಟಿನಿಂದ ಜಲ್ಲಿ ಮಾಡಿದ ರಸ್ತೆ ಮನೆಯವರಿಗೂ ಹೋಗುತ್ತಿತ್ತು. ಅದರ ಎರಡು ಪಕ್ಕಗಳಲ್ಲೂ ದೇವದಾರು ಪತ್ರಗಳಿಂದ ಮತ್ತು ಕನಕಾಂಬರದ ಹೂಗಳ ಮಾಲೆಗಳಿಂದ ಅಲಂಕರಿಸಿದ್ದರು. ಮನೆಯ ಮೊದಲ ಅಂತಸ್ತಿಗೆ ಹೋಗುವ ಮೆಟ್ಟಲುಗಳ ಮೇಲೆ ಕೆಂಪು ಶಾಲನ್ನು ಹಾಸಲಾಗಿತ್ತು.

ಬಂಧು ಬಳಗಗಳ ಗುಂಪಿನ ಮಧ್ಯೆಯಿಂದ ವಧೂವರರ ಗಾಡಿಯು ಪೋರ್ಟಿಕೋ (Portico)ದ ಕೆಳಗೆ ಬಂದು ನಿಂತಿತು. ಆ ಸಮಯದಲ್ಲಿ ಶಂಖ, ಉಲು ಧ್ವನಿ, ತಮಟೆ,

ಢೋಲು, ತುತ್ತೂರಿ ಮತ್ತು ಬ್ಯಾಂಡ್, ಓಲಗ, ಎಲ್ಲಾ ಒಂದೇ ಉಸಿರಿನಲ್ಲಿ ಬಾಜಿಸತೊಡಗಿದುವು. ಹತ್ತು ಹದಿನೈದು ವಾದ್ಯಗಳ ಮಾಲುಗಾಡಿಗಳು ಒಂದೇ ಜಾಗದಲ್ಲಿ ಅತಿ ವೇಗದಿಂದ ಢಿಕ್ಕಿಹೊಡೆದಂತೆ ಆಯಿತು. ಮಧುಸೂದನನ ದೂರ ಸಂಬಂಧದ ದೊಡ್ಡಮ್ಮ, ಹಣ್ಣು ಹಣ್ಣು ಮುದುಕಿಯೊಬ್ಬಳು ಬೈತಲೆಯಲ್ಲಿ ಎಷ್ಟು ದೊಡ್ಡ ಜಾಗವಿತ್ತೊ ಅಷ್ಟು ದೊಡ್ಡದಾಗಿ ಕುಂಕುಮವಿಟ್ಟು, ದಪ್ಪವಾದ ಕೆಂಪಂಚಿನ ಸೀರೆಯುಟ್ಟು, ದಪ್ಪವಾದ ಕೈಗಳಲ್ಲಿ ದಪ್ಪ ದಪ್ಪಚಿನ್ನದ ಕಂಕಣಗಳನ್ನು ಮತ್ತು ಶಂಖದ ಬಳೆಗಳನ್ನು ಧರಿಸಿ ಒಂದು ಬೆಳ್ಳಿಯ ತಂಬಿಗೆಯಲ್ಲಿ ನೀರು ತುಂಬಿಕೊಂಡು ಬಂದು ವಧುವಿನ ಪಾದಗಳ ಮೇಲೆ ಚಿಮುಕಿಸಿ ಸೀರೆಯ ಸೆರಗಿನಿಂದ ಒರೆಸಿದಳು. ಕೈಗೆ ಕಬ್ಬಿಣದ ಕಂಕಣವನ್ನು ತೊಡಿಸಿದಳು. ಅನಂತರ ವಧುವಿನ ಬಾಯಿಗೆ ಸ್ವಲ್ಪ ಜೇನು ಹಾಕಿ "ಆಹಾ, ಇಷ್ಟು ದಿನಗಳಾದ ಮೇಲೆ ನಮ್ಮ ನೀಲಾಕಾಶದಲ್ಲಿ ಪೂರ್ಣಚಂದ್ರ ಹುಟ್ಟಿದ ಹಾಗಾಯಿತು. ನೀಲಿಯ ಕೊಳದಲ್ಲಿ ಹೊಂದಾವರೆ ಹುಟ್ಟಿತು." ಎಂದು ನೆಟಿಗೆ ಮುರಿದುಕೊಂಡಳು.

ವಧೂವರರು ಗಾಡಿಯಿಂದಿಳಿದರು. ಅತಿಥಿಗಳಲ್ಲಿ ಕೆಲವರು ಯುವಕರು ಈರ್ಷ್ಯೆಯ ದೃಷ್ಟಿಯಿಂದ ನೋಡುತ್ತಿದ್ದರು. ಒಬ್ಬ "ಈ ದೈತ್ಯನೆಲ್ಲೋ ಸ್ವರ್ಗವನ್ನು ಸೂರೆಮಾಡಿ ಅಪ್ಸರೆಯನ್ನು ಸೆರೆಯಾಗಿ ತಂದಿದಾನಲ್ಲೋ" ಎಂದನು. ಮತ್ತೊಬ್ಬ "ಹಿಂದಿನ ಕಾಲದಲ್ಲಿ ಇಂತಹ ಹೆಣ್ಣಿಗಾಗಿ ರಾಜ ರಾಜರುಗಳಲ್ಲಿ ಯುದ್ಧವಾಗುತ್ತಿತ್ತು. ಈಗಂತೂ ಅಗಸೆ ಬೀಜ ಮಾರಿದ ಹಣದಿಂದಲೇ ಕಾರ್ಯಸಿದ್ಧಿಯಾಗುತ್ತೆ. ಕಲಿಯುಗದ ದೇವತೆಗಳು ಅರಸಿಕರು, ಭಾಗ್ಯಚಕ್ರದ ಗ್ರಹನಕ್ಷತ್ರಗಳೆಲ್ಲಾ ವೈಶ್ಯವರ್ಣದವರು." ಎಂದು ನಿಟ್ಟುಸಿರುಬಿಟ್ಟನು.

ಅದಾದ ಮೇಲೆ ಮನೆ ತುಂಬಿಸಿಕೊಳ್ಳುವುದು, ಹೆಂಗಸರ ಆರತಿ, ಅಕ್ಷತೆ ಮುಂತಾದ ಕ್ರಮಗಳೆಲ್ಲಾ ಪೂರ್ತಿಯಾಗುವ ಹೊತ್ತಿಗೆ ಸಂಜೆಯಾಗುತ್ತ ಬಂದು ಕಾಳ ರಾತ್ರಿಯು ಮೊದಲಾಗುವ ಹೊತ್ತಿಗೆ ಕ್ರಿಯಾಕರ್ಮಗಳು ಸಾಂಗವಾಗಿ ಮುಗಿದುವು.

ಒಬ್ಬಳೇ ಒಬ್ಬಳು ಅಕ್ಕನ ಮದುವೆ ಕುಮುವಿನ ಮನಸ್ಸಿನಲ್ಲಿ ಸ್ಪಷ್ಟವಾಗಿತ್ತು. ಆದರೆ ತಮ್ಮ ಸ್ವಂತ ಮನೆಗೆ ಹೊಸ ಸೊಸೆ ಯಾರೂ ಬಂದುದನ್ನು ಅವಳು ನೋಡಿರಲಿಲ್ಲ, ಯೌವನಾರಂಭಕ್ಕೆ ಪೂರ್ವದಿಂದಲೂ ಅವಳು ಕಲಿಕತ್ತೆಯಲ್ಲಿಯೇ ಅಣ್ಣನ ನಿರ್ಮಲ ಸ್ನೇಹದ ನೆರಳಲ್ಲಿ ಕಾಲ ಕಳೆದಿದ್ದಳು. ಬಾಲೆಯ ಮನಸ್ಸಿನ ಕಲ್ಪನಾ ಪ್ರಪಂಚವು ಸಾಮಾನ್ಯ ಪ್ರಪಂಚದ ಒರಟು ಅಚ್ಚಿನಲ್ಲಿ ಎರಕ ಹೊಯ್ದುದಲ್ಲ, ಬಾಲ್ಯದಲ್ಲಿ ಗಂಡನನ್ನು ಆಶಿಸುವ ವ್ರತದಲ್ಲಿ, ಶಿವಪೂಜೆ ಮಾಡುತ್ತಿದ್ದಾಗ ಗಂಡನ ಧ್ಯಾನದಲ್ಲಿ ಆ ಮಹಾತಪಸ್ವಿನಿ ರಜತಗಿರಿವಾಸಿ ಶಿವನನ್ನೇ ನೋಡುತ್ತಿದ್ದಳು. ಅವಳು ತನ್ನ ತಾಯಿಯನ್ನೇ ಸಾಧ್ವೀ ನಾರಿಯರಆದರ್ಶ ರೂಪವಾಗಿ ತಿಳಿದಿದ್ದಳು. ಎಂತಹ ಶಾಂತ, ಸ್ನಿಗ್ಧ ಕಮನೀಯತೆ,ಎಂತಹ ಧೈರ್ಯ,ಎಷ್ಟು ದುಃಖ, ಎಷ್ಟು ದೇವತಾರ್ಚನೆ, ವ್ರತಾಚರಣೆ, ಎಷ್ಟು ದಣಿವಿಲ್ಲದ, ಬೇಸರವಿಲ್ಲದ ತತ್ಪರತೆ! ಇತ್ತ ಆಕೆಯ ಗಂಡನ ಸ್ವಭಾವದಲ್ಲಿ ಮತ್ತು ನಡವಳಿಕೆಯಲ್ಲಿ ಸ್ವಲ್ಪ ಕುಂದಿತ್ತು. ಹಾಗಿದ್ದೂ ಕೂಡ ಅವರ ಬಾಳುವೆಯಲ್ಲಿ ಬಲು ದೊಡ್ಡ ಉದಾರತೆಯಿತ್ತು, ದೃಢವಾದ ಪೌರುಷವಿತ್ತು. ಅವರ ಬಳಿ ಹೀನತೆಯಾಗಲೀ, ಕಪಟವಾಗಲೀ, ಲೇಶಮಾತ್ರವೂ ಇರಲಿಲ್ಲ. ಆತನು ನಂಬಿಕೊಂಡಿದ್ದ ಮರ್ಯಾದೆಯ ಅರ್ಥ ಪ್ರಾಚೀನ ಕಾಲದ ಪೌರಾಣಿಕ ಆದರ್ಶದ್ದು. ಆತನ ಜೀವನದಲ್ಲಿ ಪ್ರತಿ ದಿನವೂ ಪ್ರಾಣಕ್ಕಿಂತಲೂ ಮಾನವೇ ದೊಡ್ಡದು, ಅರ್ಥಕ್ಕಿಂತ ಐಶ್ವರ್ಯವೇ ಶ್ರೇಷ್ಠ ಎಂದು ಪ್ರಮಾಣಿತವಾಗುತ್ತಿತ್ತು. ಆತನೂ ಆತನ ಜೊತೆಯ

ನರೂ ಬಹಳ ದೊಡ್ಡ ಸ್ವಭಾವದವರು. ತಮಗೆ ಘಾಯವಾದರೂ ಸರಿ ಗೌರವವನ್ನು ಮಾತ್ರ, ಘಾಸಿಯಾಗದಂತೆ ಕಾಪಾಡುವುದೇ ಅವರ ಕರ್ತವ್ಯ, ವಾಡಿಕೆ. ಘಾಸಿಯಾಗದೆಯೇ ಸಂಪಾದಿಸಿದ ಣದ ಅಹಂಕಾರ ಪ್ರಚಾರವಲ್ಲ.

ಕುಮುವಿನ ಎಡಗಣ್ಣು ಎಂದು ಅದುರಿತೋ ಅಂದು ಅವಳು ತನ್ನ ಸಮಸ್ತ ಭಕ್ತಿಯೊಡನೆ ತ್ಮೋತ್ಸರ್ಗ ಮಾಡುವ ಪೂರ್ಣ ಸಂಕಲ್ಪದಿಂದ ಸಿದ್ಧಳಾಗಿದ್ದಳು. ಎಲ್ಲಿಯಾದರೂ ಯಾವ ಗೆಯ ಅಡ್ಡಿಯಾಗಲಿ, ಆತಂಕವಾಗಲೀ ಬರಬಹುದೆಂಬ ಭಯ ಅವಳ ಕಲ್ಪನೆಯಲ್ಲಿಯೂ ಬಂದಿ ಲಿಲ್ಲ. ವಿದರ್ಭರಾಜನಾದ ನಳನೇ ತನ್ನ ಗಂಡನೆಂದು ದಮಯಂತಿಯು ಯಾವ ಬಗೆಯಾಗಿ ಳಿದಿದ್ದಳು? ಅವಳ ಮನಸ್ಸಿನೊಳಗೆ ನಿಶ್ಚಯವಾದ ಸುದ್ದಿ ಬಂದು ತಲುಪಿತ್ತು. ಅಂತಹುದೇ ಂಡಿತವಾದ ಸುದ್ದಿ ಕುಮುವಿನ ಮನಸ್ಸಿನಲ್ಲಿ ಏಕೆ ಬರಲಿಲ್ಲ? ಸ್ವಯಂವರದ ಏರ್ಪಾಡೆಲ್ಲವೂ ದ್ಧವಾಗಿತ್ತು. ರಾಜನೂ ಬಂದ. ಆದರೆ ಮನಸ್ಸಿನಲ್ಲಿ ಯಾರನ್ನು ಸ್ಪಷ್ಟವಾಗಿ ನೋಡಿದ್ದಳೋ ವನನ್ನು ಹೊರಗೇಕೆ ನೋಡಲಿಲ್ಲ? ರೂಪವೂ ಬಾಧಿಸುತ್ತಿರಲಿಲ್ಲ. ವಯಸ್ಸೂ ಬಾಧಕವಲ್ಲ... ವರೆ ರಾಜ? ಆ ಸತ್ಯವಾದ ರಾಜನೆಲ್ಲಿ?

ಅದಾದಮೇಲೆ ಇಂದು ಯಾವ ಅನುಷ್ಠಾನದ ಮೂಲಕ ಕುಮುವನ್ನು ತನ್ನ ಹೊಸ ಂಸಾರದೊಳಕ್ಕೆ ಆಹ್ವಾನ ಮಾಡಿದನೋ ಅದರಲ್ಲಿ ಈ ನವವಧು ಆಕಾಶದ ಸಪ್ತರ್ಷಿಗಳ ಶೀರ್ವಾದವನ್ನು ಕೇಳಬಹುದಾದಂತಹ ಯಾವುದಾದರೂ ವಜ್ರಗಂಭೀರ ಮಂಗಳ ಧ್ವನಿಯನ್ನು ಜಿಸಲಿಲ್ಲವೇಕೆ? ಅನುಷ್ಠಾನವೆಲ್ಲವನ್ನೂ ಪರಿಪೂರ್ಣ ಮಾಡಿದ ಮೇಲೆ "ಜಗತಃ ಪಿತರೌ ವಂದೇ ರ್ವತೀ ಪರಮೇಶ್ವರೌ" ಎನ್ನುವಂತಹ ವಂದನಾಗಾನವು ಉದಾತ್ತ ಸ್ವರದಲ್ಲಿ ಏಕೆ ಜಾಗರಿತ ಗಲಿಲ್ಲ? ಯಾರ ಮಧ್ಯೆ ಚಿರಪುರುಷನು ಮತ್ತು ಚಿರನಾರಿಯು ವಾಕ್ಯ ಮತ್ತು ಅರ್ಥದಂತೆ ಕತ್ರ ಬೆರೆತಿರುವರೋ ಅವರೇ ಜಗತ್‌ಪಿತೃಗಳು!

## ಇಪ್ಪತ್ತೆರಡನೆಯ ಅಧ್ಯಾಯ

ಮಧುಸೂಧನನು ಕಲಿಕತ್ತೆಯಲ್ಲಿ ವಾಸಮಾಡಲು ಬಂದಾಗ ಮೊದಲು ಒಂದು ಹಳೆಯ ನೆಯನ್ನು ಕೊಂಡಿದ್ದ. ಅದೇ ತೊಟ್ಟಿಯ ಮನೆ ಇಂದು ಅವನ ಅಂತಃಪುರವಾಗಿತ್ತು. ಈಚೆಗೆ ದರ ಎದುರುಗಡೆಯೇ ಇಂದಿನ ಕಾಲದ ಫ್ಯಾಷನ್ನಿನ ದೊಡ್ಡದೊಂದು ಹೊಸ ಮಹಲನ್ನು ನಕ್ಕೆ ಸೇರಿದಂತೆಯೇ ಕಟ್ಟಿಸಿದನು. ಈ ಮನೆಯೇ ಅವನ ಬೈಠಕು ಮಹಲು. ಈ ಎರಡು ಮನೆ ಯೂ ಒಟ್ಟಿಗೆ ಸೇರಿದಂತಿದ್ದರೂ ಅವು ಸಂಪೂರ್ಣ ಬೇರೆಬೇರೆ ಜಾತಿ. ಹೊರಗಿನ ಮಹಲಿನ ನೆಲ ಲ್ಲಾ ಅಮೃತಶಿಲೆಯದು. ಅದರ ಮೇಲೆ ವಿಲಾಯತಿಯ ರತ್ನಗಂಬಳಿ. ಗೋಡೆಗಳಮೇಲೆ ಗುರಂಗಿನ ಕಾಗದಗಳು ಅಂಟಿಸಿದ್ದುವು. ಅದರ ಮೇಲೆ ನಾನಾಬಗೆಯ ಚಿತ್ರಗಳು ತಗುಲ ಕಲ್ಪಟ್ಟಿದ್ದುವು. ಕೆಲವು ಕೆತ್ತನೆಯ ಕಲಾಕೃತಿಗಳು (engraving), ಕೆಲವು ತೈಲಚಿತ್ರಗಳ ಲುಗಳು, (oleograph), ಕೆಲವು ಮೂಲ ತೈಲಚಿತ್ರಗಳು. ಅವುಗಳ ವಿಷಯಗಳು ಬೇರೆ ರೆ ಬಗೆಯವು. ಮೃಗವನ್ನು ಅಟ್ಟಿಕೊಂಡು ಹೋಗುತ್ತಿರುವ ಬೇಟೆನಾಯಿಗಳ ತಂಡ ಅಥವಾ ರ್ಬಿಯ ಪಂದ್ಯದಲ್ಲಿ ಗೆದ್ದ ಕೆಲವು ವಿಖ್ಯಾತ ಕುದುರೆಗಳು, ವಿದೇಶೀ ಪ್ರಕೃತಿ ದೃಶ್ಯಗಳು

(Landscape) ಅಥವಾ ಸ್ನಾನ ಮಾಡುತ್ತಿರುವ ನಗ್ನನಾರಿಯರು. ಇವಲ್ಲದೆ ಗೋಡೆಯಲ್ಲಿನ
ಗೂಡುಗಳಲ್ಲಿ ಚೈನಾಪಾತ್ರೆಗಳು, ಮೊರಾದಾಬಾದಿನ ಹಿತ್ತಾಳೆಯ ತಟ್ಟೆ, ಜಪಾನಿನ ಕಾಗದದ
ಬೀಸಣಿಗೆ, ಟಿಬೆಟ್ಟಿನ ಚಾಮರ ಇತ್ಯಾದಿ ಎಷ್ಟೋ ವಿಧವಾದ, ಅಸಂಗತವಾದ, ಅಮೌಲ್ಯವಾದ
ಪದಾರ್ಥಗಳು ಅಸ್ತವ್ಯಸ್ತವಾಗಿ ಒಂದು ಕ್ರಮವಿಲ್ಲದೆ ಬಿದ್ದಿದ್ದುವು. ಈ ಸಮಸ್ತ ಶಿಸ್ತಿನ ಸಾಮಾನು
ಗಳನ್ನು ಆರಿಸುವಿಕೆ, ಕೊಳ್ಳುವಿಕೆ ಮತ್ತು ಅಣಿಯಾಗಿ ಜೋಡಿಸುವ ಜವಾಬುದಾರಿ ಮಧು
ಸೂದನನ ಆಂಗ್ಲೇಯ ಕಾರ್ಯದರ್ಶಿಯಮೇಲೆ ಬಿದ್ದಿತ್ತು. ಇವುಗಳೇ ಅಲ್ಲದೇ ಮಕಮಲ್ಲಿನ
ಮತ್ತು ರೇಶಿಮೆಯ ಬಟ್ಟೆ ಹೆಣೆದಮೆತ್ತೆಗಳಿಂದ ಕೂಡಿದ ಸೋಫಾ, ಕುರ್ಚಿಗಳು ಅರಣ್ಯದಂತೆ
ತುಂಬಿದ್ದುವು.

ಗಾಜಿನ ಅಲಮಾರಿನಲ್ಲಿ ಆಡಂಬರದ ರಟ್ಟುಗಳುಳ್ಳ ಇಂಗ್ಲೀಷು ಪುಸ್ತಕಗಳು - ಕೈಯಲ್ಲಿ
ಪರಕೆಯಿಟ್ಟುಕೊಂಡು ಧೂಳು ಹೊಡೆಯುವ ಚಾಕರನ ಹೊರತಾಗಿ ಯಾವ ಮನುಷ್ಯನೂ ಅವು
ಗಳನ್ನು ಕೈಯಿಂದ ಮುಟ್ಟುವ ಪಾಪಕ್ಕೆ ಹೋಗಿರಲಿಲ್ಲ. ಟೀಪಾಯಿಯಮೇಲೆ ಚಿತ್ರಗಳ
ಆಲ್ಬಮ್....ಅದರಲ್ಲಿ ಮನೆಯ ಜನಗಳ ಚಿತ್ರಗಳು, ಅಲ್ಲದೆ ವಿದೇಶೀ ನಟಿಯರ ಚಿತ್ರಗಳು.

ಹಿಂದಿನ ಅಂತಃಪುರದಲ್ಲಿ ಕೆಳಅಂತಸ್ತಿನ ಕೋಣೆಗಳೆಲ್ಲಾ ಕತ್ತಲು ಕವಿದು, ಹೊಗೆಯ
ಕರಿಗಳಿಂದ ಕಪ್ಪಗಾಗಿ ಹೋಗಿದ್ದುವು. ಅಂಗಳದಲ್ಲಿ ಕಸ-ಅಲ್ಲಿಯೇ ನೀರಿನ ಕೊಳಾಯಿ; ಅದರ
ಸುತ್ತ ಪಾತ್ರೆ ತೊಳೆಯುವ, ಬಟ್ಟೆಯೊಗೆಯುವ ಕೆಲಸ ಸದಾ ನಡೆಯುತ್ತಲೇ ಇರುತ್ತದೆ. ಆವಶ್ಯಕ
ವಿಲ್ಲದಿದ್ದಾಗಲೂ ಕೊಳಾಯಿಯ ನೀರು ಹರಿಯುತ್ತಲೇ ಇರುತ್ತದೆ. ಮೇಲುಗಡೆಯ ವರಾಂಡ
ದಿಂದ ಹೆಂಗಸರ ಒದ್ದೆಬಟ್ಟೆಗಳು ನೇತಾಡುತ್ತಿರುತ್ತವೆ. ಮೇಲಿನ ಛಾವಣಿಯಂಚಿನ ಹಕ್ಕಿಗಳ
ಗೂಡುಗಳಿಂದ ಹಿಕ್ಕೆಸಳು ಚದುರಿಕೊಂಡು ಅಂಗಳದೊಳಕ್ಕೆ ಬೀಳುತ್ತವೆ. ವರಾಂಡದ ಗೋಡೆ
ಗಳಮೇಲೆ ಅಲ್ಲಲ್ಲಿ ತಾಂಬೂಲ ಉಗಿತದ ಓಕುಳಿ ಬಣ್ಣದ ಗುರುತುಗಳು ಮತ್ತು ನಾನಾಬಗೆಯ
ಮಲಿನತೆಯ ಅಕ್ಷಯ ಚಿಹ್ನೆಗಳು.

ಅಂಗಳದ ಪಶ್ಚಿಮ ದಿಕ್ಕಿನ ಜಗುಲಿಯ ಒಂದು ಪಕ್ಕಕ್ಕೆ ಅಡುಗೆಯ ಮನೆ. ಅಲ್ಲಿಂದ ಸದಾ
ಅಡುಗೆ ಮಾಡುವ ವಾಸನೆ ಮತ್ತು ಇದ್ದಲ ಹೊಗೆ ಮೇಲಂತಸ್ತಿನ ಕೋಣೆಗಳೊಳಗೆ ಹರಡು
ತ್ತಿತ್ತು.

ಅಡುಗೆಮನೆಯ ಹೊರಗಡೆ ಪೌಳೀ ಗೋಡೆಯಿಂದ ಸುತ್ತುವರೆಯಲ್ಪಟ್ಟ ಅಲ್ಪಸ್ವಲ್ಪ ಖಾಲಿ
ನೆಲದಲ್ಲಿ ಒಂದು ಮೂಲೆಯಲ್ಲಿ ಕಲ್ಲಿದ್ದಲು ರಾಶಿ....ಒಲೆಯ ಬೂದಿ, ಒಡಕಲು ಹಂಡೆ, ಹರಿ
ಮುಕರಿಗಳು, ಜೀರ್ಣವಾದ ಜಲ್ಲಡಿಗಳು ರಾಶಿರಾಶಿಯಾಗಿ ಬಿದ್ದಿರುತ್ತವೆ. ಬೇರೊಂದು ಕ
ಒಂದೆರಡು ದನಗಳು ಕರುಗಳೊಂದಿಗೆ ಕಟ್ಟಿಹಾಕಲ್ಪಟ್ಟಿವೆ. ಅವುಗಳ ಹುಲ್ಲು ಮತ್ತು ಸಗ
ಶೇಖರವಾಗಿತ್ತು. ಗೋಡೆಯಲ್ಲಿ ಸ್ವಲ್ಪವೂ ಸ್ಥಳ ಬಿಡದೆ ಬೆರಣಿ ತಟ್ಟಲ್ಪಟ್ಟಿತ್ತು.

ಒಂದು ಮೂಲೆಯಲ್ಲಿ ಒಂದೇ ಒಂದು ಬೇವಿನಗಿಡ. ಅದರ ಬುಡಕ್ಕೆ ಹಗ್ಗದಿಂದ ದನ ಕ
ಅದರ ತೊಗಟೆಯೆಲ್ಲಾ ಕಿತ್ತುಹೋಗಿತ್ತು ಮತ್ತು ಆಗಾಗ ಎಲೆಗಳನ್ನೆಲ್ಲಾ ಕಿತ್ತು ಹಾಕುತ್ತಿ
ದ್ದರಿಂದ ಗಿಡವನ್ನೆಲ್ಲಾ ಬೋಳುಮಾಡಿಬಿಟ್ಟಿದ್ದರು. ಅಂತಃಪುರಕ್ಕೆ ಸೇರಿದಂತೆ ಇದಿಷ್ಟೇ ಖಾಲಿ
ನೆಲ. ಬಾಕಿ ಸಮಸ್ತ ಭೂಮಿಯೆಲ್ಲಾ ಹೊರಗಡೆಯಿತ್ತು. ಅದು ಮಾತ್ರ ಲತಾಮಂಟಪ, ರಂ
ರಂಗಾದ ಹೂಗಳ ಕುಂಡಗಳು, ಗರಿಕೆ ಹುಲ್ಲಿನ ಚೌಕಗಳು, ಕೆಮ್ಮಣ್ಣು ಅಥವಾ ಜಲ್ಲಿಕ

ದಮ್ಮಸ್ಸು ಮಾಡಿದ ಕಾಲುದಾರಿಗಳು, ಕಲ್ಲಿನ ಪ್ರತಿಮೆಗಳು ಮತ್ತು ಕಬ್ಬಿಣದ ಬೆಂಚುಗಳು—ಇವು ಗಳಿಂದ ಸುಸಜ್ಜಿತವಾಗಿತ್ತು.

ಒಳಗಣ ಮಹಲಿನ ಮೂರನೆಯ ಅಂತಸ್ತಿನಲ್ಲಿಯೇ ಕುಮುದಿನಿಯ ಶಯ್ಯಾಗೃಹ. ಅದರಲ್ಲಿ ಮಹಾಗನಿ (Mahogany) ಮರದ ಬಹಳ ದೊಡ್ಡ ಮಂಚ....ಅದಕ್ಕೆ ಸುತ್ತ ಸೊಳ್ಳೆಯ ಪರದೆ; ಅದಕ್ಕೆ ರೇಶ್ಮೆಯ ಅಂಚು ಹೆಣೆದಿತ್ತು. ಸುಪ್ಪತ್ತಿಗೆಯ ಕಾಲ್ದೆಸೆಯಲ್ಲಿ ನಗ್ನ ಸ್ತ್ರೀಯೊಬ್ಬಳ ಚಿತ್ರ, ಎದೆಯಮೇಲೆ ಎರಡುಕೈಗಳನ್ನು ಮುಚ್ಚಿಕೊಂಡು ಲಜ್ಜೆಯ ಸೋಗನ್ನು ತೋರುತ್ತಿದ್ದಳು.... ತಲೆಯ ದಿಕ್ಕಿನಲ್ಲಿ ಮಧುಸೂದನನ ತೈಲಚಿತ್ರ. ಅದರಲ್ಲಿ ಅವನು ಹೊದದಿದ್ದ ಕಾಶ್ಮೀರಿ ಶಾಲಿನ ಮೇಲಿನ ಕಸೂತಿಯ ಕೆಲಸವೇ ಎಲ್ಲಕ್ಕಿಂತಲೂ ಹೆಚ್ಚು ಆಕರ್ಷಕವಾಗಿದ್ದುದು. ಒಂದು ಕಡೆ ಗೋಡೆಗೆ ಸೇರಿದಂತೆ ಬಟ್ಟೆಗಳನ್ನಿಡುವ ಗೂಡು. ಅದರಮೇಲೆ ದೊಡ್ಡ ಕನ್ನಡಿ,ಕನ್ನಡಿಯ ಎರಡು ಕಡೆಯೂ ಎರಡುಪಿಂಗಾಣಿಯ ಶಾಮಾದಾನಿ (ಗಂಧದ ಕಡ್ಡಿಗಳನ್ನು ಸಿಕ್ಕಿಸುವ ಪಾತ್ರೆ)....ಕನ್ನಡಿಯ ಮುಂದೆ ಪಿಂಗಾಣಿಯ ತಟ್ಟೆಯಲ್ಲಿ ಪೌಡರ್ ಡಬ್ಬಿ. ಬೆಳ್ಳಿಯ ಕಟ್ಟು ಹಾಕಿದ ಬಾಚಣಿಗೆ, ಮೂರು ನಾಲ್ಕು ಬಗೆಯ ಪರಿಮಳಗಳು, ಪರಿಮಳವೆರಚುವ ಪಿಚಕಾರಿ ಮತ್ತು ಇವಲ್ಲದೆ ಇನ್ನೂ ಎಷ್ಟೋ ವಿಧವಾದ ಶೃಂಗಾರದ ಸಾಮಾನುಗಳು. ಇವುಗಳನ್ನೆಲ್ಲಾ ಆಂಗ್ಲೇಯ ಕಾರ್ಯದರ್ಶಿ ತಂದುಕೊಟ್ಟಿದ್ದನು. ನಾನಾ ಶಾಖೆಗಳುಳ್ಳ ಗುಲಾಬಿ ಬಣ್ಣದ ಗಾಜಿನ ಫೂಲುದಾನಿಯಲ್ಲಿ ಹೂವಿನ ದಂಡೆಗಳು ಇಡಲ್ಪಟ್ಟಿದ್ದುವು. ಬೇರೊಂದು ದಿಕ್ಕಿನಲ್ಲಿ ಬರೆಯುವ ಮೇಜು, ಅದರಮೇಲೆ ಬೆಲೆ ಬಾಳುವ ಸ್ಫಟಿಕ ಶಿಲೆಯ ಮಸಿಕುಡಿಕೆ, ಲೇಖನಿ ಮತ್ತು ಬರೆಯುವ ಕಾಗದಗಳು. ಆಕಡೆ ಈಕಡೆ ದಪ್ಪವಾದ ಮೆತ್ತೆಗಳುಳ್ಳ ಸೋಫಾ ಮತ್ತು ಆರಾಮ ಕುರ್ಚಿ, ಎಲ್ಲೋ ಒಂದು ಕಡೆ ಟೀಪಾಯಿ, ಅದು ಚಾ ಕುಡಿಯುವಾಗಲೂ,ಸಮಯ ಬಂದಾಗ ಇಸ್ಪೀಟು ಆಟವಾಡಲೂ ಕೆಲಸಕ್ಕೆ ಬರುತ್ತಿತ್ತು.

ಹೊಸ ಮಹಾರಾಣಿಗೆ ಉಪಯುಕ್ತವಾಗುವಂತೆ ಶಯನ ಗೃಹವನ್ನು ಹೇಗೆ ಸಜ್ಜುಗೊಳಿಸಬೇಕೆಂಬುದನ್ನು ಮಧುಸೂದನ ಬಹಳವಾಗಿ ಆಲೋಚನೆ ಮಾಡಿದ್ದನು. ಪರಿಣಾಮದಲ್ಲಿ ಆದದ್ದೇನೆಂದರೆ, ಒಳಮನೆಯ ಹಳೆಯ ಕಾಲದ ಮೂರನೆಯಂತಸ್ತಿನ ಈ ಕತ್ತಲು ಕೋಣೆ ಕೊಳಕು ಚಿಂದಿಯನ್ನು ತೊಟ್ಟ ಭಿಕ್ಷುಕನ ತಲೆಯ ಮೇಲೆ ಜರತಾರಿಯ ಪಗಡಿ ಇಟ್ಟಂತಾಗಿತ್ತು.

ಕಡೆಗೊಂದು ಹೊತ್ತಿನಲ್ಲಿ ಕೋಲಾಹಲ ಗದ್ದಲ ಗಡಿಬಿಡಿಗಳ ಹುಚ್ಚು ಹೊಳೆ ಹರಿದಿದ್ದ ಹಗಲನ್ನು ದಾಟಿ ಕುಮುದಿನಿಯು ಈ ಕೋಣೆಗೆ ಬಂದು ಸೇರಿದಳು. ಅವಳನ್ನು ಕೈ ಹಿಡಿದು ಕರೆತಂದದ್ದು ಮೋತಿಯಮ್ಮ, ಅವಳೇ ಇವತ್ತು ರಾತ್ರಿ ಕುಮುವಿನ ಜೊತೆಯಲ್ಲಿ ಮಲಗುವುದೆಂದು ನಿಶ್ಚಯವಾಗಿತ್ತು. ಇನ್ನೂ ಒಂದು ತಂಡ ಹೆಂಗಸರು ಅವರನ್ನು ಹಿಂಬಾಲಿಸಿ ಬಂದರು. ಅವರುಗಳು ಕುತೂಹಲ ಮತ್ತು ವಿನೋದಗಳ ಅಮಲು ಇಳಿಯಲುತ್ಸುಕರಾಗಿರಲಿಲ್ಲ. ಮೋತಿಯಮ್ಮ ಅವರನ್ನು ಗದರಿಸಿ ಹೊರಗೆ ಕಳುಹಿಸಿಬಿಟ್ಟಳು. ಕೋಣೆಯೊಳಗೆ ಪ್ರವೇಶಿಸಿ ಅವಳು ಒಂದು ಕೈಯಲ್ಲಿ ಇವಳ ಗಲ್ಲವೆತ್ತಿ ಹಿಡಿದು "ನಾನು ಸ್ವಲ್ಪ ಹೊತ್ತು ಮಾತ್ರ ಆ ಪಕ್ಕದ ಕೋಣೆಗೆ ಹೋಗುತ್ತೇನೆ. ನೀನು ಸ್ವಲ್ಪ ಅತ್ತುಬಿಡಕ್ಕಾ, ನಿನ್ನ ಕಣ್ಣೀರು ನೋಡಿದರೆ ಎದೆ ತುಂಬಿ ಬಿರಿಯುವ ಹಾಗೆ ಕಾಣುತ್ತಿದೆ." ಎಂದು ಹೇಳಿ ಅವಳು ಹೊರಟು ಹೋದಳು.

ಕುಮುದಿನಿಯು ಕುರ್ಚಿಯ ಮೇಲೆ ಕುಸಿದುಬಿದ್ದಳು. ಅಳುವುದು ಆಮೇಲಾಗಲಿ. ಈಗ ಮೊದಲು ತನ್ನನ್ನು ತಾನೇ ಸರಿಪಡಿಸಿಕೊಳ್ಳಬೇಕು. ಅದು ಮೊದಲು ಆವಶ್ಯಕ. ಒಳಗೊಳಗೇ

ಅವಳನ್ನು ಹೆಚ್ಚಾಗಿ ಬಾಧಿಸುತ್ತಿದ್ದ ವ್ಯಥೆ...,ತನ್ನಿಂದಲೇ ತನ್ನ ಆತ್ಮಕ್ಕಾದ ಅವಮಾನ. ಇದು ವರೆಗೆ ಅವಳು ಮಾಡಿಕೊಂಡಿದ್ದ ಸಂಕಲ್ಪಗಳೆಲ್ಲದರ ವಿರುದ್ಧವಾಗಿಯೇ ಅವಳ ವಿದ್ರೋಹಿಯಾದ ಮನಸ್ಸು ಸಾಗಿತ್ತು. ಆ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳಲು ಅವಳಿಗೆ ಸ್ವಲ್ಪವೂ ಸಮಯ ಸಿಕ್ಕಿರಲಿಲ್ಲ. "ದೇವರೇ, ನನಗೆ ಬಲಕೊಡು, ನನ್ನ ಬಾಳನ್ನು ಕತ್ತಲೆಯಾಗಿ ಮಾಡಬೇಡ ನಾನು ನಿನ್ನ ದಾಸಿ, ನನಗೆ ಗೆಲುವಾಗುವಂತೆ ವರ ಕೊಡು. ..ಅದು ನಿನಗೆ ಗೆಲುವಾದಂತೆ ಸ್ವಾಮೀ." ಎಂದು ಮೊರೆಯಿಟ್ಟಳು.

ಪ್ರೌಢವಯಸ್ಸಿನ ದುಂಡುದುಂಡಾದ ಮೈಯುಳ್ಳ, ಶ್ಯಾಮಲವರ್ಣದ ಸುಂದರಿಯಾದ ವಿಧವೆ ಯೊಬ್ಬಳು ಕೋಣೆಯೊಳಗೆ ಪ್ರವೇಶಿಸಿ "ಮೋತಿಯಮ್ಮ ನಿನಗೆ ಸ್ವಲ್ಪ ಬಿಡುವು ಕೊಟ್ಟಿದ್ದಾಳೆ ಇದೇ ಸಮಯ ನಾನೂ ಬಂದೆ. ಅವಳು ಯಾರನ್ನೂ ನಿನ್ನ ಹತ್ತಿರ ಸುಳಿಯಗೊಡುವುದಿಲ್ಲ. ನಿನ್ನ ಸುತ್ತ ಬೇಲಿಯೇ ಹಾಕಿಬಿಟ್ಟಿದ್ದಾಳೆ. ನಾನು ಆ ಬೇಲಿ ಕತ್ತರಿಸುವುದಕ್ಕೆ ಕನ್ನಗತ್ತರಿ ಇಟ್ಟು ಕೊಂಡು ತಿರುಗುತ್ತಿದ್ದೇನೆ. ಅವಳ ಮುಳ್ಳು ಬೇಲಿ ಕತ್ತರಿಸಿ ನಿನ್ನನ್ನು ಹೊತ್ತುಕೊಂಡುಹೋಗಿ ಬಿಡುತ್ತೇನೆ. ನಾನು ನಿನ್ನ ದೊಡ್ಡ ಓರಗಿತ್ತಿ. ಶ್ಯಾಮಸುಂದರಿ. ನಿನ್ನ ಗಂಡ ನನಗೆ ಮೈದುನ ನಾಗಬೇಕು. ಜಮಾಖರ್ಚಿನ ಖಾತೆಯಲ್ಲಿಯೇ ಅವನಿಗೆ ಹೆಂಡತಿಯಾಗುವವಳು ಬರುವವಳೆಂದು ನಾವೆಲ್ಲಾ ಕಡೆಯತನಕ ಅಂದುಕೊಂಡಿದ್ದೆವು. ಆ ಖಾತೆಯಲ್ಲೇ ಒಂದು ವಿಧವಾದ ಯಕ್ಷಿಣಿ ಯಿದೆಯಮ್ಮಾ,....ನೋಡು ಮತ್ತೆ, ಈ ವಯಸ್ಸಿನಲ್ಲಿ ಕೂಡ ಇಂತಹ ಸುಂದರಿ ಆ ಖಾತೆಯ ಬಲ ದಿಂದಲ್ಲವೇ ಸಿಕ್ಕಿದುದು. ಈಗದನ್ನು ಜೀರ್ಣಿಸಿಕೊಂಡರೆ ಸಾಕು. ಈಗ ಮಂತ್ರದ ಬಲ ನಡೆಯ ಲಿಕ್ಕಿಲ್ಲ. ಸತ್ಯವಾಗಿ ಹೇಳಿ, ತಂಗಿ ನನ್ನ ಮುದಿ ಮೈದುನ ನಿನ್ನ ಮನಸ್ಸಿಗೊಪ್ಪಿದನೇ?"

ಕುಮು ಅವಾಕ್ಕಾಗಿ ಹೋದಳು. ಇವಳಿಗೇನು ಉತ್ತರ ಹೇಳುವುದು ಎನ್ನುವುದು ತೋಚ ಲಿಲ್ಲ. ಶ್ಯಾಮಾ ಮತ್ತೆ "ಅರ್ಥವಾಯಿತು, ಬಿಡು, ಹಾಗೆ ಒಪ್ಪಿಗೆಯಾಗದಿದ್ದರೇನಾಯಿತು. ಏಳು ಸುತ್ತು ಸುತ್ತಿ ಬಂದ ಮೇಲೆ ಈಗ ಇಪ್ಪತ್ತೊಂದು ಸುತ್ತು ಸುತ್ತಿದರೂ ಉರಲು ಬಿಡಿಸಿಕೊಳ್ಳು ವುದಕ್ಕಾಗುತ್ತದೆಯೇ ?" ಎಂದಳು.

ಕುಮು "ಇದೇನು ಮಾತನಾಡುತ್ತಿದೀರಿ, ಅಕ್ಕಾ ?" ಎಂದಳು.

ಶ್ಯಾಮಾ ಉತ್ತರವೀಯುತ್ತಾ "ಮಾತು ಬಿಚ್ಚಿ ಹೇಳಿದುದೇ ತಪ್ಪೇನೆ, ತಂಗಿ ? ಮುಖ ನೋಡಿ ದರೆ ತಿಳಿಯೋದಿಲ್ಲವೆ? ನಿನ್ನದೇನು ತಪ್ಪು, ಬಿಡು, ಪಾಪ....ಆತ ನಮ್ಮವನಾದರೇನೀಗ, ಇರುವ ಕಣ್ಣು ಕುರುಡು ಮಾಡಿಕೊಂಡು ಕೂತಿರಲಾಗುತ್ತದೆಯೇ? ಬಹಳ ಕಠಿಣವಾದ ಕೈಯಲ್ಲಿ ಬಿದ್ದಿ ದ್ದೀಯ. ಸ್ವಲ್ಪ ಹುಷಾರಾಗಿ ನಡೆದುಕೋಬೇಕಮ್ಮಾ....ಹೇಳಿದ್ದೇನೆ." ಎಂದಳು. ಈ ಸಮಯ ದಲ್ಲಿ ಮೋತಿಯಮ್ಮ ಕೋಣೆಯಲ್ಲಿ ಪ್ರವೇಶಿಸಿದುದನ್ನು ನೋಡಿ "ಹೆದರಬೇಡ, ಹೆದರಬೇಡವೆ ಬಕುಳದ ಹೂವೇ, ಹೆದರಬೇಡ. ಇಗೋ ಹೊರಟೆ, ನೀನು ಹೇಗಿದ್ದರೂ ಇಲ್ಲ, ಇದೇ ಸಮಯದಲ್ಲಿ ಹೊಸ ಸೊಸೆಯನ್ನು ಒಂದು ಸಲ ನೋಡಿಕೊಂಡು ಬರೋಣ ಅಂತ ಬಂದೆ, ಅಂತೂ ಇವ ಖಂಡಿತ ನೋಡು, ಈ ಹುಡುಗಿ ಕೃಪಣನ ಸಂಪತ್ತಿದ್ದ ಹಾಗೆ....ಹುಷಾರಾಗಿಟ್ಟುಕೊಳ್ಳಬೇಕು ನನ್ನ ಈ ಸಖಿಗೆ ಹೇಳುತಾಯಿದ್ದೆ, ನಮ್ಮ ಮೈದುನನಿಗೆ ಪಾಪ, ಅರೆ ತಲೆನೋವು, ಎಡ ಪಾರ್ಶ್ವ ಅಂದರೆ ಪಡೆಯುವ ತಲೆಗೆ ಹೆಂಡತಿ ಬಂದ ಹಾಗೆ ಆಯಿತು. ಈಗ ಬಲಗಡೆ ಪಾರ್ಶ್ವ ಕಾಪಾಡು ತಲೆಯ ಕಡೆ, ನೋವು ಶುರುವಾದರೆ ಆಗ ಎಲ್ಲಾ ಪೂರ್ತಿಯಾದ ಹಾಗೆಯೇ!"

ಹೀಗೆ ಹೇಳಿ ಕೋಣೆಯನ್ನು ಬಿಟ್ಟು ಹೊರಗೆ ಹೋಗಿ ಪುನಃ ಒಂದು ಕ್ಷಣದಲ್ಲಿ ಒಳಗೆ ಬಂದು ಕುಮುವಿನ ಕೈಯಲ್ಲಿ ವೀಳೆಯ ಪೆಟ್ಟಿಗೆ ಕೊಟ್ಟು "ಹೋಗಲಿ, ಸ್ವಲ್ಪ ವೀಳೆಯದೆಲೆ ಹಾಕಿಕೋ, ಹೊಗೆಸೊಪ್ಪು ಅಭ್ಯಾಸವಿದೆಯೇ ?" ಎಂದಳು. ಕುಮು "ಇಲ್ಲ" ಎಂದಳು. ಆಗ ವಳು ಒಂದು ಚೂರು ಹೊಗೆಸೊಪ್ಪನ್ನು ತನ್ನ ಬಾಯಲ್ಲಿ ಹಾಕಿಕೊಂಡು ಶ್ಯಾಮಾ ಮಂದಗಮನ ದಿಂದ ಬೀಳ್ಕೊಂಡಳು.

"ಈಗಲೇ ಬದ್ದೀ ಅತ್ತೆಗೆ ಊಟ ಬಡಿಸಿಬಿಟ್ಟು ಕಳುಹಿಸಿ ಬರುತೇನೆ. ಒಂದು ನಿಮಿಷ' ಎಂದು ಮೋತಿಯಮ್ಮನೂ ಹೊರಟು ಹೋದಳು.

ಶ್ಯಾಮಾ ಸುಂದರಿಯು ಕುಮುವಿನ ಮನಸ್ಸಿನಲ್ಲಿ ಭಾರಿಯಾದೊಂದು ಅರುಚಿಯನ್ನು ಉದ್ರೇಕಗೊಳಿಸಿದಳು. ಇಂದು ಅವಳಿಗೆ ಎಲ್ಲಕ್ಕಿಂತಲೂ ಹೆಚ್ಚಾಗಿ ಮಾಯೆಯ ಆವರಣವೇ ಬೇಕಾಗಿದ್ದುದು. ಅದನ್ನೇ ಅವಳು ತನ್ನ ಮನಸ್ಸಿನಲ್ಲಿ ಕಲ್ಪಿಸಿಕೊಂಡು ಕೂತಿದ್ದಳು. ಮತ್ತು ದೇವಲೋಕ ಭೂಲೋಕಗಳಲ್ಲಿ ನಾನಾ ಬಣ್ಣಗಳ ಸಹಾಯದಿಂದ ರೂಪದ ಲೀಲೆಯಾಡುವ ಸೃಷ್ಟಿಕರ್ತನಿಗೆ ಕೂಡ ನೆರವಾಗುವ ಪ್ರಯತ್ನ ಮಾಡಿದ್ದಳು. ಇಂತಹ ಸಮಯದಲ್ಲಿ ಶ್ಯಾಮಾ ಬಂದು ಅವಳ ಸ್ವಪ್ನ ಕಲ್ಪಿತವಾದ ಬಲೆಯನ್ನು ಒಂದೇ ಏಟಿಗೆ ಹರಿದು ಹಾಕಿಬಿಟ್ಟಳು. ಕುಮು ಕಣ್ಣು ಮುಚ್ಚಿಕೊಂಡು ಬಹಳ ತೀವ್ರವಾಗಿ ತನಗೆ ತಾನೇ "ಗಂಡನ ವಯಸ್ಸು ಹೆಚ್ಚೆಂದು ಅವನನ್ನು ಪ್ರೀತಿಸುತ್ತಿಲ್ಲವೆನ್ನುವುದು ಎಂದಿಗೂ ನಿಜವಲ್ಲ....ಅಲ್ಲ....ಛೀ....ಅದು ನಾಚುಗೇಡು....ಶುದ್ಧ ನಾಚುಗೇಡು. ಅದು ಸಾಮಾನ್ಯ ಹೆಂಗಸು ಮಾಡುವ ಕೆಲಸ...." ಎಂದು ಹೇಳಿಕೊಂಡಳು. ಶಿವನ ಸಂಗಡ ಸತಿಯ ಮದುವೆ ಹೇಗೆ ಆಯಿತು.? ಅದು ನೆನಪಿಲ್ಲವೇ ? ಶಿವ ನಿಂದಕರು ಆತನ ವಯಸ್ಸನ್ನು ಕುರಿತು ಹೀಯಾಳಿಸಿದರು. ಆದರೆ ಸತಿಯು ಅದನ್ನು ಕಿವಿಗೆ ಹಾಕಿಕೊಂಡಳೇ?

ಗಂಡನ ವಯಸ್ಸನ್ನಾಗಲೀ, ರೂಪವನ್ನಾಗಲಿ ಕುರಿತು ಕುಮುವು ಯಾವ ಚಿಂತೆಯನ್ನೂ ಹಚ್ಚಿಕೊಂಡಿರಲಿಲ್ಲ. ಸಾಧಾರಣವಾಗಿ ಯಾವ 'ಪ್ರೀತಿ'ಯೆನ್ನುವುದರಿಂದಲೇ ಸ್ತ್ರೀ ಪುರುಷರ ಮದುವೆಯು ಸತ್ಯವೆನಿಸುವುದೋ, ಯಾವುದರ ಮಧ್ಯೆ ರೂಪ, ಗುಣ, ದೇಹ, ಮನಸ್ಸು ಎಲ್ಲಾ ಅಡಕವಾಗಿದೆಯೋ ಅಂತಹ ಪ್ರೀತಿಯು ಆವಶ್ಯಕವಿದೆ ಯೆನ್ನುವ ಯೋಚನೆ ಅವಳಿಗೆ ಬಂದೇ ಇರಲಿಲ್ಲ. ಇಷ್ಟಪಟ್ಟು ಮದುವೆ ಮಾಡಿಕೊಳ್ಳಬೇಕೆನ್ನುವ ಮಾತನ್ನು ಬಣ್ಣ ತೊಡೆದು ಮುಚ್ಚಿ ಬಿಡಲು ಯತ್ನಿಸಿದ್ದಳು.

ಇಂತಹ ಸಮಯದಲ್ಲಿ ಹೂವು ಹೂವಾಗಿ ಕಸೂತಿ ಹಾಕಿದ್ದ ಅಂಗಿಯನ್ನು ತೊಟ್ಟು, ಜರಿಯ ಅಂಚಿನ ಧೋತರವನ್ನುಟ್ಟ ಏಳೆಂಟು ವರ್ಷ ವಯಸ್ಸಿನ ಹುಡುಗನೊಬ್ಬ ಕೋಣೆಯೊಳಗೆ ಬಂದು ಕುಮುವಿಗೊರಗಿಕೊಂಡು ನಿಂತನು. ದೊಡ್ಡ ದೊಡ್ಡ ಸ್ನಿಗ್ಧವಾದ ಕಣ್ಣುಗಳನ್ನು ಅವಳ ಕಡೆ ಎತ್ತಿ ಹೆದರಿಕೆಯಿಂದ ಮೆಲ್ಲಮೆಲ್ಲನೆ ಅತಿ ಮಧುರವಾದ ದನಿಯಲ್ಲಿ " ದೊಡ್ಡಮ್ಮಾ" ಎಂದನು.

ಕುಮು ಅವನನ್ನು ತೊಡೆಯ ಮೇಲೆ ಎತ್ತಿ ಕೂಡಿಸಿಕೊಂಡು "ನಿನ್ನ ಹೆಸರೇನಪ್ಪಾ ?" ಎಂದಳು. ಹುಡುಗನು ಬಹು ಗಂಭೀರದಿಂದ " ಶ್ರೀ ಮೋತೀಲಾಲ್ ಘೋಷಾಲ್ " ಎಂದನು. ಎಲ್ಲರೆದುರಿಗೂ ಅವನ ವಾಡಿಕೆಯ ಹೆಸರು 'ಹಾಬಲೂ' ಎಂದು. ಆದ್ದರಿಂದಲೇ ದೇಶ ಕಾಲ ಪಾತ್ರಗಳಿಗೆ ಯುಕ್ತವಾಗಿ ತನ್ನ ಸನ್ಮಾನವನ್ನು ಕಾಪಾಡಿಕೊಳ್ಳಲೋಸುಗ ತಂದೆ ನಾಮಕರಣ ಮಾಡಿದ ಹೆಸರನ್ನು ಸುಸಂಪೂರ್ಣವಾಗಿ ಹೇಳಲೇಬೇಕಾಯಿತು. ಆಗ ಕುಮುವಿನ ಹೃದಯದೊಳಗೆ

ಅಂತಃಕರಣ ಉಕ್ಕಿಬಂತು. ಆ ಹುಡುಗನನ್ನೇ ಎದೆಗಪ್ಪಿಕೊಂಡು ಬದುಕಿದೆನೆಂದುಕೊಂಡಳು ಎಷ್ಟೋ ದಿನದಿಂದ ತಮ್ಮ ಮನೆಯ ದೇವರ ಮನೆಯಲ್ಲಿ ಗೋಪಾಲನ ವಿಗ್ರಹಕ್ಕೆ ಹೂವನ್ನು ಸಮರ್ಪಣೆ ಮಾಡುತ್ತಾ ಬಂದಿದ್ದಳು.....ಈ ಹುಡುಗನ ರೂಪದಲ್ಲಿ ಆ ಗೋಪಾಲನೇ ಬಂದು ತನ್ನ ತೊಡೆಯಮೇಲೆ ಕೂತಂತೆ ಅನ್ನಿಸಿತು ಅವಳಿಗೆ. ಯಾವ ವೇಳೆ ಅತಿ ದುಃಖದಿಂದ ಕೂಗುತ್ತಿದ್ದಳೋ ಅದೇ ದುಃಖದ ಸಮಯದಲ್ಲಿ "ಇಗೋ ನಾನಿದ್ದೇನೆ ನಿನ್ನ ಸಮಾಧಾನಕ್ಕೆ" ಎಂದು ಹೇಳಿದಂತಾಯಿತು. ಮೋತಿಯ ದುಂಡುದುಂಡಾದ ಕೆನ್ನೆಗಳನ್ನು ಸವರುತ್ತಾ ಕುಮು "ಗೋಪಾಲ, ಹೂವು ಬೇಕೇನೋ ನಿನಗೆ" ಎಂದಳು.

ಕುಮುವಿನ ಬಾಯಿಂದ 'ಗೋಪಾಲ' ಎಂಬ ಹೆಸರು ಬಿಟ್ಟು ಬೇರಾವುದೂ ಹೊರಬರಲಿಲ್ಲ. ಹಠಾತ್ತಾಗಿ ತನ್ನ ಹೆಸರು ಬದಲಾಯಿಸಿದುದನ್ನು ಕಂಡು ಹಾಬಲೂ ಆಶ್ಚರ್ಯಪಟ್ಟನು. ಆದರೆ ಅಂತಹ ಸವಿಯಾದ ದನಿಯು ಅವನ ಕಿವಿಯಲ್ಲಿ ಹೋಗಿರುವಾಗ ಅವನಿಗ ಯಾವ ಆಕ್ಷೇಪಣೆಯೂ ತೋರಲಿಲ್ಲ.

ಆಗ ಪಕ್ಕದ ಕೋಣೆಯಿಂದ ಮಗನ ಧ್ವನಿಯನ್ನು ಕೇಳಿ ಮೋತಿಯಮ್ಮನು ಓಡಿಬಂದು "ಇಗೋ ಮಂಗ ಇಲ್ಲಿ ಬಂದಿದ್ದಾನೆ ನೋಡಿದೆಯಾ?" ಎಂದಳು. ಶ್ರೀಮೋತಿಲಾಲ್ ಘೋಷಾಲರ ಸನ್ಮಾನ ಇನ್ನು ಉಳಿಯುವ ಹಾಗಿಲ್ಲ. ಕಣ್ಣುಗಳಲ್ಲಿಯೇ ಆಕ್ಷೇಪಣೆಯನ್ನು ತುಂಬಿ ಅಮ್ಮನ ಕಡೆ ನಿಶ್ಶಬ್ದವಾಗಿ ನೋಡಿದನು. ಬಲಗೈಯಲ್ಲಿ ದೊಡ್ಡಮ್ಮನ ಸೀರೆಯ ಸೆರಗನ್ನು ಅದುಮಿ ಹಿಡಿದುಕೊಂಡಿದ್ದನು. ಕುಮೂ ಹಾಬಲೂವನ್ನು ತನ್ನ ಎಡಗೈಯಿಂದ ಹತ್ತಿರ ಎಳೆದುಕೊಂಡ. "ಆಹಾ....ಇರಲಿ ಬಿಡು." ಎಂದಳು.

"ಇಲ್ಲಕ್ಕಾ....ರಾತ್ರಿ ಬಹಳ ಹೊತ್ತಾಗಿ ಹೋಗಿದೆ. ಇನ್ನು ಮಲಗಲಿ ಸಾಕು. ಈ ಮನೆಯಲ್ಲಿ ಅವನಿಗೆ ವಿಪರೀತ ಸಲಿಗೆ. ಇಷ್ಟು ಅಗ್ರವಾದ ಹುಡುಗ ಬೇರೆ ಯಾರೂ ಇಲ್ಲ." ಎಂದು ಮೋತಿಯಮ್ಮನು ಇಷ್ಟಪಿಲ್ಲದ ಮಗನನ್ನು ಮಲಗುವ ಮನೆಗೆ ಎಳೆದುಕೊಂಡು ಹೋದಳು. ಇಷ್ಟರಿಂದಲೇ ಕುಮುವಿನ ಮನಸ್ಸಿನ ಭಾರವಿಳಿದು ಹಗುರವಾಯಿತು. ಅವಳ ಹೃದಯದ ಕೂಗಿಗೆ ಉತ್ತರ ಸಿಕ್ಕಿತು. ಬದುಕಿನ ಸಮಸ್ಯೆ ಈ ಪುಟ್ಟ ಹುಡುಗನಂತೆಯೇ ಸಹಜವಾಗಲು ದಾರಿ ತೋರಿದಂತಾಯಿತು.

## ಇಪ್ಪತ್ತಮೂರನೆಯ ಅಧ್ಯಾಯ

ರಾತ್ರಿ ಬಹಳ ಹೊತ್ತಾದ ಮೇಲೆ ಮೋತಿಯಮ್ಮನು ಇದ್ದಕ್ಕಿದ್ದ ಹಾಗೆ ಎಚ್ಚರವಾಗೆದ್ದು ನೋಡಿದರೆ ಕುಮು ಹಾಸುಗೆಯಮೇಲಿದ್ದು ಕೂತಿರುವಳು. ಕೈಗಳೆರಡನ್ನೂ ಎದೆಯ ಬಳಿ ಜೋಡಿಸಿಕೊಂಡಿದ್ದಾಳೆ. ಧ್ಯಾನದಲ್ಲಿ ಮಗ್ನವಾಗಿದ್ದ ಕಣ್ಣುಗಳು ಯಾರನ್ನೋ ನೋಡುವಂತಿತ್ತು. ಮಧುಸೂದನನನ್ನು ತನ್ನ ಹೃದಯಮಧ್ಯದಲ್ಲಿ ಸ್ಥಾಪಿಸಿಕೊಳ್ಳಲು ಎಷ್ಟೇ ಬಾಧೆಯಾದರೂ ಸರಿ, ತನ್ನ ಇಷ್ಟದೇವತೆಯ ರೂಪದಿಂದ ಗಂಡನನ್ನು ಅಮೃತಮಾಡಲು ಇಚ್ಛಿಸುವಳು. ಗಂಡನ ಉಪಲಕ್ಷ್ಯದಿಂದ ತನ್ನನ್ನೇ ತನ್ನ ದೇವತೆಯ ಬಳಿ ಸಮರ್ಪಣೆಮಾಡಿಕೊಂಡಿರುವಳು. ದೇವರು ಅವಳ ಪೂಜೆಯನ್ನು ಅತಿ ಕಠಿಣವಾಗಿ ಮಾಡಿದ್ದಾನೆ. ಈ ಪ್ರತಿಮೆಯು ಸ್ವಚ್ಛವಲ್ಲ. ಆದರೆ ಇದೇ ಅಲ್ಲ

ಭಕ್ತಿಯ ಪರೀಕ್ಷೆ. ಸಾಲಿಗ್ರಾಮ ಶಿಲೆಯಲ್ಲಿ ಏನೂ ಕಾಣುವುದಿಲ್ಲ. ಭಕ್ತಿಯು ಅದರ ರೂಪ ಹೀನತೆಯ ಮಧ್ಯೆ ಕೇವಲ ತನ್ನ ಶಕ್ತಿಯಿಂದಲೇ ಅಲ್ಲವೇ ವೈಕುಂಠನಾಥನ ರೂಪವನ್ನು ಪ್ರತ್ಯಕ್ಷ ಮಾಡಿಕೊಳ್ಳುವುದು ?

ಎಲ್ಲಿ ಕಾಣಬರುವುದಿಲ್ಲವೋ ಅಲ್ಲಿಯೇ ಕಾಣುತ್ತೇನೆ. ಇದೇ ನನ್ನ ಸಾಧನೆಯಾಗಲಿ. ಎಲ್ಲಿ ದೇವರು ಮರೆಮಾಡಿಕೊಂಡಿದ್ದಾನೋ ಅಲ್ಲಿಯೇ ಹೋಗಿ ಆತನ ಚರಣದಲ್ಲಿ ನನ್ನನ್ನೇ ಸಮರ್ಪಣೆ ಮಾಡಿಕೊಳ್ಳುತ್ತೇನೆ. ನನ್ನನ್ನು ಆತ ನಿರಾಕರಿಸಲಾರ." ಎಂದು ಸಮಾಧಾನ ಪಡೆಯುತ್ತಿದ್ದಳು.

" ಮೇರೆ ಗಿರಿಧರ ಗೋಪಾಲ—
ಔರ ನಾಹಿ ಕೋಹೀ...."

ಅಣ್ಣನ ಬಳಿ ಕಲಿತ ಮೀರಾಬಾಯಿಯ ಈ ಗೀತೆಯನ್ನು ಮನಸ್ಸಿನಲ್ಲಿಯೇ ಹಾಡಿಕೊಳ್ಳಲು ತೊಡಗಿದಳು.

ಮಧುಸೂದನನ ಅತ್ಯಂತ ಒರಟಾದ ಯಾವ ಸ್ವಭಾವ ಅವಳಿಗೆ ಪರಿಚಯವಾಗಿತ್ತೋ ಅದನ್ನು ಏನೂ ಇಲ್ಲವೆಂದು ನಿರ್ಲಕ್ಷಿಸಿ ನೀರಿನ ಮೇಲಿನ ಗುಳ್ಳೆಯಂತೆ ಅದನ್ನು ಊದಿಬಿಡಲು ಆಶಿಸುವಳು...ಚಿರಕಾಲವೂ ಯಾರು ಸತ್ಯವೋ ಎಲ್ಲವನ್ನೂ ಆವರಿಸಿಕೊಂಡು ಅವನೇ ಇದ್ದಾನೆ.... ಔರ ಕೋಹಿ ನಾಹಿ, ಔರ ಕೋಹಿ ನಾಹಿ ".

ಇದಲ್ಲದೆ ಬೇರೊಂದು ವ್ಯಥೆಯೂ ಇದೆ. ಅದನ್ನು ಮಾಯೆಯೆಂದು ಭಾವಿಸಲು ಇಚ್ಛೆಯಾಗುತ್ತದೆ—ಅದೇ ಅವಳ ಜೀವನದ ಶೂನ್ಯತೆ. ಅಂದಿನವರೆಗೆ ಯಾರೊಡನೆ ತನ್ನ ಬದುಕೇ ಕಳೆದು ಬಂತೋ, ಬೆಳೆದು ಬಂತೋ, ಯಾರನ್ನು ತ್ಯಜಿಸಿ ಬಂದದ್ದರಿಂದ ಜೀವನದಲ್ಲಿ ಅರ್ಥವೇ ಇರುವುದಿಲ್ಲವೋ ಅವರ ಬಳಿಯಿಂದ ವಿಚ್ಛೇದ—ಈ ಶೂನ್ಯವೂ ಪೂರ್ಣವಾಯಿತೆಂದು ಅವಳು ತನಗೇ ಹೇಳಿಕೊಳ್ಳುತ್ತಿದ್ದಳು.

ಬಾಪೇ ಛಾಡೇ, ಮಾಯೇ ಛಾಡೇ
ಛಾಡೇ ಸಖ ಸಹೀ !
ಮೀರಾ ಕೇ ಪ್ರಭೂ ಲಗನ್ ಲಗಿ
ಜೋನ ಹೋಯೇ ಹೋಯಿ."

" ತಂದೆ ಬಿಟ್ಟರು, ತಾಯಿ ಬಿಟ್ಟಳು. ಆದರೆ ಅವಳ ಅಂತರ್ಯದೊಳಗೆ ಚಿರಕಾಲವೂ ಯಾರಿದ್ದನೋ ಅವನು ಬಿಡಲಿಲ್ಲ. ದೇವರು ಮತ್ತಾವುದನ್ನೂ ಏಕೆ ಬಿಡಿಸಲಿಲ್ಲ. ಶೂನ್ಯವನ್ನು ತುಂಬಲೆಂದೇ ಬಿಟ್ಟಿದ್ದಾನೆ. ಏನಾಗುತ್ತೋ ಆಗಲಿ ಎಂದು ನಾನೂ ಅಂಟಿಕೊಂಡಿದ್ದೇನೆ. ಮನಸ್ಸಿನ ಗಾನ ಯಾವಾಗ ಬಾಯಿಂದ ಬಂದಿತೋ ಅವಳಿಗೆ ತಿಳಿಯಲೇ ಇಲ್ಲ. ಎರಡು ಕಣ್ಣುಗಳಿಂದಲೂ ನೀರು ಸುರಿಯಲಾರಂಭಿಸಿತು.

ಮೋತಿಯಮ್ಮ ಮಾತಾಡಲಿಲ್ಲ. ಸುಮ್ಮನೆ ನೋಡುತ್ತಿದ್ದಳು. ಮತ್ತು ಕೇಳುತ್ತಿದ್ದಳು. ನಂತರ ಕುಮು ಸ್ವಲ್ಪಹೊತ್ತು ಸುಮ್ಮನಿದ್ದು ದೀರ್ಘವಾಗಿ ಪ್ರಣಾಮ ಮಾಡಿ ದೊಡ್ಡ ನಿಟ್ಟುಸಿರು ಬಿಟ್ಟು ಮಲಗಿದ ಮೇಲೆ ಮೋತಿಯಮ್ಮನ ತಲೆಯುಲ್ಲಿ ಹಿಂದೆಂದೂ ಬರದ ಯೋಚನೆಯೊಂದು

ಹುಟ್ಟಿ ಕೊಂಡಿತು.

ನಮ್ಮಗಳಿಗೆ ಮದುವೆಯಾದಾಗ ನಾವೆಲ್ಲ ಹುಡುಗರು. ಮನಸ್ಸು ಅಂದರೆ ಏನೋ ನಮಗೆ ಇರಲೇ ಇಲ್ಲ. ಚಿಕ್ಕ ಮಗು ಕಸುಗಾಯನ್ನೂ ಹೇಗೆ ಯಾರ ಸಹಾಯವನ್ನೂ ಕೇಳದೆ ಬಾಯಲ್ಲಿ ತುರುಕಿಕೊಳ್ಳುವದೋ ಹಾಗೆ ಗಂಡನ ಸಂಸಾರವನ್ನು ವಿಚಾರವೇ ಮಾಡದೆ ನುಂಗಿಕೊಂಡಿದ್ದೆವು. ಎಲ್ಲಿಯೂ ಯಾವ ಅಡಚಣೆಯೂ ಆಗಲಿಲ್ಲ. ಯತ್ನಮಾಡಿ ನಮ್ಮನ್ನೇನೂ ಪಡೆದು ಬಂದಿರಲಿಲ್ಲ. ನಮ್ಮಗಳಿಗೋಸ್ಕರ ದಿನಗಳೆಣಿಸುವುದು ಅನಾವಶ್ಯಕವಾಗಿತ್ತು. ಎಂದು ನಿಷೇಕಪ್ರಸ್ತವೆಂದು ಗೊತ್ತಾಗಿತ್ತೋ ಅಂದೇ ನಿಷೇಕ ಪ್ರಸ್ತವಾಯಿತು. ಎಂತಹ ನಿಷೇಕ ಪ್ರಸ್ತವೋ ನಮಗೇನೂ ಅರ್ಥವಾಗಿರಲಿಲ್ಲ. ಅದೊಂದು ಆಟವಾಗಿತ್ತು. ಈ ಮದುವೆಯ ನಿಷೇಕಪ್ರಸ್ತ ನಾಳೆಯೇ ಆಗುವುದಿದೆ. ಆದರೆ ಈ ಹುಡುಗಿಯ ಪಾಲಿಗೆ ಎಂತಹ ವಿಡಂಬನೆ. ನಮ್ಮ ಮೈದುನ ಅವಳಿಗಿನ್ನೂ ಹೊರಗಿನವನು. ತನ್ನವನಾಗಬೇಕಾದರೆ ಬಹಳ ಕಾಲವಾಗುತ್ತದೆ. ಇವಳನ್ನು ಹೇಗೆ ತಾನೇ ಮುಟ್ಟುತ್ತಾನೆ? ಈ ಹುಡುಗಿ ಆ ಅವಮಾನವನ್ನು ಹೇಗೆ ಸಹಿಸುವಳು. ಧನ ಸಂಪಾದಿಸಲು ಮೈದುನನಿಗೆ ಎಷ್ಟು ವರ್ಷಗಳು ಹಿಡಿಯಿತು. ಆದರೆ ಮನ ಸಂಪಾದಿಸುವುದಕ್ಕೆ ಎರಡು ದಿನ ತಡೆಯುವುದಕ್ಕೆ ಆಗದು, ಇವರಿಗೆ ಆ ಲಕ್ಷ್ಮಿಯ ದ್ವಾರದಲ್ಲಿ ಕಾಲ ಮೇಲೆ ಕಾಲಿಟ್ಟುಕೊಂಡು ತೆವಳಿ, ತೆವಳಿ ಹೋಗಿ ಸತ್ತದ್ದಾಗಿದೆ. ಈ ಲಕ್ಷ್ಮಿಯ ದ್ವಾರದಲ್ಲಿ ಒಂದು ಸಲ ಕೈ ನೀಡುವುದು ಕೂಡ ಬೇಡವೇ ?"

ಇಷ್ಟು ಯೋಚನೆ ಮೋತಿಯಮ್ಮನ ಮನಸ್ಸಿನಲ್ಲಿ ಸಾಧಾರಣವಾಗಿ ಬರುವುದಿಲ್ಲ. ಈಗ ಬಂದಿರುವುದರ ಕಾರಣ, ಕುಮುವನ್ನ ನೋಡಿದ ಮಾತ್ರಕ್ಕೇ ಅವಳನ್ನು ಸಮಸ್ತ ಮನಃ ಪ್ರಾಣಗಳನ್ನರ್ಪಿಸಿ ಪ್ರೀತಿಸಲು ತೊಡಗಿದ್ದಾಳೆ. ಈ ಪ್ರೀತಿಯ ಪೂರ್ವ ಭೂಮಿಕೆಯಾದದ್ದು ಅಂದು ನೂರ್‌ನಗರದ ಸ್ಟೇಷನ್ನಿನಲ್ಲಿ ಅವಳು ವಿಪ್ರದಾಸನನ್ನು ನೋಡಿದಾಗ. ಮಹಾಭಾರತದಿಂದ ಭೀಷ್ಮನೇ ಇಳಿದು ಬಂದಂತಿತ್ತು. ವೀರರಂತೆ ತೇಜಸ್ವಿ ಮೂರ್ತಿ, ತಪಸ್ವಿಗಳಂತೆ ಶಾಂತವಾದ ಮುಖ ಲಕ್ಷಣ, ಅದರೊಂದಿಗೇ ವಿಷಾದಮಯ ನಮ್ರತೆ. ಮೋತಿಯಮ್ಮನ ಮನಸ್ಸಿನಲ್ಲಿ ಯಾರೂ ಏನೂ ಹೇಳದಿದ್ದರೆ ಒಂದು ಸಲ ಹೋಗಿ ಅವರ ಪಾದಸ್ಪರ್ಶ ಮಾಡಿ ಬರಬೇಕೆಂದೆನ್ನಿಸಿತ್ತು. ಆ ರೂಪವನ್ನು ಇಂದಿಗೂ ಮರೆಯಲಾಗಲಿಲ್ಲ. ಅದಾದ ನಂತರ ಕುಮುವನ್ನು ನೋಡಿದ ಮೇಲಂತೂ "ಆ ಅಣ್ಣನಿಗೆ ಸರಿಯಾದ ತಂಗಿ" ಎಂದು ಮನಸ್ಸಿನಲ್ಲಿಯೇ ಹೇಳಿಕೊಂಡಳು.

ಒಂದು ವಿಧವಾದ ಜಾತಿ ಭೇದವಿದೆ, ಅದು ಸಮಾಜದ್ದಲ್ಲ. ಕೇವಲ ರಕ್ತದ್ದು. ಆ ಜಾತಿಯನ್ನು ಯಾವುದರಿಂದಲೂ ಕೀಳಲು ಸಾಧ್ಯವಿಲ್ಲ. ಈ ರಕ್ತಗತ ಜಾತಿಯಲ್ಲಿ ಅಸಾಮಂಜಸ್ಯವುಂಟಾದರೆ ಹೆಂಗಸರಿಗೆ ಹೇಗೆ ಮರ್ಮಾಂತಿಕ ವೇದನೆಯಾಗುತ್ತದೋ ಹಾಗೆ ಪುರುಷರಿಗಾಗುವುದಿಲ್ಲ. ಚಿಕ್ಕ ವಯಸ್ಸಿನಲ್ಲಿ ಮದುವೆಯಾದುದರಿಂದ ಮೋತಿಯಮ್ಮ ಈ ರಹಸ್ಯವನ್ನು ತನ್ನ ಮನಸ್ಸಿನಲ್ಲಿ ಅರ್ಥ ಮಾಡಿಕೊಳ್ಳಲು ಸಮಯವಾಗಲಿಲ್ಲ. ಆದರೆ ಕುಮುವಿನ ಮನಸ್ಸಿನಲ್ಲಾಗುತ್ತಿದ್ದ ಈ ತಳಮಳವನ್ನು ಅವಳು ಚೆನ್ನಾಗಿ ತಿಳಿದುಕೊಂಡುಬಿಟ್ಟಳು. ಅವಳ ಸಂಕಟವನ್ನು ಕಂಡು ಇವಳ ಮೈಯೆಲ್ಲಾ ಏನೋ ಒಂದು ಬಗೆಯಾಗಿ ಆಯಿತು. ಅವಳಿಗಾವುದೋ ಒಂದು ಭಯಂಕರ ಚಿತ್ರ ಕಂಡಂತೆ ಆಯಿತು. ಅದರಲ್ಲಿ, ಎಲ್ಲಿ ಯಾವುದೋ ಅಪರಿಚಿತ ಜಂತುವು ನೀರೂರುತ್ತಿರುವ ನಾಲಗೆ

ಯನ್ನು ಚಾಚಿಕೊಂಡು ಕಾಲು ಮಡಿಸಿಕೊಂಡು ಕೂತಿದೆಯೋ ಆ ಕತ್ತಲ ಗವಿಯ ಮುಖದಲ್ಲಿ ಕುಮುದಿನಿ ನಿಂತುಕೊಂಡು ದೇವರನ್ನು ಕರೆಯುತ್ತಿದ್ದಾಳೆ. ಮೋತಿಯಮ್ಮ ಕೋಪಗೊಂಡು ಎದ್ದು "ದೇವರ ಬಾಯಿಗೆ ಬೂದಿ ಹಾಕಿದರು....ಯಾವ ದೇವರು ಅವಳನ್ನು ಈ ವಿಪತ್ತಿನ ಮಧ್ಯೆ ನೂಕಿದ್ದಾನೋ ಆ ದೇವರೇ ಅಲ್ಲವೇ ಇವಳನ್ನು ಉದ್ಧಾರ ಮಾಡುವುದು....! ಹಯ್ಯೋ!..." ಎಂದು ಮನಸ್ಸಿನಲ್ಲಿಯೇ ಹಲುಬಿದಳು.

# ಇಪ್ಪತ್ತನಾಲ್ಕನೆಯ ಅಧ್ಯಾಯ

ಮಾರನೆಯ ದಿನ ಬೆಳಿಗ್ಗೆ ಕುಮುದಿನಿಗೆ ಅಣ್ಣನಿಂದ ಟೆಲಿಗ್ರಾಮೊಂದು ಬಂದಿತು. "ಭಗವಂತನು ನಿನಗೆ ಆಶೀರ್ವಾದ ಮಾಡಲಿ" ಈ ಟೆಲಿಗ್ರಾಮಿನ ಕಾಗದವನ್ನು ಅವಳು ತೊಟ್ಟ ಜಾಕೆಟ್ಟಿನ ಮಧ್ಯೆ ಎದೆಯ ಬಳಿ ಇಟ್ಟುಕೊಂಡಿದ್ದಳು. ಈ ಟೆಲಿಗ್ರಾಮನ್ನೇ ಅಣ್ಣನ ಬಲಗೈಯ ಸ್ಪರ್ಶದಂತೆ ಅನುಭವಿಸಿದಳು. ಆದರೆ ಅಣ್ಣನೇಕೆ ತನ್ನ ದೇಹಸ್ಥಿತಿಯ ವಿಷಯವಾಗಿ ಏನೂ ಹೇಳಿಲ್ಲ? ಅವನಿಗೇನಾದರೂ ಕಾಯಿಲೆ ಜಾಸ್ತಿಯಾಗಿದ್ದರೆ ಏನು ಗತಿ! ಅಣ್ಣನ ಸಮಸ್ತ ವಿಚಾರವೂ ಯಾರಿಗೆ ಮುಹೂರ್ತ ಮುಹೂರ್ತವೂ ಪ್ರತ್ಯಕ್ಷವಾಗಿತ್ತೋ, ಇಂದು ಅವಳಿಗೆ ಎಲ್ಲವೂ ಮರೆಯಾಗಿದೆ.

ಇಂದು ನಿಷೇಕಪ್ರಸ್ತ. ಮನೆಯಲ್ಲೆಲ್ಲಾ ಜನಗಳು ಕಾಡಿನಂತೆ ತುಂಬಿದ್ದಾರೆ. ಬಂಧು ಬಳಗಗಳ ಕಡೆಯ ಹೆಂಗಸರು ಕುಮುವನ್ನು ಕಂಡು ಸುಮ್ಮನೆ ಹಾಸ್ಯ ಮಾಡುತ್ತಿದ್ದಾರೆ. ಅವಳನ್ನು ಒಬ್ಬಳೇ ಇರುವುದಕ್ಕೆ ಬಿಡುವುದೇ ಇಲ್ಲ. ಇಂದು ಒಬ್ಬಳೇ ಇರುವುದಕ್ಕೆ ಬಹಳ ಅಗತ್ಯವಿದೆ.

ಮಲಗುವ ಮನೆಯ ಪಕ್ಕದಲ್ಲಿಯೇ ಅವಳ ಸ್ನಾನಗೃಹ. ಅಲ್ಲಿ ನೀರಿನ ಕೊಳಾಯಿ ಇಟ್ಟಿದಾರೆ ಮತ್ತು (Shower bath) ಮೇಲಿನಿಂದ ಧಾರೆಯಾಗಿ ಹರಿಯುವ ನೀರಿನಲ್ಲಿ ಸ್ನಾನಮಾಡಲು ಏರ್ಪಾಡು ಕೂಡ ಇತ್ತು. ಹೇಗೋ ಅವಕಾಶ ಮಾಡಿಕೊಂಡು ತನ್ನ ಪೆಟ್ಟಿಗೆಯನ್ನು ತೆಗೆದು ರಾಧಾ ಕೃಷ್ಣರ ಯುಗಳ ರೂಪದ ಪಠವನ್ನು ತೆಗೆದುಕೊಂಡು ಸ್ನಾನದ ಮನೆಗೆ ಹೋಗಿ ಕದ ಮುಚ್ಚಿಕೊಂಡಳು. ಬಿಳಿಯ ಕಲ್ಲಿನ ನೀರಿನ ತೊಟ್ಟಿಯಮೇಲೆ ಪಠವಿಟ್ಟು ಎದುರುಗಡೆ ನೆಲದ ಮೇಲೆ ಕೂತು ಮನಸ್ಸಿನಲ್ಲೇ ಬಾರಿ ಬಾರಿಗೂ "ಸ್ವಾಮೀ, ನಾನು ನಿನ್ನವಳೇ, ಇಂದು ನೀನೇ ನನ್ನನ್ನು ಸ್ವೀಕರಿಸು....ಅವರು ಬೇರೆ ಯಾರೂ ಅಲ್ಲ....ಅವರು ನೀನೇ....ಅವರು ನೀನೇ....ಅವರು ನೀನೇ....ನಿನ್ನ ಈ ಯುಗಳ ರೂಪವೇ ನನ್ನ ಬದುಕಿನಲ್ಲಿ ಪ್ರಕಾಶಿತವಾಗಲಿ" ಎಂದು ಮೊರೆಯಿಟ್ಟಳು.

ಡಾಕ್ಟರರು ವಿಪ್ರದಾಸನಿಗೆ ಇನ್‌ಫ್ಲೂಯಂಜಾಯಿಂದ ನ್ಯೂಮೋನಿಯಾಗೆ ತಿರುಗಿದೆಯೆಂದು ಹೇಳಿದ್ದರು. ನವಗೋಪಾಲನೊಬ್ಬನೇ ನಿಷೇಕ ಪ್ರಸ್ತಕ್ಕೆ ಬಾಗಿನಗಳನ್ನೊದಗಿಸಲು ಕಲಿಕತ್ತೆಗೆ ಬಂದಿದ್ದನು. ಯಾವುದೂ ಕಡಿಮೆಯಿಲ್ಲದೆ ಸಾಮಾನು, ಸರಂಜಾಮುಗಳನ್ನು ಕಳುಹಿಸಲಾಗಿತ್ತು. ವಿಪ್ರದಾಸನೇ ಸ್ವತಃ ಇದ್ದಿದ್ದರೆ ಇಷ್ಟು ಆಡಂಬರವಿರುತ್ತಿರಲಿಲ್ಲ.

ಕುಮುವಿನ ಮದುವೆಗೆಂದು ಅವಳ ನಾಲ್ಕು ಅಕ್ಕಂದಿರಿಗೂ ಬರಲು ಹೇಳಿ ಕಳುಹಿಸಲಾಗಿತ್ತು. ಕರೆದುಕೊಂಡು ಬರಲು ಜನರನ್ನೂ ಕಳುಹಿಸಲಾಗಿತ್ತು. ಆದರೆ ಘೋಷಾಲರು

ಸದ್ಬ್ರಾಹ್ಮಣ ಕುಲದವರಲ್ಲವೆಂಬ ಸುದ್ದಿ ಅವರ ಕಿವಿಗೂ ಮುಟ್ಟಿತ್ತು. ಅದನ್ನು ಕೇಳಿ ಅವರ ಮಾವಂದಿರ ಮನೆಯವರು ತಮ್ಮ ಸೊಸೆಯರನ್ನು ಮದುವೆಗೆ ಕಳುಹಿಸಲು ಒಪ್ಪಲಿಲ್ಲ. ಕುಮುವಿನ ಮೂರನೆಯ ಅಕ್ಕ ಗಂಡನ ಹತ್ತಿರ ಹಠಮಾಡಿ ಜಗಳವಾಡಿ ಮದುವೆಯ ಮಾರನೆಯ ದಿನವಾದರೂ ಕಲಿಕತ್ತೆಗೆ ಬಂದಿದ್ದಳು. ಆದರೆ ನವಗೋಪಾಲನು ಅವಳನ್ನು ನೋಡಿ "ಆ ಮನೆಗೆ ನೀನು ಹೋದರೆ ನಮ್ಮಗಳ ಮಾನ ಉಳಿಯುವುದಿಲ್ಲ" ಎಂದು ಹೇಳಿಬಿಟ್ಟ. ಮದುವೆಯ ರಾತ್ರಿ ನಡೆದ ವಿಷಯ ಅವನಿಗೀಗಲೂ ನೆನಪಿನಲ್ಲಿದೆ. ಆದುದರಿಂದಲೇ ದೂರದ ಸಂಬಂಧದ ಸಣ್ಣಪುಟ್ಟ ಹುಡುಗಿಯರು ಕೆಲವರನ್ನು ಒಬ್ಬ ಮುದಿ ದಾದಿಯ ಸಂಗಡ ಕಳುಹಿಸಿ ನಿಮಂತ್ರಣದ ಕರೆಗೆ ಗೌರವ ಕೊಟ್ಟು ದಾಯಿತು. ಸಂಧಿ ಇನ್ನೂ ಆಗಿಲ್ಲ, ಆಗುವ ಹಾಗೆಯೂ ಇಲ್ಲವೆಂದು ಕುಮು ಅರಿತಳು.

ಕುಮುವಿಗೆ ಚೆನ್ನಾಗಿ ಶೃಂಗಾರ ಮಾಡಿದರು. ಹಾಸ್ಯಮಾಡುವಷ್ಟು ಹತ್ತಿರವಿರುವ ನೆಂಟರಿಷ್ಟರ ಹಾಸ್ಯಾಲಾಪಗಳೆಲ್ಲಾ ಮುಗಿದಿದ್ದವು. ಇನ್ನೂ ಅತಿಥಿಗಳ ಊಟವಾಗಬೇಕು. ಮಧುಸೂದನನು ಮೊದಲೇ ಹೇಳಿಬಿಟ್ಟಿದ್ದನು. ರಾತ್ರಿ ಬಹಳ ಹೊತ್ತಾಗಕೂಡದು, ಬೆಳಿಗ್ಗೆ ಬೇಗ ಎದ್ದು ಕೆಲಸಕ್ಕೆ ಹೋಗಬೇಕು. ಒಂಬತ್ತು ಘಂಟೆ ಹೊಡೆಯುವ ಹೊತ್ತಿಗೆ ಮೊದಲೇ ನಿಶ್ಚಿತವಾಗಿದ್ದಂತೆ ಕೆಳಗಡೆ ಘಂಟೆ ಬಾರಿಸಿತು, ಇನ್ನು ಒಂದು ಮುಹೂರ್ತವೂ ಇಲ್ಲ. ಸಮಯವನ್ನು ದಾಟಿ ಹೋಗಲು ಯಾರಿಗೂ ಸಾಧ್ಯವಿರಲಿಲ್ಲ. ನೆರೆದಿದ್ದವರ ಕೂಟ ಚದುರಿತು. ಆಕಾಶದಲ್ಲಿ ಗಿಡುಗನ ನೆರಳನ್ನು ಕಂಡೊಡನೆ ಕಪೋತದ ಎದೆಯಲ್ಲಿ ಹೇಗೆ ಆಗುತ್ತದೊ ಕುಮುದಿನಿಯ ಎದೆಯೂ ಹಾಗೆಯೇ ನಡುಗಲಾರಂಭಿಸಿತು. ಅವಳ ಕೈಗಳು ತಣ್ಣಗಾಗಿ ಕೊರೆಯುತ್ತಿದ್ದುವು, ಮುಖ ಬಣ್ಣಗೆಟ್ಟಿತ್ತು. ತನ್ನ ಕೋಣೆಯಿಂದ ಹೊರಗೆ ಬಂದು ಮೋತಿಯಮ್ಮನ ಕೈ ಹಿಡಿದುಕೊಂಡು "ನನ್ನನ್ನು ಬೇರೆ ಎಲ್ಲಾದರೂ ಮರೆಯಾಗಿರುವ ಕಡೆ ಕರೆದುಕೊಂಡು ಹೋಗಕ್ಕಾ...... ಹತ್ತು ನಿಮಿಷಗಳು ಮಾತ್ರ ಒಬ್ಬಳೇ ಇರಲು ಅವಕಾಶ ಕೊಡು" ಎಂದಳು. ಮೋತಿಯಮ್ಮ ಬೇಗ ಬೇಗ ಅವಳನ್ನು ತನ್ನ ಸ್ವಂತ ಮಲಗುವ ಕೋಣೆಯೊಳಗೆ ಕರೆದುಕೊಂಡು ಹೋಗಿ ಬಿಟ್ಟು ಹೊರಗಿನಿಂದ ಬಾಗಿಲು ಮುಚ್ಚಿದಳು. ಹೊರಗಡೆ ನಿಂತುಕೊಂಡು ಕಣ್ಣೊರಸಿಕೊಳ್ಳುತ್ತಾ "ಅದೃಷ್ಟದಲ್ಲಿ ಹೀಗೂ ಇರುವುದುಂಟೆ ?" ಎಂದುಕೊಂಡಳು.

ಹತ್ತು ನಿಮಿಷಗಳಾಯಿತು....ಹದಿನೈದು ನಿಮಿಷಗಳಾಯಿತು. ಜನ ಬಂದು "ಗಂಡು ಮಲಗುವ ಮನೆಗೆ ಹೋಗಿದ್ದಾಯಿತು, ವಧುವೆಲ್ಲಿ ?" ಎಂದು ಅವಸರಪಡಿಸಿದರು. ಮೋತಿಯಮ್ಮನು "ಅಷ್ಟು ಆತುರಪಟ್ಟರೆ ಹೇಗೆ? ಸೊಸೆ ಮೈಮೇಲಿನ ಒಡವೆ ಗಿಡವೆ ತೆಗೆದಿಡಬೇಡವೇ ?" ಎಂದಳು. ಅವಳು ಎಷ್ಟು ಹೊತ್ತಾದರೆ ಅಷ್ಟು ಸಮಯವನ್ನು ಕುಮುವಿಗೆ ಕೊಡಲು ಪ್ರಯತ್ನಪಟ್ಟಳು. ಕಡೆಗೆ ಇನ್ನು ವಿಳಂಬ ಮಾಡಲು ಸಾಧ್ಯವಿಲ್ಲೆಂದು ತೋಚಿದಾಗ ತಾನೇ ಬಾಗಿಲು ತೆಗೆದು ನೋಡಿದರೆ ಕುಮೂ ಮೂರ್ಛೆಹೋಗಿ ನೆಲದ ಮೇಲೆ ಬಿದ್ದಿದ್ದಳು.

ಗಲಾಟೆಯೋ ಗಲಾಟೆಯಾಗಿ ಹೋಯಿತು. ಅವರಿವರು ಅವಳನ್ನೆತ್ತಿ ಹಾಸುಗೆಯ ಮೇಲೆ ಮಲಗಿಸಿದರು. ಒಬ್ಬರು ಮುಖದಮೇಲೆ ನೀರು ಚಿಮುಕಿಸಿದರು. ಒಬ್ಬರು ಗಾಳಿ ಬೀಸಲು ಶುರು ಮಾಡಿದರು. ಸ್ವಲ್ಪ ಹೊತ್ತಾದಮೇಲೆ ಎಚ್ಚರವಾದಾಗ ತಾನೆಲ್ಲಿರುವಳೆಂಬ ಅರಿವಾಗದೆ ಕುಮು ಕಣ್ಣುಬಿಟ್ಟು "ಅಣ್ಣಾ !" ಎಂದು ಕೂಗಿದಳು.

ಮೋತಿಯಮ್ಮ ಬೇಗ ಅವಳ ಮುಖದಕಡೆ ಬಾಗಿ ಹತ್ತಿರ ಮುಖವಿಟ್ಟು "ಹೆದರ ಬೇಡಕ್ಕಾ. ಇಗೋ ನಾನಿದ್ದೇನೆ ಇಲ್ಲಿ" ಎಂದಳು. ಹೀಗೆ ಹೇಳಿ ಅವಳ ಮುಖವನ್ನು ಎದೆಗವುಚಿಕೊಂಡು ಹಿಡಿದುಕೊಂಡಿದ್ದಳು....ಸುತ್ತ ನೆರೆದಿದ್ದವರೆಲ್ಲರನ್ನೂ ಕಂಡು "ನೀವೆಲ್ಲಾ ಸುಮ್ಮನೆ ಗುಂಪು ಸೇರ ಬೇಡಿ....ನಾನೀಗಲೇ ಅವಳನ್ನು ಕರೆದುಕೊಂಡು ಹೋಗುತ್ತೇನೆ." ಎಂದಳು, ....ಕುಮುವಿನ ಕಿವಿಯಲ್ಲಿ "ಹೆದರಬೇಡಮ್ಮಾ....ಹೆದರಬೇಡ ನನ್ನ ತಾಯಿ...." ಎಂದು ಮೃದುವಾಗಿ ಹೇಳುತ್ತಿದ್ದಳು. ಕುಮುವಿಗೆ ಕ್ರಮೇಣ ತಿಳಿವು ಬಂದು ಮೆಲ್ಲಗೆ ಎದ್ದು ಕೂತಳು....ಮನಸ್ಸಿನಲ್ಲಿಯೇ ದೇವರನ್ನು ಸ್ಮರಿಸಿ ಕೈಮುಗಿದಳು. ಕೋಣೆಯ ಬೇರೊಂದು ಪಾರ್ಶ್ವದಲ್ಲಿ ಹಾಬಲು ಸಣ್ಣದೊಂದು ಮಂಚದ ಮೇಲೆ ಮಲಗಿ ದೀರ್ಘನಿದ್ರೆಯಲ್ಲಿ ಮುಳುಗಿದ್ದ. ಅವನ ಹತ್ತಿರ ಹೋಗಿ ಅವನ ಕೆನ್ನೆಯನ್ನು ಮುತ್ತಿಟ್ಟಳು. ಮೋತಿಯಮ್ಮ ಅವಳನ್ನು ಶಯನಗೃಹದ ಬಾಗಿಲವರೆಗೂ ತಲುಪಿಸಿ "ಇನ್ನೂ ಭಯವಾಗುತ್ತಿದೆಯೇನಮ್ಮಾ?" ಎಂದು ಕೇಳಿದಳು. ಕುಮು ಕೈ ಮುಷ್ಟಿಯನ್ನು ಬಿಗಿಯಾಗಿ ಹಿಡಿದುಕೊಂಡು ಮೃದುವಾಗಿ ನಗುತ್ತಾ "ಇಲ್ಲ....ನನಗೆ ಸ್ವಲ್ಪವೂ ಭಯವಿಲ್ಲ" ಎಂದಳು. ಮನಸ್ಸಿನಲ್ಲಿ ಮಾತ್ರ "ಇಂದು ನನ್ನ ಅಭಿಸಾರ. ಹೊರಗೆ ಅಂಧಕಾರ, ಒಳಗೆ ಮಾತ್ರ ಬೆಳಕು" ಎಂದುಕೊಂಡಳು.

"ಮೋರೆ ಗಿರಿಧರ ಗೋಪಾಲ, ಔರ ನಾಹಿ ಕೋಹಿ"

# ಇಪ್ಪತ್ತೈದನೆಯ ಅಧ್ಯಾಯ

ಈ ಮಧ್ಯೆ ಶ್ಯಾಮಸುಂದರಿಯು ನಡುಗುತ್ತಾ ನಡುಗುತ್ತಾ ಮಧುಸೂದನನಿಗೆ ಬಂದು ತಿಳಿಸಿದಳು. "ವಧುವು ಮೂರ್ಛೆ ಬಿದ್ದಿದ್ದಾಳೆ" ಎಂದು. ಮಧುಸೂದನನ ಮನಸ್ಸು ಧಗ್ಗನೆ ಉರಿದೆದ್ದಿತು. "ಯಾಕೆ, ಏನಾಯಿತು ಅವಳಿಗೆ?" ಎಂದನು.

"ಅದೇನು ಅಂತ ಹೇಳಲಾರೆ. ಅಣ್ಣಾ, ಅಣ್ಣಾ, ಅಂತ ಸುಮ್ಮನೆ ತತ್ತರಿಸಿಬಿಟ್ಟಳು. ಒಂದುಸಲ ಹೋಗಿ ನೋಡಿಬರುತ್ತೀರಾ?"

"ಯಾಕೆ? ಹೋಗಿ ಏನಾಗುತ್ತೆ. ನಾನಂತೂ ಅವಳ ಅಣ್ಣನಲ್ಲವಲ್ಲ!"

"ಸುಮ್ಮ ಸುಮ್ಮನೆ ಯಾಕೆ ರೇಗುತ್ತೀರಿ? ಆ ಹುಡುಗಿ ದೊಡ್ಡಮನುಷ್ಯರ ಮಗಳು. ಹಿಡಿತಕ್ಕೆ ಸಿಗುವುದಕ್ಕೆ ಸ್ವಲ್ಪ ಕಾಲ ಬೇಕಾಗುತ್ತೆ."

"ದಿನದಿನವೂ ಅವಳು ಮೂರ್ಛೆ ಹೋಗುತ್ತಿರಲಿ. ನಾನು ಹೋಗಿ ಅವಳ ತಲೆಗೆ ಕವಿರಾಜ ತೈಲ ಮಾಲಿಸ್ ಮಾಡುತ್ತೇನೆ. ಅದಕ್ಕೆ ತಾನೇ ಅವಳನ್ನು ಮದುವೆ ಮಾಡಿಕೊಂಡದ್ದು."

"ನಿಮ್ಮ ಮಾತು ಕೇಳಿ ನಗು ಬರುತ್ತದೆ. ಅದರಲ್ಲಿ ತಪ್ಪೇನಿದೆ? ನಮ್ಮ ಕಾಲದಲ್ಲಿ ಮಾತು ಮಾತಿಗೆ ಮಾನಿನಿಯರ ಬಿಂಕ ಮುರಿಯಬೇಕಾಗಿತ್ತು. ಈಗ ಮೂರ್ಛೆಯನ್ನಾದರೂ ಮುರಿಯಬೇಕು."

ಮಧುಸೂದನನು ಮುಖ ಗಂಟುಹಾಕಿಕೊಂಡು ಕೂತಿದ್ದನು. ಶ್ಯಾಮ ಸುಂದರಿಯು ಕನಿಕರದಿಂದ ಮನಕರಗಿ ಹತ್ತಿರ ಬಂದು ಅವನ ಕೈಹಿಡಿದು "ಹಾಗೆಲ್ಲಾ ಮನಸ್ಸು ಕೆಡಿಸಿಕೊಳ್ಳಬಾರದಪ್ಪಾ, ನನಗೆ ನೋಡುವುದಕ್ಕಾಗುವುದಿಲ್ಲ." ಎಂದಳು.

ಅಷ್ಟು ಹತ್ತಿರ ಹೋಗಿ ಮಧುಸೂದನನನ್ನು ಸಮಾಧಾನ ಮಾಡುವ ಸಾಹಸ ಈವರೆಗೆ ಶ್ಯಾಮ ಸುಂದರಿಗೆ ಇರಲಿಲ್ಲ.

ಸ್ವಭಾವತಃ ಹರಟೆ ಮಲ್ಲಿಯಾದ ಶ್ಯಾಮಾ ಮೈದುನನ ಹತ್ತಿರ ತೆಪ್ಪಗಿರುತ್ತಿದ್ದಳು. ಅವನಿಗೆ ಹೆಚ್ಚು ಮಾತು ಸಹಿಸದೆಂದು ಅವಳಿಗೆ ಗೊತ್ತು. ಈ ಮಧುಸೂದನನು ಹಳೆಯ ಮಧುಸೂದನನಲ್ಲ ವೆಂದು ಹೆಂಗಸರ ಸೂಕ್ಷ್ಮಬುದ್ಧಿಯಿಂದ ತಿಳಿದುಕೊಂಡುಬಿಟ್ಟಿದ್ದಳು.

ಇಂದು ಅವನು ದುರ್ಬಲ....ತನ್ನ ಮರ್ಯಾದೆಯ ಬಗ್ಗೆಯೇ ಅವನಿಗೆ ತರ್ಕಾತರ್ಕ ಜ್ಞಾನವಿಲ್ಲ. ಮಧುವಿನ ಕೈಯಲ್ಲಿ ಕೈಯಿಟ್ಟು ಅದು ಕೆಟ್ಟದೆನಿಸಲಿಲ್ಲವೆಂದು ಅರಿತಳು. ಹೊಸ ಮದುವೆ ಹೆಣ್ಣು ತನ್ನ ಸ್ವಾಭಿಮಾನದಿಂದ ಅವನನ್ನು ನೋಯಿಸಿರುವಾಗ ಬೇರೆ ಎಲ್ಲಿಂದಲಾದರೂ ಅಲ್ಪ ಸ್ವಲ್ಪ ಚಿಕಿತ್ಸೆ ದೊರೆತರೆ ಮನಸ್ಸಿಗೆ ಸ್ವಲ್ಪವಾದರೂ ನೆಮ್ಮದಿಯಾಗಬಹುದು. ಶ್ಯಾಮಾ ಕೂಡ ಅವನನ್ನು ಅಷ್ಟು ಅನಾದರದಿಂದ ನೋಡಲಾರಳೆಂಬುದು ಸಂಪೂರ್ಣವಾಗಿ ನಿರ್ಲಕ್ಷ್ಯ ಮಾಡುವ ಮಾತಲ್ಲ. ಅವಳೇನು ಕುಮುವಿಗಿಂತಲೂ ಅಂದದಲ್ಲಿ ಕಡಿಮೆಯೇ? ಬಣ್ಣ ಸ್ವಲ್ಪ ಕಪ್ಪಿರಬಹುದು. ಆದರೆ ಅವಳ ಕಣ್ಣು! ಅವಳ ಕೇಶರಾಶಿ...! ಅವಳ ರಸವತ್ತಾದ ಓಷ್ಠಾಧರಗಳು!

ಶ್ಯಾಮಾ ಪಕ್ಕಕ್ಕೆ ತಿರುಗಿನೋಡಿ "ಅಗೋ ಬಂದಳಪ್ಪಾ, ನಿನ್ನ ಹೆಂಡತಿ. ನಾನಿನ್ನು ಹೊರಡು ತ್ತೇನೆ....ಆದರೆ ನೋಡೀಪ್ಪಾ....ಅವಳ ಮೇಲೆ ರೇಗಿ ಕೂಗಾಡಬೇಡಿ.,..ಪಾಪ, ಇನ್ನೂ ಎಳೆಯ ಹುಡುಗಿ" ಎಂದು ಹೇಳುತ್ತಾ ಹೊರಡಲನುವಾದಳು.

ಕುಮು ಒಳಗೆ ಬಂದ ತಕ್ಷಣ ಮಧುಸೂದನನಿಗೆ ಇನ್ನು ತಡೆಯಲಾಗಲಿಲ್ಲ. "ಅಪ್ಪನ ಮನೆ ಯಿಂದ ಮೂರ್ಛೆ ಹೋಗುವುದು ಅಭ್ಯಾಸ ಮಾಡಿಕೊಂಡು ಬಂದಿದ್ದೀಯ ಅಂತ ಕಾಣುತ್ತೆ. ಆದರೆ ತಿಳುಕೋ....ನಮ್ಮ ಮನೆಯಲ್ಲಿ ಅದೆಲ್ಲಾ ನಡೆಯುವುದಿಲ್ಲ. ನಿಮ್ಮ ಆ ನೂರ್‌ನಗರದ ಚಾಳಿ ಬಿಟ್ಟುಬಿಡಬೇಕಾಗುತ್ತೆ."

ಕುಮು ಎವೆಯಿಕ್ಕದೆ ನೋಡುತ್ತ ನಿಂತಿದ್ದಳು. ಒಂದು ಮಾತೂ ಆಡಲಿಲ್ಲ. ಮಧುಸೂದ ನನಿಗೆ ಅವಳ ಮೌನವನ್ನು ಕಂಡು ಮತ್ತೂ ರೇಗಿತು. ಮನಸ್ಸಿನ ಅಂತರ್ಯದಲ್ಲಿ ಈ ಹುಡುಗಿಯ ಮನವೊಲಿಸಲು ಆಕಾಂಕ್ಷೆಯೊಂದು ಹುಟ್ಟಿಕೊಂಡಿರುವುದೇ ಅವನ ಈ ತೀವ್ರ, ನಿಷ್ಫಲ ಕೋಪಕ್ಕೆ ಕಾರಣ.

"ನಾನು ವಿಪರೀತ ಕೆಲಸದ ಆಳು. ನನಗೆ ವಿರಾಮ ಕಡಿಮೆ. ಹಿಸ್ಟೀರಿಯಾ (ಮೂರ್ಛೆ ರೋಗ) ಇರುವ ಹೆಂಡತಿಗೆ ಉಪಚಾರ ಮಾಡುವುದಕ್ಕೆ ಪುರಸೊತ್ತು ಇಲ್ಲ ನನಗೆ....ಇದನ್ನ ಸ್ಪಷ್ಟ ವಾಗಿ ಹೇಳಿಬಿಡುತೇನೆ." ಎಂದನು.

ಕುಮುದಿನಿ ಮೆಲ್ಲಗೆ "ನಿಮಗೆ ನನ್ನನ್ನ ಅವಮಾನಮಾಡಬೇಕೆಂದಿದೆಯೇನು? ಆಗಲಿ, ಮಾಡಿ ...ನಾನೇ ಸೋತೆ. ಆದರೆ ನಿಮ್ಮ ಅವಮಾನವನ್ನು ಮನಸ್ಸಿನಲ್ಲಿ ತೆಗೆದುಕೊಳ್ಳುವುದಿಲ್ಲ." ಎಂದಳು.

ಕುಮುವು ಯಾರಿಗೆ ಇದನ್ನೆಲ್ಲಾ ಹೇಳುತ್ತಿದ್ದಾಳೆ? ಅವಳ ವಿಶಾಲವಾಗಿ ತೆರೆದ ಕಣ್ಣುಗಳ ಮುಂದೆ ನಿಂತಿರುವುದು ಯಾರು? ಮಧುಸೂದನನು ಅವಾಕ್ಕಾಗಿ ಹೋದನು. ಈ ಹುಡುಗಿಯೇಕೆ ಜಗಳವಾಡಲು ಸಿದ್ಧವಾಗಿಲ್ಲ? ಇವಳ ಉದ್ದೇಶವೇನು?

ಮಧು ಸೂದನನು ವಕ್ರೋಕ್ತಿಯಿಂದ "ನೀನು ನಿಮ್ಮ ಅಣ್ಣನ ಶಿಷ್ಯಳು, ಆದರೆ ಇದನ್ನ

ಮಾತ್ರ ಜ್ಞಾಪಕದಲ್ಲಿಟ್ಟುಕೋ....ನಾನು ನಿಮ್ಮಣ್ಣನ ಸಾಹುಕಾರ. ಅವನನ್ನು ಒಂದು ಸಂತೆಯಲ್ಲಿ ಮಾರಿ ಇನ್ನೊಂದು ಸಂತೆಯಲ್ಲಿ ಮಾರಿಬಿಡಬಲ್ಲೆ!" ಎಂದನು.

ತಾನು ಈ ಕುಮುವಿನ ಅಣ್ಣನಿಗಿಂತಲೂ ಶ್ರೇಷ್ಠನೆನ್ನುವುದನ್ನು ಅವಳ ಮನಸ್ಸಿಗೆ ನಾಟುವಂತೆ ಹೇಳಲು ಮೂಢನಿಗೆ ಬೇರಾವ ಮಾತೂ ತೋಚಲಿಲ್ಲ.

ಕುಮು ಸ್ವಲ್ಪವೂ ವಿಚಲಿತಳಾಗದೆ ಗಂಭೀರ ಸ್ವರದಲ್ಲಿ "ನೋಡಿ, ನಿಷ್ಠುರರಾದರೂ ಆಗಿ, ಪರವಾಯಿಲ್ಲ. ಆದರೆ ಸಣ್ಣವರಾಗಬೇಡಿ." ಎಂದು ಸೋಫಾದ ಮೇಲೆ ಕುಕ್ಕರಿಸಿದಳು.

ಮಧು ಕರ್ಕಶ ಸ್ವರದಲ್ಲಿ "ಏನು? ನಾನು ಸಣ್ಣವನೇ....ನನ್ನಲ್ಲಿ ಸಣ್ಣತನವೇ? ಮತ್ತೆ ನಿಮ್ಮಣ್ಣ ಮಾತ್ರ ನನಗಿಂತಲೂ ಬಲು ದೊಡ್ಡವನೇನೋ....?" ಎಂದು ಕೂಗುತ್ತಾ ಎದ್ದನು.

ಕುಮುವು ಅದೇ ಭಾವದಲ್ಲಿ "ನೀವು ದೊಡ್ಡವರೆಂದೇ ನಾನು ನಿಮ್ಮ ಮನೆಗೆ ಬಂದಿರುವುದು" ಎಂದಳು.

ಮಧುಸೂದನನು ಅದಕ್ಕೆ ಉತ್ತರವಾಗಿ ವ್ಯಂಗ್ಯವಾಗಿ "ಆಹಾ! ದೊಡ್ಡವನು ಅಂದುಕೊಂಡೇ ಬಂದೆಯಾ?.... ಇಲ್ಲಾ, ದುಡ್ಡಿನ ಆಸೆಗೋ?" ಎಂದನು.

ಆಗ ಕುಮು ತಕ್ಷಣ ಸೋಫಾದಿಂದೆದ್ದು ನಡೆದು ಹೊರಗಡೆ ತೆರೆದ ಬಿಸಿಲು ಮಾಳಿಗೆಯ ಮೇಲೆ ಬರಿಯ ನೆಲದ ಮೇಲೆ ಹೋಗಿ ಕೂತಳು.

ಕಲಿಕತ್ತೆಯ ಶೀತಕಾಲದ ಕೃಪಣರಾತ್ರಿ. ಹೊಗೆಯಿಂದ, ಮಂಜಿನಿಂದ ತುಂಬಿದ ಆಕಾಶವು ಅಪ್ರಸನ್ನವಾಗಿ, ಮಂಕು ಮಂಕಾಗಿದೆ. ನಕ್ಷತ್ರಗಳ ಬೆಳಕು ಒಡೆದ ಗಂಟಲಿನ ದನಿಯಂತೆ ಬೇಸರವುಂಟುಮಾಡುತ್ತದೆ. ಕುಮುವಿನ ಮನಸ್ಸಾಗ ನಿಶ್ಚೇಷ್ಟ....ಯಾವ ಭಾವನೆಯೂ ಇಲ್ಲ! ಯಾವ ವೇದನೆಯೂ ಇಲ್ಲ. ದೊಡ್ಡದಾಗಿ ಕವಿದಿದ್ದ ಮಂಜಿನ ರಾಶಿಯ ಮಧ್ಯೆ ಅವಳು ಲುಪ್ತಳಾಗಿ ಹೋದಂತಿದ್ದಳು.

ಕುಮು ಹೀಗೆ ಹಠಾತ್ತಾಗಿ, ಸದ್ದು ಮಾಡದೆ ಕೋಣೆಯೊಳಗಿಂದ ಹೊರಟು ಹೋಗುವಳೆಂದು ಮಧುಸೂದನನು ಲೇಶವೂ ನಿರೀಕ್ಷಿಸಿರಲಿಲ್ಲ. ತನ್ನ ಈ ಪರಾಭವಕ್ಕಾಗಿ ಎಲ್ಲರಿಗಿಂತಲೂ ಕುಮುವಿನ ಅಣ್ಣನ ಮೇಲೆ ಹೆಚ್ಚು ಕೋಪ ಬಂತು. ಮಲಗುವ ಮನೆಯ ಕುರ್ಚಿಯ ಮೇಲೆ ಕೂತು ಶೂನ್ಯ ಆಕಾಶದ ಕಡೆ ದೃಷ್ಟಿ ಬೀರಿದನು. ಸ್ವಲ್ಪ ಹೊತ್ತು ಹಾಗೆಯೇ ಕೂತಿದ್ದು ನೆಮ್ಮದಿಯಿಂದ ಇರಲಾಗದೆ ಬಡ ಬಡ ಶಬ್ದ ಮಾಡುತ್ತಾ ಕುರ್ಚಿಯಿಂದ ಎದ್ದು ಬಿಸಿಲು ಮಾಳಿಗೆಯ ಮೇಲೆ ಬಂದು ಕುಮುವಿನ ಹಿಂದೆ ಬಂದು ನಿಂತು "ನೋಡಿಲ್ಲಿ" ಎಂದನು.

ಕುಮುವು ಚಮಕಿತಳಾಗಿ ಎದ್ದು ಹಿಂದೆ ತಿರುಗಿ ನಿಂತಳು.

"ಛಳಿಯಲ್ಲಿ ಹೊರಗಡೆ ಇಲ್ಲಿ ನಿಂತುಕೊಂಡು ಏನುಮಾಡುತ್ತಿ? ಒಳಗೆ ನಡಿ".

ಕುಮು ಸಂಕೋಚವೇ ಇಲ್ಲದೆ ಮಧುಸೂದನನ ಮುಖದ ಕಡೆ ನೋಡುತ್ತಾ ನಿಂತಳು. ಅವನ ಮುಖದಲ್ಲಿನ ಯಜಮಾನಿಕೆಯ ದರ್ಪವೆಲ್ಲಾ ಎಲ್ಲಿ ಹೋಯಿತೋ! ಕುಮುವಿನ ಎಡಗೈಯನ್ನು ಹಿಡಿದುಕೊಂಡು ಬಹಳ ಮೃದುವಾಗಿ 'ಬಾ ಒಳಗೆ' ಎಂದನು. ಕುಮುವಿನ ಬಲಗೈಯಲ್ಲಿ ಅಣ್ಣನ ಆಶೀರ್ವಾದದ ಟೆಲಿಗ್ರಾಂ ಇತ್ತು. ಅದನ್ನು ಅವಳು ಎದೆಯಲ್ಲಿ ಭದ್ರವಾಗಿ ಮುಚ್ಚಿಟ್ಟುಕೊಂಡಳು. ಗಂಡನ ಕೈಯಿಂದ ಕೈಯನ್ನು ಎಳೆದುಕೊಳ್ಳಲಿಲ್ಲ. ನೀರವವಾಗಿ ಮೆಲ್ಲ ಮೆಲ್ಲಗೆ

ಮಲಗುವ ಮನೆಗೆ ಹಿಂದಿರುಗಿ ಹೋದಳು.

## ಇಪ್ಪತ್ತಾರನೆಯ ಅಧ್ಯಾಯ

ಮರುದಿನ ಮುಂಜಾನೆ ಕುಮು ಹಾಸುಗೆಯಿಂದೆದ್ದಾಗ ಅವಳ ಗಂಡನಿನ್ನೂ ಮಲಗಿದ್ದ. ಕುಮು ಅವನ ಮುಖದ ಕಡೆ ನೋಡಲಿಲ್ಲ. ಅದರಿಂದ ಮನಸ್ಸು ಕೆಡಬಹುದೆಂದೆಣಿಸಿದಳು. ಅತಿ ಸಾವಧಾನದಿಂದ ಎದ್ದು ಕಾಲ ಬಳಿ ಪ್ರಣಾಮ ಮಾಡಿದಳು. ಆಮೇಲೆ ಸ್ನಾನದ ಮನೆಗೆ ಹೋದಳು. ಸ್ನಾನ ಸಾಂಗವಾದ ಮೇಲೆ ಹಿಂದಿನ ಬಾಗಿಲನ್ನು ತೆಗೆದು ಬಿಸಿಲು ಮಾಳಿಗೆಯ ಮೇಲೆ ಹೋಗಿ ಕೂತಳು. ಕವಿದ ಮಂಜಿನೊಳಗಿಂದ ಪೂರ್ವಾಕಾಶದಲ್ಲೊಂದು ಮಲಿನವಾದ ಹೊನ್ನಿನ ರೇಖೆಯೊಂದು ಕಾಣಬರುತ್ತಿತ್ತು. ಹೊತ್ತಾಗಿತ್ತು. ಬಿಸಿಲೇರಿದಾಗ ಕುಮೂ ನಿದಾನವಾಗಿ ಮಲಗುವ ಮನೆಗೆ ಹಿಂದಿರುಗಿ ಬಂದು ನೋಡಿದರೆ ಗಂಡ ಎದ್ದು ಹೊರಟು ಹೋಗಿದ್ದ. ಅಲಂಕಾರ ಮಾಡಿಕೊಳ್ಳುವ ಕನ್ನಡಿಯ ಮುಂದಿನ ಮೇಲ್ಮಣೆಯ ಮೇಲೆ ಇಟ್ಟಿದ್ದ ತನ್ನ ಮಣಿಗಳ ಕೈಚೀಲ ತೆರೆದಿತ್ತು. ಅದರ ಮಧ್ಯೆ ಅಣ್ಣನ ಟೆಲಿಗ್ರಾಂ ಇಡಲು ಹೋದಾಗ ಅದರೊಳಗಿಟ್ಟಿದ್ದ ಪಚ್ಚೆಯುಂಗುರ ಕಾಣಿಸಲಿಲ್ಲ.

ಬೆಳಗಿನ ಹೊತ್ತು ಮಾನಸ ಪೂಜೆ ಮಾಡುವಾಗ ಅವಳ ಮುಖದ ಮೇಲೆ ಬಂದಿದ್ದ ಶಾಂತಿಯ ಭಾವವು ಹಾಗೇ ಇಂಗಿ ಹೋಗಿ ಕಣ್ಣಿನಲ್ಲಿ ಬೆಂಕಿಯುರಿಯಿತು. ಸ್ವಲ್ಪ ಮಿಠಾಯಿ ತಿಂದು, ಹಾಲು ಕುಡಿಯ ಬಾರೆಂದು ಕರೆಯಲು ಮೋತಿಯಮ್ಮ ಹತ್ತಿರ ಬಂದು ಮಾತಾಡಿಸಿದಳು. ಕುಮುವಿನ ಬಾಯಿಂದ ಜವಾಬಿಲ್ಲ. ಕಲ್ಲಿನ ಗೊಂಬೆಯಂತಾಗಿದ್ದಳು.

ಮೋತಿಯಮ್ಮನಿಗೆ ಭಯವಾಗಿ ಹತ್ತಿರ ಬಂದು "ಏನಾಗಿದೆಯೇ, ತಂಗಿ?" ಎಂದು ಕೇಳಿದಳು. ಕುಮುವಿನ ಬಾಯಿಂದ ಮಾತು ಹೊರಡಲಿಲ್ಲ. ತುಟಿಗಳು ಮಾತ್ರ ಅದುರುತ್ತಿದ್ದುವು.

"ಹೇಳಮ್ಮಾ....ನನಗೆ ಹೇಳೇ ತಂಗಿ, ಎಲ್ಲಮ್ಮಾ ನೋಯುತ್ತೆ ನಿನಗೆ?"

ಕುಮು ಉಡುಗಿದ ದನಿಯಲ್ಲಿ "ಕದ್ದು ತೆಗೆದುಕೊಂಡು ಹೋಗಿದಾರೆ" ಎಂದಳು.

"ಏನೇ ತೆಗೆದುಕೊಂಡು ಹೋಗಿದಾರೆ....ಏನು ಹೇಳಮ್ಮ?"

"ನನ್ನ ಉಂಗುರ! ನಮ್ಮ ಅಣ್ಣನ ಆಶೀರ್ವಾದದ ಉಂಗುರ!"

"ಯಾರೇ ತಗೊಂಡು ಹೋದದ್ದು?" ಕುಮು ಎದ್ದು ನಿಂತು ಯಾರ ಹೆಸರನ್ನೂ ಹೇಳದೆ ಹೊರಗಡೆ ತಿರುಗಿ ಬೆರಳು ತೋರಿಸಿದಳು.

"ಸ್ವಲ್ಪ ಸುದಾರಿಸಿಕೊಳ್ಳಮ್ಮಾ. ಸುಮ್ಮನೆ ಹುಡುಗಾಟವಾಡುತಿದಾರೆ ನಿನ್ನ ಸಂಗಡ. ಪುನಃ ವಾಪಸ್ಸು ಕೊಟ್ಟುಬಿಡುತಾರೆ ಕಣೆ."

"ಇಲ್ಲ, ವಾಪಸು ತೆಗೆದುಕೊಳ್ಳುವುದಿಲ್ಲ. ನೋಡೋಣ...ಎಷ್ಟು ದೂರದವರೆಗೆ ಹಿಂಸೆ ಕೊಡುತ್ತಾರೊ..."

"ಒಳ್ಳೇದು ಹೋಗಲಿ. ಅದು ಆಮೇಲೆ ಆಗಲಿ. ಈಗ ಸ್ವಲ್ಪ ಬಾಯಿಗೆ ಏನಾದರೂ ಹಾಕಿಕೊಳ್ಳುವಿಯಂತೆ, ನಡಿ."

"ಇಲ್ಲ...ಬೇಡ ಈಗ....ಇಲ್ಲಿನ ತಿಂಡಿ ಗಂಟಲಲ್ಲಿ ಏನೂ ಇಳಿಯುವುದಿಲ್ಲ."

"ಬೇಡವಮ್ಮಾ.....ಹಾಗೆನ್ನಬೇಡ....ನನ್ನ ಅಮ್ಮಾ....ನನ್ನ ಲಕ್ಷ್ಮಿಯಲ್ಲವೇ ನೀನು—! ನನ ಗೋಸ್ಕರವಾಗಿಯಾದರೂ ತಿನ್ನಬೇಕು, ನಡಿ."

"ಒಂದು ಮಾತು ಕೇಳಲೇ ನಿನ್ನನ್ನ? ಇವತ್ತಿನಿಂದ ನನ್ನದು ಅಂತ ಸ್ವಂತ ಪದಾರ್ಥ ಯಾವುದೂ ಇಲ್ಲವೇ ?"

"ಇಲ್ಲ...ಯಾವುದೂ ಇಲ್ಲ. ಇರುವುದೆಲ್ಲಾ ಗಂಡನ ಮರ್ಜಿ...ದಾಕ್ಷಿಣ್ಯ. ಗೊತ್ತಿಲ್ಲ ನಿನಗೆ? ಕಾಗದಗಳಿಗೆ ರುಜು ಹಾಕಬೇಕಾದರೆ ದಾಸಿ ಅಂತ ಹಾಕಬೇಕಾಗುತ್ತೆ."

ದಾಸಿ? ರಘುವಂಶದ ಇಂದುಮತಿಯ ನೆನಪು ಮನಸ್ಸಿಗೆ ಬಂತು.

"ಗೃಹಿಣೀ ಸಚಿವಃ ಸಖೀ ಮಿಥಃ
ಪ್ರಿಯ ಶಿಷ್ಯಾ ಲಲಿತೇ ಕಲಾವಿಧೌ."

ಪಟ್ಟಿಯಲ್ಲಿ ದಾಸಿಯೆಂದು ಎಲ್ಲೂ ಇಲ್ಲ! ಸತ್ಯವಾನನಿಗೆ ಸಾವಿತ್ರಿ ದಾಸಿಯೇನು? ಮತ್ತು ಉತ್ತರ ರಾಮ ಚರಿತ್ರೆಯ ಸೀತೆ?

ಕುಮು "ಹೆಂಡತಿಯನ್ನು ದಾಸಿಯೆನ್ನುವವರು ಯಾವ ಜಾತಿಯ ಜನರು ?" ಎಂದಳು.

"ಆ ಮನುಷ್ಯ ಇನ್ನೂ ಗೊತ್ತಿಲ್ಲ ನಿನಗೆ. ಅವನು ಸುಮ್ಮನೆ ಇತರರನ್ನು ಗುಲಾಮರಾಗಿ ನೋಡುವುದಷ್ಟೇ ಅಲ್ಲ. ತನ್ನನ್ನೇ ಗುಲಾಮನಂತೆ ತಿಳಿದುಕೊಂಡಿದಾನೆ. ಯಾವತ್ತು ಆಫೀಸಿಗೆ ಹೋಗಲಿಕ್ಕೆ ಆಗದೋ ಸ್ವಂತ ಆದಾಯದ ಲೆಕ್ಕದಿಂದ ಆವತ್ತಿನ ಹಣ ಕಳೆದುಬಿಡುತಾರೆ. ಒಂದು ಸಲ ಏನೋ ಕಾಯಿಲೆಯಾಗಿ ಒಂದು ತಿಂಗಳು ವರಮಾನ ನಿಂತು ಹೋಗಿತ್ತು. ಅವರ ಮುಂದಿನ ಎರಡು ಮೂರು ತಿಂಗಳು ಮನೆಯ ಖರ್ಚೆಲ್ಲಾ ಅಷ್ಟಕ್ಕಷ್ಟು ಕಡಿಮೆ ಮಾಡಿ ತಮಗೆ ಆಗಿದ್ದ ರ ನಷ್ಟವನ್ನೆಲ್ಲಾ ಭರ್ತಿಮಾಡಿಕೊಂಡು ಬಿಟ್ಟರು. ಇಷ್ಟು ದಿನಗಳೂ ನಾನೇ ಮನೆ ಕೆಲಸಗಳ ವಹಿ ವಾಟು ಮಾಡಿಕೊಂಡಿದ್ದೇನಲ್ಲಾ, ಅದಕ್ಕೆ ನನಗೂ ತಿಂಗಳಿಗೆ ಇಷ್ಟು ಅಂತ ಸಂಬಳ ಇದೆ. ಸ್ವಜ ನರು ಅಂತ ಯಾರನ್ನೂ ಲಕ್ಷ್ಯಮಾಡುವುದಿಲ್ಲ ಅವರು. ಈ ಮನೆಯಲ್ಲಿ ಯಜಮಾನನ ಮೊದಲು ಗೊಂಡು ನೌಕರರು, ನೌಕರಗಿತ್ತಿಯರುಗಳವರೆಗೆ ಎಲ್ಲರೂ ಗುಲಾಮರೇ".

ಕುಮು ಸ್ವಲ್ಪ ಸುಮ್ಮನಿದ್ದು ಆಮೇಲೆ "ನಾನೂ ಹಾಗೆಯೇ ಗುಲಾಮಗಿರಿ ಮಾಡುತ್ತೇನೆ. ನನ್ನ ನಿತ್ಯಗಟ್ಟಲೆಯ ಅನ್ನ ಬಟ್ಟೆಗಳ ಲೆಕ್ಕವನ್ನು ಆಯಾ ದಿವಸವೇ ತೀರಿಸಿಬಿಡುತೇನೆ. ನಾನು ಈ ಮನೆಯಲ್ಲಿ ಸಂಬಳವಿಲ್ಲದ ಹೆಣ್ಣು ದಾಸಿಯಾಗಿ ಎಂದಿಗೂ ಇರಲಾರೆ. ನಡಿ ಮತ್ತೆ....! ನನಗೆ ಒಂದು ಕೆಲಸ ನಿಗದಿ ಮಾಡಿಕೊಡು. ಮನೆಗೆಲಸಗಳ ವಹಿವಾಟು ನಿನ್ನ ಮೇಲೆ ತಾನೇ ಇರುವುದು? ನನ್ನನ್ನ ನಿನ್ನ ಕೈಕೆಳಗೆ ನೇಮಿಸಿಕೋ. ನನ್ನನ್ನ ಇನ್ನುಮೇಲಿಂದ 'ರಾಣಿ, ರಾಣಿ' ಅಂತ ಹಾಸ್ಯ ಮಾಡದೆ ಇರಲಿ." ಎಂದಳು.

ಮೋತಿಯಮ್ಮ ನಕ್ಕು ಕುಮುವಿನ ಗಲ್ಲವನ್ನು ಹಿಡಿದು "ಹಾಗಾದರೆ ಈಗ ನನ್ನ ಮಾತು ಕೇಳ ಬೇಕು ನೀನು. ನಾನು ಅಪ್ಪಣೆ ಮಾಡುತ್ತೇನೆ. ನಡಿ, ತಿಂಡಿ ತಿನ್ನುವಿಯಂತೆ."

ಕೊಠಡಿಯಿಂದ ಹೊರಗೆ ಹೋಗುತ್ತಾ ಹೋಗುತ್ತಾ ಕುಮು "ನೋಡಕ್ಕಾ, ನನ್ನನ್ನೇ ಸಮ ರ್ಪಣೆ ಮಾಡಿಕೊಳ್ಳೋಣ ಅಂತ ಮನಸ್ಸು ಮಾಡಿ ಸಿದ್ಧವಾಗಿ ಬಂದಿದ್ದೆ. ಆದರೆ ಅವರು ಮಾತ್ರ ನಾನು ಏನನ್ನೂ ಅರ್ಪಿಸಲು ಬಿಡಲೇ ಇಲ್ಲ. ಈಗ ದಾಸಿಯನ್ನೇ ಕಟ್ಟಿಕೊಂಡಿರಲಿ....ನನ್ನನ್ನ

ಪಡೆಯಲಾರರು." ಎಂದಳು.

ಮೋತಿಯಮ್ಮನು "ಕಟ್ಟಿಗೆಯವನು ಮರ ಕಡಿಯುವುದನ್ನು ಮಾತ್ರ ಬಲ್ಲ. ಅವನಿಗೆ ಸಿಕ್ಕು ವುದು ಮರವಲ್ಲ, ಕಟ್ಟಿಗೆ. ತೋಟಗಾರ ಗಿಡ ಮರಗಳನ್ನ ಪೋಷಣೆ ಮಾಡುವುದನ್ನು ಬಲ್ಲ. ಅವ ನಿಗೆ ಹೂವು ಸಿಕ್ಕುತ್ತದೆ. ಹಣ್ಣು ಸಿಕ್ಕುತ್ತದೆ. ನೀನೆಲ್ಲೋ ಕಟ್ಟಿಗೆಯವನ ಕೈಯಲ್ಲಿ ಸಿಕ್ಕಿಹಾಕಿ ಕೊಂಡಿದ್ದೀಯ. ಅವನಂತೂ ವ್ಯಾಪಾರಿ.... ಅವನಿಗೆಲ್ಲಿ ಹೇಳು, ನೋವು, ಯಾತನೆ?" ಎಂದಳು.

ಒಂದು ಸಲ ಮಲಗುವ ಮನೆಗೆ ಹಿಂದಿರುಗಿ ಬಂದು ನೋಡಿದಾಗ ಅವಳ ಟೀಪಾಯಿಯ ಮೇಲೆ ಒಂದು ಸೀಸೆಯ ತುಂಬ ಪೆಪರ್‌ಮೆಂಟುಗಳಿದ್ದುವು. ಹಾಬಲೂ ತನ್ನ ಸ್ವಂತ ಕಾಣಿಕೆ ಯನ್ನು ಗುಟ್ಟಾಗಿ ಅರ್ಪಿಸಿ ತಾನೆಲ್ಲೋ ಅವಿತುಕೊಂಡಿದ್ದನು. ಇಂತಹ ಕಡೆ ಬಂಡೆಯ ಬಿರುಕಿ ನಲ್ಲೂ ಹೂವು ಅರಳುತ್ತದೆ. ಹುಡುಗನ ಈ ಪೆಪ್ಪರಮೆಂಟಿನ ಭಾಷೆಯನ್ನು ಕಂಡು ಅವಳಿಗೆ ಒಟ್ಟಿಗೆ ನಗು ಅಳುಗಳು ಬಂದುವು. ಅವನೆಲ್ಲಿಂದು ಹುಡುಕಿದಾಗ ಅವನು ಬಾಗಿಲ ಹಿಂದೆ ಸದ್ದಿಲ್ಲದೆ ನಿಂತಿದ್ದಾನೆ. ಅವನು ಈ ಕೋಣೆಗೆ ಬಂದು ಹೋಗುವುದನ್ನು ಅವರಮ್ಮ ನಿಷೇಧಿಸಿ ದ್ದಳು. ಯಾವುದಾದರೂ ಕಾರಣದಿಂದ ಯಜಮಾನನಿಗೆ ಸಿಟ್ಟು ಬರಬಹುದೆಂದು ಅವಳಿಗೆ ಭಯ ವಿತ್ತು. ಒಟ್ಟಿನಮೇಲೆ ಮಧುಸೂದನನ ಸ್ವಂತ ಕೆಲಸದ ಸಂದರ್ಭ ಹೊರತಾಗಿ ಬೇರೆ ಯಾವ ವಿಷಯದಲ್ಲೂ ಅವನ ಬಳಿಯಿಂದ ಸಂಪೂರ್ಣವಾಗಿ ದೂರವಾಗಿರುವುದೇ ಕ್ಷೇಮವೆಂದು ಆ ಮನೆ ಯವರೆಲ್ಲರೂ ತಿಳಿದಿದ್ದರು. ಕುಮು ಹಾಬಲೂವನ್ನು ಹಿಡಿದು ಕೋಣೆಯೊಳಗೆ ಕರೆತಂದು ತೊಡೆಯ ಮೇಲೆ ಕೂಡಿಸಿಕೊಂಡಳು. ಅವಳ ಕೋಣೆಯ ಅಲಂಕಾರದ ಸಾಮಾನುಗಳಲ್ಲಿ ಆಟದ ಸಾಮಾನಿನಂತೆ ಏನೇನಿತ್ತೋ ಅವುಗಳನ್ನು ಇಬ್ಬರೂ ಕೈಯಲ್ಲಿ ತೆಗೆದುಕೊಂಡು ತಿರುವಿ ತಿರುವಿ ನೋಡಿದರು.

ಪೇಪರ್‌ವೆಯಿಟ್ ಒಂದು ಹಾಬಲೂವಿಗೆ ಬಹಳ ಮೆಚ್ಚಿದೆಯೆಂದು ಕುಮುವಿಗೆ ತಿಳಿಯಿತು. ಅದರ ಗಾಜಿನ ಒಳಗಡೆಯಿಂದ ಬಣ್ಣದ ಹೂವು ಹೇಗೆ ಕಾಣಿಸುತ್ತೆ ಎನ್ನುವುದು ಅವನಿಗೆ ವಿಸ್ಮಯವುಂಟುಮಾಡಿತು.

ಕುಮು "ಇದು ಬೇಕೇನೋ ನಿನಗೆ, ಗೋಪಾಲ" ಎಂದು ಕೇಳಿದಳು.

ಇಷ್ಟು ದೊಡ್ಡ, ಯೋಚನೆಯೇ ಮಾಡಲಾಗದ, ಪ್ರಸ್ತಾಪವನ್ನು ಅವನ ವಯಸ್ಸಿನಲ್ಲಿ ಇದು ವರೆಗೆ ಕೇಳಿಯೇ ಇರಲಿಲ್ಲ. ಇಂತಹ ವಸ್ತುವಿನ ಮೇಲೆ ಎಂದಾದರೂ ಆಸೆ ಪಡುವುದಕ್ಕೆ ಸಾಧ್ಯವೇ? ಆಶ್ಚರ್ಯದಿಂದಲೂ, ಸಂಕೋಚದಿಂದಲೂ ಅವನು ಕುಮುವಿನ ಕಡೆ ಸುಮ್ಮನೆ ನೋಡುತ್ತಾ ಇದ್ದನು.

ಕುಮು "ಇದನ್ನು ನೀನು ತಗೊಂಡು ಹೋಗೋ ಬೇಕಾದರೆ" ಎಂದಳು.

ಹಾಬಲೂಗೆ ಆಹ್ಲಾದವನ್ನು ತಡೆದುಕೊಳ್ಳಲಾಗಲಿಲ್ಲ. ಅದನ್ನು ಕೈಯಲ್ಲಿ ತೆಗೆದುಕೊಂಡು ಖುಷಿಯಿಂದ ನೆಗೆಯುತ್ತಾ ಓಡಿಹೋದನು.

ಅವತ್ತೇ ಸಂಜೆ ಹಾಬಲೂವಿನ ತಾಯಿ ಬಂದು "ಎಂತಹ ಕೆಲಸ ಮಾಡಿದೆಯಮ್ಮಾ, ಇವತ್ತು ಹಾಬಲೂ ಕೈಯಲ್ಲಿ ಗಾಜಿನ ಪೇಪರ್‌ವೆಯಿಟ್ ನೋಡಿ ಯಜಮಾನರು ಎಷ್ಟು ಗಲಾಟೆ ಮಾಡಿ ಬಿಟ್ಟರೋ! ಕಿತ್ತುಕೊಂಡುಬಿಟ್ಟು ಅವನನ್ನು ಸಾಲದ್ದಕ್ಕೆ ಕಳ್ಳ ಅಂತ ಚೆನ್ನಾಗಿ ಹೊಡೆದಿದ್ದಾರೆ.

ಾಡು ಮತ್ತೆ, ಹಾಬಲು ಕೂಡ ನಿನ್ನ ಹೆಸರೆತ್ತಿದ್ದರೆ ಸರಿ....! ಕಡೆಗೆ ನಾನೇ ಅವನಿಗೆ ಕಳ್ಳತನ ಾಡುವುದನ್ನ ಕಲಿಸಿಕೊಟ್ಟೆ ಅನ್ನುವ ಮಾತೂ ಬರದೇ ಇರುವುದಿಲ್ಲ." ಎಂದಳು.

ಕುಮು ಮರದ ಬೊಂಬೆಯ ಹಾಗೆ ಬಿಗಿಸಿಕೊಂಡು ಸುಮ್ಮನೆ ಕೂತುಬಿಟ್ಟಳು. ಈ ಮಯದಲ್ಲಿ ಮಚ್, ಮಚ್ ಎಂದು ಮೆಟ್ಟಿನ ಶಬ್ದ ಮಾಡುತ್ತಾ ಮಧುಸೂದನನು ಬರುತ್ತಿದ್ದುದು ೇಳಿಸಿತು. ಮೋತಿಯಮ್ಮನು ಅವಸರವಸರವಾಗಿ ಓಡಿದಳು. ಮಧುಸೂದನನು ಕೈಲಿದ್ದ ಾಜಿನ ಪೇಪರ್‌ವೆಯಿಟನ್ನು ಟೀಪಾಯಿಯ ಮೇಲೆ ಯಥಾಸ್ಥಾನದಲ್ಲಿ ಇಟ್ಟು ಆಕ್ಷೇಪಣೆಯ ಕಂಠ ಲ್ಲಿ ಆದಷ್ಟು ಶಾಂತ, ಗಂಭೀರ ಭಂಗಿಯಲ್ಲಿ "ಹಾಬಲೂ ನಿನ್ನ ಕೋಣೆಯಿಂದ ಇದನ್ನು ಕದ್ದು ೊಂಡು ಹೋಗಿದ್ದ. ಸಾಮಾನುಗಳನ್ನು ಭದ್ರವಾಗಿ ಇಟ್ಟುಕೊಳ್ಳುವುದನ್ನು ಕಲಿತುಕೋ" ಎಂದನು

ಕುಮು ತೀಕ್ಷ್ಣ ಸ್ವರದಲ್ಲಿ "ಅವನು ಕದಿಯಲಿಲ್ಲ" ಎಂದಳು.

"ಸರಿ....ಭೇಷ್....ಹಾಗಾದರೆ ಎತ್ತಿಕೊಂಡು ಹೋದ!"

"ಇಲ್ಲ....ನಾನೇ ಅವನಿಗೆ ಕೊಟ್ಟೆ."

"ಹೀಗೆ ಮಾಡಿ ಅವನನ್ನು ಹಾಳುಮಾಡುವುದಕ್ಕೆ ಹೊರಟಿದ್ದಿ ಅಂತ ಕಾಣುತ್ತೆ? ಒಂದು ಾತು....ಮನಸ್ಸಿನಲ್ಲಿಡು....ನನ್ನನ್ನ ಕೇಳದೆ ಯಾವ ಸಾಮಾನನ್ನೂ ಯಾರಿಗೂ ಕೊಡುವುದಕ್ಕೆ ೋಗಕೂಡದು. ನನಗೆ ಇಂತಹ ಬೇಜವಾಬುದಾರಿ ಸರಿಬೀಳುವುದಿಲ್ಲ."

ಕುಮು ಎದ್ದು ನಿಂತು "ನೀವು ಮಾತ್ರ ನನ್ನ ಪಚ್ಚೆಯುಂಗುರ ತೆಗೆದುಕೊಳ್ಳಲಿಲ್ಲವೆ?"

"ಹೌದು, ತಗೊಂಡೆ."

"ಅದರಿಂದಲೂ ನಿಮ್ಮ ಈ ಗಾಜಿನ ಚೂರಿನ ಬೆಲೆ ತೀರಲಿಲ್ಲವೇ ?"

"ನಾನು ಮೊದಲೇ ಹೇಳಿದ್ದೀನಿ ನಿನಗೆ. ನೀನು ಅದನ್ನು ಇಟ್ಟುಕೋ ಕೂಡದು ಅಂತ...?"

"ನಿಮ್ಮ ಸಾಮಾನು ಮಾತ್ರ ನೀವು ಇಟ್ಟುಕೋಬಹುದು. ನನ್ನ ಸಾಮಾನನ್ನು ನಾನು ಟ್ಟುಕೊ ಕೂಡದು!"

"ಈ ಮನೆಯಲ್ಲಿ ನಿನ್ನದು ಅಂತ ಸಾಮಾನು ಯಾವುದೂ ಇಲ್ಲ."

"ಯಾವುದೂ ಇಲ್ಲ? ಹಾಗಾದರೆ ನಿಮ್ಮ ಈ ಮನೆ ನಿಮಗೇ ಇರಲಿ."

ೀಗೆ ಹೇಳಿ ಕುಮು ಹೊರಟದ್ದೇ ತಡ, ಶ್ಯಾಮಾ ಬೇಗ ಬೇಗ ಕೋಣೆಯೊಳಗೆ ಬಂದು "ಸೊಸೆ ಲ್ಲಿಗೆ ಹೋದಳು?" ಎಂದು ಕೇಳಿದಳು.

"ಯಾಕೆ?"

"ಬೆಳಗಿನಿಂದ ಅವಳಿಗೆ ಊಟ ಬಡಿಸಿ ಕಾಯುತ್ತಾ ಇದ್ದೀನಿ. ಈ ಮನೆಗೆ ಬಂದು ಅವಳು ಊಟ ಕೂಡ ಬಿಟ್ಟು ಬಿಟ್ಟಿದ್ದಾಳೇನು?"

"ಏನಾಯಿತೀಗ, ತಿನ್ನದೇ ಹೋದರೆ? ನೂರ್‌ನಗರದ ರಾಜಪುತ್ರಿ, ಊಟ ಮಾಡದೆ ೋದರೆ ನಿಮಗೇನಾಯಿತು? ನೀವುಗಳೆಲ್ಲಾ ಅವಳ ಗುಲಾಮರೇನು?"

"ಛಿ ಛೀ, ಏನು ಮಾತಾಡುತ್ತೀರಿ. ಎಳೆಯ ಹುಡುಗಿಯ ಮೇಲೆ ಹಾಗೆಲ್ಲಾ ಕೋಪ ಾಡಿಕೋತಾರೆಯೇ. ಅವಳು ಹೀಗೆ ಊಟವಿಲ್ಲದೆ ಉಪವಾಸವಿರೋದು ಕೂಡ ನೋಡಿ ನಮಗೆ ಮ್ಮನಿರುವುದಕ್ಕಾಗುವುದಿಲ್ಲ. ಬೇಕಂತಲೇ ಅವತ್ತು ಮೂರ್ಛೆ ಕೂಡ ಹೋಗಿದ್ದಳೇನು?"

ಮಧುಸೂದನನು ಗರ್ಜಿಸಿ "ಸರಿ ಸರಿ ಈಗೇನು ಮಾಡಬೇಕಾಗಿಲ್ಲ....ನಡಿ...ಹೊಟ್ಟೆ ಹಸಿ

ದರೆ, ತಾನೆ ಬಂದು ಊಟ ಮಾಡುತ್ತಾಳೆ." ಎಂದನು.

ಶ್ಯಾಮಾ ಬಹಳವಾಗಿ ನೊಂದವಳಂತೆ ಹೊರಟು ಹೋದಳು. ಮಧುಸೂದನನ ತಲೆಗೆ ರಕ್ತವೇರತೊಡಗಿತು. ಬೇಗ ಬೇಗ ಹೆಜ್ಜೆ ಹಾಕುತ್ತಾ ಸ್ನಾನದ ಮನೆಗೆ ಹೋಗಿ **Shower bath** ಕೆಳಗೆ ನಿಂತು ಕೊಳಾಯಿ ತಿರುಗಿಸಿದನು.

# ಇಪ್ಪತ್ತೇಳನೆಯ ಅಧ್ಯಾಯ

ಸಂಜೆಯಾಗುತ್ತಾ ಬಂತು. ಅಂದು ಎಲ್ಲಿ ಹುಡುಕಿದರೂ ಕುಮು ಕಾಣಬರಲಿಲ್ಲ. ಕಡೆಗೆ ಉಗ್ರಾಣದ ಪಕ್ಕದಲ್ಲಿದ್ದ ಒಂದು ಚಿಕ್ಕ ಮೂಲೆಯ ಕೋಣೆಯಲ್ಲಿ ದೀಪ, ದೀಪಸ್ತಂಭ, ವಿಧವಿಧವಾದ ಹಣತೆಗಳು, ಎಣ್ಣೆಯ ಲ್ಯಾಂಪು ಇತ್ಯಾದಿಗಳನ್ನು ಕೂಡಿಸಿಡುವ ಕಡೆ ನೆಲದ ಮೇಲೆ ಚಾಪೆ ಹಾಸಿಕೊಂಡು ಕುಳಿತಿದ್ದುದು ಕಂಡು ಬಂತು.

ಮೋತಿಯಮ್ಮನು ಬಂದು "ಇದೇನು ಆಟವೇ, ತಂಗಿ" ಎಂದಳು. ಕುಮು "ಈ ಮನೆಯಲ್ಲಿ ನಾನು ಹಣತೆಯ ಬತ್ತಿಯನ್ನು ಹೊಸೆಯುತ್ತೇನೆ. ನನ್ನ ಸ್ಥಳವೂ ಇಲ್ಲಿಯೇ" ಎಂದಳು.

ಮೋತಿಯಮ್ಮನು "ಒಳ್ಳೆ ಕೆಲಸ ಹುಡುಕಿದೆ ಬಿಡು. ನೀನು ಬಂದಿರುವುದೇನೋ ಈ ಮನೆಯನ್ನು ಬೆಳಗುವುದಕ್ಕೆ. ಆದರೆ ಹಾಗೆಂದುಬಿಟ್ಟು ದೀಪದ ಬತ್ತಿಗಳನ್ನು ಹೊಸೆಯಬೇಕಾಗಿಲ್ಲ. ಇನ್ನು ಸಾಕು, ನಡಿ." ಎಂದಳು.

ಕುಮು ಕದಲಲೇ ಇಲ್ಲ.

ಮೋತಿಯಮ್ಮನು "ಹಾಗಾದರೆ ನಾನು ನಿನ ಜೊತೆಯಲ್ಲಿಯೇ ಮಲಗುತ್ತೇನೆ." ಎಂದಳು.

ಕುಮು ದೃಢ ಸ್ವರದಲ್ಲಿ "ಕೂಡದು" ಎಂದಳು. ಈ ಸಾಧುಸ್ವಭಾವದ ಹುಡುಗಿಯಲ್ಲೂ ಹುಕುಂ ಮಾಡುವ ಶಕ್ತಿಯಿದೆಯೆಂದು ಮೋತಿಯಮ್ಮ ತಿಳಿದುಕೊಂಡಳು. ಅವಳು ಆಗ ಹೋಗಲೇ ಬೇಕಾಯಿತು

ಮಧುಸೂದನನು ರಾತ್ರಿ ಮಲಗಲು ಬಂದಾಗ ಕುಮುವಿನ ಸಮಾಚಾರ ಕೇಳಿದನು. ಸಮಾಚಾರ ತಿಳಿದು ಮೊದಲು "ಸರಿ, ಹಾಗಾದರೆ, ಅಲ್ಲೇ ಇದ್ದುಕೊಂಡು ಹೋಗಲಿ, ನೋಡೋಣ ಎಷ್ಟು ದಿನ ಹಾಗೆ ಇರುತಾಳೋ? ಸಮಾಧಾನ ಮಾಡುವುದಕ್ಕೆ ಹೋದರೆ ಹಟವೂ ಹೆಚ್ಚಾಗುತ್ತೆ." ಎಂದುಕೊಂಡನು. ಹೀಗೆ ಹೇಳಿ ದೀಪವನ್ನಾರಿಸಿ ಮಲಗಲು ಹೋದನು. ಆದರೆ ಏನು ಮಾಡಿದರೂ ನಿದ್ದೆ ಬರಲಿಲ್ಲ. ಪ್ರತಿಯೊಂದು ಸದ್ದಿಗೂ ಅವಳು ಬರುತ್ತಿದ್ದಾಳೆಂದು ಮನಸ್ಸಿನಲ್ಲಿ ಅನ್ನಿಸುತ್ತಿತ್ತು. ಒಂದು ಸಲ ಬಾಗಿಲ ಹೊರಗೆ ನಿಂತಿದ್ದ ಹಾಗೆ ಅನ್ನಿಸಿತು. ಹಾಸುಗೆ ಬಿಟ್ಟು ಹೊರಗೆ ಬಂದು ನೋಡಿದರೆ ಎಲ್ಲೂ ಯಾರೂ ಇಲ್ಲ. ರಾತ್ರಿ ಎಷ್ಟು ಹೊತ್ತಾದರೂ ಮನಸ್ಸು ತಳಮಳಗೊಳ್ಳುತ್ತಿತ್ತು. ಕುಮುವನ್ನು ನಿರ್ಲಕ್ಷ್ಯ ಮಾಡುವಷ್ಟು ಶಕ್ತಿ ಅವನಿಗೆ ಸ್ವಲ್ಪವೂ ಇರಲಿಲ್ಲ. ಆದರೂ ಸ್ವತಃ ಹೋಗಿ ಅವಳ ಹತ್ತಿರ ಸೋಲೊಪ್ಪಿಕೊಳ್ಳುವುದು ಅವನ ರೂಢಿಗೆ ವಿರುದ್ಧವಾದುದು...ತಣ್ಣೀರಿನಿಂದ ಮುಖ ತೊಳೆದುಕೊಂಡು ಬಂದನು. ಆದರೂ ನಿದ್ದೆ ಬರಲಿಲ್ಲ. ಸುಮ್ಮನೆ ಹಾಗೆ ಹೀಗೆ ಹೊರಳಾಡುತ್ತ ಇದ್ದನು. ಯಾವ ರೀತಿಯಿಂದಲೂ ವ್ಯಗ್ರತೆಯನ್ನು ತಡೆಯಲಾ

ಿಲ್ಲ. ಕೈಯಲ್ಲೊಂದು ಲಾಂದ್ರವನ್ನು ಹಿಡಿದುಕೊಂಡು ನಿದ್ರಾಮಗ್ನವಾದ ಕೋಣೆಗಳೆಲ್ಲವನ್ನೂ ಃಶ್ಶಬ್ದವಾಗಿ ದಾಟಿಕೊಂಡು ಅಂತಃಪುರದ ಆ ದೀಪಸ್ತಂಭಗಳ ಕೋಣೆಯ ಎದುರಿಗೆ ಬಂದು ಸ್ವಲ್ಪ ಹೊತ್ತು ಕಿವಿಗೊಟ್ಟು ಆಲಿಸಿದನು. ಒಳಗೆ ಯಾವ ಸದ್ದೂ ಇಲ್ಲ. ನಿಧಾನವಾಗಿ ಕದ ವನ್ನು ತೆಗೆದು ನೋಡಿದರೆ ಕುಮು ನೆಲದ ಮೇಲೆ ಚಾಪೆ ಹಾಸಿಕೊಂಡು ಮಲಗಿದಾಳೆ. ಆ ಚಾಪೆಯ ಒಂದು ಕೊನೆಯನ್ನೇ ಸುರುಳಿಯಾಗಿ ಸುತ್ತಿ ಅದನ್ನೇ ತಲೆಗಿಂಬಾಗಿ ಮಾಡಿಕೊಂಡಿ ದ್ದಾಳೆ. ಮಧುಸೂದನನಿಗೆ ನಿದ್ದೆಯಿಲ್ಲದಂತೆಯೇ ಕುಮುವಿಗೂ ಇಲ್ಲದಿದ್ದರೆ ಚೆನ್ನಾಗಿತ್ತು. ಆದರೆ ಅವಳು ಯಾವ ಆತಂಕವೂ ಇಲ್ಲದೆ ನಿದ್ದೆಮಾಡುತಿದ್ದಾಳೆ!. ..ಅವನು ಹಾಗೆ ನಿಟ್ಟಿಸಿ ನೋಡುತ್ತಿದ್ದಾಗ ಕುಮು ಇದ್ದಕ್ಕಿದ್ದ ಹಾಗೆ ಉಸ್ಸೆಂದು ಪಕ್ಕಕ್ಕೆ ತಿರುಗಿದಳು. ಗೃಹಸ್ಥರು ಎಚ್ಚರ ವಾದದ್ದನ್ನು ನೋಡಿ ಓಡಿ ಹೋಗುವ ಕಳ್ಳನಂತೆ ಮಧುಸೂದನನೂ ಬೇಗ ಅಲ್ಲಿಂದ ಪಲಾಯನ ಮಾಡಿದನು. ಕುಮುವೇನಾದರೂ ಅವನ ಪರಾಭವವನ್ನು ನೋಡಿಬಿಟ್ಟರೆ ಮನಸ್ಸಿನಲ್ಲೇ ಎಲ್ಲಾ ದರೂ ನಕ್ಕುಬಿಡುತಾಳೇನೋ ಎಂಬ ಭಯವಾಗಿತ್ತು ಅವನಿಗೆ.

ದೀಪಸ್ತಂಭಗಳ ಕೋಣೆಯಿಂದ ಹೊರಗೆ ಬಂದು ವರಾಂಡದ ದ್ವಾರಾ ಸ್ವಲ್ಪ ದೂರ ಹೋದ ಕೂಡಲೇ ಎದುರಿಗೆ ಶ್ಯಾಮಾ ಸಿಕ್ಕಿದಳು. ಅವಳ ಕೈಯಲ್ಲೊಂದು ಹಣತೆಯಿತ್ತು.

"ಇದೇನಪ್ಪಾ, ಇಷ್ಟು ಹೊತ್ತಿನಲ್ಲಿ....ಯಾವ ಕಡೆಯಿಂದ ಬಂದಿರಿ?"

ಮಧುಸೂದನನು ಅವಳಿಗೆ ಯಾವ ಉತ್ತರವನ್ನೂ ಕೊಡದೆ "ನೀನು ಎಲ್ಲಿಗೆ ಹೊರಟೆ?" ಎಂದನು.

"ನಾಳೆ ನನಗೆ ವ್ರತ. ಬ್ರಾಹ್ಮಣ ಭೋಜನ ಮಾಡಿಸಬೇಕು. ಅದರ ಏರ್ಪಾಡು ಮಾಡಲಿಕ್ಕೇ ಹೊರಟಿದ್ದೀನಿ....ನಿಮಗೂ ಕರೆದಿದ್ದೇನಪ್ಪಾ. ಆದರೆ ನಿಮಗೆ ದಕ್ಷಿಣೆ ಕೊಡುವ ಶಕ್ತಿ ನನಗಿಲ್ಲ."

ಮಧುಸೂದನನು ಏನೋ ಹೇಳ ಹೊರಟವನು ಅಲ್ಲೇ ನಿಲ್ಲಿಸಿದನು.

ರಾತ್ರಿಯ ಕಡೆಯ ಜಾವದ ಕತ್ತಲಲ್ಲಿ ಆ ಪ್ರದೀಪದ ಬೆಳಕಿನಲ್ಲಿಯೇ ಶ್ಯಾಮಾ ಬಹು ಸುಂದರಳಾಗಿ ಕಂಡಳು. ಶ್ಯಾಮಾ ಸ್ವಲ್ಪ ನಕ್ಕು "ಇವತ್ತು ನಿದ್ದೆಯಿಂದೆದ್ದು ನಿನ್ನಂತಹ ಭಾಗ್ಯ ವಂತರ ಮುಖ ನೋಡಿದ್ದಾಯಿತು. ನನಗೆ ಈ ದಿನವೂ ಒಳ್ಳೆಯದಾಗಿಯೇ ಇರುತ್ತೆ. ವ್ರತವೂ ಸಫಲವಾಗುತ್ತೆ" ಎಂದಳು.

ಭಾಗ್ಯವಂತನೆಂಬ ಶಬ್ದವನ್ನು ಸ್ವಲ್ಪ ಒತ್ತಿ ಹೇಳಿದಳು. ಮಧುಸೂದನನ ಕಿವಿಗದು ವ್ಯಂಗ್ಯವಾಗಿ ಹೇಳಿದಂತೆ ತೋರಿತು. ಕುಮುವಿನ ವಿಷಯವಾಗಿ ಯಾವ ಮಾತನ್ನೂ ಸ್ಪಷ್ಟವಾಗಿ ಹೇಳಲು ಶಾಮಾಗೆ ಧೈರ್ಯವಾಗಲಿಲ್ಲ "ನಾಳೆ ನನ್ನ ಮನೆಗೆ ಊಟಕ್ಕೆ ಬರಬೇಕು, ನನ್ನಾಣೆಗೂ" ಎಂದು ಹೇಳಿ ಅವಳು ಹೊರಟು ಹೋದಳು ಮನೆಗೆ ಬಂದು ಮಧುಸೂದನನು ಹಾಸುಗೆಯಲ್ಲಿ ಮಲಗಿದನು. ಕುಮುವೇನಾದರೂ ಬಂದರೂ ಬರಬಹುದೆಂದು ಲಾಂದ್ರವನ್ನು ಹೊರಗಡೆಯೇ ಇಟ್ಟಿದ್ದನು. ಕುಮುವಿನ ನಿದ್ರಾಮಗ್ನವಾದ ಸುಂದರ ಮುಖವನ್ನು ಏನು ಮಾಡಿದರೂ ಮನಸ್ಸಿ ನೊಳಗಿಂದ ಮರೆಮಾಡಲು ಇಷ್ಟವಾಗಲಿಲ್ಲ. ಶಾಲಿನ ಹೊರಗೆ ಚಾಚಿಕೊಂಡಿದ್ದ ಅವಳ ಅನು ಪಮವಾದ ದುಂಡುಕೈ ಬಾರಿ ಬಾರಿಗೂ ಮನಸ್ಸಿಗೆ ಬರುತ್ತಿತ್ತು. ಮದುವೆಯ ಸಮಯದಲ್ಲಿ ಅದೇ ಕೈಯನ್ನು ತನ್ನ ಕೈಯಲ್ಲಿ ಹಿಡಿದಿದ್ದಾಗ ಅದನ್ನು ಚೆನ್ನಾಗಿ ನೋಡಲಾಗಲಿಲ್ಲ. ಈಗ ಎಷ್ಟು

ನೋಡಿದರೂ ಕಣ್ಣಿಗೆ ತೃಪ್ತಿಯಾಗುತ್ತಿರಲಿಲ್ಲ. ಈ ಕೈಯ ಒಡೆತನವನ್ನು ಅವನು ಹೊಂದುವು ದೆಂದು ? ಹಾಸುಗೆಯಲ್ಲಿ ಸುಮ್ಮನೆ ಬಿದ್ದುಕೊಂಡು ಫಲವಿಲ್ಲ. ಎದ್ದು ಕೂತನು. ದೀಪವನ್ನು ಹಚ್ಚಿಸಿ ಕುಮುವಿನ ಅಲಮಾರಿನ ಡ್ರಾಯರನ್ನು ತೆಗೆದನು....ಅವಳ ಮಣಿಗಳ ಕೈಚೀಲ ಕಂಡು ಬಂತು. ಅದರೊಳಗಿಂದ ಮೊದಲು ಅವನ ಕೈಗೆ ಸಿಕ್ಕಿದುದು ವಿಪ್ರದಾಸನ ಟೆಲಿಗ್ರಾಂ....ಮತ್ತು ಅವಳ ಅಣ್ಣಂದಿರಿಬ್ಬರ ಫೋಟೋ....ಮತ್ತು ಇನ್ನೊಂದು ಕಾಗದದ ತುಕುಡಾ. ವಿಪ್ರದಾಸನ ಕೈ ಬರಹದಲ್ಲಿ ಬರೆದಿದ್ದ ಗೀತೆಯ ಈ ಶ್ಲೋಕವಿತ್ತು ಅದರಲ್ಲಿ.

"ಯತ್ ಕರೋಷಿ ಯದಶ್ನಾಸಿ ಯಜ್ಜು
ಹೋಷಿ ದದಾಸಿ ಯತ್,
ಯತ್ ತಪಸ್ಯಸಿ ಕೌಂತೇಯ
ತತ್ ಕುರುಷ್ವ ಮದರ್ಪಣಮ್"

ಈರ್ಷ್ಯೆಯಿಂದ ಮಧುಸೂದನನ ಮನಸ್ಸು ಚೂರು ಚೂರಾಗಿ ಹೋಯಿತು. ಹಲ್ಲು ಹಲ್ಲು ಕಡೆಯುತ್ತಾ ವಿಪ್ರದಾಸನನ್ನು ಮನಸ್ಸಿನಲ್ಲಿಯೇ ನಾಶಮಾಡಿದನು. ಆ ನಾಶದ ದಿನ ಒಂದಲ್ಲ ಒಂದು ದಿನ ಬಂದೇ ಬರುತ್ತದೆಂದು ಅವನಿಗೆ ನಿಶ್ಚಯವಾಗಿತ್ತು. ಸ್ವಲ್ಪ ಸ್ವಲ್ಪವಾಗಿ ಸ್ಕ್ರೂ ಮೊಳೆಯನ್ನು ತಿರುಗಿಸಬೇಕು. ಆದರೆ ಕುಮುದಿನಿಯ ಆ ಹತ್ತೊಂಬತ್ತು ವರುಷಗಳ ಬಾಳು ಮಧುಸೂದನನ ಅಂಕೆಯ ಗಡಿಯ ಹೊರಗೆ. ಅದನ್ನು ವಿಪ್ರದಾಸನ ಕೈಯಿಂದ ಈ ಕ್ಷಣವೇ ಕಸಿದುಕೊಂಡು ಬಿಟ್ಟರೆ ಮನಸ್ಸಿಗೆ ಶಾಂತಿಯಾದೀತು. ಇದಕ್ಕೆ ಬಲಾತ್ಕಾರ ಬಿಟ್ಟು ಬೇರೆ ಯಾವ ದಾರಿಯೂ ಅವನಿಗೆ ತಿಳಿಯದು. ಮಣಿಗಳ ಕೈಚೀಲವನ್ನು ಇಂದು ಧೈರ್ಯಮಾಡಿ ಬಿಸಾಡಲು ಸಾಧ್ಯವಾಗಲಿಲ್ಲ. ಅವತ್ತು ಉಂಗುರವನ್ನು ಅಪಹರಿಸಿದಾಗ ಅವನಿಗೆ ಹೆಚ್ಚು ಧೈರ್ಯವಿತ್ತು. ಆಗ ಕುಮುದಿನಿಯು ಸಾಧಾರಣ ಹೆಂಗಸರಂತೆ ಸಹಜವಾಗಿ ಅಂಕೆಗೆ ಒಳಪಡುವಳೆಂದೂ, ಅಷ್ಟೇಕೆ, ಅಂಕೆಯಲ್ಲಿರಲು ಇಷ್ಟಪಡುವಳೆಂದೂ ತಿಳಿದಿದ್ದನು. ಆದರೆ ಈಗ ಕುಮುದಿನಿ ಏನು ಮಾಡಬಲ್ಲಳು, ಮಾಡಲಾರಳು ಎಂಬುದನ್ನು ಹೇಳುವುದಕ್ಕೇ ಸಾಧ್ಯವಿಲ್ಲ.

ಕುಮುದಿನಿಯನ್ನು ತನ್ನ ಬಾಳುವೆಯೊಡನೆ ಬಲವಾಗಿ ಕಟ್ಟಿಹಾಕಿಕೊಳ್ಳುವುದಕ್ಕೆ ಒಂದೇ ಒಂದು ಮಾರ್ಗವಿದೆ. ಅದು ಅವಳು ಮಗುವಿನ ತಾಯಾಗುವುದರಿಂದ ಸಾಧ್ಯ. ಅದನ್ನು ಕಲ್ಪನೆ ಯಲ್ಲಿಯೇ ಅನುಭವಿಸಿ ಸಮಾಧಾನ ಹೊಂದಿದನು.

ಹೀಗೆ ಯೋಚಿಸುತ್ತಲೇ ಘಂಟೆ ಐದು ಹೊಡೆಯಿತು. ಆದರೂ ಚಳಿಗಾಳಿಯ ರಾತ್ರಿ ಯಿನ್ನೂ ಮುಗಿದಿರಲಿಲ್ಲ. ಇನ್ನು ಸ್ವಲ್ಪ ಹೊತ್ತಿಗೆ ಬೆಳಕಾಗುತ್ತದೆ. ಇಂದಿನ ರಾತ್ರಿಯನ್ನು ವ್ಯರ್ಥವಾಗಿ ಕಳೆದ ಹಾಗಾಗುತ್ತದೆ. ಮಧುಸೂದನನು ಬೇಗ ಕೋಣೆಯನ್ನು ಬಿಟ್ಟು ಹೊರಗೆ ಹೊರಟನು. ದೀಪಗಳ ಮನೆಯ ಎದುರಿಗೆ ಕಾಲಿನ ಸಪ್ಪಳ ಸ್ಪಷ್ಟವಾಗಿಯೇ ಮಾಡಿದನು. ಬಾಗಿಲನ್ನು ಶಬ್ದ ಮಾಡಿ ಜೋರಾಗಿ ತೆಗೆದನು. ನೋಡಿದರೆ ಒಳಗೆ ಕುಮು ಇಲ್ಲ. ಎಲ್ಲಿ ಅವಳು ?

ಅಂಗಳದ ಕೊಳಾಯಿಯಲ್ಲಿ ನೀರು ಸುರಿಯುತ್ತಿದ್ದ ಶಬ್ದ ಕೇಳಬಂತು. ವರಾಂಡದಲ್ಲಿ ನಿಂತು ನೋಡಿದನು. ಎಷ್ಟೊ ವರ್ಷಗಳ ಹಿಂದಿನ ಹಳೆಯ, ಕೆಲಸಕ್ಕೆ ಬಾರದ ಕಿಲುಬಿಹೋಗಿದ್ದ ಹಿತ್ತಾಳೆಯ ದೀಪಸ್ತಂಭಗಳನ್ನು ಕುಮು ಹುಣಿಸೇ ಹಣ್ಣು ಹಾಕಿ ತೊಳೆಯುತ್ತಿದ್ದಾಳೆ. ಅದು

ಬೇಕೆಂದು ಕೆಲಸವನ್ನು ಹೆಚ್ಚಾಗಿ ಮಾಡಿಕೊಳ್ಳುವ ಪ್ರಯತ್ನ. ಚಳಿಗಾಲದ ಮುಂಜಾನೆಯಲ್ಲಿ, ಮೊದಲೇ ನಿದ್ದೆಯಿಲ್ಲದ ದುಃಖವನ್ನು ಹೆಚ್ಚಿಸುವ ಚೇಷ್ಟೆ!

ಮಧುಸೂದನನು ಮೇಲಂತಸ್ತಿನ ವರಾಂಡದಿಂದ ಮಾತಿಲ್ಲದೆ ನೋಡುತ್ತ ನಿಂತನು. ಅಬಲೆಯ ಬಲವನ್ನು ಯಾವ ರೀತಿಯಲ್ಲಿ ಸೋಲಿಸುವುದು, ಎಂಬುದೇ ಈಗ ಅವನಿಗಿದ್ದ ಯೋಚನೆ. ಬೆಳಿಗ್ಗೆಯೆದ್ದು ಮನೆಯ ಇತರ ಜನ ಕುಮು ಹೀಗೆ ಹಳೆಯ ದೀಪಸ್ತಂಭಗಳನ್ನು ಉಜ್ಜುವುದನ್ನು ನೋಡಿದರೆ ಏನೆಂದುಕೊಳ್ಳುತ್ತಾರೆ? ಅದನ್ನು ಉಜ್ಜುವುದಕ್ಕೆಂದೇ ಇರುವ ಚಾಕರನು ತಾನೇ ಏನೆಂದುಕೊಳ್ಳುತ್ತಾನೆ?

ಪ್ರಪಂಚದ ಜನಗಳೆಲ್ಲರ ಮುಂದೆಯೂ ತನ್ನನ್ನು ಹಾಸ್ಯಾಸ್ಪದನನ್ನಾಗಿ ಮಾಡುವುದಕ್ಕೆ ಹೊರತು ಬೇರೆ ಉದ್ದೇಶವಿಲ್ಲವೆಂದು ಕಾಣುತ್ತೆ ಅವಳಿಗೆ?

ಒಂದು ಸಲ ಕೊಳಾಯಿಯ ಬಳಿ ಹೋಗಿ ಕುಮುವನ್ನು ಗದರಿಸಿ ಬುದ್ಧಿ ಹೇಳಬೇಕೆಂದೆನಿಸಿತು. ಆದರೆ ಬೆಳಗಿನ ಹೊತ್ತು ಈ ವರಾಂಡದಲ್ಲಿ ಇಬ್ಬರೂ ಚರ್ಚೆ ಮಾಡುವುದು ಆಮೇಲೆ ಮನೆಯ ಜನರೆಲ್ಲಾ ತಮಾಷೆ ನೋಡುವುದಕ್ಕೆ ಹಾಸುಗೆ ಬಿಟ್ಟು ಬರುವುದು, ಈ ಪ್ರಹಸನವನ್ನು ಮನಸ್ಸಿನಲ್ಲಿಯೇ ಊಹಿಸಿಕೊಂಡು ಹಿಂದೆ ತಿರುಗಿದನು... ತಮ್ಮನಾದ ನವೀನನನ್ನು ಕರೆದು "ಮನೆಯಲ್ಲಿ ಏನೇನಾಗುತ್ತೆ ಅಂತ ಎಲ್ಲಾ ಗಮನದಲ್ಲಿ ಇಟ್ಟಿದೀಯೇನೋ" ಎಂದನು.

ನವೀನನೇ ಮನೆಯ ಆಡಳಿತಕ್ಕೆ ಮ್ಯಾನೇಜರು. ಅವನು ಭಯದಿಂದ "ಯಾಕಣ್ಣಾ, ಏನಾಯಿತು?" ಎಂದ. ಅಣ್ಣನಿಗೆ ಕೋಪ ಬರಲು ಏನಾದರೂ ಕಾರಣವಿದ್ದಾಗ ಶಿಕ್ಷೆಮಾಡಲು ಒಬ್ಬ ಮನುಷ್ಯ ಬೇಕು. ತಪ್ಪಿತಸ್ಥ ಒಂದು ಪಕ್ಷ ತಪ್ಪಿಸಿಕೊಂಡರೂ ನಿರ್ದೋಷಿಯನ್ನು ಯಾವನಾದರೂ ಚಿಂತೆಯಿಲ್ಲ, ಶಿಕ್ಷಿಸಬೇಕು. ಇಲ್ಲದೆ ಹೋದರೆ ಮನೆಯಲ್ಲಿ ಶಿಸ್ತು ಇರದು ಮತ್ತು ಸಂಸಾರದ ಮೇಲೆ ಅವನ ಅಧಿಕಾರದ ಹೆಸರಿಗೇ ಕಳಂಕ! ಈ ವಿಷಯ ನವೀನನಿಗೆ ಚೆನ್ನಾಗಿ ಗೊತ್ತು.

ಮಧುಸೂದನನು "ನಿಮ್ಮತ್ತಿಗೆ ಹುಚ್ಚಿಯ ಹಾಗೆ ಮಾಡುತ್ತಾ ಇರೋದು ನೋಡಿದೆಯೇನೋ ಕೆಲಸ? ಅದರ ಕಾರಣವೇನು ಅಂತ ನನಗ ಗೊತ್ತಿಲ್ಲ ಅಂದುಕೊಂಡೆಯಾ?" ಎಂದ.

ಅತ್ತಿಗೆ ಏನು ಹುಚ್ಚು ಕೆಲಸ ಮಾಡುತ್ತಾಯಿದಾಳೆ ಎಂದು ಕೇಳುವುದಕ್ಕೆ ನವೀನನಿಗೆ ಧೈರ್ಯವಾಗಲಿಲ್ಲ. ಏಕೆಂದರೆ ಸಮಾಚಾರವೇನು ಅನ್ನುವುದೂ ಗೊತ್ತಿಲ್ಲ ಅನ್ನುವುದೂ ದೊಡ್ಡ ತಪ್ಪಾಗಿಬಿಡುತ್ತೆ.

ಮಧುಸೂದನನು ಮತ್ತೆ "ಬೇರೆ ಏನೂ ಇಲ್ಲ ಕಣೋ....ನನಗೆಲ್ಲಾ ಗೊತ್ತು....ಇದೆಲ್ಲ ನಿನ್ನ ಹೆಂಡತಿಯದೇ ಕಿತಾಪತಿ....ಅವಳೇ ಇವಳ ತಲೆ ಕೆಡಿಸಿರುವುದು" ಎಂದನು.

ಬಹಳ ಸಂಕೋಚದಿಂದ ನವೀನನು ಉತ್ತರ ಕೊಡಲು ಪ್ರಯತ್ನಪಡುತ್ತಾ "ಇಲ್ಲಣ್ಣಾ ಅವಳೆಂದಿಗೂ ಹಾಗೆ....ಆಂ...." ಎಂದನು.

ಮಧುಸೂದನನು "ನಾನು ಕಣ್ಣಾರೆ ನೋಡಿದ್ದೀನೀ!" ಎಂದನು.

ಇನ್ನು ಅದರ ಮೇಲೆ ಬೇರೆ ಮಾತೇ ಇಲ್ಲ. ಕಣ್ಣಾರೆ ನೋಡಿದುದರ ಮಧ್ಯೆ ಅಂದಿನ ಪೇಪರ್‌ವೆಯಿಟಿನ ಚರಿತ್ರೆ ಅಡಗಿತ್ತು.

# ಇಪ್ಪತ್ತೆಂಟನೆಯ ಅಧ್ಯಾಯ

ಮೋತಿಯಮ್ಮನು ಕುಮುವನ್ನು ಅಕೃತ್ರಿಮ ಭಾವದಿಂದ ಎಂದು ಪ್ರೀತಿಸಲು ತೊಡಗಿದಳೋ ಅಂದೇ ಇದನ್ನು ಇತರರು ಸೈರಿಸಲಾರರೆಂದು ನವೀನನು ಹೆದರಿದ್ದನು. ಮನೆಯ ಹೆಂಗಸರು ಇದನ್ನು ಕುರಿತು ನಾನಾ ವಿಧವಾಗಿ ಮಾತಾಡಿಕೊಳ್ಳುವರೆಂದು ತಿಳಿದಿದ್ದ. ಇಂತಹುದೇ ಏನೋ ಈಗ ಆಗಿರುವುದೆಂದುಕೊಂಡ.

ಆದರೆ ಮಧುಸೂದನನು ಊಹಿಸಿ ಮಾಡಿದ ದೂರಿಗೆ ಪ್ರತಿವಾದ ಮಾಡಿದರೆ ಲಾಭವಿಲ್ಲ. ಅದರಿಂದ ಅವನ ಹಟ ಹೆಚ್ಚುವುದು ಅಷ್ಟೆ.

ವಿಷಯವೇನು ಜರುಗಿದೆ ಎಂದು ಮಧುಸೂದನನು ಸ್ಪಷ್ಟವಾಗಿ ಹೇಳಲಿಲ್ಲ. ಹೇಳಲು ಬಹುಶಃ ಸಂಕೋಚವೇನೋ? ಏನು ಮಾಡಬೇಕಾಗಿದೆ ಈಗ ಎನ್ನುವುದೂ ಅಸ್ಪಷ್ಟ. ಒಂದು ಮಾತ್ರ ಸ್ಪಷ್ಟ-ಏನೆಂದರೆ ಎಲ್ಲ ತಪ್ಪಿಗೂ ತನ್ನ ಹೆಂಡತಿಯೇ ಕಾರಣ. ಮತ್ತು ದಾಂಪತ್ಯ ವಿಧಿಗೆ ಅನುಸಾರ ವಾಗಿ ಹೆಂಡತಿಯ ತಪ್ಪಿಗೆ ಗಂಡ ತಾನೇ ಹೊಣೆ....ಅದು ಅವನ ಭಾಗ್ಯಕ್ಕೆ!

ಬೇರೆ ಏನು ಮಾಡುವುದಿದೆ? ಹೋಗಿ ಹೆಂಡತಿಯ ಹತ್ತಿರ "ದೊಡ್ಡ ಗೊಂದಲವೊಂದು ಎದ್ದಿದೆ" ಎಂದನು.

"ಯಾಕೆ, ಏನಾಯಿತು?"

"ಅದು ದೇವರಿಗೇ ಗೊತ್ತು. ಮತ್ತು ಅಣ್ಣನಿಗೆ ಗೊತ್ತು. ಬಹುಶಃ ನಿನಗೂ ಗೊತ್ತಿರ ಬಹುದು. ಆದರೆ ಏಟು ಬೀಳುತ್ತಿರುವುದು ನನ್ನ ತಲೆಯ ಮೇಲೆ". "ಯಾಕೆ, ಏನಾಗಿದೆ ಹೇಳ ಬಾರದೇ?" "ಈಗ ನಾನು ಮಾಡಬೇಕಾದ ಕೆಲಸ....ನಿನ್ನನ್ನ ಹದಕ್ಕೆ ತರುವುದು....ಮತ್ತು ನಮ್ಮಣ್ಣನ ಹೊಸ ವ್ಯಾಪಾರದ ಹೊಸ ಸರಕಿದೆಯಲ್ಲಾ....? ಅದರ ಮೇಲೆ ನಿಗ ಇಟ್ಟು ಹದಕ್ಕೆ ತರುವುದು ನಿನ್ನ ಭಾರ!"

"ಸರಿ ಹಾಗಾದರೆ ಮೊದಲು ನನ್ನನ್ನ ಹದಕ್ಕೆ ತರುವ ಕೆಲಸ ಶುರು ಮಾಡಿ, ಮತ್ತೆ?.... ನೋಡೋಣ, ನಿಮ್ಮಣ್ಣನಿಗಿಂತ ನಿಮ್ಮ ಕೈಗುಣ ಬಲವೇನೋ?"

ನವೀನನು ಕಾತರನಾಗಿ "ನೋಡು, ಒಂದು ಸಲ ಅಣ್ಣನ ಉಡಿಯಾ ಆಳು ಅವನ ಭಾರಿ ಯಾದ ಡಿನ್ನರ್ ಸೆಟ್ಟಿನ ಒಂದು ತಟ್ಟೆ ಒಡೆದುಬಿಟ್ಟ. ಅದರ ಜುಲ್ಮಾನೆಯ ಹೆಚ್ಚು ಭಾಗ ನಾನೇ ಕೊಡ ಬೇಕಾಯಿತು. ಯಾಕೆಂದರೆ ಮನೆಯ ಸಾಮಾನುಗಳ ಮೇಲೆಲ್ಲಾ ನಾನೇ ತಾನೇ ಜವಾಬು ದಾರ? ಆದರೆ ಈಗ ಮನೆಗೆ ಹೊಸದಾಗಿ ಬಂದಿರುವ ಸರಕು ನನ್ನ ಜವಾಬುದಾರಿಯಲ್ಲ. ಇದರ ಜುಲ್ಮಾನೆಯನ್ನು ನಾನೂ ನೀನೂ ಇಬ್ಬರೂ ಹಂಚಿಕೊಳ್ಳಬೇಕಾಗುತ್ತದೆ...ಇಷ್ಟರ ಮೇಲೆ ನೀನು ಏನು ಮಾಡುತೀಯೋ ಮಾಡು, ನನಗೆ ಮಾತ್ರ ಹಿಂಸೆ ಕೊಡಬೇಡ."

"ಜುಲ್ಮಾನೆಯೆಂದರೆ ಏನು, ಹೇಳಿ." "ಏನೇ? ರಜಬ ಪುರಕ್ಕೆ ವಾಪಸು ಹೋಗು ಅಂತಾನೆ. ಅಷ್ಟೇ-ಮಧ್ಯೆ ಮಧ್ಯೆ ಹೀಗೆ ತಾನೆ ಅವನು ಹೆದರಿಸುವುದು?"

"ನೀವು ಹೆದರುತೀರಿ ಅಂತಲೇ ಹೆದರಿಸುತ್ತಾರೆ. ಒಂದು ಸಲ ಕಳುಹಿಸಿದ್ದರು. ಮತ್ತೆ ರೈಲು ಛಾರ್ಜು ಕಳುಹಿಸಿ ಕರೆಸಿಕೊಳ್ಳಲಿಲ್ಲವೇ? ನಿಮ್ಮಣ್ಣ ಕೋಪದಲ್ಲಿ ಕೂಡ ಲೆಕ್ಕಾಚಾರದಲ್ಲಿ

ತಪ್ಪು ಮಾಡುವುದಿಲ್ಲ. ನನ್ನಿಂದ ಮನೆಗೆಲಸಗಳ ವಹಿವಾಟನ್ನು ತಪ್ಪಿಸಿಬಿಟ್ಟರೆ ಎಷ್ಟು ಖರ್ಚಾಗುತ್ತೆಂದು ಅವರಿಗೆ ಗೊತ್ತು. ಮತ್ತೆ ಎಲ್ಲೂ ಮೂರು ಕಾಸಿನಷ್ಟು ನಷ್ಟವಾದರೂ ಸಹ ಅವರಿಗೆ ಭಾರೀ ಪೆಟ್ಟಾದಷ್ಟು, ಸಹಿಸುವುದಿಲ್ಲ."

"ಅದು ಸರಿಯೇ, ಈಗ ನಾವು ಏನು ಮಾಡಬೇಕು, ಹೇಳು ಮತ್ತೆ."

"ಏನೇ?....ಹೋಗಿ ನಿಮ್ಮಣ್ಣನಿಗೆ ಹೇಳಿ. ಎಷ್ಟೇ ದೊಡ್ಡ ರಾಜನಾದರೂ ಸಂಬಳದ ಆಳನ್ನಿಟ್ಟು ರಾಣಿಯ ಬಿಗುಮಾನವನ್ನು ಹೋಗಲಾಡಿಸಲು ಸಾಧ್ಯವಿಲ್ಲ. ಆ ಬಿಗುಮಾನದ ಹೊರೆಯನ್ನು ತಾನೇ ತಲೆಯಮೇಲೆ ಹೊತ್ತುಕೊಂಡು ಇಳಿಸಬೇಕಾಗುತ್ತೆ. ಶೋಭನದ ಮನೆಯ ವ್ಯವಹಾರದಲ್ಲಿ ಕೂಲಿಯಾಳನ್ನು ಕರೆಸುವುದು ಚೆನ್ನಿಲ್ಲ ಅಂತ ಹೇಳಿ."

"ಅಲ್ಲವೇ, ಅವನಿಗೆ ಉಪದೇಶ ಕೊಡುವುದಕ್ಕೇ ನಾನಿರುವುದು? ಎರಡು ದಿನವಾದರೆ ತನಗೆ ತಾನೇ ಸರಿಹೋಗುತ್ತೆ. ಈ ನಡುವೆ ದೂತಿಯ ಕೆಲಸ ಸ್ವಲ್ಪ ಮಾಡು, ಫಲವಾಗಲಿ, ಆಗದಿರಲಿ ,...ಉಪ್ಪು ತಿಂದು ಸುಮ್ಮನೆ ಅರಗಿಸಿಕೊಳ್ಳುತ್ತಾ ಇಲ್ಲ ಅಂತ ತೋರಿಸಿದ ಹಾಗೂ ಆಗುತ್ತೆ."

ಮೋತಿಯಮ್ಮ ಕುಮುವನ್ನು ಹುಡುಕಿಕೊಂಡು ಹೊರಟಳು, ಬೆಳಗಿನ ಹೊತ್ತು ಅವಳು ಸಾಧಾರಣವಾಗಿ ಬಿಸಿಲು ಮಾಳಿಗೆಯ ಮೇಲೆ ಇರುತ್ತಾಳೆಂದು ಅವಳಿಗೆ ಗೊತ್ತು.

ಎತ್ತರವಾದ ಪಾಳಿ ಗೋಡೆಗಳಿಂದಾವೃತವಾದ ಮಹಡಿ. ಅದರ ನಡುವೆ ಅಲ್ಲಲ್ಲಿ ರಂಧ್ರಗಳು....ಕೆಲವು ಹೂಗಿಡಗಳ ತೊಟ್ಟಿಗಳು ....ಆದರೆ ಅವುಗಳಲ್ಲಿ ಗಿಡಗಳುಮಾತ್ರ ಇಲ್ಲ. ಒಂದು ಮೂಲೆಯಲ್ಲಿ ಕಬ್ಬಿಣದ ಸಲಾಕಿಗಳ ದೊಡ್ಡದೊಂದು ಮುರಿದ ಚಚ್ಚೌಕವಾದ ಪಂಜರ, ಅದರ ಮರದ ತಳವು ಸಂಪೂರ್ಣವಾಗಿ ಮುರಿದು ಹೋಗಿದೆ. ಬಹುಶಃ ಪಾರಿವಾಳಗಳನ್ನೋ ಮೊಲಗಳನ್ನೋ ಅದರಲ್ಲಿಡುತ್ತಿದ್ದರೆಂದು ತೋರುತ್ತದೆ. ಈಗ ಉಪ್ಪಿನಕಾಯಿ, ಬಾಳಕ, ಸಂಡಿಗೆ ಮುಂತಾದುವುಗಳನ್ನು ಬಿಸಿಲಿಗಿಟ್ಟು, ಕಾಗೆಗಳಿಂದ ಕಾಪಾಡಲು ಉಪಯೋಗಿಸುತ್ತಿದಾರೆ. ಈ ಬಿಸಿಲು ಮಹಡಿಯ ಮೇಲೆ ನಿಂತರೆ ತಲೆಯ ಮೇಲಣ ಆಕಾಶ ಮಾತ್ರ ನೋಡಬಹುದು. ದಿಗಂತವನ್ನು ನೋಡಲಾಗುವುದಿಲ್ಲ. ಪಶ್ಚಿಮ ದಿಕ್ಕಿನಲ್ಲಿ ದೊಡ್ಡದೊಂದು ಕಬ್ಬಿಣದ ಕಾರ್ಖಾನೆಯ ಹೊಗೆ ಚಿಮನಿ. ಈ ಎರಡು ದಿನಗಳಿಂದಲೂ ಅಲ್ಲಿ ಕಾಲ ಕಳೆಯುತ್ತಿದ್ದ ಕುಮುವಿಗೆ ಆ ಕೊಳವೆಯಿಂದ ಹೊರಬರುತ್ತಿದ್ದ ಹೊಗೆಯ ಸುರುಳಿಗಳನ್ನು ನೋಡುವುದೇ ನೋಟ. ಬೇರೆ ಏನೂ ಇಲ್ಲ. ಸಮಸ್ತ ಆಕಾಶದ ಮಧ್ಯೆ ಅದೊಂದೇ ಕೇವಲ ಸಜೀವವಾದ ಪದಾರ್ಥ. ಏನೋ ಒಂದು ಆವೇಗದಿಂದ ಹೊರ ಹೊಮ್ಮಿ ಸುರುಳಿಯಾಗಿ ಸುತ್ತಿ ಸುತ್ತಿ ಮೇಲಕ್ಕೆ ಹೋಗುತ್ತಿತ್ತು.

ದೀಪಸ್ತಂಭ ಮೊದಲಾದುವುಗಳನ್ನು ಉಜ್ಜಿ ತೊಳೆದಾದ ಮೇಲೆ ಇನ್ನು ಕತ್ತಲು ಕತ್ತಲಾಗಿದ್ದಾಗಲೇ ಸ್ನಾನಮಾಡಿ ಪೂರ್ವ ದಿಕ್ಕಿಗೆ ಮುಖ ಮಾಡಿಕೊಂಡು ಕುಮು ಬಿಸಿಲು ಮಚ್ಚಿನಲ್ಲಿ ಬಂದು ಕೂಡುತ್ತಿದ್ದಳು. ತೊಯ್ದ ಕೂದಲು ಬೆನ್ನ ಮೇಲೆ ರಾಶಿಯಾಗಿ ಹರಡಿರುತ್ತಿತ್ತು. ಯಾವ ಬಗೆಯ ಅಲಂಕಾರಗಳೂ ಇಲ್ಲ. ದಪ್ಪ ನೂಲಿನ ಸಣ್ಣ ಕರಿಯ ಅಂಚಿನ ಸಾಧಾರಣ ಸೀರೆ ಮತ್ತು ಚಳಿಯಿಂದ ಕಾಪಾಡಿಕೊಳ್ಳಲು ದಪ್ಪದೊಂದು ರೇಶ್ಮೆಯ ಹೊದಿಕೆ.

ಕೆಲವು ದಿನಗಳಿಂದಲೂ ಪ್ರತ್ಯಾಶಿಸಿದ್ದ ಪ್ರಿಯತಮನ ಕಾಲ್ಪನಿಕ ಆದರ್ಶ ರೂಪವನ್ನು ಹೃದಯ ಮಧ್ಯದಲ್ಲಿ ಪ್ರತಿಷ್ಠಿಸಿ ಈ ಯುವತಿಯು ತನ್ನ ಎದೆಯಾಸೆಯನ್ನು ತೃಪ್ತಿಗೊಳಿಸುತ್ತಾ ಕೂತಿದ್ದಳು, ಅವಳ ಅಷ್ಟು ಬಗೆಯ ಪೂಜೆ, ವ್ರತ, ಪುರಾಣ ಕಥೆಗಳು ಎಲ್ಲವೂ ಅವಳ ಈ

ಕಲ್ಪನಾಮೂರ್ತಿಯನ್ನು ಸಜೀವವಾಗಿ ಇಟ್ಟಿದ್ದುವು. ಅವಳು ತನ್ನ ಮಾನಸ ಬೃಂದಾವನದಲ್ಲಿ ಅಭಿಸಾರಿಣಿಯಾಗಿದ್ದಳು. ಮುಂಜಾನೆಯೆದ್ದು ಅವಳು ರಾಮಕೇಲೀ ರಾಗದಲ್ಲಿ ಈ ಗೀತೆಯನ್ನು ಹಾಡುತ್ತಿದ್ದಳು.

"ಹಮಾರೇ ತುಮಾರೇ ಸಂಪ್ರೀತಿ ಲಗೀ ಹೈ
ಸುನ್ ಮನ ಮೋಹನ ಪ್ಯಾರೇ....."

ಯಾವ ಅನಾಗತ ಮನುಷ್ಯನ ಉದ್ದೇಶವಾಗಿ ತನ್ನ ಆತ್ಮ ನಿವೇದನೆಯ ಅರ್ಘ್ಯವನ್ನು ಎತ್ತಿ ಹಿಡಿದಿದ್ದಳೋ ಅವನು ಸಮ್ಮುಖದಲ್ಲಿ ಬಂದು ನಿಲ್ಲುವ ಮುಂಚೆಯೇ ಪ್ರತಿ ದಿನ ಅವನ ಬಳಿಯೇ ಪಾತ್ರವನ್ನು ಕಳುಹಿಸಿದ್ದಳು. ವರ್ಷಾ ಕಾಲದ ರಾತ್ರಿ ಹಿತ್ತಲ ಕಡೆಯ ತೋಟದ ಮರಗಿಡಗಳು ಎಡೆಬಿಡದೆ ಸುರಿಯುತ್ತಿರುವ ಮಳೆಯ ಹೊಡೆತಕ್ಕೆ ಚಿಗುರೆಲೆಗಳನ್ನು ಬಾಗಿಸಿ ಧ್ವನಿಮಾಡುತ್ತಿದ್ದಾಗ ಕಾನಡಾ ರಾಗದಲ್ಲಿ ಹಾಡುತ್ತಿದ್ದ ಈಗೀತೆ ಮನಸ್ಸಿಗೆ ಬಂತು.

ಬಾಜೇ ಝುನನನ ಮೋರೇ ಪಾಯರಿಯಾ!
ಕೈಸೆ ಕರೋ ಜಾವೂಂ ಘರೋ ಯಾರೇ"

ಅವಳ ಶ್ರಾಂತವಾದ ಮನಸ್ಸಿನಲ್ಲಿ ಪಾದಗಳ ನೂಪುರಗಳ ಝುನನನ ಶಬ್ದ ಕೇಳಬರುತ್ತದೆ... ಗುರಿ ತಪ್ಪಿದ ರಸ್ತೆಯಲ್ಲಿ ಹೊರ ಬಿದ್ದಿದಾಳೆ. ಯಾವಾಗ ಹೇಗೆ ಮನೆಗೆ ಹಿಂದಿರುಗುವುದು ? ರೂಪದಲ್ಲಿ ಕಾಣಬರದಂತಹವನ್ನು ಇಷ್ಟು ದಿನಗಳೂ ಸ್ವರದಲ್ಲಿ ಕಂಡಿದ್ದಳು. ನಿಗೂಢವಾದ ಆನಂದ ಮೊದಲನೆಯ ಪರಿಪೂರ್ಣತೆಯ ದಿನದಲ್ಲಿ ಮನಸ್ಸಿಗೊಪ್ಪಿದ ಯಾರನ್ನಾದರೂ ದೈವ ವಶಾತ್ ಹತ್ತಿರ ಪಡೆದಿದ್ದರೆ ಅವಳ ಅಂತರ್ಯದಲ್ಲಿ ಇಷ್ಟು ದಿನ ಗುಯಿಗುಡುತ್ತಿದ್ದ ಹಾಡುಗಳೆಲ್ಲ ಆಗಲೇ ಜೀವ ಪಡೆದು ರೂಪಿತವಾಗುತ್ತಿದ್ದುವು. ಅಂತಹ ಪಥಿಕನಾವನೂ ಅವಳ ದ್ವಾರದಲ್ಲಿ ಬಂದು ನಿಲ್ಲಲಿಲ್ಲ. ಕಲ್ಪನೆಯ ನಿಭೃತ ನಿಕುಂಜ ಕುಟೀರದಲ್ಲಿ ಕೇವಲ ಏಕಾಂಗಿಯಾಗಿಯೇ ನಿಂತಿದ್ದಳು. ಅಷ್ಟೇ ಅಲ್ಲದೆ ಅವಳ ಸಮವಯಸ್ಕರಾದ ಸಂಗಿನಿಯರೂ ಇರಲಿಲ್ಲ. ಆದುದರಿಂದಲೇ ಇಷ್ಟು ದಿನ ಶ್ಯಾಮ ಸುಂದರನ ಪಾದಗಳ ಬಳಿ ಅವಳ ಬಂಧಿತವಾದ ಅನುರಾಗವು ಪೂಜೆಯ ಹೂವಿನ ಆಕಾರದಲ್ಲಿ ತನ್ನ ನಿರುದ್ದಿಷ್ಟನಾದ ನಲ್ಲನ ಉದ್ದೇಶವನ್ನು ಶೋಧಿಸುತ್ತಿತ್ತು. ಅದಕ್ಕಾಗಿಯೇ ಮಧ್ಯಸ್ತಗಾರನು ಬಂದ ದಿನ ಕುಮು ತನ್ನ ದೇವರ ಬಳಿಯೇ ಅಪ್ಪಣೆಯನ್ನು ಬೇಡಿದ್ದಳು. "ಈ ಬಾರಿ ನಿನ್ನನ್ನೇ ಪಡೆಯುವೆನಲ್ಲವೇ" ಎಂದು ಕೇಳಿದಳು. ಅಪರಾಜಿತಾ ಹೂವು "ಇಗೋ, ಪಡೆದಿರುವೆ." ಎಂದು ಉತ್ತರ ಕೊಟ್ಟಿತ್ತು.

ಈ ಮಧ್ಯೆ ಆದದ್ದೇನು ? ಇಷ್ಟು ದಿನಗಳು ಮಾಡಿದ್ದ ಇಷ್ಟು ವ್ಯವಸ್ಥೆಯೂ ವ್ಯರ್ಥವಾಗಿ ಹೋಯಿತು. ಒಂದೇ ಏಟಿಗೆ ಕನ್ನೆಂದು ಕಲ್ಲು ಮೇಲೆ ಬಂತು. ಒಂದೇ ಸಲ ಎಲ್ಲವನ್ನು ಮುಳುಗಿಸಿಬಿಟ್ಟಿತು. ಅವಳ ವ್ಯಥಿತವಾದ ಯೌವನವು ಇಂದು ಮತ್ತೆ ತನ್ನ ಪುಷ್ಪಾಂಜಲಿಯನ್ನು ಎಲ್ಲಿ ಸಮರ್ಪಿಸಲೆಂದು ಹುಡುಕುತ್ತಾ ಹೊರಟಿದೆ. ತಟ್ಟೆಯಲ್ಲಿದ್ದ ಅರ್ಘ್ಯವೇ ಈಗ ಬಹಳ ಭಾರವಾಗಿಬಿಟ್ಟಿದೆ. ಅದಕ್ಕಾಗಿಯೇ ಇಂದು ಭಗ್ನಹೃದಯಳಾಗಿ ಮನವಿಟ್ಟು ಹಾಡುತ್ತಿರುವುದು." ಮೇರೇ ಗಿರಿಧರ ಗೋಪಾಲ ಔರನಹೀ ಕೋಹೀ" ಎಂದು.

ಆದರೆ ಇಂದು ಈ ಹಾಡು ಶೂನ್ಯವಾದ ಬಯಲಲ್ಲಿ ಸುತ್ತುತ್ತಾ ಸಂಚರಿಸುತ್ತಿದೆ. ಇಂದಿನಿಂದ ಜೀವನದ ಕಡೆಯ ದಿನದವರೆಗೂ ಮನಸ್ಸಿನ ಆಕಾಂಕ್ಷೆಯು ಆ ಹೊಗೆಯ ಸುರುಳಿಯಂತೇ

ಒಂಟಿಯಾಗಿ ಯಾವ ಜತೆಯೂ ಇಲ್ಲದೆ ಹೊರಬಿದ್ದು ಹೋಗುತ್ತಿರುವುದೇ ?

ಮೋತಿಯಮ್ಮನು ಸ್ವಲ್ಪ ದೂರದಲ್ಲಿ ಹಿಂದುಗಡೆ ಕೂತಿದ್ದಳು. ಮುಂಜಾನೆಯ ಸ್ವಚ್ಛ ವಾದ ಬೆಳಕಿನಲ್ಲಿ ಈ ನಿರ್ಜನವಾದ ಮಾಳಿಗೆಯ ಮೇಲೆ ಕೂತಿದ್ದ ಈ ನಿರಾಭರಣ ಸುಂದರಿಯ ಮಹಿಮೆಯು ಅವಳನ್ನು ಬೆರಗುಗೊಳಿಸಿತ್ತು...,ಈ ಮನೆಯಲ್ಲಿ ಇವಳಿಗೆ ಸರಿಹೋಗುವುದಾದರೂ ಹೇಗೆ ? ಇಲ್ಲಿರುವ ಹೆಂಗಸರೆಲ್ಲ ಇವಳಿಗೆ ಹೋಲಿಸಿದರೆ ಯಾವ ಮಟ್ಟದವರು ? ಅವರೇ ಅವಳ ಹತ್ತಿರ ಸುಳಿಯಲು ಇಷ್ಟಪಡರು. ಅವಳ ಮೇಲೆ ಕೋಪಗೊಳ್ಳಬಹುದು. ಆದರೆ ಅವಳ ಸಮಾನರಂತೆ ಹೊಂದಿಕೊಳ್ಳುವ ಸಾಹಸ ಯಾರಿಗೂ ಇಲ್ಲ.

ಕೂತು ಕೂತು ಮೋತಿಯಮ್ಮನು ಗಾಬರಿಯಿಂದ ನೋಡಿದಳು. ಹಠಾತ್ತಾಗಿ ಕುಮು ಎರಡು ಕೈಗಳಿಂದಲೂ ತನ್ನ ಮೇಲು ಹೊದಿಕೆಯ ಅಂಚಿನಿಂದ ಮುಖ ಮುಚ್ಚಿಕೊಂಡು ಅಳುತ್ತಿದ್ದಾಳೆ. ಅವಳನ್ನು ನೋಡುತ್ತ ಸುಮ್ಮನೆ ಕೂತಿರಲಾಗಲಿಲ್ಲ. ಹತ್ತಿರ ಬಂದು ಅವಳ ಕಂಠವನ್ನು ಹಿಡಿದು ಅಪ್ಪಿಕೊಂಡು "ಬೇಡಮ್ಮಾ....ನನ್ನ ಲಕ್ಷ್ಮೀ....ನನ್ನ ತಾಯಿ...ಬೇಡ....ಏನಾಗುತ್ತೆ ಹೇಳಮ್ಮಾ ನನಗೆ".

ಕುಮುವಿಗೆ ಬಹಳ ಹೊತ್ತು ಮಾತೇ ಆಡಲು ಆಗಲಿಲ್ಲ. ಸ್ವಲ್ಪ ಸಮಾಧಾನ ತಂದುಕೊಂಡು

"ಇವತ್ತೂ ಅಣ್ಣನ ಕಾಗದ ಬರಲಿಲ್ಲ....ಅವರಿಗೇನಾಗಿದೆಯೋ ಗೊತ್ತಿಲ್ಲ." ಎಂದಳು.

"ಕಾಗದ ಬರಬೇಕಾದ ದಿವಸವಾಗಿ ಹೋಯಿತೇನಮ್ಮಾ?" ಎಂದಳು.

"ಖಂಡಿತವಾಗಿ ಆಗಿದೆ. ಅವರು ಕಾಯಿಲೆ ಮಲಗಿದ್ದುದು ನೋಡಿ ಬಂದೆ. ಅವರ ಯೋಗ ಕ್ಷೇಮ ತಿಳಿಯುವುದಕ್ಕೆ ಎಷ್ಟು ಆತುರವಾಗಿರುತ್ತೇನೆ ಅಂತಲೂ ಗೊತ್ತು ಅವರಿಗೆ". ಮೋತಿಯಮ್ಮನು "ನೀನೇನೂ ಚಿಂತಿಸಬೇಡ. ಅವರ ಯೋಗಕ್ಷೇಮಕ್ಕೆ ನಾನು ಹೇಗಾದರೂ ಏರ್ಪಾಡು ಮಾಡುತ್ತೇನೆ." ಎಂದಳು

ಕುಮು ಟೆಲಿಗ್ರಾಂ ಕಳುಹಿಸುವ ಯೋಚನೆಯನ್ನು ಎಷ್ಟೋ ಸಲ ಮಾಡಿದ್ದಳು. ಆದರೆ ಯಾರ ಕೈಯಲ್ಲಿ ಕಳಿಸುವುದು ? ಅಂದು ಮಧುಸೂದನ ಅವಳ ಅಣ್ಣನ ಸಾಹುಕಾರನೆಂದು ಬಡಾಯಿ ಕೊಚ್ಚಿದಂದಿನಿಂದ ಅವನ ಹತ್ತಿರ ಅಣ್ಣನ ಹೆಸರು ಎತ್ತುವುದಕ್ಕೆ ಕೂಡ ಬಾಯಿ ಬರುತ್ತಿರಲಿಲ್ಲ. ಇಂದು ಮೋತಿಯಮ್ಮನನ್ನು ಕುರಿತು "ನೀನೇ ನಮ್ಮಣ್ಣನಿಗೆ ಟೆಲಿಗ್ರಾಂ ಕಳಿಸಿದರೆ ನಾನು ಬದುಕಿದೆ'' ಎಂದು ಕೇಳಿಕೊಂಡಳು.

ಮೋತಿಯಮ್ಮನು "ಅಗತ್ಯವಾಗಿ ಕಳುಹಿಸುತ್ತೇನೆ. ಅದಕ್ಕೇನು ಭಯ ?" ಎಂದಳು.

"ನಿನಗೆ ಗೊತ್ತಿಲ್ಲ ? ನನ್ನ ಹತ್ತಿರ ಒಂದು ರೂಪಾಯಿ ಕೂಡ ಇಲ್ಲ."

"ಏನು ಹಾಗೆಂದರೆ? ನೋಡಮ್ಮ....ಹಾಗೆ ಹೇಳುವುದು ಸರಿಯಲ್ಲ....ಸಂಸಾರದ ಖರ್ಚಿಗೆಂದು ನನ್ನ ಹತ್ತಿರ ಇರುವ ದುಡ್ಡೆಲ್ಲಾ ನಿನ್ನದೇ ಅಲ್ಲವೇ? ಇವತ್ತಿನಿಂದ ನಾನು ನಿನ್ನ ಉಪ್ಪನ್ನೇ ತಿನ್ನುತ್ತಿರುವುದು !"

ಕುಮು ವ್ಯಗ್ರತೆಯಿಂದ ಗಟ್ಟಿಯಾದ ಸ್ವರದಲ್ಲಿ "ಛೆ ಛೆ....ಎಂದಿಗೂ ಇಲ್ಲ. ಈ ಮನೆಯಲ್ಲಿರುವುದು ಯಾವುದೂ ನನ್ನದಲ್ಲ....ಒಂದು ಕುರುಡು ಕಾಸು ಕೂಡ." ಎಂದು ಕೂಗಿದಳು

"ಹಾಗೇ ಆಗಲಮ್ಮ. ನಿನಗೋಸ್ಕರವಾಗಿ ಅಲ್ಲವಿದ್ದರೂ....ನನ್ನ ಸ್ವಂತ ಹಣದಿಂದ ಖರ್ಚು ಮಾಡುತ್ತೇನೆ. ಯಾಕೆ ಸುಮ್ಮನಿದ್ದೀಯಾ ? ಅದರಲ್ಲಿ ತಪ್ಪೇನು ? ನಾನು ಗರ್ವದಿಂದ ಏನಾದರೂ

ಕೊಟ್ಟರೆ ನೀನು ಗರ್ವದಿಂದ ಬೇಡ ಅನ್ನಬಹುದು. ವಿಶ್ವಾಸದಿಂದ ಕೊಡುವುದನ್ನು ವಿಶ್ವಾಸದಿಂದಲೇ ಯಾಕಮ್ಮಾ ತೆಗೆದುಕೋ ಕೂಡದು ?"

ಕುಮು "ಆಗಲಿ....ಹಾಗಾದರೆ" ಎಂದಳು. ಮೋತಿಯಮ್ಮ ಬಹಳವಾಗಿ ಬಲವಂತಮಾಡಲಿಲ್ಲ.! ಬಲವಂತಮಾಡುವ ಭಾರ ನನ್ನದಲ್ಲ. ಯಾರ ಕೆಲಸವೋ ಅವರು ಮಾಡಿಕೊಳ್ಳಲಿ! ಹೀಗೆಂದುಕೊಂಡು ಮೆಲ್ಲಗೆ "ಸ್ವಲ್ಪ ಹಾಲು ತಗೊಂಡು ಬರಲೇನಮ್ಮಾ, ನಿನಗೆ?" ಎಂದಳು.

ಕುಮು "ಈಗ ಬೇಡ. ಇನ್ನೂ ಸ್ವಲ್ಪ ಹೊತ್ತಾಗಲಿ" ಎಂದಳು. ತನ್ನ ಇಷ್ಟ ದೈವದೊಂದಿಗೆ ಅರಿಕೆ ಮಾಡುವುದಿನ್ನೂ ಇತ್ತು. ಇನ್ನೂ ಮನಸ್ಸಿಗೆ ಯಾವ ಉತ್ತರವೂ ಸಿಕ್ಕಿರಲಿಲ್ಲ.

ಮೋತಿಯಮ್ಮ ತನ್ನ ಕೋಣೆಗೆ ಹೋಗಿ ಗಂಡನನ್ನು ಕರೆದು "ಒಂದು ಕೆಲಸ ಮಾಡಿ ಮತ್ತೆ. ನಿಮ್ಮಣ್ಣನವರ ಕೋಣೆಗೆ ಹೋಗಿ ಅವರ ಮೇಜಿನ ಮೇಲೆ ಸ್ವಲ್ಪ ಹುಡುಕಿ ನೋಡಿ.... ಕುಮುವಿಗೇನಾದರೂ ಕಾಗದ ಬಂದಿದೆಯೇ ಅಂತ....ಡ್ರಾಅರನ್ನು ತೆಗೆದು ಕೂಡ ನೋಡಿ." ಎಂದು ಪಿಸುಮಾತಿನಲ್ಲಿ ಹೇಳಿದಳು.

ನವೀನನು "ಹಾಳಾದ ಹಾಗೆಯೇ !" ಎಂದನು.

"ನೀವು ಹೋಗದೆ ಹೋದರೆ ನಾನೇ ಹೋಗುತ್ತೇನೆ"

"ಇದು ಅಡವಿಯೊಳಗಿಂದ ಕರಡಿ ಮರಿಯನ್ನು ಹಿಡಿದುಕೊಂಡು ಬಾ ಅಂತ ಕಳುಹಿಸಿದ ಹಾಗಾಯಿತು."

"ಯಾಕೆ ಹಾಗೆ ಹೆದರುತ್ತೀರಿ? ನಿಮ್ಮಣ್ಣ ಆಫೀಸಿಗೆ ಹೋಗಿದಾರೆ. ಅವರು ಕೆಲಸ ಮುಗಿಸಿಕೊಂಡು ಮನೆಗೆ ಬರುವ ಹೊತ್ತಿಗೆ ಮಧ್ಯಾಹ್ನ ಒಂದು ಘಂಟೆಯಾಗುತ್ತೆ....ಇಷ್ಟರಲ್ಲಿ...."

"ಇಲ್ಲಿ ನೋಡು....ಹಗಲು ಹೊತ್ತು ಈ ಕೆಲಸ ಏನು ಮಾಡಿದರೂ ನನ್ನ ಕೈಯಲ್ಲಿ ಸಾಧ್ಯವಿಲ್ಲ. ಈಗ ನಾಲ್ಕು ಕಡೆಯೂ ಜನ ಆಳುಗಳು ಓಡಾಡುತ್ತಾ ಇರುತ್ತಾರೆ....ಇವತ್ತು ರಾತ್ರಿ ಬೇಕಾದರೆ ನೋಡೋಣ."

"ಹೋಗಲಿ ಬಿಡಿ....ಹಾಗೇ ಆಗಲಿ ಆಮೇಲೆ....ನೂರ್ ನಗರಕ್ಕೆ ಈಗಲೇ ಒಂದು ತಂತಿ ಕಳುಹಿಸಬೇಕು...ವಿಪ್ರದಾಸಬಾಬುಗಳ ಆರೋಗ್ಯ ಹೇಗಿದೆ? ಅಂತ."

"ಹಾಗೇ ಹಾಗಲ. ಇದು ಅಣ್ಣನಿಗೆ ತಿಳಿಸಿ ತಾನೇ ಕಳುಹಿಸಬೇಕು."

"ಛೆ ಛೆ .. ಕೂಡದು."

"ಏನೇ, ನೀನು ಆಡುವ ಮಾತು? ನೀನೇನು ಸತ್ತು ಮತ್ತೆ ಹುಟ್ಟಿ ಬಂದ ಹಾಗೆ ಕಾಣುತ್ತಲ್ಲಾ .... ಈ ಮನೆಯಲ್ಲಿ ಅಣ್ಣನ ಅಪ್ಪಣೆಯಿಲ್ಲದೆ ಹಲ್ಲಿ ಒಂದು ನೊಣ ಹಿಡಿಯಲಿಕ್ಕೂ ಸಾಧ್ಯವಿಲ್ಲ. .... ಅದರಲ್ಲಿ ನಾನು...."

"ತಂತಿ ಕುಮುದಿನಿ ಹೆಸರಿನಲ್ಲಿ ತಾನೇ ಹೋಗುತ್ತೆ. ನಿಮಗೇನು ಭಯ ?"

"ನನ್ನ ಕೈಯಿಂದ ತಾನೇ ಹೋಗಬೇಕು ?"

"ನಿಮ್ಮಣ್ಣನ ಕಛೇರಿಯಿಂದ ನಿತ್ಯವೂ ಎಷ್ಟೆಷ್ಟೋ ಟೆಲಿಗ್ರಾಂಗಳನ್ನು ಚೌಕೀದಾರನ ಕೈಯಲ್ಲಿ ಕಳುಹಿಸಲು ಕೊಡುತ್ತಾರೆ. ಅವುಗಳ ಜೊತೆಯಲ್ಲಿಯೇ ಇವನ್ನೂ ಕಳುಹಿಸಿದರಾಯಿತು. .... ಇಗೋ ರೂಪಾಯಿ ತಗೊಳ್ಳಿ .... ನಿಮ್ಮ ಅತ್ತಿಗೆ ಕೊಟ್ಟಿದಾಳೆ."

ಕುಮುವಿನ ಬಗ್ಗೆ ನವೀನನಿಗೂ ಅಷ್ಟು ಕನಿಕರವಿಲ್ಲದೆ ಹೋಗಿದ್ದಿದ್ದರೆ ಇಷ್ಟು ದೊಡ್ಡ ದುಸ್ಸಾಹಸಕರವಾದ ಕೆಲಸವನ್ನು ಅವನು ಒಪ್ಪಿಕೊಳ್ಳುತ್ತಲೇ ಇರಲಿಲ್ಲ.

## ಇಪ್ಪತ್ತೊಂಬತ್ತನೆ ಅಧ್ಯಾಯ

ಯಥಾಪ್ರಕಾರ ಮಧುಸೂದನನು ಮಧ್ಯಾಹ್ನ ಒಂದು ಘಂಟೆಯಾದ ಮೇಲೆ ಅಂತಃಪುರದಲ್ಲಿ ಊಟಮಾಡಲು ಬಂದನು. ಪದ್ಧತಿಯಂತೆ ಹೆಣ್ಣು ಬಳಗಗಳ ತಂಡ ಅವನ ಸುತ್ತ ಕೂತು, ಒಬ್ಬಳು ಬೀಸಣಿಗೆಯಿಂದ ನೊಣಗಳನ್ನು ಚದರಿಸುತ್ತಿದ್ದರೆ ಮತ್ತೊಬ್ಬಳು ಬಡಿಸುತ್ತಿದ್ದಳು. ಮಧುಸೂದನನ ಅಂತಃಪುರದ ವ್ಯವಸ್ಥೆಯು ಐಶ್ವರ್ಯದ ಆಡಂಬರದಿಂದಿರಲಿಲ್ಲವೆಂದು ಮೊದಲೇ ಹೇಳಲಾಗಿದೆ. ಅವನ ಊಟ ಕೂಡ ಹಿಂದಿನ ಕಾಲದವರಂತೆಯೇ. ದಪ್ಪಕ್ಕಿಯನ್ನವಿಲ್ಲದೆ ಹೋದರೆ ಊಟ ರುಚಿಸದು, ಹೊಟ್ಟೆ ತುಂಬದು. .... ಆದರೆ ತಟ್ಟೆ ಪಾತ್ರೆಗಳು ಮಾತ್ರ ಬೆಲೆಯುಳ್ಳವು. ತಟ್ಟೆ ಬೆಳ್ಳಿಯದು .... ಬೆಳ್ಳಿಯ ಬಟ್ಟಲು .... ನೀರು ಕುಡಿಯುವ ಗ್ಲಾಸ್ ಕೂಡ ಬೆಳ್ಳಿಯದು. .... ಸಾಮಾನ್ಯ ಉದ್ದಿನ ಬೇಳೆಯ ತೊವ್ವೆ, ಮೀನಿನ ಸಾರು, ಹುಣಿಸೇ ಗೊಜ್ಜು, ಮತ್ತು ಏಡಿಕಾಯಿ, ಇವಿಷ್ಟೇ ಅವನ ಊಟ. ಇದಾದ ಮೇಲೆ ಊಟದ ಕೊನೆಯಲ್ಲಿ ದೊಡ್ಡದೊಂದು ಬಟ್ಟಲ ತುಂಬ ಸಕ್ಕರೆ ಹಾಕಿದ ಹಾಲು .... ಅದನ್ನು ಕೊನೆಯ ತೊಟ್ಟು ಸಹ ಬಿಡದೆ ಸಮಾಪ್ತಮಾಡಿ, ವೀಳೆಯದೆಲೆಯ ಮೇಲೆ ಸ್ವಲ್ಪ ಹೆಚ್ಚಾಗಿ ಸುಣ್ಣ ಹಚ್ಚಿಕೊಂಡು ಒಂದು ಎಲೆಯನ್ನು ಸುತ್ತಿ ಬಾಯಿಗೆ ಹಾಕಿಕೊಂಡು ಮತ್ತು ಎರಡು, ಮೂರನ್ನು ಡಬ್ಬಿಯಲ್ಲಿಟ್ಟುಕೊಂಡು ಹದಿನೈದು ನಿಮಿಷ ಹೊಗೇಸೊಪ್ಪನ್ನು ತೀಡುತ್ತಾ ವಿಶ್ರಾಂತಿ ತೆಗೆದುಕೊಳ್ಳುವನು. ಆಮೇಲೆ ನೆಟ್ಟಗೆ ಆಫೀಸಿಗೆ. ಮಿತಿಮೀರಿದ ದಾರಿದ್ರ್ಯವಿದ್ದ ಕಾಲದಿಂದ ಇವತ್ತಿನವರೆಗೆ ಇಷ್ಟು ದೀರ್ಘಕಾಲ ನಡೆದುಬಂದ ಈ ಪದ್ಧತಿಯಲ್ಲಿ ಸ್ವಲ್ಪವೂ ವ್ಯತ್ಯಾಸವಿರಲಿಲ್ಲ. .... ಆಹಾರ ವಿಷಯದಲ್ಲಿ ಮಧುಸೂದನನಿಗೆ ಹಸಿವಿತ್ತು. ಲೋಭವಿರಲಿಲ್ಲ.

ಶ್ಯಾಮಾಸುಂದರಿಯು ಹಾಲಿನ ಬಟ್ಟಲಿಗೆ ಸಕ್ಕರೆ ಹಾಕುತ್ತಿದ್ದಳು. .... ಅವಳದು ಅನುಜ್ವಲ ಶ್ಯಾಮವರ್ಣ. ದಪ್ಪವಾದ ಮೈ ಎಂದರೆ ಯಾವ ಭಾವವಾಗುವದೋ ಅದಲ್ಲ. ಆದರೆ ಪರಿಪುಷ್ಟವಾದ ದೇಹ .... ತನ್ನನ್ನೇ ಚೆನ್ನಾಗಿ ಪೋಷಿಸಿಕೊಳ್ಳುತ್ತಿತ್ತು. .... ಒಂದು ಸಾಧಾರಣ ಸೀರೆಯ ಹೊರತು ಬೇರೆ ಯಾವ ಬಟ್ಟೆಯೂ ಇಲ್ಲ .... ಆದರೆ ನೋಡಲು ಮಾತ್ರ ಯಾವಾಗಲೂ ಚೊಕ್ಕಟವಾಗಿರುತ್ತಿದ್ದಳು. ವಯಸ್ಸು ಬಹುಶಃ ಯೌವನದ ಗಡಿಯವರೆಗೂ ಬಂದಿದೆ .... ಆದರೆ ಜ್ಯೇಷ್ಠಮಾಸದ ಅಪರಾಹ್ಣದಂತೆ .... ವೇಳೆಯೇನೋ ಆಗುತ್ತಿದೆ .... ಸಂಜೆಯ ನೆರಳಿನ್ನೂ ಬಿದ್ದಿಲ್ಲ ಅನ್ನುವಂತೆ .... ದಟ್ಟವಾದ ಹುಬ್ಬುಗಳ ಕೆಳಗೆ ಬಿರುಸಾದ ಕಪ್ಪುಕಣ್ಣುಗಳು .... ಅವುಗಳ ದೃಷ್ಟಿ ಯಾರನ್ನೂ ಎದುರಿನಲ್ಲಿ ನೋಡುವಂತಿರಲಿಲ್ಲ. ಸ್ವಲ್ಪ ಮಾತ್ರ ನೋಡಿ ಎಲ್ಲವನ್ನೂ ಕಂಡುಕೊಂಡು ಬಿಡುವಂತಿದ್ದುವು ಅವಳ ರಸಮಯವಾದ ತುಂಬಿದ ತುಟಿಗಳಲ್ಲಿ ಬಹಳ ವಿಷಯಗಳನ್ನು ಅಡಗಿಸಿಟ್ಟುಕೊಂಡಿರುವ ಭಾವ ಕಾಣುತ್ತಿತ್ತು. ಸಂಸಾರದಲ್ಲಿ ಅವಳಿಗೆ ರಸವೇನೂ ದೊರಕಿರಲಿಲ್ಲವಾದರೂ ಅವಳು ಮಾತ್ರ ತುಂಬಿದವಳು. ತನ್ನ ಬೆಲೆ ಎಷ್ಟೆಂದು ಅವಳಿಗೆ ಗೊತ್ತು. ಅವಳು ಲೋಭಿಯೂ ಅಲ್ಲ. ಆದರೆ ತನ್ನ ದಿವ್ಯವಾದ ಸಂಪತ್ತು

ವ್ಯವಹಾರದಲ್ಲಿ ಸಲ್ಲದೆಂದೇ ತನ್ನ ಸುತ್ತಮುತ್ತಲವರ ಮೇಲೆ ಒಂದು ಬಗೆಯ ಅಹಂಕಾರ ಬೆರೆತ ಅಶ್ರದ್ಧೆ, ಮಧುಸೂದನನ ಐಶ್ವರ್ಯದ ಮೊದಲುಬ್ಬರದೊಂದಿಗೇ ಶ್ಯಾಮಾ ಅವನ ಸಂಸಾರದೊಳಗೆ ಕಾಲಿಟ್ಟಳು, ಯೌವನದ ಯಕ್ಷಿಣಿಯ ಬಲದಿಂದ ಈ ಸಂಸಾರದ ಕಲಶದಲ್ಲಿ ಸ್ಥಾನ ಪಡೆಯುವೆನೆಂಬ ಸಂಕಲ್ಪವು ಇತ್ತು ಅವಳಿಗೆ. ಮಧುಸೂದನನ ಮನಸ್ಸಿನಲ್ಲಿ ಅವಳೆಂದೂ ಪ್ರವೇಶಿಸಿರಲಿಲ್ಲ ಎಂದು ಹೇಳಲು ಸಾಧ್ಯವಿಲ್ಲ. ಆದರೆ ಮಧುಸೂದನನು ಯಾವುದರಲ್ಲೂ ಸೋಲೊಪ್ಪಿಕೊಳ್ಳುವವನಲ್ಲ. ಅದರ ಕಾರಣ, ಅವನ ವಿಷಯಬುದ್ಧಿ ಎಂದು ಯಾವುದಿದೆಯೋ ಅದು ಕೇವಲ ಬುದ್ಧಿಯಲ್ಲ,....ಅದು ಪ್ರತಿಭೆ.

ಈ ಪ್ರತಿಭೆಯ ಬಲದಿಂದಲೇ ಸಂಪತ್ತನ್ನೆ ಸೃಷ್ಟಿಮಾಡಿದ್ದ. ಮತ್ತು ಈ ಸೃಷ್ಟಿಯ ಪರಮಾನಂದದಲ್ಲಿಯೇ ಅವನು ಗಾಢವಾಗಿ ಮಗ್ನನಾಗಿದ್ದ. ಈ ಪ್ರತಿಭೆಯ ಮಹಿಮೆಯಿಂದಲೇ ತಾನು ನಿರತನಾಗಿದ್ದ ಧನಸೃಷ್ಟಿಯ ತಪಸ್ಸನ್ನು ಭಂಗಮಾಡಲು ಇಂದ್ರದೇವನು ಪ್ರಬಲವಾದ ವಿಘ್ನವನ್ನು ಕಳುಹಿಸಿದ್ದಾನೆಂದು ತಿಳಿದಿದ್ದ ..,. ಕ್ಷಣ ಕ್ಷಣಕ್ಕೂ ತಪೋಭಂಗದ ಹೊಡೆತ ಬೀಳುತ್ತಿದೆ. ಬಾರಿ ಬಾರಿಗೂ ಅದನ್ನ ತಡೆದುಕೊಂಡದ್ದಾಗಿದೆ .... ಒಂದು ಅನುಕೂಲವೇನೆಂದರೆ, ವ್ಯವಹಾರದಿಂದ ತುಂಬಿದ ಹಗಲ ವೇಳೆಯಲ್ಲಿ ಅವನಿಗೆ ಯಾವ ಅವಕಾಶವೂ ಇರುತ್ತಿರಲಿಲ್ಲ. .... ಅಷ್ಟು ಕಷ್ಟವಾದ ದುಡಿತದ ನಡುವೆ ಕೇವಲ ಕಣ್ಣಿನಲ್ಲಿ ನೋಡುವ ಮತ್ತು ಕಿವಿಯಲ್ಲಿ ಕೇಳುವ ಅನುಭೋಗವನ್ನು ಮಾತ್ರ ಶ್ಯಾಮಾಳ ಸಹವಾಸದಲ್ಲಿ ನಿಸ್ಸಂಗಭಾವದಲ್ಲಿ ಪಡೆದು ದಣಿವನ್ನು ದೂರಮಾಡಿಕೊಳ್ಳುತ್ತಿದ್ದ. ಕ್ರಿಯಾ ಕರ್ಮಗಳ ದಕ್ಷಿಣೆ ಸಂದರ್ಭದಲ್ಲಿ ಶ್ಯಾಮಾಸುಂದರಿಯ ಬಗ್ಗೆ ಅವನಿಗಿದ್ದ ಪಕ್ಷಪಾತ ಹೆಚ್ಚೆಂದು ತಿಳಿಯ ಬರುತ್ತಿತ್ತು. ಆದರೆ ಅವಳ ಪ್ರಭಾವವು ಅಂತಃಪುರದಲ್ಲಿ ಹೆಚ್ಚುವ ಹಾಗೆ ಅವನು ಎಂದೂ ಸ್ವಲ್ಪವೂ ಅವಕಾಶ ಕೊಟ್ಟಿರಲಿಲ್ಲ. ಶ್ಯಾಮಾ ಮಧುಸೂದನನ ಮನಸ್ಸಿನ ಬಗೆಯನ್ನು ಚೆನ್ನಾಗಿ ತಿಳಿದುಕೊಂಡಿದ್ದರೂ ಅವನ ವಿಷಯವಾಗಿ ಅವಳಿಗೆ ಭಯವಿರದೆ ಇರಲಿಲ್ಲ.

ಮಧುಸೂದನನ ಊಟದ ಸಮಯದಲ್ಲಿ ಶ್ಯಾಮಾಸುಂದರಿ ಪ್ರತಿದಿನವೂ ಹಾಜರಿರುತ್ತಿದ್ದಳು. ಇಂದೂ ಇದ್ದಳು. ಆಗತಾನೇ ಸ್ನಾನಮಾಡಿ ಬಂದಿದ್ದಳು. ಅವಳ ಅಸಾಧಾರಣವಾದ ಕರಿಯ ಘನ ದೀರ್ಘ ಕೇಶರಾಶಿಯು ಬೆನ್ನಹಿಂದೆ ಮಧ್ಯದವರೆಗೂ ಜೋತಾಡುತ್ತಿತ್ತು. ಅದರ ಮೇಲೆ ಶುಭ್ರವಾದ ಬಿಳಿಯ ಸೀರೆ .... ಅದರ ಸೆರಗನ್ನು ಎಳೆದು ತಲೆಯ ಮೇಲೆ ಹೊದ್ದುಕೊಂಡಿದ್ದಳು. ತೊಯ್ದ ಕೂದಲಿಂದ ತಲೆಗೆ ಹಚ್ಚಿಕೊಂಡಿದ್ದ ಸ್ನಾನಚೂರ್ಣದ ಮೃದುವಾದ ಕಂಪು ಬರುತ್ತಿತ್ತು. ಶ್ಯಾಮಾ ಹಾಲಿನ ಬಟ್ಟಲ ಮೇಲಿಂದ ಮುಖವೆತ್ತದೆ ನಿಧಾನವಾಗಿ "ನಿಮ್ಮ ಹೆಂಡತಿಗೆ ಹೇಳಿ ಕಳುಹಿಸಲೇನಪ್ಪಾ ?" ಎಂದಳು.

ಮಧುಸೂದನನು ಮಾತೇನೂ ಆಡದೆ ತನ್ನ ಅತ್ತಿಗೆಯ ಮುಖದ ಕಡೆ ಗಂಭೀರವಾಗಿ ನೋಡುತ್ತಿದ್ದ. ಅವನ ಅತ್ತಿಗೆ .... ಶ್ಯಾಮಸುಂದರಿಯು ಭಯದಿಂದ ಸ್ವಲ್ಪ ವಿಹ್ವಲಳಾಗಿ ಪ್ರಶ್ನೆಯನ್ನು ವ್ಯಾಖ್ಯಾನ ಮಾಡುತ್ತ "ನೀವು ಊಟ ಮಾಡುವಾಗ ಹತ್ತಿರ ಕೂತಿದ್ದರೆ ಒಳ್ಳೆಯದು. ... ನಿಮಗೆ ಸೇವೆ ಮಾಡಲು ಸ್ವಲ್ಪ ..." ಎಂದಳು.

ಮಧುಸೂದನನ ಮುಖಭಾವವನ್ನು ಸ್ವಲ್ಪವೂ ಅರ್ಥ ಮಾಡಿಕೊಳ್ಳಲಾರದೆ ಶ್ಯಾಮಾಸುಂದರಿಯು ಮಾತನ್ನು ಪೂರ್ತಿಮಾಡದೆ ಸುಮ್ಮನಿದ್ದುಬಿಟ್ಟಳು. ಮಧುಸೂದನನು ಮತ್ತೆ

ತಲೆ ತಗ್ಗಿಸಿ ಊಟಮಾಡಲು ತೊಡಗಿದ. ಸ್ವಲ್ಪ ಹೊತ್ತಾದ ಮೇಲೆ ತಟ್ಟೆಯ ಮೇಲಿಂದ ತಲೆಯೆತ್ತದೆ ಹಾಗೆಯೇ " ನಿನ್ನ ಓರಗಿತ್ತಿ ಈಗ ಎಲ್ಲಿದ್ದಾಳೆ?" ಎಂದ. ಶ್ಯಾಮಸುಂದರಿ ವ್ಯಸ್ತಳಾಗಿದ್ದು " ನಾನು ನೋಡಿಕೊಂಡು ಬರುತ್ತೇನೆ" ಎಂದಳು.

ಮಧುಸೂದನನು ಹುಬ್ಬುಗಂಟಿಕ್ಕಿ ಕೈ ಬೆರಳಿಂದಲೇ ಬೇಡವೆಂದು ತಿಳಿಸಿದ. ತನ್ನ ಪ್ರಶ್ನೆಗೆ ಯಾವ ಉತ್ತರವನ್ನು ನಿರೀಕ್ಷಿಸಿದ್ದನೋ ಅದು ಇವಳ ಮುಖದಿಂದ ಬಂದರೆ ಸಹಜವಾಗುವುದಿಲ್ಲ. ಊಟವಾದ ಮೇಲೆ ಮೂರನೆಯ ಮಹಡಿಯಲ್ಲಿನ ತನ್ನ ಮಲಗುವ ಮನೆಗೆ ಹೋದಾಗ ಮನಸ್ಸಿನ ಮೂಲೆಯಲ್ಲಿ ಕ್ಷೀಣವಾದೊಂದು ಪ್ರತ್ಯಾಶೆಯಿತ್ತು. ಒಂದು ಸಲ ಬಿಸಿಲು ಮಾಳಿಗೆಯನ್ನು ಸುತ್ತಿ ಬಂದ. ಪಕ್ಕದ ಸ್ನಾನದ ಮನೆಯನ್ನು ಹೊಕ್ಕು ಕ್ಷಣಕಾಲ ಸ್ತಬ್ಧನಾಗಿ ನಿಂತ. ಆಮೇಲೆ ಮತ್ತೆ ಮಲಗುವ ಮನೆಗೆ ಬಂದು ಹಾಸುಗೆಯ ಮೇಲೆ ಒರಗಿ ಗುಡುಗುಡಿಯನ್ನೆಳೆಯುತ್ತಾ ಇದ್ದ. ನಿಗದಿಯಾಗಿದ್ದ ಹದಿನೈದು ನಿಮಿಷಗಳು ಕಳೆಯಿತು .... ಇಪ್ಪತ್ತು ನಿಮಿಷಗಳೂ ಕಳೆದು ಅರ್ಧಘಂಟೆ ಪೂರ್ತಿಯಾಗಲು ಬರುತ್ತಿದ್ದಾಗ ಎದೆಯ ಮೇಲಿನ ಜೇಬಿನಿಂದ ಗಡಿಯಾರವನ್ನು ತೆಗೆದು ಒಂದು ಸಲ ಹೊತ್ತನ್ನು ನೋಡಿದ. ವರ್ಷಗಳಾದ ಮೇಲೆ ವರ್ಷಗಳಾಗಿವೆ. ಆಫೀಸಿಗೆ ಹೋಗಲು ಒಂದು ಸಲವೂ ಐದು ನಿಮಿಷ ತಡವಾಗಿರಲಿಲ್ಲ. ಆಫೀಸಿನಲ್ಲಿ ಒಂದು ರಿಜಿಸ್ಟರು ಇತ್ತು. ನೌಕರರಲ್ಲಿ ಯಾರು ಯಾವ ಯಾವ ಹೊತ್ತಿಗೆ ಬರುವರು, ಹೋಗುವರು ಎಂಬುದನ್ನು ಅಲ್ಲಿ ಗುರುತು ಹಾಕಬೇಕಾಗಿತ್ತು..... ಆ ಲೆಖ್ಖದ ಪ್ರಕಾರವಾಗಿಯೇ ಅವರವರ ವೇತನಗಳ ಬಡ್ತಿಯೂ ಆಗುತ್ತಿತ್ತು. ಸ್ವಭಾವತಃ ಹೊತ್ತು ಮೀರಿ ಬಂದವರ ಮೇಲೆ ಜುಲ್ಮಾನೆ ವಿಧಿಸಲ್ಪಡುತ್ತಿತ್ತು. .... ಇಂತಹ ಪಟ್ಟಿಯಲ್ಲಿ ಆಫೀಸಿನ ನೌಕರರೆಲ್ಲರ ಮಧ್ಯೆ ಮಧುಸೂದನನ ಹೆಸರಿನಲ್ಲಿ ಜುಲ್ಮಾನೆಯ ಅಂಕಿಯು ಎಲ್ಲರಿಗಿಂತಲೂ ಕಮ್ಮಿ. ವಾಸ್ತವವಾಗಿ ಈ ವಿಷಯದಲ್ಲಿ ತನ್ನ ಸ್ವಂತದ ಬಗ್ಗೆ ಅವನಿಗೆ ಪಕ್ಷಪಾತವೇ ಇಲ್ಲ. ಅದಕ್ಕೆ ಬದಲು ಇತರ ನೌಕರರಿಗಿಂತ ಎರಡರಷ್ಟು ಜುಲ್ಮಾನೆಯನ್ನು ತನ್ನ ಮೇಲೆ ವಿಧಿಸಿಕೊಳ್ಳುತ್ತಿದ್ದ. ಇಂದು ಮಧ್ಯಾಹ್ನ ಆಫೀಸಿಗೆ ಹೋಗಲು ಬಹಳ ತಡವಾಗಿ ಹೋದರೆ ಅದಕ್ಕೆ ತಕ್ಕಷ್ಟು ಹೆಚ್ಚು ಹೊತ್ತು ಕೆಲಸಮಾಡಿ ಈ ಸಮಯ ನಷ್ಟವನ್ನು ಪೂರ್ತಿಮಾಡಿಕೊಳ್ಳುವೆನೆಂದು ಮನಸ್ಸು ಮಾಡಿದ. ಹೊತ್ತು ಎಷ್ಟೇ ಕಳೆಯುತ್ತಿದ್ದರೂ ಕೆಲಸದಲ್ಲಿ ಮನಸ್ಸಿಡಲು ಸಾಧ್ಯವಾಗಲಿಲ್ಲ. ಕಡೆಗೆ ಇಂದು ಅರ್ಧಘಂಟೆ ಮುಂಚೆಯೇ ಕೆಲಸವನ್ನು ನಿಲ್ಲಿಸಿಬಿಟ್ಟು ಮನೆಗೆ ಬಂದುಬಿಟ್ಟ. ....ಆ ಸಮಯದಲ್ಲಿ ಮಲಗುವ ಮನೆಯನ್ನು ಒಂದು ಸಲ ಹೊಕ್ಕು ನೋಡಬೇಕೆಂಬ ಆಸೆಯಾಯಿತು.... ಬಹುಶಃ ಅಲ್ಲಿ ಯಾರನ್ನಾದರೂ ನೋಡಿದರೂ ನೋಡಬಹುದು. ಹಗಲು ಹೊತ್ತು ಎಂದೂ ಹೀಗೆ ಅಸಮಯದಲ್ಲಿ ಮಲಗುವ ಮನೆಗೆ ಹೋಗುತ್ತಿರಲಿಲ್ಲ. ಇಂದು ಆಫೀಸಿನ ಉಡುಗೆಯಲ್ಲಿಯೇ ಅಂತಃಪುರವನ್ನು ಪ್ರವೇಶಮಾಡಿದ.

ಸರಿಯಾಗಿ ಅದೇ ಸಮಯದಲ್ಲಿ ಮೋತಿಯಮ್ಮನು ಬಿಸಿಲು ಮಾಳಿಗೆಯ ಮೇಲೆ ಒಣಗಲು ಹಾಕಿದ್ದ ಮಾವಿನಕಾಯಿಯ ಹೋಳುಗಳನ್ನು ಜಾಡಿಯಲ್ಲಿ ತುಂಬಿಸುತ್ತಿದ್ದಳು. ಮಧುಸೂದನನು ಅವೇಳೆಯಲ್ಲಿ ಮಲಗುವ ಮನೆಯನ್ನು ಪ್ರವೇಶಿಸುವುದನ್ನು ನೋಡಿ ಅವಳು ಒಂದು ಕೈಯಿಂದ ತಲೆಯ ಮೇಲೆ ಮುಸುಕೆಳೆದುಕೊಂಡು ಅದರ ಮರೆಯಲ್ಲಿ ಚೆನ್ನಾಗಿ ನಕ್ಕಳು. ನಾದಿನಿಯ ಮುಂದೆ ತಾನು ನಿಯಮೋಲ್ಲಂಘನೆ ಮಾಡಿದುದು ಅವನಿಗೆ ನಾಚುಗೆಯುಂಟುಮಾಡಿತು. ಕೋಪವೂ

ಬಂತು .... ಅತ್ಯಂತ ನಿಶ್ಶಬ್ದವಾಗಿ ಮಲಗುವ ಮನೆಯನ್ನು ಪ್ರವೇಶಮಾಡಬೇಕೆಂದು ಅವನ ಉದ್ದೇಶವಾಗಿತ್ತು. ಇಲ್ಲವಾದರೆ ಭೀರುವಾದ ಹರಿಣಿಯು ಹೆದರಿ ಓಡಿ ಹೋದೀತೆಂಬ ಶಂಕೆ. ....ಆದರೆ ಅಂದುಕೊಂಡಿದ್ದಂತೆ ಆಗಲಿಲ್ಲ....ಈಗ ಅದಕ್ಕೆ ಪ್ರತಿಯಾಗಿ ಕೌತುಕ ದೃಷ್ಟಿಯ ಆ ಘಾತವನ್ನು ತಪ್ಪಿಸಲು, ಬೇಕೆಂದು ಹೆಜ್ಜೆಯ ಶಬ್ದ ಮಾಡುತ್ತ ಕೋಣೆಯನ್ನು ಹೊಕ್ಕ...ಹೊಕ್ಕು ನೋಡಿದರೆ ತಾನು ಆಫೀಸಿನಿಂದ ತಪ್ಪಿಸಿಕೊಂಡು ಓಡಿ ಬಂದದ್ದು ವ್ಯರ್ಥವಾಯಿತೆಂದುಕೊಂಡು ಕೋಣೆಯಲ್ಲಿ ಯಾರೂ ಇರಲಿಲ್ಲ.... ಹಗಲು ವೇಳೆ ಯಾವ ಸಮಯದಲ್ಲಾದರೂ, ಕ್ಷಣ ಕಾಲವಾದರೂ, ಯಾರಾದರೂ ಅಲ್ಲಿದ್ದರೆಂಬುವುದಕ್ಕೆ ಯಾವ ಗುರುತೂ ಇಲ್ಲ.

ಒಂದು ಮುಹೂರ್ತದಲ್ಲಿ ಅವನ ನಿರಾಶೆಯು ಅಸಹನೀಯವಾಗಿಹೋಯಿತು. ತಾನು ಭಾವನಾದರೂ ಒಂದು ಸಲವೂ ಕಿರಿಯ ನಾದಿನಿಯ ಸಂಗಡ ಅವನು ಮಾತನಾಡಿರಲಿಲ್ಲ. ಆದರೂ ಅವಳನ್ನು ಒಂದು ಸಲ ಕರೆದು ಕುಮುದಿನಿಯ ವಿಷಯವಾಗಿ ವಿಚಾರಿಸಬೇಕೆಂದು ಅವನ ಮನಸ್ಸು ತವಕಗೊಳ್ಳುತ್ತಿತ್ತು. ಒಂದು ಸಲ ಹೊರಗೆ ಕೂಡ ಬಂದನು. ಆದರೆ ಅಷ್ಟು ಹೊತ್ತಿಗೆ ಅವಳು ಹೊರಟು ಹೋಗಿದ್ದಳು.

ನವವಧುವಿನಿಂದ ಪರಿತ್ಯಜಿಸಲ್ಪಟ್ಟ ಮಲಗುವ ಮನೆಯಲ್ಲಿ ಅಸಮಯದಲ್ಲಿ ಅಕಾರಣವಾಗಿ ಒಬ್ಬನೇ ಹೊತ್ತು ಕಳೆಯುವ ಅಗೌರವದಿಂದ ಪಾರುಮಾಡಿಕೊಳ್ಳಲು ಕೋಣೆ ಬಿಟ್ಟು ಹೊರಗಡೆಗೆ ದಡ ದಡನೆ ಹೋದ. ದೊಡ್ಡದೊಂದು ಅವಸರದ ಕೆಲಸವಿರುವವನಂತೆ ಮೇಜಿನ ಮುಂದೆ ಹೋಗಿ ಕೂತ. ಎದುರಿಗೆ ಒಂದು ಖಾತೆಯ ಪುಸ್ತಕವಿತ್ತು. ಸಾಮಾನ್ಯವಾಗಿ ಅವನು ಅದನ್ನ ತೆಗೆಯುತ್ತಲೇ ಇರಲಿಲ್ಲ. ಅವನ ಕಛೇರಿಯ ಹೆಡ್ ಗುಮಾಸ್ತನು ಅದನ್ನು ನೋಡುತ್ತಿದ್ದುದು. ಇಂದು ಮಾತ್ರ ಜನಗಳ ಕಣ್ಣನ್ನು ಮರೆಮಾಚಿಸಲು ಆ ಪುಸ್ತಕವನ್ನು ತೆಗೆದ. ಈ ಪುಸ್ತಕದಲ್ಲಿ ಅವನ ಮನೆಯಿಂದ ರವಾನೆಯಾಗುವ ಸಮಸ್ತ ಕಾಗದ, ಟೆಲಿಗ್ರಾಂ ಮುಂತಾದ ಟಪಾಲಿನ ವಿವರಗಳೆಲ್ಲ ಬರೆಯಲ್ಪಡುತ್ತಿದ್ದುವು. ಪುಸ್ತಕ ತೆಗೆದಾಗ ಮೊದಲಲ್ಲೇ ಕಂಡು ಬಂದದ್ದು ಅಂದಿನ ತಾರೀಖಿನಲ್ಲಿಯೇ ರವಾನೆಯಾದ ಟೆಲಿಗ್ರಾಮಿನ ವಿವರ....ಅದರ ವಿಳಾಸದ ಭಾಗದಲ್ಲಿ ವಿಪ್ರದಾಸನ ಹೆಸರು ಮತ್ತು ವಿಳಾಸ....ಕಳುಹಿಸಿದವರ ಹೆಸರು...ಸ್ವಯಂ ಮನೆಯ ಯಜಮಾನಿಯದೇ...

"ಕರೀ, ಚೌಕೀದಾರನನ್ನು."

ಚೌಕೀದಾರನು ಬಂದನು.

"ಈ ಟೆಲಿಗ್ರಾಮನ್ನು ಕಳುಹಿಸಲು ನಿನಗೆ ಕೊಟ್ಟವರಾರು ?"

"ಚಿಕ್ಕ ಯಜಮಾನರು."

"ಕರಿ, ಚಿಕ್ಕ ಯಜಮಾನರನ್ನ."

ಚಿಕ್ಕ ಯಜಮಾನ....ನವೀನನು....ಬಿಳುಪೇರಿದ ಮುಖದಿಂದ ಓಡಿ ಹೋದನು.

"ನನ್ನ ಅಪ್ಪಣೆಯಿಲ್ಲದೆ ಟೆಲಿಗ್ರಾಮನ್ನು ಕಳುಹಿಸಲು ಯಾರು ಹೇಳಿದರು ನಿನಗೆ ?"

ಹೇಳಿದವರು ಯಾರೋ ಅವರ ಹೆಸರನ್ನು ಯಜಮಾನನ ಎದುರಿಗೆ ಎತ್ತುವುದು ಅಷ್ಟು ಸಹಜವಾದ ಕೆಲಸವಲ್ಲ. ಏನು ಹೇಳಬೇಕೆಂದು ತೋಚದೆ ನವೀನನು ವ್ಯಾಕುಲವಾಗಿ ಆ ಚಳಿಯ ದಿನದಲ್ಲಿ ಕೂಡ ಬೆವತನು.

ನವೀನನು ಮಾತಿಲ್ಲದಿರುವುದನ್ನು ಕಂಡು ಮಧುಸೂದನನು ತಾನೇ "ನಿನ್ನ ಹೆಂಡತಿ ಅಂತ

ಕಾಣುತ್ತೆ ?" ಎಂದನು. ಮುಖ ತಗ್ಗಿಸಿಕೊಂಡು ನಿರುತ್ತರನಾಗಿ ನಿಂತಿದ್ದುದು ಅವನ ಪ್ರಶ್ನೆಗೆ ಸ್ಪಷ್ಟವಾದ ಉತ್ತರ ಕೊಟ್ಟಿತು. ಒಮ್ಮೆಗೆ ಮುಖವೆಲ್ಲಾ ರಕ್ತ ತುಂಬಿ ಕೆಂಪಗಾಯಿತು. ಬಾಯಿಂದ ಮಾತು ಹೊರಡಲಾರದೆ ಇರುವಷ್ಟು ಕೋಪ ಉಕ್ಕಿ ಉಕ್ಕಿ ಬಂತು. ಜೋರಾಗಿ ಕೈ ಒದರಿ ನವೀನ ನನ್ನು ಮನೆಯ ಹೊರಗೆ ಹೋಗುವಂತೆ ಸನ್ನೆ ಮಾಡಿ ಕೋಣೆಯ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ವೇಗವಾಗಿ ಶತಪದ ತಿರುಗಲು ತೊಡಗಿದನು.

# ಮೂವತ್ತನೆಯ ಅಧ್ಯಾಯ

ನವೀನನು ತನ್ನ ಕೋಣೆಗೆ ಹೋಗಿ ಮುಖ ಒಣಗಿಸಿಕೊಂಡು ಹೆಂಡತಿಯನ್ನು ನೋಡಿ "ನಾನು ಮೊದಲೇ ಹೇಳಲಿಲ್ಲವೇನೇ?....ಇನ್ನು ಎಲ್ಲಾ ಮುಗಿದ ಹಾಗೇ!" ಎಂದನು.

"ಯಾಕೆ, ಏನಾಯಿತು ?"

"ಆಗೋದೇನು ?....ಕಟ್ಟು ಗಂಟು ಮೂಟೆ ಎಲ್ಲಾ."

"ಆಗಲಿ ನೀವು ಹೇಳಿದಿರಿ ಅಂತ ಎಲ್ಲಾ ಕಟ್ಟೋಣ....ಯಾಕೆ ಹೇಳಿ....ನಿಮ್ಮಣ್ಣನವರ ಪ್ರಕೃತಿ ಚೆನ್ನಾಗಿಲ್ಲ ಅಂತ ಕಾಣುತ್ತೆ—ಹೌದೇ ?"

"ನನಗೆ ಗೊತ್ತಿಲ್ಲವೇನೇ ನಮ್ಮಣ್ಣ? ಈ ಸಲ ನಾವು ಇಲ್ಲಿ ವಾಸಮಾಡುವುದಕ್ಕೇ ಬೀಳುತ್ತೆ ಏಟು. ಅದು ಖಂಡಿತ."

"ನಡೀರಿ....ಹೊರಡೋಣ. ಅಷ್ಟೇಕೆ ಹೆದರಿಕೆ ? ಅಲ್ಲೇನು ನಾವು ನೀರಿನಲ್ಲಿ ಬೀಳಬೇಕಾ ಗಿಲ್ಲ."

"ನನ್ನನ್ನೇಕೆ ಹೊರಡೆನ್ನುವುದು? ಈ ಸಲ ಕಿರಿಯ ನಾದಿನಿಯನ್ನು ಊರಿಗೆ ಕಳುಹಿಸು ಅಂತ ಅಪ್ಪಣೆಯಾಗುತ್ತದೆ."

"ಆ ಅಪ್ಪಣೆಯ ಹಾಗೆ ನಡೆದುಕೊಳ್ಳುವುದು ನಿಮ್ಮ ಕೈಲಾಗುವುದಿಲ್ಲ, ನನಗೆ ಗೊತ್ತು."

"ಹೇಗೆ ಗೊತ್ತು, ನಿನಗೆ ?"

"ನನಗೊಬ್ಬಳಿಗೇ ಗೊತ್ತು ಅಂತ ತಿಳಿದುಕೊಂಡಿರೇನು? ಈ ಮನೆಯವರಿಗೆಲ್ಲರಿಗೂ ಗೊತ್ತು ....ನೀವು ಸ್ತ್ರೈಣ—ಅಂದರೆ ಹೆಂಡತಿಯ ಮಾತು ಕೇಳುವವರು ಅಂತ....ಗಂಡಸರು ಹೇಗೆ ಹೆಂಡತಿಯರ ಅಡಿಯಾಳಾಗುತಾರೆ ಅಂತ ನಿಮ್ಮಣ್ಣನಿಗೆ ಮಾತ್ರ ಗೊತ್ತಿಲ್ಲ ಅಂತ ಕಾಣುತ್ತೆ. ಈ ಸಲ ಅವರೇ ತಿಳಿದುಕೊಳ್ಳುವ ಸರದಿ ಬಂದಿದೆ."

"ಏನು ಹಾಗೆಂದರೆ ?"

"ನನಗೆ ಗೊತ್ತಿಲ್ಲವೇ....ಈ ರೋಗ ನಿಮ್ಮ ವಂಶಕ್ಕೇ ಬಂದಿದ್ದು ಅಂತ? ಇದುವರೆಗೆ ನಿಮ್ಮ ದೊಡ್ಡಣ್ಣನ ಪ್ರಕೃತಿ ತಿಳಿದಿರಲಿಲ್ಲ ...ಬಹಳ ಕಾಲದಿಂದ ಕೂಡಿ ಹಾಕಿಕೊಂಡು ಬಂದಿರುವುದರಿಂದ ಅದರ ಪೆಟ್ಟು ಕೂಡ ಅಷ್ಟು ಜೋರಾಗಿ ಇರುತ್ತೆ....ನೋಡುತಾ ಇರಿ, ನಾನು ಈಗಲೇ ಹೇಳಿರು ತ್ತೇನೆ. ಪ್ರಪಂಚ, ಸಂಸಾರ ಎಲ್ಲಾ ಮರೆತು ಯಾವ ಶಕ್ತಿಯಿಂದ ಹಣದ ತೆಕ್ಕೆಯಲ್ಲಿ ಬಿದ್ದಿ ದ್ದರೋ ಅಷ್ಟೇ ಶಕ್ತಿಯಿಂದ ಹೆಂಡತಿಯ ಕಾಲ ಬಳಿ ಬೀಳುತ್ತಾರೆ. "

"ಆಗಲಿ ಬೀಳಲಿ....ನನ್ನ ಹಾಗೆ ಅವನು ಕೂಡ ಸ್ತ್ರೈಣನಾಗುತ್ತಾನೆ ಅಂತ ತಾನೆ,....ಸರಿ

....ದೊಡ್ಡ ಸ್ತ್ರೈಣ ಸಭೆ ಕೂಡಿಸಿಕೊಳ್ಳುತ್ತಾನೆ....ಕಿರಿಯ ಸ್ತ್ರೈಣ ಯಾರನ್ನು ಕಟ್ಟಿಕೊಂಡು ಬದುಕುವುದು ?"

"ಅದರ ಭಾರ ನನ್ನ ಮೇಲೆ ಇರಲಿ. ಅವರ ಡೆಸ್ಕಿನ ಡ್ರಾಯರನ್ನು ನೀವು ಜಪ್ತಿ ಮಾಡ ಬೇಕಾಗಿದೆ."

"ನಿನಗೊಂದು ನಮಸ್ಕಾರ ಕಣೆ...ಹಾವಿನ ಹುತ್ತದಲ್ಲಿ ಕೈಯಿಡು ಅಂತ ಅನ್ನು ಇಡುತ್ತೇನೆ... ಆದರೆ ಡ್ರಾಯರಿನಲ್ಲಿ ಕೈ ಇಡಲಾರೆ."

"ಹಾವಿನ ಹುತ್ತದಲ್ಲಿ ಕೈಯಿಡಬೇಕಾದಾಗ ನಾನೇ ಸ್ವತಃ ಇಡುತ್ತೇನೆ. ಆದರೆ ಡ್ರಾಯ ರನ್ನು ಜಪ್ತಿ ಮಾಡುವುದು ನೀವೇ ಮಾಡಬೇಕು, ನಿಮಗೆ ಗೊತ್ತಿಲ್ಲವೇ....ಈ ಮನೆಯಲ್ಲಿ ಯಾರಿಗೆ ಕಾಗದ ಬಂದರೂ ಅವರಿಗೆ ಮೊದಲು ತೋರಿಸದೆ ಯಾರಿಗೂ ಅದನ್ನು ಕೊಡಕೂಡದು ಅಂತ. ಅವರ ಕೈಗೇ ಕಾಗದ ಬಂದಿದೆ, ನನ್ನ ಮನಸ್ಸು ಹೇಳುತ್ತೆ."

"ನನ್ನ ಮನಸ್ಸೂ ಹೇಳುತ್ತೆ ಹಾಗೇ, ಆದರ ಜೊತೆಯಲ್ಲಿ ಇದೂ ಹೇಳುತ್ತೆ....ಆ ಕಾಗದದ ಮೇಲೆ ನಾನು ಕೈಹಾಕಿದ್ದೇ ಆದರೆ ಅಣ್ಣ ಸರಿಯಾದ ಶಿಕ್ಷೆ ಯಾವುದೆಂದು ಎಷ್ಟು ಹುಡುಕಿದರೂ ಸಿಗದೆ ಕಡೆಗೆ ಏಳು ವರ್ಷ ಸಶ್ರಮ ಫಾಸಿ ಶಿಕ್ಷೆಯನ್ನು ವಿಧಿಸದೆ ಬಿಡುವುದಿಲ್ಲ ಅಂತ."

"ಛೆ ಛೆ...ನೀವೇನೂ ಆ ಕಾಗದಕ್ಕೆ ಕೈಹಾಕಬೇಕಾಗಿಲ್ಲ....ಸುಮ್ಮನೆ ಒಂದು ಸಲ ನೋಡಿ ಕೊಂಡು ಬನ್ನಿ....ನಮ್ಮ ಕುಮುವಿನ ಹೆಸರಿಗೆ ಕಾಗದ ಬಂದಿದೆಯೋ ಇಲ್ಲವೋ ಅಂತ ಅಷ್ಟೆ."

ಹೆಂಡತಿಯ ವಿಷಯದಲ್ಲಿ ನವೀನನಿಗೆ ಬಹಳ ಪ್ರೀತಿ, ಗೌರವ. ಅಷ್ಟೇಕೆ ತನ್ನ ಹೆಂಡತಿಗೆ ತಾನು ಯೋಗ್ಯನಲ್ಲವೆಂದೇ ಮನಸ್ಸಿನಲ್ಲಿ ಅಭಿಪ್ರಾಯ. ಅದಕ್ಕಾಗಿಯೇ ಅವಳಿಗಾಗಿ ಎಷ್ಟೇ ಕಠಿಣ ವಾದ ಕೆಲಸ ಮಾಡುವ ಸಂದರ್ಭ ಬಂದರೂ ಭಯವೆಷ್ಟೋ, ಸಂತೋಷವೂ ಅಷ್ಟೇ ಆಗುವುದು.

ಅದೇ ರಾತ್ರಿಯೇ ನವೀನನಿಂದ, ಕುಮುವಿನ ಹೆಸರಿಗೆ ಒಂದು ಕಾಗದ ಮತ್ತು ಒಂದು ಟೆಲಿಗ್ರಾಂ ಬಂದು, ಡ್ರಾಯರಿನಲ್ಲಿವೆಯೆಂದು ಮೋತಿಯಮ್ಮನಿಗೆ ತಿಳಿಯಿತು.

ಯಾವ ಉತ್ಸಾಹದಿಂದ ಕುಮು ತನ್ನ ಮಲಗುವ ಮನೆ ಬಿಟ್ಟು ದಾಸ್ಯ ವೃತ್ತಿಯಲ್ಲಿ ಮಗ್ನ ಳಾದಳೋ ಅದರ ಬಲ ಈಗ ಕಡಿಮೆಯಾಗಿದೆ. ಅವಮಾನದ ಬೇಸರ ಕಡಿಮೆಯಾಗುತ್ತ ಬಂದು ವಿಷಾದದ ಮ್ಲಾನತೆಯಿಂದ ಅವಳ ಮನಸ್ಸಿಗ ಮೋಡ ತುಂಬಿದಂತಾಗಿತ್ತು. ಇದು ಸದಾ ಕಾಲವೂ ನಡೆಯಬೇಕಾದ ವ್ಯವಸ್ಥೆಯಲ್ಲವೆಂದು ತಿಳಿದಳು. ಇಷ್ಟಾದರೂ ಅಂತಹ ವ್ಯವಸ್ಥೆ ಯಾವುದೂ ಮಾಡದೆ ಹೋದರೆ ಕುಮು ಬದುಕುವುದು ಹೇಗೆ? ಸಂಸಾರದಲ್ಲಿ ಸಾಯುವವರೆಗೂ ಈ ಬಗೆಯಾಗಿ ಮತ್ಸರದಿಂದ ಒಬ್ಬರಿಗೊಬ್ಬರು ಹೊಂದಿಕೊಳ್ಳದೆಯೇ ಇರುವುದು ಸಾಧ್ಯವಿಲ್ಲ.

ತನ್ನ ಕೋಣೆಯ ಬಾಗಿಲನ್ನು ಮುಚ್ಚಿಕೊಂಡು ಅವಳು ಇದೇ ವಿಷಯವನ್ನೇ ಯೋಚಿಸು ತ್ತಿದ್ದಳು. ಆ ಕೋಣೆ ವರಾಂಡದ ಒಂದು ಮೂಲೆಯಲ್ಲಿತ್ತು. ಮರದ ಕಟಕಟೆಯಿಂದ ಸುತ್ತುವರಿ ದಿತ್ತು.

ಆ ಕೋಣೆಗೆ ಒಳಗೆ ಹೋಗುವ ಬಾಗಿಲು ಬಿಟ್ಟರೆ ಉಳಿದ ಮೂರು ಕಡೆ ಬರಿಯ ಗೋಡೆ ಗಳು. ಗೋಡೆಗೆ ಸೇರಿದಂತೆ ಮೇಲಿನವರೆಗೂ ಮರದ ಹಲಗೆಯ ಅಟ್ಟಗಳು. ಅವುಗಳ ಮೇಲೆ ದೀಪ ಹಚ್ಚುವ ವಿಧವಿಧವಾದ ಸಾಮಾನುಗಳನ್ನಿಟ್ಟಿದ್ದರು. ಎಣ್ಣೆ ಅಲ್ಲಲ್ಲಿ ಚೆಲ್ಲಿ ಕೊಠಡಿ ಯೆಲ್ಲಾ ಕೊಳಕು ಕೊಳಕಾಗಿತ್ತು.

ಭೃತ್ಯನೊಬ್ಬನು ಲಾಂದ್ರಗಳು ಪ್ಯಾಕ್ ಆಗಿ ಬರುತ್ತಿದ್ದ ಕಾಗದಗಳಿಂದ ಚಿತ್ರಗಳನ್ನು ಕತ್ತರಿಸಿ ಗೋಂದಿನಿಂದ ಅಂಟಿಸಿ ತನ್ನ ಸುಪ್ತವಾದ ಸೌಂದರ್ಯ ದೃಷ್ಟಿಯ ತೃಪ್ತಿಯನ್ನು ಪಡೆದು ಕೊಂಡಿದ್ದನು. ಒಂದು ಮೂಲೆಯಲ್ಲಿ ಟಿನ್ನಿನ ಪೆಟ್ಟಿಗೆಯಲ್ಲಿ ಸುಣ್ಣದ ಪುಡಿ, ಅದರ ಪಕ್ಕದಲ್ಲಿ ಮಕರಿಯೊಂದರಲ್ಲಿ ಒಣಗಿದ ಹುಣಿಸೇಹಣ್ಣು....ಮತ್ತು ಕೆಲವು ಕೊಳೆಯ ಟವಲುಗಳು. ಮತ್ತು ಸಾಲು ಸಾಲಾಗಿ ಇಟ್ಟಿದ್ದ ಸೀಮೆಯೆಣ್ಣೆಯ ಟಿನ್ನುಗಳು....ಅವುಗಳಲ್ಲಿ ಎರಡು ಮೂರು ಬಿಟ್ಟರೆ ಉಳಿದುವೆಲ್ಲಾ ಬರಿದು. ಅಭ್ಯಾಸವೇ ಇಲ್ಲದ ಕೈಯಲ್ಲಿ ಇಂದು ಬೆಳಗಿನಿಂದ ಕುಮು ಕೆಲಸದಲ್ಲಿ ನಿರತಳಾಗಿದ್ದಳು. ಉಗ್ರಾಣದ ಕೆಲಸವನ್ನು ಮುಗಿಸಿಕೊಂಡು ಮೋತಿಯಮ್ಮನು ಹೊಂಚು ಹಾಕಿ ಒಂದು ಸಲ ಕುಮುವಿನ ಕರ್ಮ ತಪಸ್ಸಿನ ದುಸ್ಸಾಧ್ಯ ಸಂಕಟವನ್ನು ನೋಡುತ್ತಾ ನಿಂತಳು.

ಆಗ ಒಂದೆರಡು ನಾಜೋಕಾದ ಪದಾರ್ಥಗಳಿಗೆ ಅಪಾಯವಾಗುವುದರಲ್ಲಿದೆಯೆಂದು ತಿಳಿಯಿತು. ಈ ಮನೆಯಲ್ಲಿ ನಷ್ಟವಾದ ಸಾಮಾನುಗಳ ಸಾಮಾನ್ಯತೆಯೂ, ಬೆಲೆಯ ಅಲ್ಪತೆಯೂ ಕೂಡ ದೃಷ್ಟಿಯನ್ನು ಅಥವಾ ಲೆಕ್ಕಾಚಾರವನ್ನು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲವೆಂದು ಗೊತ್ತು ಅವಳಿಗೆ.

ಮೋತಿಯಮ್ಮನಿಗೆ ಇನ್ನು ಸುಮ್ಮನಿರಲು ಆಗಲಿಲ್ಲ, "ಸದ್ಯಕ್ಕೆ ಕೆಲಸವೇನೂ ಇಲ್ಲ. ಅದಕ್ಕೇ ಬಂದೆನಮ್ಮ....ನಿನ್ನ ಕೆಲಸಕ್ಕೆ ಸ್ವಲ್ಪ ಸಹಾಯ ಮಾಡಿದರೆ ಪುಣ್ಯಬರುತ್ತೆಂದು ಕೊಂಡೆ," ಹೀಗೆ ಹೇಳಿ ಗಾಜಿನ ಗುಳೋಪು, ಮತ್ತು ಚಿಮನಿಗಳ ಬುಟ್ಟಿಯನ್ನು ತನ್ನ ಹತ್ತಿರ ಎಳೆದುಕೊಂಡು ಉಜ್ಜಿ ಒರಸುವ ಕೆಲಸವನ್ನು ಆರಂಭಿಸಿದಳು.

ಅವಳನ್ನು ತಡೆಯಲು ಕುಮುವಿಗೆ ಸಾಧ್ಯವಿರಲಿಲ್ಲ. ಏಕೆಂದರೆ ಈ ನಡುವೆ ಕೆಲಸದಲ್ಲಿ ತನ್ನ ಪಳಗದ ಕೈ ಎಷ್ಟರ ಮಟ್ಟಿಗೆ ಕೆಲಸ ಮಾಡುತ್ತಿದೆ ಎಂದು ಅವಳಿಗೆ ತಿಳಿಯುವುದು ಹೆಚ್ಚು ಹೊತ್ತಾಗಿರಲಿಲ್ಲ. ಮೋತಿಯಮ್ಮನ ಸಹಾಯವನ್ನು ಪಡೆದು ಅವಳಿಗೆ ಎಷ್ಟೋ ನೆಮ್ಮದಿಯಾಯಿತು. ಆದರೆ ಮೋತಿಯಮ್ಮನಿಗೂ ಕಲಿಯದೆ ಮಾಡುವ ಕೆಲಸಕ್ಕೆ ಒಂದು ಮಿತಿಯಿತ್ತು, ಸೀಮೆಯೆಣ್ಣೆಯ ಲಾಂದ್ರಕ್ಕೆ ಅಳತೆಯಾಗಿ ಬತ್ತಿ ಕತ್ತರಿಸುವುದು ಅವಳ ಕೈಯಲ್ಲಾಗದು. ಈ ಕೆಲಸಗಳೆಲ್ಲಾ ಅವಳು ಹೇಳಿದಂತೆಯೇ ಆಗುತ್ತಿದ್ದುದು. ಗೊತ್ತಾದಂತೆ ಎಣ್ಣೆ ಮುಂತಾದುವುಗಳನ್ನು ಅಳೆಯುವುದು ಅವಳ ಕೈಯಿಂದಲೇ—ಆದರೆ ತಾನೇ ಕೈಹಾಕಿ ಬತ್ತಿಯನ್ನು ಕತ್ತರಿಸುವುದು ಅವಳಿಂದ ಇದುವರೆಗೆ ಆಗಿರಲಿಲ್ಲ. ಆದ್ದರಿಂದಲೇ ವಿಧಿಯಿಲ್ಲದೆ ಮುದುಕನಾದ ಬಂಕೂವನ್ನು ಸಹಾಯಕ್ಕೆ ಕರೆಯುವ ಪ್ರಸ್ತಾಪವನ್ನು ಮಾಡಿದಳು.

ಸೋಲೊಪ್ಪಿ ಕೊಳ್ಳಬೇಕಾಗಿ ಬಂತು. ಬಂಕೂ ಬಂದನು. ಮತ್ತು ಪಳಗಿದ ಕೈಯಿಂದ ಬಹಳ ಬೇಗ ಕೆಲಸವನ್ನು ಪೂರೈಸಿದನು. ಸಂಜೆಗೆ ಮುಂಚೆಯೇ ದೀಪಗಳನ್ನು ಕೋಣೆ ಕೋಣೆಗೂ ಹಂಚಿ ತೆಗೆದುಕೊಂಡು ಹೋಗಿ ಇಟ್ಟು ಬರಬೇಕಾಗಿತ್ತು. ಆ ಕೆಲಸಕ್ಕೋಸ್ಕರ ವಾಡಿಕೆಯಂತೆ ತಾನು ಹೊತ್ತಿಗೆ ಮುಂಚೆ ಬರಬೇಕಾಗಿದೆಯೇ ಇಲ್ಲವೇ ಎಂದು ಬಂಕೂ ವಿಚಾರಿಸಿದನು.

ಆಳೇನೋ ಒಳ್ಳೆಯವನು. ಆದರೆ ಇಂದು ಅವನು ಕೇಳಿದ ಪ್ರಶ್ನೆಯಲ್ಲಿ ಸ್ವಲ್ಪ ವ್ಯಂಗ್ಯವಿತ್ತು. ಕುಮುವಿನ ಕಿವಿಯ ಅಂಚು ಕೆಂಪಡರಿತು.

ಅವಳು ಯಾವ ಉತ್ತರವನ್ನೂ ಕೊಡುವುದಕ್ಕೆ ಮುಂಚೆ ಮೋತಿಯಮ್ಮನು "ಬರದೆ

ಮತ್ತೆ ?" ಎಂದು ಬಿರುಸಾಗಿ ನುಡಿದಳು....ಕೆಲಸ ಮಾಡಲು ಹೊರಟ ತಾನು ಕೆಲಸಕ್ಕೆ ಕೇವಲ ಅಡ್ಡಿಯಾಗಿರುವೆನೆಂಬ ಅಂಶ ಕುಮುವಿಗೆ ಹೊಳೆಯದೆ ಇರಲಿಲ್ಲ.

## ಮೂವತ್ತೊಂದನೆಯ ಅಧ್ಯಾಯ

ಮಧ್ಯಾಹ್ನ ಊಟವಾದ ಮೇಲೆ ಕದ ಮುಚ್ಚಿಕೊಂಡು ಕುಮು ಕೋಣೆಯೊಳಗೆ ಕೂತುಕೊಂಡೇ ಇನ್ನು ಮುಂದೆ ಕ್ರೋಧದ ಬೆಂಕಿಗೆ ತನ್ನ ಮನಸ್ಸಿನಲ್ಲಿ ಎಡೆ ಕೊಡುವುದಿಲ್ಲವೆಂದು ಹಠ ಮಾಡಿಕೊಂಡಳು.

ಇಂದಿನ ದಿನ ಕೇವಲ ಮನಸ್ಸನ್ನು ಸ್ಥಿರವಾಗಿಟ್ಟುಕೊಳ್ಳುವುದರಲ್ಲಿಯೇ ನಿರತಳಾಗಿರುತ್ತೇನೆಂದು ಮನಸ್ಸು ಮಾಡಿದಳು.

ದೇವರ ಆಶೀರ್ವಾದ ಪಡೆದು ನಾಳೆಯಿಂದಲೇ ಸಂಸಾರ ಧರ್ಮದ ಸತ್ಯ ಪಥದಲ್ಲಿ ಪ್ರವೃತ್ತಳಾಗುತ್ತೇನೆಂದು ನಿರ್ಧರಿಸಿದಳು.

ಮಧ್ಯಾಹ್ನ ಊಟವಾದ ಮೇಲೆ ತನ್ನ ಮರದ ಕಟಕಟೆಯ ಕೊಠಡಿಯಲ್ಲಿ ಬಾಗಿಲು ಮುಚ್ಚಿಕೊಂಡು ಕೂತು ತನ್ನನ್ನು ತಾನೇ ತಿಳಿದುಕೊಳ್ಳುವ ಪ್ರಯತ್ನದಲ್ಲಿ ಮಗ್ನಳಾದಳು....ಈ ಕೆಲಸದಲ್ಲಿ ಎಲ್ಲಕ್ಕಿಂತಲೂ ಹೆಚ್ಚಾಗಿ ಸಹಾಯಕವಾದುದು ಅವಳ ಅಣ್ಣನ ನೆನಪು. ಅವನ ಧೈರ್ಯದ ಆಶ್ಚರ್ಯಕರವಾದ ಗಾಂಭೀರ್ಯವನ್ನು ಅವಳು ಕಂಡಿದ್ದಾಳೆ. ಅವನ ಮುಖದಲ್ಲಿ ಅವನ ಅಂತರ್‍ಯದ ಮಹತ್ವದ ಛಾಯೆಯಂತಿದ್ದ ವಿಷಾದದ ತೆರೆ ಕಾಣುತ್ತಿತ್ತು. ಅವಳಣ್ಣ ಅಂದಿನ ಕಾಲದ ಶಿಕ್ಷಿತ ಸಮಾಜದಲ್ಲಿ ಪ್ರಚಲಿತವಾಗಿದ್ದ. ('Positivism') ಪ್ರಮಾಣವಾದದ ಅನುಯಾಯಿಯಾಗಿದ್ದ,. ದೇವರನ್ನು ಬಹಿರಂಗವಾಗಿ ಪೂಜಿಸುವುದು ಅವನ ಅಭ್ಯಾಸವಲ್ಲದಿದ್ದರೂ ದೇವರೇ ಸ್ವತಃ ಅವನ ಜೀವನದಲ್ಲಿ ಒಂದು ಪೂರ್ಣತೆಯನ್ನು ಉಂಟುಮಾಡಿದ್ದನು.

ಮಧ್ಯಾಹ್ನದ ಅಂತ್ಯದಲ್ಲಿ ಬಂಕೂ ಬಂದು ಬಾಗಿಲು ತಟ್ಟಿದಾಗ ಬಾಗಿಲು ತೆಗೆದು ಕುಮು ಹೊರಗಡೆ ಬಂದಳು. ಮೋತಿಯಮ್ಮನನ್ನು ಕಂಡು ತಾನು ಆ ರಾತ್ರಿ ಊಟ ಮಾಡುವುದಿಲ್ಲೆಂದು ಹೇಳಿದಳು. ಮನಸ್ಸನ್ನು ಶುದ್ಧವಾಗಿಟ್ಟುಕೊಳ್ಳಬೇಕೆಂದೇ ಅವಳು ಈ ಉಪವಾಸವನ್ನು ಕೈಕೊಂಡಿದ್ದಳು. ಮೋತಿಯಮ್ಮನು ಅವಳ ಮುಖವನ್ನು ನೋಡಿ ಆಶ್ಚರ್ಯ ಪಟ್ಟಳು. ಆ ಮುಖದಲ್ಲಿ ಇಂದು ಚಿತ್ತ ಕ್ಷೋಭೆಯ ರಕ್ತದ ಹೊಳಪಿರಲಿಲ್ಲ. ಹಣೆಯಲ್ಲಿಯೂ, ಕಣ್ಣುಗಳಲ್ಲಿಯೂ ಪ್ರಶಾಂತವಾದ ಸ್ನಿಗ್ಧವಾದ ಕಾಂತಿಯಿತ್ತು. ತೀರ್ಥಸ್ನಾನ ಮಾಡಿಕೊಂಡು ಆಗ ತಾನೇ ಪೂಜಾರ್ಚನೆಗಳನ್ನು ಮುಗಿಸಿಕೊಂಡು ಬಂದಂತಿತ್ತು. ಅವಳ ಅಂತರ್ಯಾಮಿಯಾದ ದೇವತೆಯು ಅವಳ ಸಮಸ್ತ ಅಹಂಕಾರವನ್ನು ನಾಶಮಾಡಿದಂತಿತ್ತು. ಹೃದಯಾಂತರಾಳದಲ್ಲಿ ಅವಳು ಪಡೆದು ಧರಿಸಿದ್ದ ನಿರ್ಮಾಲ್ಯ ಪುಷ್ಪದ ಗಂಧವೇ ಅವಳ ಸುತ್ತಲೂ ಬೀರುತ್ತಿರುವಂತಿತ್ತು....ಆದ್ದರಿಂದಲೇ ಕುಮುದಿನಿ ತಾನು ಉಪವಾಸ ಮಾಡುತ್ತೇನೆಂದು ತಿಳಿಸಿದಾಗ ಮೋತಿಯಮ್ಮನು-ಇದು ಅಭಿಮಾನದ ಆತ್ಮ ಪೀಡನೆಯಲ್ಲ"ವೆಂದುಕೊಂಡು ಏನೂ ಅಡ್ಡಿ ಮಾಡಲಿಲ್ಲ.

ಕುಮು ತನ್ನ ದೇವರ ಮೂರ್ತಿಯನ್ನು ಮನಸ್ಸಿನೊಳಗೆ ನಿಲ್ಲಿಸಿಕೊಂಡು ಬಿಸಿಲು ಮಾಳಿಗೆಯ ಒಂದು ಮೂಲೆಯಲ್ಲಿ ಹೋಗಿ ಕುಳಿತಳು. ಅವಳಿಗೆ ಇಷ್ಟು ದುಃಖವಾಗಿರದೆ ಹೋಗಿದ್ದರೆ

ತನ್ನ ದೇವರ ಬಳಿ ಇಷ್ಟು ಹತ್ತಿರ ಹೋಗಲು ಸಾಧ್ಯವಾಗುತ್ತಿರಲಿಲ್ಲವೆಂದು ಇಂದು ಸ್ಪಷ್ಟವಾಗಿ ತಿಳಿದಿದ್ದಳು. ಮುಳುಗುತ್ತಿದ್ದ ಸೂರ್ಯನ ಕಡೆ ನೋಡುತ್ತಾ ಕುಮು ಕೈ ಜೋಡಿಸಿ "ನನ್ನ ದೇವರೇ....ಇನ್ನೆಂದಿಗೂ ನಿನ್ನ ಸಂಗಡ ನನ್ನ ಅಗಲಿಕೆಯಾಗದಿರಲಿ. ನೀನು ಸದಾ ನನ್ನನ್ನು ನಿನ್ನವಳಾಗಿಯೇ ಮಾಡಿಕೋ" ಎಂದಳು.

ಶೀತಕಾಲದ ದಿನ ನೋಡುತ್ತಾ ನೋಡುತ್ತಾ ಮ್ಲಾನವಾಗುತ್ತ ಬಂತು. ಧೂಳು, ಹೊಗೆ, ಮಂಜು ಇವುಗಳು ಕಲಿತ ಒಂದು ವಿವರ್ಣವಾದ ಆವರಣದಲ್ಲಿ ಸಂಜೆಯ ಸ್ವಚ್ಛವಾದ ಕತ್ತಲೆಯ ಗಾಂಭೀರ್ಯದ ಮಹಿಮೆ ಮುಚ್ಚಿಹೋಗಿತ್ತು. ಸುತ್ತ ಎಲ್ಲಾ ಕಡೆಯೂ ವ್ಯಾಪ್ತವಾಗಿದ್ದ ಮಲಿನತೆಯ ಹೊರೆ ಹೊತ್ತು ಭೂಮಿಯ ಕಡೆ ಇಳಿದು ಬರುತ್ತಿದ್ದ ಆಕಾಶದಂತೆಯೇ ಅಣ್ಣನಿಗಾಗಿ ಅನುಭವಿಸುತ್ತಿದ್ದ ದುಶ್ಚಿಂತೆಯೊಂದರ ಭಾರವು ಕುಮುವಿನ ಮನಸ್ಸನ್ನು ಕೆಳಗಿಳಿಸಿತ್ತು.

ಈ ರೀತಿಯಾಗಿ ಒಂದು ಕಡೆ ಅಭಿಮಾನದ ಬಂಧನದಿಂದ ಬಿಡುಗಡೆ ಹೊಂದಿದ ಮುಕ್ತಿಯ ಆನಂದ ಮತ್ತು ಬೇರೊಂದು ಕಡೆ ಅಣ್ಣನಿಗಾಗಿ ಯೋಚನೆ ಮಾಡಿ ಮಾಡಿ ಕತ್ತರಿಸುತ್ತಿದ್ದ ಹೃದಯದ ಭಾರ....ಇವೆರಡನ್ನೂ ಒಟ್ಟಿಗೇ ಹೊತ್ತು ಮತ್ತೆ ತನ್ನ ಮರದ ಕೊಠಡಿಯಲ್ಲಿ ಹೋಗಿ ಕುಳಿತಳು. ಈ ನಿರುಪಾಯವಾದ ಭಾವನೆಗಳ ಹೊರೆಯನ್ನು ಏಕಾಂತ ಶ್ರದ್ಧೆಯಿಂದ ಭಗವಂತನ ಮೇಲೆ ಸಂಪೂರ್ಣವಾಗಿ ಸಮರ್ಪಣೆ ಮಾಡಬೇಕೆಂದು ಇಷ್ಟಪಟ್ಟಳು. ಆದರೆ ತನ್ನನ್ನೇ ಬಾರಿ ಬಾರಿಗೂ ಧಿಕ್ಕರಿಸಿ ಕೊಂಡರೂ ಯಾವ ರೀತಿಯಲ್ಲೂ ಆ ಶ್ರದ್ಧೆ ಉಂಟಾಗಲಿಲ್ಲ. ಆ ಭಾರವನ್ನು ಕಳೆದುಕೊಳ್ಳಲು ಆಗಲಿಲ್ಲ. ಟೆಲಿಗ್ರಾಮನ್ನೇನೋ ಕೊಟ್ಟದ್ದಾಗಿದೆ. ಅದಕ್ಕೆ ಉತ್ತರವೇಕೆ ಇನ್ನೂ ಬರಲಿಲ್ಲ? ಈ ಪ್ರಶ್ನೆಯೇ ಅವಳ ಮನಸ್ಸನ್ನು ಸದಾ ಕಾಡಿಸುತ್ತಿತ್ತು.

ಹೆಂಗಸರ ಮನಸ್ಸಿನ ಆತ್ಮ ಸಮರ್ಪಣೆಯ ಸೂಕ್ಷ್ಮವಾದ ಕಟ್ಟೆಯ ಮೇಲೆ ಮಧುಸೂದನನು ಎಲ್ಲೂ ಕೈಹಾಕಲು ಸಾಧ್ಯವಾಗಲಿಲ್ಲ. ಮದುವೆಯಾದ ಹೆಂಡತಿಯ ದೇಹ ಮನಸ್ಸುಗಳೆರಡರ ಮೇಲೂ ಗಂಡನಿಗೆ ಇರಬೇಕಾದ ಸಂಪೂರ್ಣವಾದ ಹಕ್ಕು ಅವನ ಭಾಗಕ್ಕೆ ವಿಪರೀತ ದುರ್ಗಮವಾಗಿತ್ತು. ಅದೃಷ್ಟದ ಇಂತಹ ಅಭಾವನೀಯ ದುರ್ವ್ಯೂಹವನ್ನು ಯಾವ ದಿಕ್ಕಿನಿಂದ ಯಾವ ರೀತಿಯಾಗಿ ಆಕ್ರಮಣಮಾಡಿ ಒಡೆಯಬೇಕೆಂದು ಅವನಿಗೆ ಎಷ್ಟು ಯೋಚಿಸಿದರೂ ಹೊಳೆಯಲಿಲ್ಲ. ಎಂದೂ ಯಾವ ಕಾರಣಕ್ಕಾಗಿಯೂ ಮಧುಸೂದನನು ತನ್ನ ಸ್ವಂತ ಉದ್ಯೋಗದ ವಿಷಯದಲ್ಲಿ ಲೇಶವೂ ನಿರ್ಲಕ್ಷ್ಯ ತೋರುತ್ತಿರಲಿಲ್ಲ. ಇಂದು ಆ ದುರ್ಲಕ್ಷಣವೂ ಕಂಡು ಬಂತು, ಸ್ವಂತ ತಾಯಿಯ ಕಾಯಿಲೆ ಮತ್ತು ಸಾವುಗಳ ಸಂದರ್ಭದಲ್ಲೂ ಮಧುಸೂದನನು ತನ್ನ ದೈನಂದಿನ ವ್ಯವಹಾರವನ್ನು ನಿಲ್ಲಿಸದೆ ಇದ್ದುದು ಎಲ್ಲರಿಗೂ ಗೊತ್ತು. ಆಗ ಅವನ ನಿಶ್ಚಲವಾದ ದೃಢ ಮನಸ್ಸನ್ನು ಎಲ್ಲರೂ ಮೆಚ್ಚಿಕೊಂಡಿದ್ದರು. ಇಂದು ಅದೇ ಮಧುಸೂದನನು ತನ್ನ ಹೊಸದೊಂದು ರೂಪದ ಪರಿಚಯ ಹೊಂದಿ ಸ್ತಂಭಿತನಾಗಿ ಹೋದನು. ಬಳಕೆಯಲ್ಲಿ ಬಂಧಿತವಾಗಿದ್ದ ಈ ರಸ್ತೆಯಿಂದ ತನ್ನನ್ನು ಹೀಗೆ ಎಳೆದುಕೊಂಡೊಯ್ಯುತ್ತಿರುವ ಶಕ್ತಿ ಯಾವ ಕಡೆ ಎಳೆದುಕೊಂಡು ಹೋಗುತ್ತಿದೆ ಎಂಬುದರ ಅರಿವು ಅವನಿಗೆ ಎಷ್ಟು ಯೋಚಿಸಿದರೂ ಹೊಳೆಯಲಿಲ್ಲ.

ರಾತ್ರಿಯ ಊಟವನ್ನು ಮುಗಿಸಿ ಮಧುಸೂದನನು ಮಲಗುವ ಮನೆಗೆ ಬಂದನು....ದೃಢವಾದ ನಂಬಿಕೆಯಿಲ್ಲದಿದ್ದರೂ ಕುಮುದಿನಿಯನ್ನು ಇಂದಾದರೂ ಮಲಗುವ ಮನೆಯಲ್ಲಿ ಕಾಣಬಹುದೆಂದು ಆಸೆಯಿತ್ತು. ಅದಕ್ಕಾಗಿಯೇ ನಿಯಮದ ವೇಳೆಯನ್ನು ಅತಿಕ್ರಮಿಸಿ ಮಲಗಲು

ಬಂದನು....

ಆರೋಗ್ಯವಾದ ಶರೀರದ ಚಿರಅಭ್ಯಾಸದಂತೆ ಘಡಿಯಾರದ ಹಾಗೆ ಕ್ಲುಪ್ತವಾಗಿ ಸಮಯಕ್ಕೆ ಸರಿಯಾಗಿ ನಿದ್ದೆ ಮಾಡುವುದು ಅವನ ವಾಡಿಕೆ. ಒಂದು ಕ್ಷಣವೂ ತಡ ಮಾಡುತ್ತಿರಲಿಲ್ಲ.... ಇಂದು ಹಾಗೆಯೇ ಮಲಗಿಬಿಟ್ಟರೆ ಆ ಮೇಲೆ ಕುಮು ನಿಶ್ಶಬ್ದವಾಗಿ ಬಂದು ಹಾಗೆಯೇ ತನಗೆ ಗೊತ್ತಾಗದಂತೆ ಹೊರಟು ಹೋಗಬಹುದೆಂದು ಹೆದರಿ ಹಾಸುಗೆಯ ಮೇಲೆ ಮಲಗಲು ಹೋಗಲಿಲ್ಲ. ಸೋಫಾದ ಮೇಲೆಯೇ ಸ್ವಲ್ಪಹೊತ್ತು ಹಾಗೆಯೇ ಕೂತಿದ್ದು, ಆ ಮೇಲೆ ಹೊರಗಡೆ ಬಿಸಿಲು ಮಾಳಿಗೆಯ ಮೇಲೆ ಅಡ್ಡಾಡುತ್ತ ಹೊತ್ತು ಕಳೆದನು. ಅವನು ಮಲಗುವುದು ಒಂಬತ್ತು ಘಂಟೆಗೆ....ಇಂದು ಒಂದುಸಲ ಅಕಸ್ಮಾಕ್ ಚಮಕಿತನಾಗಿ ಎದ್ದು ಕಿವಿಗೊಟ್ಟು ಕೇಳಿದಾಗ ಹೊರಗಡೆ ಹಜಾರದ ಗಡಿಯಾರವು ಹನ್ನೊಂದು ಹೊಡೆಯುತ್ತಿತ್ತು. ಅವನಿಗೆ ನಾಚುಗೆಯಾಯಿತು. ಆದರೆ ಮಂಚದ ಮುಂದೆ ಒಂದೆರಡು ಸಲ ಬಂದು ಸುಮ್ಮನೆ ನಿಂತಿರುತ್ತಿದ್ದನು. ಏನು ಮಾಡಿದರೂ ಮಲಗಲು ಮನಸ್ಸು ಬರುತ್ತಿರಲಿಲ್ಲ....ಆಗ ಇದ್ದಕ್ಕಿದ್ದಹಾಗೆ ಹೊರಮನೆಗೆ ಹೋಗಿ ನವೀನನ ಹತ್ತಿರ ಏನೋ ಒಂದು ವಿಷಯದ ತೀರ್ಮಾನ ಮಾಡಬೇಕೆಂದು ನಿರ್ಧರಿಸಿದನು.

ಹೊರಮನೆಯ ಎದುರುಗಡೆಯ ವರಾಂಡಕ್ಕೆ ಬಂದು ಅಲ್ಲಿನ್ನೂ ದೀಪ ಉರಿಯುತ್ತಿದ್ದುದನ್ನು ನೋಡಿದನು. ಅವನು ಪ್ರವೇಶಮಾಡುತ್ತಿದ್ದ ಹಾಗೆಯೇ ಅದೇ ಸಮಯದಲ್ಲಿ ಕೈಯಲ್ಲಿ ಲಾಂದ್ರ ಹಿಡಿದುಕೊಂಡು ನವೀನನೂ ಕೊಠಡಿಯಿಂದ ಹೊರಗೆ ಬಂದನು. ಹಗಲು ವೇಳೆಯಾಗಿದ್ದರೆ ಒಂದು ಕ್ಷಣದಲ್ಲಿ ನವೀನನ ಮುಖವು ರಕ್ತವೆಲ್ಲಾ ಹೀರಿಕೊಂಡು ಹೋದದ್ದು ಕಾಣಿಸುತ್ತಿತ್ತು.

ಮಧುಸೂದನ ಅವನನ್ನು ನೋಡಿ "ಇಷ್ಟು ಸರಿ ರಾತ್ರಿಯಲ್ಲಿ ಏನು ಮಾಡುತ್ತಿದ್ದೆಯೋ ಇಲ್ಲಿ?" ಎಂದನು.

ನವೀನನ ತಲೆಯಲ್ಲಿ ಬುದ್ಧಿ ಹೊಳೆಯಿತು. ಅವನು "ಮಲಗುವುದಕ್ಕೆ ಮುಂಚೆ ಗಡಿಯಾರಕ್ಕೆ ಕೀಲಿ ಕೊಟ್ಟು, ಕ್ಯಾಲೆಂಡರಿನ ತಾರೀಖು ಸರಿಮಾಡಿ ಹೋಗಬೇಕು." ಎಂದನು.

"ಒಳ್ಳೇದು....ರೂಮಿನೊಳಗೆ ಬಾ. ಸ್ವಲ್ಪ ಮಾತಾಡಬೇಕು."

ನವೀನನು ಹೆದರಿ ಕಟಕಟೆಯ ಪೆಟ್ಟಿಗೆಯಲ್ಲಿ ನಿಂತ ಅಪರಾಧಿಯಂತೆ ಮಾತಿಲ್ಲದೆ ಸುಮ್ಮನೆ ನಿಂತಿದ್ದನು.

ಮಧುಸೂದನನು "ಇಲ್ಲಿ ನೋಡು, ನಿಮ್ಮ ದೊಡ್ಡತ್ತಿಗೆಯ ಕಿವಿಯಲ್ಲಿ, ಯಾರಾದರೂ ಸರಿಯೇ, ಮಂತ್ರ ಊದುವುದು ನನಗೆ ಎಂದಿಗೂ ಸರಿಬೀಳುವುದಿಲ್ಲ. ನನ್ನ ಹೆಂಡತಿ ನನ್ನ ಇಷ್ಟಾನುಸಾರ ನಡೆಯಬೇಕು. ಬೇರೆ ಯಾರ ಉಪದೇಶಕ್ಕನುಸಾರವಾಗಿಯೂ ನಡೆಯಬೇಕಾಗಿಲ್ಲ....ಇದೇ ಸರಿಯಾದ ನಿಯಮ." ಎಂದನು.

ನವೀನನು ಗಂಭೀರಭಾವದಿಂದ "ಅದು ಸರಿಯಾದ ಮಾತೇ" ಎಂದನು.

"ಅದಕ್ಕೇ ನಾನು ಹೇಳುವುದು....ನಿನ್ನ ಹೆಂಡತಿಯನ್ನು ಊರಿಗೆ ಕಳುಹಿಸಿಬಿಡಬೇಕು."

ನವೀನನು ಬಹಳ ನಿಶ್ಚಿಂತನಾಗಿ ಹೋದವನಂತೆ "ಅದು ಒಳ್ಳೆಯದೇ ಆಯಿತು, ಅಣ್ಣ ನಾನು ಅದು ನಿನಗೆಲ್ಲಿ ಒಪ್ಪುವುದಿಲ್ಲವೋ ಅಂತ ಹೆದರಿದ್ದೆ." ಎಂದನು.

ಮಧುಸೂದನನು ವಿಸ್ಮಿತನಾಗಿ "ಏನೋ ಹಾಗೆಂದರೆ?" ಎಂದನು.

"ಏನಿಲ್ಲ....ಆಂ....ಈಗ ಕೆಲವು ದಿನಗಳಿಂದ ಆವಳು ಊರಿಗೆ ಹೋಗಬೇಕು ಅಂತ

ಟಿಮ್ಮನೆ ಹಠ ಹಿಡಿದಿದಾಳೆ. ಸಾಮಾನೆಲ್ಲಾ ಗಂಟು ಕಟ್ಟಿಕೊಂಡು ಕೂತಿದಾಳೆ. ಒಳ್ಳೆಯ ದಿನ ನೋಡಿಕೊಂಡು ಹೊರಡೋಣ ಅಂತ ಇದಾಳೆ."

ಈ ಮಾತೆಲ್ಲಾ ಪೂರ್ತಿ ಕಲ್ಪಿತವಾದದ್ದು ಎಂದು ಹೇಳಬೇಕಾಗಿಯೇ ಇಲ್ಲ. ತನ್ನ ಮನೆ ಯಿಂದ ಮಧುಸೂದನ ತನಗೆ ಎಂದು, ಯಾರನ್ನು ಊರಿಗೆ ಕಳುಹಿಸಬೇಕೆಂದು ಅನ್ನಿಸುತ್ತೋ ಅಂದು, ಅವರು ಹೊರಡಬೇಕಾಗಿತ್ತು...,ಅವರವರ ಇಚ್ಛೆಯಂತೆ ಹೋಗುವುದು ಎಲ್ಲಾದರೂ ಉಂಟೆ?....ಅದು ಸಂಪೂರ್ಣ ಬೇಜವಾಬುದಾರಿ.

ಮಧುಸೂದನನು ರೇಗಿದ ಧ್ವನಿಯಲ್ಲಿ "ಅದೇನು,...ಹೋಗಬೇಕೂ ಅಂತ ಯಾಕಿಷ್ಟು ಆತುರ ಅವಳಿಗೆ?" ಎಂದನು.

"ಏನಿಲ್ಲ ಅಣ್ಣಾ...ಮನೆ ಯಜಮಾನಿ ಹೇಗಿದ್ದರೂ ಬಂದಿದ್ದಾಳೆ....ಅದೇ ದೊಡ್ಡತ್ತಿಗೆ.... ಬಂದಿದ್ದಾಳೆ. ಇನ್ನು ಮೇಲಿಂದ ಮನೆಯ ವಹಿವಾಟನ್ನೂ ಆಕೆಯೇ ವಹಿಸಿಕೊಳ್ಳಬೇಕಾಗುತ್ತೆ. ಹಾಗಂತ ಹೇಳಿ ಅವಳು, ನಾನೊಬ್ಬಳು ಮಧ್ಯೆ ಇದ್ದರೆ, ಯಾರಿಗೆ ಗೊತ್ತು, ಯಾವಾಗ ಯಾವ ಮಾತು ಬರುತ್ತೋ?" ಅಂತಾಳೆ.

"ಇವೆಲ್ಲಾ ವಿಷಯಗಳನ್ನು ಆಲೋಚಿಸುವ ಭಾರ ಅವಳ ಮೇಲಿಯೇನು?"

ನವೀನನು ಏನೂ ತಿಳಿಯದವನಂತೆ "ಏನು ಮಾಡುವುದು ನೀನೇ ಹೇಳಣ್ಣ, ಈ ಹೆಂಗಸರ ಹಠ ಅನ್ನುವುದು....ಅವಳ ಮನಸ್ಸಿಗೆ ಈ ಯೋಚನೆ ಹೇಗೆ ಬಂತೋ ನನಗೆ ಗೊತ್ತಿಲ್ಲ....ಯಾವ ಮಾತಿನ ಮೇಲಾದರೂ ಅವಳನ್ನ ಯಾವತ್ತಾದರೂ ಒಂದು ದಿವಸ ಹಠಾತ್ತಾಗಿ ಈ ಜವಾಬ್ದಾರಿ ಯಿಂದ ತೆಗೆದುಹಾಕಿಬಿಡಬಹುದು...ಹಾಗೊಂದು ಪಕ್ಷ ಆದರೆ ಆ ಅವಮಾನ ಸಹಿಸುವುದು ಹೇಗೆ? ಹೀಗಂತ ಯೋಚನೆ ಹುಟ್ಟಿದೆ ಅವಳಿಗೆ....ಆದ್ದರಿಂದಲೇ ಅವಳು ಹೀಗೆ ಊರಿಗೆ ಹೊರಟು ಹೋಗಬೇಕು ಅನ್ನುವ ಹಠ ಹಿಡಿದಿರುವುದು. ಬರುವ ತ್ರಯೋದಶಿ ದಿನ ಚೆನ್ನಾಗಿದೆ ಹೊರಡು ವುದಕ್ಕೆ....ಈ ಮಧ್ಯೆ ಬಾಕಿ ಉಳಿದಿರುವ ಕೆಲಸಗಳನ್ನೆಲ್ಲಾ ಪೂರೈಸಿ ಬಿಟ್ಟು ಲೆಕ್ಕ ಪತ್ರ ಎಲ್ಲಾ ಒಂದು ಸ್ತಿಮಿತಕ್ಕೆ ತಂದು ಬಿಟ್ಟು ಹೋಗಬೇಕು ಅಂತ ಇದ್ದಾಳೆ." ಎಂದನು.

ಮಧುಸೂದನನು "ನೋಡು, ನವೀನ, ನಿನ್ನ ಹೆಂಡತಿಗೆ ನೀನು ವಿಪರೀತ ಸಲಿಗೆ ಕೊಟ್ಟು ಬಿಟ್ಟಿದೀಯ....ಅವಳಿಗೆ ನೀನು ಖಡಾಖಂಡಿತವಾಗಿ ಹೇಳಿಬಿಡು....ಅವಳು ಹಾಗೆಲ್ಲಾ ಹೋಗುವು ದಕ್ಕೆ ಸಾಧ್ಯವಿಲ್ಲ ಅಂತ. ನೀನು ಗಂಡಸು. ಈ ಮನೆಯಲ್ಲಿ ನಿನ್ನ ಮಾತು ನಡೆಯುವುದಿಲ್ಲ. ಇದನ್ನ ನಾನು ನೋಡಿಕೊಂಡಿರುವುದಕ್ಕೂ ಸಾಧ್ಯವಿಲ್ಲ" ಎಂದನು.

ನವೀನನು ತಲೆಯನ್ನು ಸ್ವಲ್ಪ ಕೆರೆದುಕೊಂಡು "ನಾನೇನೋ ಹೇಳಿ ನೋಡುತ್ತೇನಣ್ಣಾ.... ಆದರೆ...." ಎಂದನು. "ಒಳ್ಳೇದು....ಹಾಗಾದರೆ ನನ್ನ ಹೆಸರಲ್ಲಿ ಹೇಳಿನೋಡು—ಈಗ ಅವಳು ಹೋಗುವುದಕ್ಕೆ ಸಾಧ್ಯವಿಲ್ಲ ಅಂತ. ಯಾವಾಗ ಸಮಯ ಬರುತ್ತೋ ಆಗ ಹೊರಡುವ ದಿನ ನಾನೇ ಗೊತ್ತುಮಾಡಿ ಹೇಳುತ್ತೇನೆ."

ನವೀನನು ಸ್ವಲ್ಪ ಹೆದರಿದ ಧ್ವನಿಯಲ್ಲಿ "ನೀನೇ ಹೇಳಿದೆಯಲ್ಲಣ್ಣಾ....ಈ ಕ್ಷಣದಲ್ಲೇ ಕಳುಹಿಸಿಬಿಡು ಅಂತ."

ಮಧುಸೂದನನು ರೇಗಿ ಗದರುತ್ತಾ "ನಾನು ಹೇಳಿದೆನೇನೋ....ಈ ಕ್ಷಣದಲ್ಲೇ ಕಳುಹಿಸಿ ಬಿಡಬೇಕು ಅಂತ....ಬಗಳುತಾನೆ...." ಎಂದನು.

ನವೀನನು ನಿದಾನವಾಗಿ ಹೊರಟುಹೋದನು. ಮಧುಸೂದನನು ಒಂದು ಗ್ಯಾಸ್ ದೀಪದ ಬತ್ತಿಯನ್ನು ಹಚ್ಚಿ, ಉದ್ದವಾದೊಂದು ಆರಾಮ ಕುರ್ಚಿಯಲ್ಲಿ ಒರಗಿಕೊಂಡು ಕೂತನು. ಮನೆಯ ಕಾವಲುಗಾರನು ರಾತ್ರಿ ಒಂದೊಂದು ಸಲ ಪ್ರತಿಯೊಂದು ಕೋಣೆಯ ಎದುರುಗಡೆಯೂ ತಿಳಾಯಿ ಸುತ್ತಿದ್ದನು. ಮಧುಸೂದನನಿಗೆ ಸ್ವಲ್ಪ ಮಂಪರ ಬಂದ ಹಾಗೆ ಆಯಿತು. ಆ ಸಮಯದಲ್ಲಿ ಹಠಾತ್ತಾಗಿ ಬೆಚ್ಚಿ ಎದ್ದು ನೋಡಿದರೆ ಕಾವಲುಗಾರನು ಕೋಣೆಯನ್ನು ಪ್ರವೇಶಿಸಿ ಲಾಂದ್ರವನ್ನು ಕೈಯಲ್ಲೆತ್ತಿ ಅವನ ಮುಖದ ಕಡೆ ಹಿಡಿದು ನೋಡುತ್ತಿದ್ದಾನೆ....ಮಹಾರಾಜಾ ಸಾಹೇಬರು ಮೂರ್ಛೆ ಹೋಗಿದ್ದಾರೋ, ಇಲ್ಲ ಸತ್ತು ಹೋಗಿದಾರೋ....ಎಂದು ಭಾವಿಸಿದ್ದಿರಬಹುದು.

ಮಧುಸೂದನನು ಲಜ್ಜಿತನಾಗಿ ದಡಬಡನೆ ಎದ್ದು ಹೊರಗಡೆಯ ಆಫೀಸು ರೂಮಿನಲ್ಲಿ ಕೂತನು.ಹೊಸದಾಗಿ ಮದುವೆಯಾದ ರಾಜಾಬಹದ್ದೂರರವರು ರಾತ್ರಿಯನ್ನು ಹೇಗೆ ಕಳೆಯುತ್ತಿರುವ ರೆನ್ನುವ ಶೋಕದೃಶ್ಯವು ಕಾವಲುಗಾರನ ದೃಷ್ಟಿಯಲ್ಲಿ ಎಷ್ಟು ಅಗೌರವಕರವಾದ ವಿಷಯ ಎಂಬುದು ಆಕ್ಷಣದಲ್ಲಿ ಅವನನ್ನು ಬಾಧಿಸಿತು. ಕೂಡಲೇ ಎದ್ದು ಸ್ವಲ್ಪ ಕೋಪದ ಧ್ವನಿಯಲ್ಲಿ ಕಾವಲು ಗಾರನನ್ನು ಕುರಿತು "ಬಾಗಿಲು ಮುಚ್ಚಿಕೊಂಡು ಹೋಗು." ಎಂದು ಕೂಗಿದನು....ಬಾಗಿಲು ಮುಚ್ಚದಿರುವುದು ಅವನದೇ ತಪ್ಪೆನ್ನುವ ಹಾಗೆ ಇತ್ತು ಅವನ ಧ್ವನಿ. ಹೊರಬಾಗಿಲ ಗಂಟೆಯಲ್ಲಿ ಎರಡು ಹೊಡೆಯಿತು.

ಮಧುಸೂದನನು ಆ ಕೋಣೆಯನ್ನು ಬಿಟ್ಟು ಹೊರಡುವ ಮುಂಚೆ ಒಂದುಸಲ ತನ್ನ ಮೇಜಿನ ಡ್ರಾಯರನ್ನು ತೆಗೆದನು. ಹಾಗೆ ಹೀಗೆ ನೋಡುತ್ತಾ ಕುಮುವಿನ ಹೆಸರಿನಲ್ಲಿ ಇದ್ದ ತಾರನ್ನು ಜೇಬಿ ನಲ್ಲಿಟ್ಟುಕೊಂಡು ಅಂತಃಪುರದ ಕಡೆ ಹೊರಟನು. ಮೂರನೆಯ ಮಹಡಿಯನ್ನು ಹತ್ತುವ ಮುಂಚೆ ಮೆಟ್ಟಿಲ ಬಳಿ ಸ್ವಲ್ಪ ಹೊತ್ತು ನಿಂತುಕೊಂಡನು.

ಮಧ್ಯರಾತ್ರಿಯಲ್ಲಿ ನಿದ್ದೆಯಿಂದೆದ್ದಿರುವವನಿಗೆ ತಕ್ಷಣ ಶಕ್ತಿಯೆಲ್ಲಾ ಬರುವುದಿಲ್ಲ. ಅದ ಕ್ಕಾಗಿಯೇ ಹಗಲ ವ್ಯವಹಾರಕ್ಕೂ ರಾತ್ರಿಯ ವ್ಯವಹಾರಕ್ಕೂ ಎಷ್ಟೋ ಭೇದವಿರುತ್ತದೆ.

ಈ ರಾತ್ರಿ ಎರಡು ಘಂಟೆಯ ಸಮಯದಲ್ಲಿ, ನಾಲ್ಕು ದಿಕ್ಕುಗಳಲ್ಲಿ ಜನಗಳ ದೃಷ್ಟಿಯೇ ಬೀಳ ದಿರುವಾಗ,ಇಡೀ ಪ್ರಪಂಚದಲ್ಲಿ ತನ್ನ ಮುಂದೆ ಹೊರತು ಬೇರೆಯಾರ ಮುಂದೆಯೂ ಹೊಣೆಗಾರನಾಗ ಬೇಕಾಗಿಲ್ಲ. ಅಂತಹ ಸಂದರ್ಭದಲ್ಲಿ ಕುಮುವಿನ ಮುಂದೆ ಹೋಗಿ ಸೋಲೊಪ್ಪಿಕೊಳ್ಳುವುದೂ ಅಸಾಧ್ಯವಲ್ಲ.

## ಮೂವತ್ತೆರಡನೆಯ ಅಧ್ಯಾಯ

ಮಹಡಿ ಮೆಟ್ಟಲುಗಳ ತಳದಿಂದ ಮಧುಸೂದನನು ಹಿಂದಿರುಗಿದನು. ಎದೆಯ ಮಧ್ ರಕ್ತದ ಒತ್ತಡ ಹೆಚ್ಚಾಯಿತು. ಯಾವುದೋ ಒಂದು ಕದ ಮುಚ್ಚಿದ ಕೋಣೆಯೊಳಗೆ ಸೀಮೆ ಯೆಣ್ಣೆಯ ದೀಪ ಉರಿಯುತ್ತಿದ್ದಿತು. ಅದನ್ನು ಕೈಯಲ್ಲಿ ಹಿಡಿದುಕೊಂಡು ಮೆಲ್ಲಮೆಲ್ಲಗೆ ದೀಪ ಗಳನ್ನು ಸರಿಮಾಡುವ ಕೋಣೆಯ ಹೊರಗೆ ಬಂದು ನಿಂತುಕೊಂಡನು. ಮೆಲ್ಲನೆ ಕದವನ್ನು ಅಲ್ಲಾಡಿಸಿ ನೋಡಿದರೆ ಒಳಗಡೆ ಅಗುಳಿ ಹಾಕಿದಂತಿರಲಿಲ್ಲ. ಕದ ತೆರೆದುಕೊಂಡಿತು....ಅದೆ ಚಾಪೆಯ ಮೇಲೆ ಮಲಗಿ ಮೈಮೇಲೆ ಒಂದು ದುಪ್ಪಟಿಯನ್ನು ಹೊದ್ದು ಕುಮು ಗಾಢ ನಿದ್ರೆಯಲ್ಲಿ

ುಲ್ಲಿ ಮುಳುಗಿದ್ದಾಳೆ. ಎಡಗೈಯನ್ನು ಎದೆಯ ಮೇಲೆ ಇಟ್ಟುಕೊಂಡಿದ್ದಾಳೆ. ಗೋಡೆಯ ಗೂಡಿ ಲ್ಲಿ ಲಾಂದ್ರವಿಟ್ಟು ಮಧುಸೂದನನು ಕುಮುವಿನ ಮುಖದ ಕಡೆ ಮುಖ ತಿರುಗಿಸಿಕೊಂಡು ಅವಳ ಡಪಕ್ಕದಲ್ಲಿ ಬಂದು ಕೂತ. ಈ ಮುಖದಲ್ಲಿ ಅವನ ಮನಸ್ಸನ್ನು ಯಾವುದೋ ಒಂದು ಅತ್ಯಂತ ಬಲ ಶಕ್ತಿಯಿಂದ ಎಳೆಯುತ್ತಿದ್ದುದು ಅದರಲ್ಲಿನ ಅನಿರ್ವಚನೀಯವಾದುದೊಂದು ಸಂಪೂ ರ್ಣತೆ. ಕುಮುವಿಗೆ ತನ್ನಲ್ಲಿಯೇ ಎಂದೂ ಆತ್ಮವಿರೋಧವುಂಟಾಗಿರಲಿಲ್ಲ. ಅಣ್ಣನ ಸಂಸಾರ ಲ್ಲಿ ಉಂಟಾದ ಅಭಾವದ ದುಃಖದಿಂದೇನೋ ಅವಳಿಗೆ ನೋವಾಗಿತ್ತು ನಿಜ. ಆದರೆ ಅದು ಹೊರ ್ಯವಹಾರದ ಅವಸ್ಥೆಯಿಂದ ಆದದ್ದು...ಅದರಿಂದ ಅವಳ ಪ್ರಕೃತಿಗೆ ಆಘಾತವೇನೂ ಆಗಲಿಲ್ಲ. ಯಾವ ಕುಟುಂಬದಲ್ಲಿ ಅವಳು ಹುಟ್ಟಿ ಬೆಳೆದಿದ್ದಳೋ ಆ ಕುಟುಂಬವು ಅವಳ ಸ್ವಭಾವಕ್ಕೆ ಎಲ್ಲಾ ಧಗಳಲ್ಲಿಯೂ ಅನುಕೂಲವಾಗಿತ್ತು. ಆದುದರಿಂದಲೇ ಅವಳ ಮುಖಭಾವದಲ್ಲಿ ಮುಚ್ಚುಮರೆ ಇಲ್ಲದೆ ಮುಗ್ಧತೆಯಿತ್ತು.

ಅವಳ ನಡೆ ನುಡಿಗಳಲ್ಲಿ, ಅವಳ ವ್ಯವಹಾರದಲ್ಲಿ, ಅಂತಹುದೊಂದು ಕುಂದಿಲ್ಲದ ಮರ್ಯಾದೆ ಇತ್ತು. ಜೀವನದ ಕರ್ಮ ಸಾಧನೆಗಾಗಿ ತನ್ನ ಶಕ್ತಿಯೆಲ್ಲಾ ವ್ಯಯಮಾಡಿ ಹೋರಾಡುತ್ತ ಮತ್ತು ್ರತಿದಿನವೂ ಅಂಕುರಿಸುವ ಸಂಶಯವನ್ನು ಕುರಿತು ನಿರಂತರವೂ ಮನಸ್ಸನ್ನ ಎಚ್ಚರದಲ್ಲಿಟ್ಟುಕೊಂಡಿ ುವ ಮಧುಸೂದನನ ಮುಂದೆ ಕುಮುವಿನ ದೇಹಾದ್ಯಂತವೂ ಪರಿಪೂರ್ಣವಾಗಿ ತೋರುತ್ತಿದ್ದ ಅಪೂರ್ವ ಗಾಂಭೀರ್ಯವು ಅತ್ಯಂತ ವಿಸ್ಮಯಕರವಾಗಿತ್ತು. ಅವನು ಸ್ವಲ್ಪವೂ ಸಹಜನಾಗಿರ ಲ್ಲ. ಆದರೆ ಈ ಕುಮು ಸಾಕ್ಷಾತ್ ದೇವತೆಯಂತೆ ಸಹಜವಾಗಿ ಕಂಡಳು. ಕುಮುವಿನ ಈ ತಿಶಯ ಗುಣವೇ ಅವನನ್ನು ಅವಳ ಕಡೆ ಅಷ್ಟು ಬಲವಾಗಿ ಆಕರ್ಷಿಸುತ್ತಿದ್ದುದು.

ಮದುವೆಯಾದ ಮೇಲೆ ವಧುವು ಗಂಡನ ಮನೆಗೆ ಮೊದಲಸಲ ಬಂದೊಡನೆ ಯಾವ ಗಲಭೆ ಡೆಯಿತೋ ಅದರ ಸಂಪೂರ್ಣ ಚಿತ್ರವನ್ನು ಮತ್ತೆ ಮನಸ್ಸಿನಲ್ಲಿ ಕಲ್ಪಿಸಿಕೊಂಡಾಗ ಅವನಿಗೆ ಂಡು ಬಂದದ್ದೇನು? ತನ್ನ ಸ್ವಂತ ದಿಕ್ಕಿನಿಂದ ವ್ಯರ್ಥ ಅಧಿಕಾರ, ಒಡೆತನ ತೋರಿರುವುದೂ, ೕರೊಂದು ಕಡೆ ವಧುವಿನ ಮನಸ್ಸಿನ ಮಧ್ಯೆ ತಲೆ ಬಾಗದ ಆತ್ಮಗೌರವವು ಸಹಜವಾಗಿ ಪ್ರಕಾಶ ಾಗಿರುವುದೂ ಚೆನ್ನಾಗಿ ಮನದಟ್ಟಾಯಿತು. ಸಾಮಾನ್ಯ ಹೆಂಗಸರ ಹಾಗೆ ಅವಳ ವ್ಯವಹಾರ ಲ್ಲಿ ಎಲ್ಲಿಯೂ ಲೇಶಮಾತ್ರವೂ, ಅವಲಕ್ಷಣವಾದ ಮಾತಾಳಿತನ ಕಂಡುಬರಲಿಲ್ಲ. ಅವಳು ಹೀಗಿ ಲ್ಲದೆ ಹೋಗಿದ್ದಿದ್ದರೆ ಅವಳನ್ನು ಅವಮಾನಗೊಳಿಸುವ ಯಾವ ಅಧಿಕಾರ ಅವನಿಗಿದೆಯೋ ಆ ರ್ಪವನ್ನು ಚಲಾಯಿಸಲು ಮಧುಸೂದನನು ಸ್ವಲ್ಪವೂ ಹಿಂಜರಿಯುತ್ತಿರಲಿಲ್ಲ. ಆದರೆ ಇದೇಕೆ ೕಗಾಯಿತೋ ಅವನಿಗೇ ಅರ್ಥವಾಗಲಿಲ್ಲ. ಯಾವುದೋ ಒಂದು ಅದ್ಭುತ ಕಾರಣಕ್ಕಾಗಿ ುಮುವನ್ನು ಅವನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಆಗಲೇ ಇಲ್ಲ.

ಕುಮುವನ್ನು ಎಚ್ಚರಗೊಳಿಸದೆಯೇ ಇಡೀ ರಾತ್ರಿ, ಅವಳ ಪಕ್ಕದಲ್ಲಿ ಹೀಗೆಯೇ ಜಾಗರಣೆ ಾಡುತ್ತ ಕೂತಿರಬೇಕೆಂದು ಮಧುಸೂದನನಿಗೆ ಅನ್ನಿಸಿತು. ಸ್ವಲ್ಪಹೊತ್ತು ಹಾಗೆಯೇ ಕೂತಿದ್ದು ಂತರ ಇನ್ನು ಸುಮ್ಮನಿರಲಾರದೆ ನಿದಾನವಾಗಿ ಕುಮುವಿನ ಎದೆಯ ಮೇಲಿಂದ ಅವಳ ಕೈಯನ್ನು ಳೆದು ಅದನ್ನು ತನ್ನ ಕೈಯಲ್ಲೆತ್ತಿ ಹಿಡಿದುಕೊಂಡ. ಕುಮು ನಿದ್ರೆಯ ಭರದಲ್ಲಿಯೇ ಚಡಪಡಿ ುತ್ತಾ ಕೈಯನ್ನೆಳೆದುಕೊಂಡು ಮಧುಸೂದನನ ಎದುರು ದಿಕ್ಕಿಗೆ ಹೊರಳಿ ಮಲಗಿದಳು.

ಮಧುಸೂದನನು ಇನ್ನು ಸುಮ್ಮನಿರಲಾಗದೆ ಕುಮುವಿನ ಕಿವಿಯಬಳಿ ಮುಖವಿಟ್ಟು "ಕುಮು

ದಿನಿ, ನಿನ್ನ ಅಣ್ಣನಿಂದ ಟೆಲಿಗ್ರಾಂ ಬಂದಿದೆ" ಎಂದ.

ಹಾಗೆಯೇ ನಿದ್ರೆಯಿಂದೆಚ್ಚತ್ತು ಕುಮು ಬೇಗ ಬೇಗ ಎದ್ದು ಕೂತಳು. ಆಶ್ಚರ್ಯಚಕಿತವಾದ ಕಣ್ಣುಗಳಿಂದ ಮಧುಸೂದನನ ಮುಖದ ಕಡೆ ಅವಾಕ್ಕಾಗಿ ನೋಡುತ್ತಾ ಕೂತಳು. ಮಧುಸೂದನನು ಟೆಲಿಗ್ರಾಮನ್ನು ಎದುರಿಗೆ ಹಿಡಿದು "ನಿಮ್ಮಣ್ಣನ ಊರಿಂದ ಬಂದಿದೆ" ಎಂದು ಹೇಳಿ ಕೋಣೆಯ ಗೂಡಿನ ಮೇಲಿಂದ ಲಾಂದ್ರವನ್ನು ಹತ್ತಿರ ತೆಗೆದುಕೊಂಡು ಬಂದ.

ಕುಮು ಟೆಲಿಗ್ರಾಮನ್ನು ಒಡೆದು ನೋಡಿದಳು, ಅದರಲ್ಲಿ ಇಂಗ್ಲೀಷಲ್ಲಿ ಬರೆದಿತ್ತು. "ನನ್ನ ವಿಷಯವಾಗಿ ಚಿಂತೆ ಮಾಡಬೇಡ. ಕ್ರಮೇಣ ವಾಸಿಯಾಗುತ್ತಿದೆ. ನಿನಗೆ ನನ್ನ ಆಶೀರ್ವಾದಗಳು."

ಕಠಿಣವಾದ ಉದ್ವೇಗದ ಹಿಂಸೆಯ ಮಧ್ಯೆ ಈ ಹಿತವಾದ ಮಾತು ಬಿದ್ದು ಒಂದು ಮುಹೂರ್ತದಲ್ಲಿ ಕುಮುವಿನ ಕಣ್ಣುಗಳು ನೀರಿನಿಂದ ತುಂಬಿದವು...ಕಣ್ಣುಗಳನ್ನು ಒರೆಸಿಕೊಂಡು ಟೆಲಿಗ್ರಾಮನ್ನು ಜಾಗರೂಕತೆಯಿಂದ ಸೆರಗಿನಲ್ಲಿ ಕಟ್ಟಿಕೊಂಡಳು. ಅದರಿಂದಲೇ ಮಧುಸೂದನನ ಹೃದಯದಲ್ಲಿ ಕಳಕಳಿಯಾಯಿತು. ಅದಾದ ಮೇಲೆ ಏನು ಹೇಳಬೇಕೆಂದು ತೋಚಲಿಲ್ಲ. ಆಗ ಕುಮುವೇ "ನಮ್ಮಣ್ಣನಿಂದ ಕಾಗದ ಬರಲಿಲ್ಲವೇ ?" ಎಂದು ಕೇಳಿದಳು.

ಇಷ್ಟಾದ ಮೇಲೆ ಕಾಗದ ಬಂದಿದೆಯೆಂದು ಮಧುಸೂದನನು ಹೇಳಲಾರದೆ ಹೋದ. ಚಟ್ಟನೆ "ಇಲ್ಲ....ಕಾಗದ ಬರಲಿಲ್ಲ." ಎಂದು ಬಿಟ್ಟ.

ಈ ಕೋಣೆಯ ಮಧ್ಯೆ ನಡುರಾತ್ರಿಯಲ್ಲಿ ಇಬ್ಬರೂ ಹೀಗೆ ಕೂತಿದ್ದುದು ಕುಮುವಿಗೆ ಬಹಳ ನಾಚುಗೆಯಾಯಿತು. ಅವಳು ಏಳಬೇಕೆಂದು ಹವಣಿಸುತ್ತಿರುವಷ್ಟರಲ್ಲಿ ಮಧುಸೂದನನು ಹಠಾತ್ತಾಗಿ "ಕುಮುದಿನಿ, ನನ್ನ ಮೇಲೆ ಕೋಪಮಾಡಿಕೊಳ್ಳಬೇಡ" ಎಂದ.

ಇದಂತೂ ಒಡೆತನದ ಆಜ್ಞೆಯಲ್ಲ, ಇದು ಪ್ರಣಯಿಯ ಬೇಡಿಕೆ....ಅಲ್ಲದೆ ಅದರ ಮಧ್ಯೆ ಅಪರಾಧಿಯ ಆತ್ಮಗ್ಲಾನಿಯೂ ಇದ್ದಂತಿದೆ. ಕುಮು ವಿಸ್ಮಿತಳಾಗಿಹೋದಳು. ಇದು ನಿಶ್ಚಯವಾಗಿ ದೈವದ ಲೀಲೆಯೇ ಎಂದು ಮನಸ್ಸಿನಲ್ಲಿ ಅನ್ನಿಸಿತು. ಯಾಕೆಂದರೆ ಅವಳು ಹಗಲು ಹೊತ್ತು ಬಾರಿಬಾರಿಗೂ ತನ್ನಲ್ಲಿ ತಾನೇ "ನಾನು ಎಂದಿಗೂ ಕೋಪಮಾಡಿಕೊಳ್ಳಕೂಡದು" ಎಂದು ಹೇಳಿಕೊಂಡಿದ್ದಾಳೆ. ಅದೇ ಮಾತನ್ನು ಇಂದು ಈ ಅರ್ಧರಾತ್ರಿಯಲ್ಲಿ ಇಷ್ಟು ಅನಿರೀಕ್ಷಿತವಾಗಿ ಮಧುಸೂದನನ ಬಾಯಿಂದ ಹೇಳಿಸಿದವರು ಯಾರು ?

ಮಧುಸೂದನನು ಪುನಃ ಅವಳನ್ನು "ನಿನಗಿನ್ನೂ ನನ್ನ ಮೇಲೆ ಕೋಪವಿದೆಯೇ ?" ಎಂದು ಕೇಳಿದ.

ಕುಮು "ಇಲ್ಲ....ನನಗೆ ಕೋಪವಿಲ್ಲ. ಸ್ವಲ್ಪವೂ ಇಲ್ಲ" ಎಂದಳು. ಮಧುಸೂದನನು ಅವಳ ಮುಖದ ಕಡೆ ಬಿರುಗಣ್ಣಿಂದ ನೋಡುತ್ತಾ ಆಶ್ಚರ್ಯಪಟ್ಟುಬಿಟ್ಟ...'ಅವಳು ಯಾರನ್ನೋ ಉದ್ದೇಶಿಸಿ ಹೇಳುತ್ತಿದ್ದಾಳೇನೋ? ಅವಳು ಮನಸ್ಸಿನಲ್ಲಿಯೇ ಮಾತಾಡಿಕೊಳ್ಳುತ್ತಿದ್ದಾಳೇನೋ' ಎಂದೆನ್ನಿಸಿತು ಮಧುಸೂದನನಿಗೆ.

ಮತ್ತೆ ಅವನು ಧೈರ್ಯಮಾಡಿ "ಹಾಗಾದರೆ ಈ ಕೋಣೆ ಬಿಟ್ಟು ನಿನ್ನ ಸ್ವಂತ ಮಲಗುವ ಮನೆಗೆ ಬಾ, ಮತ್ತೆ...." ಎಂದ.

ಕುಮು ಇಂದು ರಾತ್ರಿ ಸಿದ್ಧವಾಗಿರಲಿಲ್ಲ. ನಿದ್ರೆಯಿಂದೆದ್ದು ಹೀಗೆ ಹಠಾತ್ತಾಗಿ ಮನಸ್ಸನ್ನು ಕಟ್ಟಡಲು ಕಷ್ಟವೇ. ನಾಳೆ ಬೆಳಿಗ್ಗೆ ಸ್ನಾನಮಾಡಿ ದೇವರ ಬಳಿ ತನ್ನ ಪ್ರತಿದಿನದ ಪ್ರಾರ್ಥನಾ

ಮಂತ್ರವನ್ನು ಓದಿದ ನಂತರ ಅಂದಿನಿಂದ ಸಂಸಾರದಲ್ಲಿ ತನ್ನ ವ್ಯವಹಾರವನ್ನು ಆರಂಭ ಮಾಡಲು ಸಂಕಲ್ಪ ಮಾಡಿದ್ದಳು. "ದೇವರು ನನಗೆ ಸಮಯ ಕೊಡಲಿಲ್ಲ. ಇಂದು ಈ ಗಭೀರ ರಾತ್ರಿಯೇ ಕರೆ ಕಳುಹಿಸಿದ್ದಾನೆ. ಅವನಿಗೆ ಹೇಗೆ ತಾನೇ ಇಲ್ಲವೆಂದು ಹೇಳಲಿ?" ಮನಸ್ಸಿನೊಳಗಡೆ ಕುತ್ತಿದ್ದ ಅಗಾಧವಾದ ಅನಿಚ್ಛೆಯನ್ನು ಅಪರಾಧವೆಂದು ಬಗೆದು ಕುಮು ಭಯಪಟ್ಟಳು. ಈ ಅನಿಚ್ಛೆಯೇ ತನ್ನನ್ನು ಕಟ್ಟಿ ಎಳೆದಿಟ್ಟಿರುವುದೆಂದು ತಿಳಿದು ಕುಮು ಖಂಡಿತಮಾಡಿಕೊಂಡೆದ್ದು ನಿಂತು "ನಡಿಯಿರಿ" ಎಂದಳು.

ಮೇಲೆ ಹತ್ತಿ ಬಂದು ತನ್ನ ಮಲಗುವ ಮನೆಯ ಎದುರಿಗೆ ಸ್ವಲ್ಪ ಬೆಚ್ಚಿನಿಂತು "ನಾನು ಬೇಗಲೇ ಬಂದೆ....ತಡ ಮಾಡುವುದಿಲ್ಲ" ಎಂದಳು.

ಹೀಗೆ ಹೇಳಿ ಬಿಸಿಲು ಮಾಳಿಗೆಯ ಒಂದು ಮೂಲೆಯಲ್ಲಿ ಹೋಗಿ ಕೂತಳು. ಕೃಷ್ಣಪಕ್ಷದ ಕುಣುಕು ಚಂದ್ರನು ಆಗ ಮಧ್ಯದಾಕಾಶದಲ್ಲಿದ್ದನು. ತನ್ನ ಮನಸ್ಸಿನಲ್ಲಿಯೇ ಕುಮು ಬಾರಿ ಬಾರಿಗೂ "ಪ್ರಭೂ, ನೀನು ನನ್ನನ್ನು ಕರೆದಿರುವೆ....ನೀನೇ ಕರೆದಿರುವೆ. ನನ್ನನ್ನು ಮರೆತಿಲ್ಲವೆಂದೇ ತಿಳಿಯುತ್ತಿರುವೆ. ನನ್ನನ್ನು ಮುಳ್ಳಿನ ಹಾದಿಯ ಮೇಲೆಯೇ ಕರೆದುಕೊಂಡು ಹೋಗುವೆಯಾ? ಅವರು ನೀನೇ....ಅವರು ಬೇರೆ ಯಾರೂ ಅಲ್ಲ" ಎಂದು ಹೇಳತೊಡಗಿದಳು. ಬೇರೆಲ್ಲವನ್ನೂ ಕುಮುವು ಲುಪ್ತಮಾಡಿ ಬಿಡಲು ಆಶಿಸಿದಳು. ಉಳಿದುದೆಲ್ಲಾ ಮಾಯೆ, ಉಳಿದುದೆಲ್ಲಾ ಮುಳ್ಳಾ ದರೂ, ತನ್ನ ಹಾದಿಯಲ್ಲಿನ ಮುಳ್ಳೇ....ಮತ್ತೇನಲ್ಲ....ಆದರೇನು..ಹಾದಿ ಪಾರುಮಾಡುವ ಕೈ ಗೋಲು ಇದೆ, ಭಯವೇನು. ಆ ಕೈಗೋಲು ಬೇರೆ ಯಾವುದೂ ಅಲ್ಲ. ಅಣ್ಣನ ಆಶೀರ್ವಾದ. ಆ ಆಶೀರ್ವಾದವನ್ನೇ ತಾನು ತನ್ನ ಸೆರಗಿನಂಚಿನಲ್ಲಿ ಕಟ್ಟಿಕೊಂಡಿದಾಳೆ. ಆ ಸೆರಗಿನಲ್ಲಿ ಕಟ್ಟಿ ಕೊಂಡಿದ್ದ ಆಶೀರ್ವಾದವನ್ನು ಬಾರಿಬಾರಿಗೂ ಹಣೆಯಮೇಲೆ ಒತ್ತಿಕೊಂಡಳು....ಆಮೇಲೆ ತಲೆ ಯನ್ನು ನೆಲದ ಮೇಲೆ ಇಟ್ಟು ನಮಸ್ಕಾರ ಮಾಡಿದಳು. ಆಗ ಹಿಂದಿನಿಂದ ಮಧುಸೂದನನ ದನಿ ಯನ್ನು ಕೇಳಿ ಅಕಸ್ಮಾತ್ತಾಗಿ ಬೆಚ್ಚಿಬಿದ್ದಳು. "ಶೀತವಾಗುತ್ತೆ....ಕುಮುದಿನೀ....ಒಳಗೆ ಬಾ" ಮನಸ್ಸಿನೊಳಗೆ ಅವಳು ಕೇಳಲು ಬಯಸುತ್ತಿದ್ದ ದನಿಯೊಂದಿಗೆ ಈ ಕೊರಳಿನ ಕಠಿಣ ಸ್ವರ ಶ್ರುತಿ ಗೂಡುವುದಲ್ಲ....ಇದೇ ಅವಳ ಪರೀಕ್ಷೆ. ತನ್ನ ದೇವರು ತನ್ನನ್ನು ಕೊಳಲಿನಿಂಚರದಿಂದ ಕೂಗು ವುದಿಲ್ಲ. ಇಂದವನು ವೇಷಮರೆಸಿ ಕೊಂಡಿರುತ್ತಾನೆ.

## ಮೂವತ್ತಮೂರನೆಯ ಅಧ್ಯಾಯ

ಸಂಸಾರದ ವ್ಯವಹಾರದಲ್ಲಿ ಹೆಜ್ಜೆಯಿಟ್ಟ ಮೇಲೆ ದೇಹ ಸಂಬಂಧದ ವಿಷಯದಲ್ಲಿ ಎಷ್ಟೋ ಸಲ ಕುಮುವಿನ ಮನಸ್ಸು ಧಿಕ್ಕಾರ, ಅವಮಾನ, ಹೇಸುಗೆಗಳಿಂದ ತುಂಬಿದ್ದಾಗ, ತನ್ನ "ಸಂಸಾರ" ಕ್ರೂರ ದೇಹ ಬಲದ ಅಧಿಕಾರದಿಂದ ತನ್ನನ್ನು ಅವಮಾನಿಸಿದಾಗ ಕುಮುದಿನಿಯು ತನ್ನ ವ್ಯಕ್ತಿತ್ವ ಬಲದಿಂದ ನಾಲ್ಕು ದಿಕ್ಕುಗಳಲ್ಲೂ ಒಂದು ಬಗೆಯ ಕವಚ, ಒಂದು ಬಗೆಯ ಆವರಣವನ್ನು ಸೃಜಿಸಿಕೊಂಡಿದ್ದಳು. ಈ ಕವಚವು ಇಂತಹ ಸಂದರ್ಭಗಳಲ್ಲಿ ಅವಳನ್ನು ಹಿತಾಹಿತಗಳ ಸತ್ಯತೆಯಿಂದ ದೂರಮಾಡಿತ್ತು....ಅರ್ಥಾತ್ ತನ್ನ ದೇಹದ ವಿಷಯದಲ್ಲಿ ಅವಳ ಚೈತನ್ಯವನ್ನೇ ಮರೆಮಾಡಿತ್ತು. ಇದು ಕ್ಲೋರೋಫಾರಮ್ಮಿನ ವಿಧಾನ. ಆದರೆ ಇದು ಎರಡು-ಮೂರುಘಂಟೆ

ಗಳ ವ್ಯವಸ್ಥೆಯಲ್ಲ. ಇಡೀ ಹಗಲು ರಾತ್ರಿಗಳು ವೇದನೆ ಹೇಸುಗೆಗಳ ಅಂಕುರವನ್ನೇ ಅಡಗಿಸಿಡ ಬೇಕಾಗುತ್ತದೆ. ಇಂತಹ ಅವಸ್ಥೆಯಲ್ಲಿ ಹೆಂಗಸರಿಗೆ ಹೇಗಾದರೂ ಗುರುವೊಬ್ಬ ಸಿಕ್ಕಿದರೆ ಆಗ ಅವರ ಆತ್ಮ ವಿಸ್ಮೃತಿಗೆ ಬೇಕಾದ ಔಷಧಿ ಸಿಗುತ್ತದೆ....ಆದರೆ ಕುಮುವಿಗೆ ಇನ್ನೂ ಅಂತಹುದು ಸಿಕ್ಕಲಿಲ್ಲ....

ಅದಕ್ಕಾಗಿಯೇ ತನ್ನ ಮನಸ್ಸಿನಲ್ಲಿ ಪೂಜಾ ಮಂತ್ರವನ್ನು ಸರ್ವದಾ ಪಠಿಸುತ್ತಿರಲು ತೊಡಗಿ ದಳು. ಅವಳು ಹಗಲು ರಾತ್ರಿ ಪಠಿಸುತ್ತಿದ್ದ ಬೀಜ ಮಂತ್ರ ಇದೇ....

ತಸ್ಮಾತ್ ಪ್ರಣಮ್ಯ ಪ್ರಣಿಧಾಯ ಕಾಯಂ

ಪ್ರಸಾದಯೇ ತ್ವಾಮ್ ಅಹಮೀಶಮೀಢ್ಯಂ

ಪಿತೇವ ಪುತ್ರಸ್ಯ ಸಖೇವ ಸಖ್ಯುಃ ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್.

"ಹೇ....ನನ್ನ ಪೂಜ್ಯನೇ, ನಿನ್ನ ಪಾದಗಳಲ್ಲಿ ನನ್ನ ಸಮಸ್ತ ಶರೀರವನ್ನೂ ಇರಿಸಿ ನಾನು ಬೇಡುವ ವರವಿದೊಂದೇ....ತಂದೆಯು ಹೇಗೆ ಮಗನನ್ನು, ಮಿತ್ರನು ಹೇಗೆ ಮಿತ್ರನನ್ನು, ಪ್ರಿಯನು ಹೇಗೆ ಪ್ರಿಯತಮೆಯನ್ನು ಸಹಿಸುವನೋ, ಹೇ ದೇವ, ನೀನೂ ಹಾಗೆಯೇ ನನ್ನನ್ನು ಸಹಿಸು. ನೀನು ನಿನ್ನ ಪ್ರೇಮದಿಂದ ನನ್ನನ್ನು ಸಹಿಸಲು ಶಕ್ತನಾದಲ್ಲಿ ನಾನೂ ನನ್ನ ಪ್ರೀತಿಯಿಂದ ಎಲ್ಲ ವನ್ನೂ ಕ್ಷಮಿಸಲು ಶಕ್ತಳಾಗುವೆನು."

ಕುಮು ಕಣ್ಣು ಮುಚ್ಚಿಕೊಂಡು ಮನಸ್ಸಿನಲ್ಲಿಯೇ ದೇವರನ್ನು ಕೂಗುತ್ತಾ "ನೀನೇ ಹೇಳಿ ದೀಯಲ್ಲಾ, ಯಾರು ನನ್ನನ್ನು ಎಲ್ಲೆಡೆಗಳಲ್ಲೂ ಕಾಣುತ್ತಾನೋ, ನನ್ನ ಮಧ್ಯದಲ್ಲಿ ಎಲ್ಲವನ್ನೂ ಕಾಣುತ್ತಾನೋ ಅವನು ನನ್ನನ್ನು ತ್ಯಾಗ ಮಾಡಲಾರ, ನಾನೂ ಅವನನ್ನು ತ್ಯಾಗ ಮಾಡಲಾರೆ... ಎಂದು....ಇದೇ ಸಾಧನೆಯಲ್ಲಿ ನನಗೆ ಸ್ವಲ್ಪವೂ ಭಂಗವುಂಟಾಗದಿರುವಂತೆ ಮಾಡು."

ಇಂದು ಬೆಳಿಗ್ಗೆ ಸ್ನಾನಮಾಡಿ ಚಂದನವನ್ನು ಕಲಕಿದ ನೀರಿನಿಂದ ತನ್ನ ಮೈಯನ್ನು ಬಹಳ ಹೊತ್ತು ಅಭಿಷೇಕ ಮಾಡಿಕೊಂಡಳು. ದೇಹವನ್ನು ನಿರ್ಮಲವಾಗಿ, ಸುಗಂಧಿತವಾಗಿ ಮಾಡಿ ಕೊಂಡು ಅವಳು ತನ್ನನ್ನು ದೇವರಿಗೆ ಸಮರ್ಪಣೆಮಾಡಿಕೊಂಡಳು. ಮನಸ್ಸಿನಲ್ಲಿಯೇ ಏಕಾಗ್ರತೆ ಯೊಡನೆ ಧ್ಯಾನಮಾಡಲು ತೊಡಗಿದಳು. 'ನಿಮಿಷ ನಿಮಿಷಕ್ಕೂ ತನ್ನ ಕೈ ಆತನ ಕೈಯಲ್ಲಿದೆ. ತನ್ನ ಸಮಸ್ತ ಶರೀರವೂ ಆತನ ಸರ್ವವ್ಯಾಪಿಯಾದ ಸ್ಪರ್ಶದಿಂದ ವಿರಾಮವಿಲ್ಲದೆ ವಿರಾಜಿಸುತ್ತಿದೆ. ಸತ್ಯವಾಗಿ ಈ ದೇಹದ ಸಂಪೂರ್ಣ ರೂಪವನ್ನು ಆತನೇ ಪಡೆದಿದ್ದಾನೆ, ಆತನು ಪಡೆಯದ ಶರೀ ರದ ಭಾಗವೆಲ್ಲಾ ಮಿಥ್ಯೆ, ಅದು ಮಾಯೆ,....ಅದು ಮಣ್ಣು. ನೋಡುತ್ತ ನೋಡುತ್ತ ಅದು ಮಣ್ಣಿನಲ್ಲಿ ಸೇರಿ ಹೋಗುತ್ತದೆ. ಎಷ್ಟು ಹೊತ್ತು ಆತನ ಸ್ಪರ್ಶ ಅನುಭವವಾಗುವುದೋ ಅಷ್ಟು ಹೊತ್ತು ಈ ದೇಹ ಅಪವಿತ್ರವಾಗಲಾರದು....ಇದೇ ಮಾತುಗಳನ್ನು ಮನಸ್ಸಿನಲ್ಲಿ ಆಡಿಕೊಳ್ಳುತ್ತಾ ಆನಂದದಿಂದ ಅವಳ ಕಣ್ಣು ರೆಪ್ಪೆಗಳು ಒದ್ದೆಯಾದುವು. ಅವಳ ದೇಹವು ಮಾಂಸದ ಸ್ಥೂಲ ಬಂಧನದಿಂದ ಮುಕ್ತವಾದಂತೆ ಭಾವವಾಯಿತು. ಪುಣ್ಯ ಸಮ್ಮಿಳನದ ನಿತ್ಯ ಕ್ಷೇತ್ರವೇನೋ ಎಂಬಂತೆ ತನ್ನ ದೇಹದ ಮೇಲೆಯೇ ಅವಳಿಗೆ ಭಕ್ತಿಹುಟ್ಟಿತು. ಬಕುಳ ಪುಷ್ಪದ ಮಾಲೆಯೇ ನಾದರೂ ಕೈಗೆ ಸಿಕ್ಕಿದ್ದಿದ್ದರೆ ಅವಳು ಕೊರಳಲ್ಲಿ ಹಾಕಿಕೊಳ್ಳುತ್ತಿದ್ದಳು. ಹೆರಳಲ್ಲಿ ಮುಡಿಯು ತ್ತಿದ್ದಳು. ಸ್ನಾನಮಾಡಿ ಅವಳು ದೊಡ್ಡ ಕೆಂಪಂಚಿನ ಶುಭ್ರವಾದೊಂದು ಸೀರೆಯನ್ನು ಉಟ್ಟಳು— ಬಿಸಿಲು ಮಹಡಿಯ ಮೇಲೆ ಕೂತಾಗ ಸೂರ್ಯನ ಬೆಳಕಿನ ಮೂಲಕ ಆಕಾಶದ ಪೂರ್ಣವಾದ

ಪವಿತ್ರ ಸ್ಪರ್ಶವೊಂದು ಅವಳ ದೇಹವನ್ನು ಅಭಿನಂದಿಸುತ್ತಿರುವಂತೆ ತೋರಿತು.

ಮೋತಿಯಮ್ಮನ ಬಳಿ ಬಂದು ಕುಮು "ನನಗೂ ಕೂಡ ನಿನ್ನ ಕೆಲಸದಲ್ಲಿ ಸ್ವಲ್ಪ ಕೊಡು" ಎಂದಳು.

ಮೋತಿಯಮ್ಮನು ನಗುತ್ತಾ "ಬಾ, ಹಾಗಾದರೆ ಕಾಯಿಪಲ್ಯ ಹೆಚ್ಚೋಣ" ಎಂದಳು.

ದೊಡ್ಡ ದೊಡ್ಡ ಕಲ್ಲು ಮರಗೆಗಳು, ವಿಸ್ತಾರವಾದ ಹಿತ್ತಾಳೆಯ ತಟ್ಟೆಗಳು....ಬುಟ್ಟಿಗಳಲ್ಲಿ ಕಾಯಿಸೊಪ್ಪು....ಹತ್ತು ಹನ್ನೆರಡು ಈಳಿಗೆ ಮಣೆಗಳು - ಇವುಗಳ ಮಧ್ಯೆ ಆತ್ಮೀಯರು, ಆಶ್ರಿತರು ಎಲ್ಲಾ ಸೇರಿ ಹರಟೆ ಹೊಡೆಯುತ್ತಾ ಚುರುಕಾಗಿ ಕೈಯಾಡಿಸುತ್ತಾ ಕಾಯಿ ಪಲ್ಯಗಳನ್ನು ತುಂಡು ಮಾಡಿ ರಾಶಿ ಹಾಕುತ್ತಿದ್ದರು. ಅವರ ಮಧ್ಯದಲ್ಲಿಯೇ ಕುಮು ಸ್ವಲ್ಪ ಸ್ಥಳಮಾಡಿ ಕೂತು ಕೊಂಡಳು. ಎದುರುಗಡೆಯ ಕಟಕಟೆಯ ಕಂಡಿಗಳಿಂದ ಪಕ್ಕದ ಮನೆಗೆ ಸೇರಿದ ಮುದಿ ಹುಣಿಸೇಮರವೊಂದು ತನ್ನ ಚಿರಚಂಚಲ ಎಲೆಗಳಿಂದ ಸೂರ್ಯನ ಬೆಳಕನ್ನು ಚೂರು ಚೂರಾಗಿ ಕತ್ತರಿಸಿ ಕತ್ತರಿಸಿ ಸುತ್ತಲೂ ಚೆಲ್ಲುತ್ತಿದ್ದುದು ಕಾಣಿಸುತ್ತಿತ್ತು.

ಮೋತಿಯಮ್ಮನು ಮಧ್ಯೆ ಮಧ್ಯೆ ಕುಮುವಿನ ಮುಖದ ಕಡೆ ನೋಡುತ್ತಿದ್ದಳು. ನೋಡಿ ಅವಳಿಗೆ ಹೀಗೆ ಅನ್ನಿಸುತ್ತಿತ್ತು: "ಇವಳೇನು ಕೆಲಸ ಮಾಡುತ್ತಿದ್ದಾಳೆಯೇ, ಇಲ್ಲವೇ, ತನ್ನ ಬೆರಳುಗಳ ಗತಿಯನ್ನು ಆಶ್ರಯಿಸಿ ಅವಳ ಚಿತ್ತ ಯಾವುದೋ ಒಂದು ತೀರ್ಥದ ಕಡೆ ಹೋಗುತ್ತಿದೆಯೋ? ಅವಳನ್ನು ನೋಡಿದರೆ : ಆಕಾಶದಲ್ಲಿ ಎತ್ತಿ ಕಟ್ಟಿದ ನೌಕೆಯೊಂದರ ಪಟಕ್ಕೆ ಗಾಳಿ ಬಂದು ಹೊಡೆಯುತ್ತಿದೆ, ನೌಕೆ ಆ ಸ್ಪರ್ಶದಲ್ಲಿಯೇ ಲೀನವಾಗಿದೆ, ಮತ್ತು ಅದರ ಎರಡು ಕಡೆಗಳಲ್ಲೂ ನೀರು ಉಕ್ಕಿ ಉಕ್ಕಿ ಒಳಗೆ ಹರಿಯುತ್ತಿರುವುದು ಅದರ ಲಕ್ಷ್ಯದಲ್ಲಿಯೇ ಬಾರದು, ಕುಮು ಹಾಗೆ ಮಗ್ನವಾಗಿದಾಳೆ - ಅವಳ ಕನಸಾವುದೋ ಅದರಲ್ಲಿ." ಮನೆಯಲ್ಲಿನ ಇತರ ಹೆಂಗಸರು ಅವಳೊಡನೆ ಕೂತು ಕೆಲಸ ಮಾಡುತ್ತಿದ್ದವರು, ಅವಳೊಂದಿಗೆ ಯಾವ ವಿಧವಾಗಿ ಮಾತು ಕಥೆ ಆರಂಭ ಮಾಡುವುದೆಂದು ತೋಚದೆಇದ್ದರು. ಶ್ಯಾಮಾಸುಂದರಿಯು ಒಂದು ಸಲ ಅವಳ ಕಡೆ ನೋಡಿ "ಅಷ್ಟು ಹೊತ್ತಿಗೆ ಮುಂಚೆಯೇ ಎದ್ದು ಸ್ನಾನ ಮಾಡುತ್ತೀಯಲ್ಲಾ ಬಿಸಿನೀರು ಯಾಕೆ ಬೇಕೆಂದು ಹೇಳುವುದಿಲ್ಲ.... ಶೀತವಾಗುವುದಿಲ್ಲವೇ ?" ಎಂದಳು.

ಕುಮು "ನನಗೆ ಅಭ್ಯಾಸವಾಗಿದೆ" ಎಂದಳು. ಮಾತು ಮುಂದೆ ಹೋಗಲಿಲ್ಲ, ಕುಮುವಿನ ಮನಸ್ಸಿನಲ್ಲಿ ಆಗ ನೀರವವಾದೊಂದು ಜಪದ ಧಾರೆ ಹರಿಯುತ್ತಿತ್ತು.

ಪಿತೇವ ಪುತ್ರಸ್ಯ ಸಖೇವ ಸಖ್ಯುಃ ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್

ತರಕಾರಿ ಹೆಚ್ಚುವುದು ಮತ್ತು ಉಗ್ರಾಣದಿಂದ ಅಡುಗೆ ಸಾಮಾನುಗಳನ್ನು ಒದಗಿಸಿ ಕೊಡುವುದು....ಇತ್ಯಾದಿ ಕೆಲಸಗಳು ಮುಗಿದ ಮೇಲೆ ಹೆಂಗಸರು ಸ್ನಾನಕ್ಕಾಗಿ ಒಳಗಡೆಯ ಅಂಗಳದ ಕೊಳಾಯಿಯ ಹತ್ತಿರ ಹೋಗಿ ಗಲಾಟೆ ಮಾಡಲಾರಂಭಿಸಿದರು,

ಮೋತಿಯಮ್ಮನನ್ನು ಒಂಟಿಯಾಗಿ ನೋಡಿ ಕುಮು "ಅಣ್ಣನಿಂದ ಟೆಲಿಗ್ರಾಮಿಗೆ ಉತ್ತರ ಬಂತು" ಎಂದಳು.

ಮೋತಿಯಮ್ಮನು ಸ್ವಲ್ಪ ಆಶ್ಚರ್ಯಪಟ್ಟು "ಯಾವಾಗ ಬಂತು ?" ಎಂದಳು.

ಕುಮು "ನಿನ್ನೆ ರಾತ್ರಿ" ಎಂದಳು.

"ರಾತ್ರಿಯೇ ?"

"ಹೌದು....ರಾತ್ರಿ ಬಹಳ ಹೊತ್ತಾದ ಮೇಲೆ, ಅವರೇ ಸ್ವತಃ ಬಂದು ನನಗೆ ಕೊಟ್ಟರು."

ಆಗ ಮೋತಿಯಮ್ಮ "ಹಾಗಾದರೆ ಕಾಗದ ಕೂಡ ಬಂದಿದೆ."

"ಯಾವ ಕಾಗದ ?"

"ನಿಮ್ಮಣ್ಣನ ಕಾಗದ."

ಕುಮು ವ್ಯಸ್ತಳಾಗಿ ಎದ್ದು "ಇಲ್ಲ...ನನಗೆ ಸಿಕ್ಕಿಲ್ಲ....ಅಣ್ಣನ ಕಾಗದ ಬಂದಿದೆಯೇನು ಹಾಗಾದರೆ?" ಎಂದು ಕೂಗಿದಳು.

ಮೋತಿಯಮ್ಮನು ಮಾತಾಡದೆ ಸುಮ್ಮನಿದ್ದಳು.

ಕುಮು ಅವಳ ಕೈಯನ್ನು ಬಿಗಿಯಾಗಿ ಹಿಡಿದು ಉತ್ಕಂಠಿತಳಾಗಿ "ಎಲ್ಲೀ ಅಣ್ಣನ ಕಾಗದ...? ನನಗೆ ತಂದು ಕೊಡು ಮತ್ತೇ ?" ಎಂದಳು !

ಮೋತಿಯಮ್ಮ ಪಿಸುಮಾತಿನಲ್ಲಿ "ಆ ಕಾಗದವನ್ನು ತರುವುದು ಸಾಧ್ಯವಿಲ್ಲ. ಅದು ನಿನ್ನ ಯಾಜಮಾನರ ಹೊರಗಿನ ಕೋಣೆಯ ಡ್ರಾಯರಿನಲ್ಲಿ ಇದೆ." ಎಂದಳು.

"ನನ್ನ ಕಾಗದ ನನಗೆ ಕೊಡುವುದಕ್ಕೆ ಏಕೆ ಸಾಧ್ಯವಿಲ್ಲ ?"

"ಅವರ ಡ್ರಾಯರನ್ನು ತೆಗೆದಿದ್ದು ಕಂಡು ಬಂದರೆ ಪ್ರಳಯವಾಗಿ ಹೋಗುತ್ತೆ."

ಕುಮು ಅಸ್ಥಿರಳಾಗಿ "ಅಣ್ಣನ ಕಾಗದವನ್ನು ನಾನು ಓದಲು ಸಾಧ್ಯವಿಲ್ಲವೇ ಹಾಗಾದರೆ ?" ಎಂದಳು.

"ನಿನ್ನ ಯಜಮಾನರು ಆಫೀಸಿಗೆ ಹೋದಮೇಲೆ ಆ ಕಾಗದವನ್ನು ಓದಿ ಮತ್ತೆ ಡ್ರಾಯರಿನಲ್ಲಿಟ್ಟುಬಿಡು."

ಕೋಪವನ್ನು ಅಡಗಿಸಲಾಗಲಿಲ್ಲ. ಮನಸ್ಸು ಬೆಂಕಿಯಾಯಿತು. "ನನ್ನ ಸ್ವಂತ ಕಾಗದವನ್ನೂ ಕಳ್ಳತನದಿಂದ ಓದಬೇಕೇ ಹಾಗಾದರೆ ?"

"ಯಾವುದು ಸ್ವಂತದ್ದು, ಯಾವುದು ಸ್ವಂತದ್ದಲ್ಲ....ಈ ವಿಚಾರವನ್ನು ಈ ಮನೆಯ ಯಜಮಾನರೇ ನಿರ್ಣಯಿಸುವುದು."

ಕುಮು ತನ್ನ ಸಂಕಲ್ಪವನ್ನು ಮರೆಯುವುದರಲ್ಲಿದ್ದಳು. ಇಂತಹ ಸಮಯದಲ್ಲಿ ಹಠಾತ್ತಾಗಿ ಮನಸ್ಸಿನ ಅಂತರ್ಯದಲ್ಲಿ ಕಿರುಬೆರಳೆತ್ತಿ ಯಾವುದೋ ಹೇಳತೊಡಗಿತು. "ಕೋಪಮಾಡಿಕೊಳ್ಳಬೇಡ" ಎಂದು. ಕ್ಷಣಕಾಲ ಕುಮು ಕಣ್ಣು ಮುಚ್ಚಿಕೊಂಡಳು. ನಿಶ್ಶಬ್ದವಾಗಿ ತುಟಿಗಳೆರಡು ಅಲ್ಲಾಡಲು ತೊಡಗಿದುವು. "ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್."

ಕುಮು "ನನ್ನ ಕಾಗದವನ್ನು ಯಾರಾದರೂ ಕದ್ದರೆ ಕದಿಯಲಿ....ನಾನೂ ಹಾಗೆ ಕಳ್ಳತನ ಮಾಡಿ ಛಲ ತೀರಿಸಿಕೊಳ್ಳಲು ನನಗೆ ಇಷ್ಟವಿಲ್ಲ."

ಹೀಗೆ ಹೇಳಿದೊಡನೆ ತಾನಾಡಿದ ಮಾತು ಕಠಿಣವಾಯಿತೆಂದು ಅವಳಿಗನ್ನಿಸಿತು. ಮನಸ್ಸಿನಲ್ಲಿರುವ ಕೋಪ ತನಗೆ ಕಾಣಿಸದಿದ್ದರೂ ಹೇಗೋ ಹೊರಗೆ ಕಾಣಿಸಿಕೊಳ್ಳುವುದೆಂದು ತಿಳಿದುಕೊಂಡಳು. ಅದನ್ನು ಬುಡಮುಟ್ಟ ಕಿತ್ತುಹಾಕಬೇಕು. ಅದರೊಡನೆ ಹೋರಾಡಲು ತೊಡಗಿದರೆ ಅದು ಕೈಗೆ ಸಿಕ್ಕುವುದೇ ಇಲ್ಲ. ಆಳವಾದ ಗುಹೆಯ ಮಧ್ಯೆ ಅದು ದುರ್ಗವೊಂದನ್ನು ಮಾಡಿ ಅಲ್ಲಿ ಅಡಗಿರುವುದು. ಹೊರಗಡೆಯಿಂದ ಅದರೊಳಗೆ ಪ್ರವೇಶವೇ ಇಲ್ಲ. ಆದುದರಿಂದಲೇ ಮುಚ್ಚಿರುವುದನ್ನು ತೆಗೆಯುವುದಕ್ಕೂ ಮತ್ತು ತಳ ಊರಿರುವುದನ್ನು ಹೊರಗೆ ಹಾಕುವುದಕ್ಕೂ

ಪ್ರೇಮರಸದ ಪ್ರವಾಹವನ್ನೇ ಹರಿಸಬೇಕಾಗಿದೆ. ಕೋಟಲೆಗಳನ್ನು ಮರೆಯುವುದಕ್ಕೆ ಅವಳಿಗೆ ಸುಲಭವಾದ ಉಪಾಯವೊಂದಿತ್ತು...ಅದು ಸಂಗೀತ. ಆದರೆ ಈ ಮನೆಯಲ್ಲಿ ಏಸ್‌ರಾಜ್ ಬಾರಿಸಲು ಅವಳಿಗೆ ನಾಚುಗೆ. ಏಸ್‌ರಾಜನ್ನು ಜೊತೆಯಲ್ಲಿ ತರಲು ಕೂಡ ಇಲ್ಲ. ಕುಮು ಹಾಡಬಲ್ಲಳು. ಆದರೆ ಅವಳ ಕಂಠದಲ್ಲಿ ಅಂತಹ ಶಕ್ತಿಯಿಲ್ಲ ಈಗ. ಹಾಡಿನ ಹೊನಲಲ್ಲಿಯೇ ಕುಂಠಿತವಾದ ಅವಳ ಅಭಿಮಾನದ ಗೀತೆಯಲ್ಲಿ ಆಕಾಶವನ್ನೇ ತೇಲಿಸಿಬಿಡಬೇಕೆಂದು ಆಶಿಸಿದಳು. ಯಾವ ಹಾಡಿನಲ್ಲಿ ಅವಳು "ನಾನು ನಿನ್ನ ಕೂಗನ್ನು ಕೇಳಿಯೇ ಬಂದಿದ್ದೇನೆ. ಆದರೂ ನೀನೇಕೆ ನನಗೆ ಮರೆಮಾಡಿಕೊಂಡಿರುವೆ? ನಾನೊಂದು ನಿಮಿಷವೂ ಹಿಂಜರಿಯದೆ ಬಂದಿದ್ದೇನೆ. ಇಷ್ಟಾದರೂ ನನ್ನನ್ನೇಕೆ ಇಂತಹ ಸಂಶಯದ ಮಧ್ಯೆ ಎಸೆದಿರುವೆ?" ಎಂದು ತನ್ನ ವೇದನೆಯನ್ನು ಪ್ರಕಟಮಾಡಬಲ್ಲಳೋ ಆ ಮಾತುಗಳನ್ನೆಲ್ಲಾ ಚೆನ್ನಾಗಿ ದೊಡ್ಡ ಸ್ವರದಲ್ಲಿ ಹಾಡಿ ಹೇಳಬೇಕೆಂದು ಆಸೆಪಟ್ಟಳು. ಹೀಗೆ ಮಾಡಿದರೇನೆ ಸ್ವರದಲ್ಲಿಯೇ ಅದರ ಉತ್ತರ ಪಡೆಯಬಹುದೆಂದು ಅವಳಿಗೆ ತೋರಿತು.

## ಮೂವತ್ತನಾಲ್ಕನೆಯ ಅಧ್ಯಾಯ

ಕುಮು ಓಡಿ ಹೋಗಲು ಒಂದೇ ಒಂದು ಸ್ಥಳವಿತ್ತು. ಆ ಮನೆಯ ಬಿಸಿಲು ಮಾಳಿಗೆ.... ಅಲ್ಲಿಗೇ ಹೋದಳು. ಹೊತ್ತು ಬಹಳವಾಗಿದೆ. ಬಿಸಿಲು ಮಾಳಿಗೆಯು ಸುಡುಬಿಸಿಲಲ್ಲಿ ತುಂಬಿಹೋಗಿದೆ· ಒಂದೇ ಒಂದು ಕಡೆ, ದೊಡ್ಡ ಪೌಳೀ ಗೋಡೆಯ ಅಂಚಿನ ಕೆಳಗೆ, ಸ್ವಲ್ಪ ಮಾತ್ರ ನೆರಳಿದೆ. ಅಲ್ಲಿಯೇ ಹೋಗಿ ಕೂತುಕೊಂಡಳು. ಹಾಡೊಂದು ಮನಸ್ಸಿಗೆ ಬಂತು. ಅದು ಅಸಾವೇರಿ ರಾಗದ್ದು. ಆ ಹಾಡಿನ ಪಲ್ಲವಿ "ಬಾಂಶರಿ ಹಮಾರೀ ರೇ"....ಆದರೆ ಉಳಿದ ಹಾಡೆಲ್ಲಾ ಅವಳ ನೆನಪಿನಲ್ಲಿ ಅವಳಿಗೆ ಹಾಡು ಕಲಿಸಿದ ಉಸ್ತಾದರ ವಿಕೃತವಾಣಿಯಲ್ಲಿ ಮುಳುಗಿಹೋಗಿತ್ತು. ಅದರ ಅರ್ಥ ತಿಳಿಯಲಾಗುತ್ತಿರಲಿಲ್ಲ. ಕುಮು ಆ ಅಸಂಪೂರ್ಣವಾದ ಅಂಶವನ್ನೇ ತನ್ನ ಇಚ್ಛಾನುಸಾರ ಹೊಸ ಹೊಸ ತಾನಗಳಲ್ಲಿ ತುಂಬಿ ಮತ್ತೆ ಮತ್ತೆ ತಿರುಗಿಸಿ ಹಾಡತೊಡಗಿದಳು. ಅದರಲ್ಲಿ ಒಂದೇ ಒಂದು ಮಾತು ಅರ್ಥ ತುಂಬಿ ಬಂತು. ಆ ವಾಕ್ಯ ಹೀಗೆ ಹೇಳಿದಂತಾಯಿತು "ಹೇ ನನ್ನ ಮುರಳಿಯೇ, ನಿನ್ನಲ್ಲಿ ಸ್ವರ ತುಂಬದೇಕೆ, ಕತ್ತಲೆ ದಾಟಿ ಕದ ಮುಚ್ಚಿದೆಡೆಗೆ, ನಿದ್ರೆ ಜಾಗರಿತವಾಗದೆಡೆ - ಹೇ ನನ್ನ ಮುರಳಿಯೇ."

ಮೋತಿಯಮ್ಮನು ಹತ್ತಿರ ಬಂದು "ನಡಿಯಮ್ಮಾ ಊಟ ಮಾಡೋಣ" ಎಂದಾಗ ಅದೇ ಬಿಸಿಲಮಾಳಿಗೆಯ ಮೂಲೆಯಲ್ಲಿದ್ದ ಅಲ್ಪವಾದ ನೆರಳೂ ಅಳಿಸಿಹೋಗಿತ್ತು. ಆದರೆ ಅವಳ ಮನಸ್ಸಿನ್ನೂ ಸ್ವರದಿಂದ ತುಂಬಿಹೋಗಿತ್ತು. ಸಂಸಾರದಲ್ಲಿ ಅವಳ ಮೇಲೆ ಯಾರೇನು ಮಾಡಿದ್ದರೋ ಅದೆಲ್ಲಾ ತುಚ್ಛವಾಗಿಹೋಗಿಬಿಟ್ಟಿತು. ಅವಳ ಕಾಗದದ ವಿಷಯವಾಗಿ ಮಧುಸೂದನನು ತೋರಿದ ಕ್ಷುದ್ರತೆಯ ಬಗ್ಗೆ ಅವಳ ಮನಸ್ಸಿನಲ್ಲಾಗಿದ್ದ ಕ್ರೋಧವು ಆ ಬಿಸಿಲು ತುಂಬಿದ ಆಕಾಶದಲ್ಲಿ ಪತಂಗದಂತೆ ಎಲ್ಲಿಯೋ ವಿಲೀನವಾಗಿ ಹೋಯಿತು. ಅದರ ಕ್ಷುದ್ರಗುಂಜನವು ಮೇರೆಯಿಲ್ಲದ ಆಕಾಶದಲ್ಲಿ ಮಾಯವಾಗಿ ಹೋಯಿತು.... ಆದರೆ ಆ ಕಾಗದದಲ್ಲಿ ಅಣ್ಣ ಬರೆದಿದ್ದ ಸ್ನೇಹದ ಮಾತುಗಳನ್ನು ಓದಬೇಕೆಂಬ ತವಕ ಅವಳ ಮನಸ್ಸನ್ನು ಇನ್ನೂ ಪೀಡಿಸುತ್ತಿತ್ತು. ಅದು ಮಾತ

ಹೋಗಲಿಲ್ಲ.

ಊಟವಾದಮೇಲೆ ಅವಳಿನ್ನು ಸುಮ್ಮನಿರಲಾಗಲಿಲ್ಲ. ಮೋತಿಯಮ್ಮನನ್ನು ಕುರಿತು "ನಾನು ಹೋಗಿ ಹೊರಗಿನ ಕೋಣೆಯಲ್ಲಿ ಕಾಗದ ಓದಿಕೊಂಡು ಬರುತ್ತೇನೆ." ಎಂದಳು. ಮೋತಿಯಮ್ಮನು "ಇನ್ನೂ ಸ್ವಲ್ಪ ಹೊತ್ತಾಗಲಿ, ಚಾಕರರೆಲ್ಲಾ ಊಟಕ್ಕೆ ಹೋದಮೇಲೆ ಹೋಗಿ ಓದಿಕೊಂಡು ಬಾ" ಎಂದಳು.

ಕುಮು "ಇಲ್ಲ, ಅದೆಂದಿಗೂ ಸಾಧ್ಯವಿಲ್ಲ. ಅದು ಕಳ್ಳತನ ಮಾಡಲು ಹೋದಹಾಗೆ ಇರುತ್ತದೆ. ನಾನು ಎಲ್ಲರ ಎದುರಿಗೂ ಹೋಗಲು ಇಷ್ಟಪಡುತ್ತೇನೆ. ಅವರೇನಾದರೂ ತಿಳಿದುಕೊಳ್ಳಲಿ." ಎಂದಳು. ಅದಕ್ಕೆ ಮೋತಿಯಮ್ಮನು "ಹಾಗಾದರೆ ನಡಿ, ನಾನೂ ಜೊತೆಯಲ್ಲಿ ಬರುತ್ತೇನೆ," ಎಂದಳು.

ಕುಮು "ಇಲ್ಲ...ಕೂಡದು...ನೀನು ಬರಕೂಡದು. ನಾನು ಯಾವಕಡೆ ಹೋಗಬೇಕು ಅನ್ನುವುದನ್ನು ಮಾತ್ರ ನೀನು ತಿಳುಹಿಸಿಬಿಡು ಸಾಕು" ಎಂದಳು.

ಮೋತಿಯಮ್ಮನು ಅಂತಃಪುರದ ಕಟಕಟೆ ಹಾಕಿದ ವರಾಂಡದ ಮೂಲಕ ಆ ಕೋಣೆ ಯಾವ ಪಾರ್ಶ್ವದಲ್ಲಿದೆಯೆಂಬುದನ್ನು ತೋರಿಸಿದಳು. ಕುಮು ಹೊರಟು ಬಂದಳು. ಸೇವಕರು ಚಕಿತರಾಗಿ ನೋಡಿ ಎದ್ದು ಅವಳಿಗೆ ಪ್ರಣಾಮ ಮಾಡಿದರು. ಕುಮು ಕೊಠಡಿಯನ್ನು ಪ್ರವೇಶಿಸಿ ಡೆಸ್ಕಿನ ಡ್ರಾಯರನ್ನು ತೆಗೆದು ನೋಡಿದರೆ ಅವಳ ಹೆಸರಿನ ಕಾಗದ ಸಿಕ್ಕಿತು. ಅದನ್ನೆತ್ತಿ ನೋಡಿದಾಗ ಲಕೋಟೆ ಒಡೆಯಲ್ಪಟ್ಟಿದ್ದುದು ಕಾಣಬಂತು. ಎದೆಯೊಳಗೆ ಏನೋ ಉಮ್ಮಳಿಸಿ ಬಂದಂತಾಯಿತು. ಸಹಿಸಲು ಅಸಾಧ್ಯವಾಗಿಹೋಯಿತು. ಕುಮು ಹುಟ್ಟಿ ದೊಡ್ಡವಳಾದ ಮನೆಯಲ್ಲಿ ಇಂತಹ ಅತ್ಯಾಚಾರವನ್ನು ಕಲ್ಪಿಸಿಕೊಳ್ಳಲು ಕೂಡ ಸಾಧ್ಯವಿಲ್ಲ. ತನ್ನ ಉದ್ವೇಗದ ಈ ಪ್ರಬಲತೆಯೇ ಅವಳನ್ನು ಹೊಡೆದೆಬ್ಬಿಸಿ ಸಚೇತನಳನ್ನಾಗಿ ಮಾಡಿತು. "ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್"...ಆಗಲೂ ಬಿರುಗಾಳಿಯ ಹೊಡೆತ ನಿಲ್ಲಲಿಲ್ಲ. ಆದರೂ ಮತ್ತೆ ಪಠಿಸಿದಳು. ಹೊರಗೆ ನಿಂತಿದ್ದ ಪಹರೆಯವನು ಮನೆಯ ಸೊಸೆ ಹಾಗೆ ಆಫೀಸು ರೂಮಿನಲ್ಲಿ ಕೂತು ತನಗೆ ತಾನೇ ಮಂತ್ರಪಠಿಸುವುದನ್ನು ಕೇಳಿ ಸ್ತಂಭಿತನಾದ. ಬಹಳ ಹೊತ್ತು ಹೀಗೆ ಪಠಿಸುತ್ತಾ ಪಠಿಸುತ್ತಾ ಕುಮುವಿನ ಮನಸ್ಸು ಶಾಂತವಾಗಿ ಹೋಯಿತು. ಆಗ ಕಾಗದವನ್ನು ಎದುರಿನಲ್ಲಿಟ್ಟುಕೊಂಡು ಕುರ್ಚಿಯಲ್ಲಿ ಕೂತು ಕೈಗಳನ್ನು ಜೋಡಿಸಿಕೊಂಡು ಸ್ಥಿರವಾಗಿ ಕೂತಳು. ಕಾಗದವನ್ನು ತಾನು ಕಳ್ಳತದಿಂದ ಓದುವುದಿಲ್ಲವೆಂದೇ ಅವಳ ಹಠ.

ಈ ಸಮಯದಲ್ಲಿ ಮಧುಸೂದನನು ಕೊಠಡಿಯನ್ನು ಪ್ರವೇಶಿಸಿ ಚಕಿತನಾಗಿ ನಿಂತುಬಿಟ್ಟನು. ಕುಮು ಅವನ ಕಡೆ ಕೂಡ ನೋಡಲಿಲ್ಲ. ಅವನು ಹತ್ತಿರ ಬಂದು ನೋಡಿದರೆ ಡೆಸ್ಕಿನ ಮೇಲೆ ಅದೇ ಕಾಗದ!"

"ನೀನು ಹೇಗೆ ಬಂದೆ ಇಲ್ಲಿ?" ಎಂದು ಕೇಳಿದನು.

ಕುಮು ನೀರವವಾಗಿ ಶಾಂತದೃಷ್ಟಿಯಿಂದ ಮಧುಸೂದನನ ಮುಖದ ಕಡೆ ನೋಡಿದಳು. ಆ ದೃಷ್ಟಿಯಲ್ಲಿ ಆರೋಪವಿರಲಿಲ್ಲ. ಮಧುಸೂದನನು ಮತ್ತೆ "ನೀನೇಕೆ ಈ ಕೋಣೆಗೆ ಬಂದೆ?" ಎಂದು ಪ್ರಶ್ನೆ ಮಾಡಿದನು.

ಈ ಮತ್ತೆ ಮತ್ತೆ ಕೇಳಿದ ಪ್ರಶ್ನೆಗೆ ಕುಮು ಅಧೈರ್ಯದ ಸ್ವರದಲ್ಲಿ "ನನ್ನ ಹೆಸರಿಗೆ ಅಣ್ಣ

ನಿಂದ ಕಾಗದ ಬಂದಿದೆಯೇ ಇಲ್ಲವೇ ನೋಡೋಣವೆಂದು ಬಂದೆ" ಎಂದಳು.

'ಆ ಮಾತನ್ನು ನನಗೇಕೆ ಹೇಳಲಿಲ್ಲ?' ಎಂಬ ಪ್ರಶ್ನೆಗೆ ಅವಕಾಶವಿಲ್ಲದ ಹಾಗೆ ಹಿಂದಿನ ರಾತ್ರಿಯೇ ಮಧುಸೂದನನು ತಾನಾಗಿಯೇ ತಡೆಮಾಡಿಬಿಟ್ಟಿದ್ದನು. ಅದಕ್ಕಾಗಿ "ಈ ಕಾಗದವನ್ನು ನಾನೇ ನಿನ್ನ ಹತ್ತಿರ ತೆಗೆದುಕೊಂಡು ಬರುತ್ತಿದ್ದೆ. ಇದಕ್ಕೋಸ್ಕರ ನೀನೇ ಇಲ್ಲಿಗೆ ಬರಬೇಕಾದ ಪ್ರಮೇಯವಿರಲಿಲ್ಲ" ಎಂದನು.

ಕುಮು ಸ್ವಲ್ಪಹೊತ್ತು ಸುಮ್ಮನಿದ್ದು ಮನಸ್ಸನ್ನು ಶಾಂತವಾಗಿಟ್ಟುಕೊಂಡು "ನೀವು ಈ ಕಾಗದವನ್ನು ನನಗೆ ಓದುವುದಕ್ಕೆ ಕೊಡಲು ಇಷ್ಟಪಡಲಿಲ್ಲ. ಆದ್ದರಿಂದ ಈ ಕಾಗದವನ್ನು ನಾನು ಓದುವುದಿಲ್ಲ. ಇಗೋ ಇದನ್ನು ಈಗಲೇ ಹರಿದುಹಾಕಿಬಿಡುತ್ತೇನೆ. ಆದರೆ ಇಂತಹ ಕಷ್ಟವನ್ನು ನನಗೆ ಇನ್ನುಮೇಲೆ ಎಂದಿಗೂ ಕೊಡಬೇಡಿ. ಇದಕ್ಕಿಂತಲೂ ನನಗೆ ಬೇರೆ ಯಾವುದೂ ಅಷ್ಟು ಕಷ್ಟವಾಗುವುದಿಲ್ಲ" ಎಂದಳು. ಹೀಗೆ ಹೇಳಿದ್ದೇ ಅವಳು ತಲೆಗೆ ಮುಸುಗು ಹಾಕಿಕೊಂಡು ಒಳಗೆ ಓಡಿ ಹೋದಳು.

ಇದು ನಡೆಯುವುದಕ್ಕೆ ಸ್ವಲ್ಪ ಮುಂಚೆ, ಅಂದು ಮಧ್ಯಾಹ್ನ ಊಟವಾದ ಮೇಲೆ ಮಧುಸೂದನನ ಮನಸ್ಸು ಚಂಚಲವಾಗಿತ್ತು. ಆಂದೋಳನವನ್ನು ಏನು ಮಾಡಿದರೂ ನಿಲ್ಲಿಸಲು ಸಾಧ್ಯವಾಗಲಿಲ್ಲ.

ಕುಮುವಿನ ಊಟವಾದ ಮೇಲೆ ಅವಳನ್ನು ಬರ ಹೇಳಬೇಕೆಂದು ಮನಸ್ಸುಮಾಡಿದ್ದನು. ಅಂದು ತಲೆಯ ಕೂದಲನ್ನು ಶಿಸ್ತುಮಾಡಿಕೊಳ್ಳುವ ವಿಷಯದಲ್ಲಿ ವಿಶೇಷ ಆಸಕ್ತಿ ತೋರಿಸಿದ್ದನು. ಅಂದು ಬೆಳಿಗ್ಗೆ ಒಬ್ಬ ಆಂಗ್ಲೇಯ ನಾಪಿತನ ಅಂಗಡಿಯಲ್ಲಿ ಸ್ಪಿರಿಟ್ ಮಿಶ್ರಮಾಡಿದ ಸುಗಂಧ ಕೇಶದ ತೈಲವೊಂದನ್ನೂ ಮತ್ತು ಬೆಲೆಯಾದೊಂದು ಎಸೆನ್ಸನ್ನೂ ಕೊಂಡುಕೊಂಡು ಬಂದಿದ್ದನು.

ಬದುಕಿನಲ್ಲಿ ಇದೇ ಮೊದಲಸಲ ಅಂತಹವುಗಳನ್ನು ಅವನು ಉಪಯೋಗಿಸಿರುವುದು.... ಸುಗಂಧವನ್ನು ಬೀರುತ್ತಾ ಶಿಸ್ತಾಗಿ ಶೃಂಗಾರ ಮಾಡಿಕೊಂಡು ಸಿದ್ಧವಾಗಿದ್ದನು. ಆಫೀಸಿಗೆ ಹೋಗುವುದಕ್ಕೆ ಇಂದು ನಲವತ್ತೈದು ನಿಮಿಷ ಮೀರಿಹೋಯಿತು.

ಮೆಟ್ಟಿಲ ಮೇಲೆ ಕಾಲಸಪ್ಪಳ ಕೇಳಿ ಮಧುಸೂದನನು ಚಕಿತನಾಗಿ ಎದ್ದು ಕೂತನು. ಕೈಗೆ ಏನೂ ಸಿಕ್ಕದೆ ಯಾವುದೋ ಹಳೆಯದೊಂದು ವೃತ್ತ ಪತ್ರಿಕೆಯ ಜಾಹೀರಾತಿನ ಪುಟವನ್ನೆ ಳೆದುಕೊಂಡು ಅದೊಂದು ಕಛೇರಿಯ ಕೆಲಸದ ಭಾಗವೆಂದು ತೋರಿಸಿಕೊಳ್ಳುತ್ತಾ ಕೂತನು. ಜೇಬಿನಿಂದ ನೀಲಿಯ ಪೆನ್ಸಿಲೊಂದನ್ನು ತೆಗೆದು ಎರಡು ಮೂರು ಕಡೆ ಗೀಟುಗಳನ್ನು ಕೂಡ ಎಳೆದನು.

ಈ ಸಮಯದಲ್ಲಿ ಶ್ಯಾಮಾಸುಂದರಿಯು ಕೋಣೆಯೊಳಗೆ ಪ್ರವೇಶಮಾಡಿದಳು. ಮಧುಸೂದನನು ಹುಬ್ಬುಗಂಟಿಕ್ಕಿ ಅವಳ ಕಡೆ ನೋಡಿದ. ಶ್ಯಾಮಾಸುಂದರಿಯು "ನೀವು ಇಲ್ಲಿ ಕೂತುಕೊಂಡು ಇದ್ದೀರಿ. ನಿಮ್ಮ ಯಜಮಾನಿ ಅಲ್ಲಿ ನಿಮ್ಮನ್ನು ಹುಡುಕಿಕೊಂಡು ಅಲೆದಾಡುತ್ತಿದ್ದಾಳೆ" ಎಂದಳು.

"ಹುಡುಕಿಕೊಂಡು ಅಲೆದಾಡುತ್ತಿದ್ದಾಳೆಯೇ? ಎಲ್ಲಿ?"

"ಈಗ ತಾನೇ ನೋಡಿದೆ. ಹೊರಗಡೆ ನಿಮ್ಮ ಆಫೀಸು ರೂಮಿನೊಳಗೆ ಹೋದಳು. ಆದರೆ ಅದರಲ್ಲೇನು ಅಷ್ಟು ಆಶ್ಚರ್ಯ? ನೀವು ಅಲ್ಲಿದ್ದೀರಿ ಅಂತ ಅವಳು ಬಹುಶಃ...." ಮಧು

ಸೂದನನು ಆತುರಾತುರವಾಗಿ ಹೊರ ಮನೆಗೆ ಬಂದನು....ಅದಾದ ಮೇಲೆಯೇ ಈ ಕಾಗದದ ವಿಷಯವಾಗಿ ಘಟನೆ.

ಪಟಗಳೆಲ್ಲಾ ಹಠಾತ್ತಾಗಿ ಹರಿದು ಹೋದ ನೌಕೆಯಂತಾಗಿತ್ತು ಮಧುಸೂದನನ ಸ್ಥಿತಿ. ಆಗ ಇನ್ನು ತಡಮಾಡಲು ಸ್ವಲ್ಪವೂ ಅವಕಾಶವಿರಲಿಲ್ಲ. ಆಫೀಸಿಗೆ ಹೊರಟುಹೋದನು. ಆದರೆ ಕೆಲಸದ ಮಧ್ಯೆ ಅವನ ಅಸಂಪೂರ್ಣವಾದ, ಭಗ್ನವಾದ ಚಿಂತೆಗಳ ತೀಕ್ಷ್ಣವಾದ ಮೊನೆಗಳು ಮನಸ್ಸನ್ನು ಚುಚ್ಚಿ ಚುಚ್ಚಿ ಕೊರೆಯುತ್ತಿದ್ದುವು. ಈ ಮಾನಸಿಕ ಭೂಕಂಪದಲ್ಲಿಯೂ ಮನಸ್ಸಿಟ್ಟು ಕೆಲಸ ಮಾಡಲು ಅಂದು ಅವನ ಕೈಯಲ್ಲಿ ಏನು ಮಾಡಿದರೂ ಸಾಧ್ಯವಿಲ್ಲ....ತಲೆ ನೋಯುತ್ತ ದೆಂದು ಆಫೀಸಿನ ಜನಗಳಿಗೆ ಹೇಳಿಬಿಟ್ಟು ಕೆಲಸ ಮುಗಿಯುವುದಕ್ಕೆ ಮುಂಚೆಯೇ ಮನೆಗೆ ಹಿಂದಿರುಗಿದನು.

## ಮೂವತ್ತೈದನೆಯ ಅಧ್ಯಾಯ

ಈ ಕಡೆ ನವೀನನೂ ಅವನ ಹೆಂಡತಿಯೂ ಈ ಸಲ ತಮ್ಮ ಗೋಡೆ ಕುಸಿಯಿತೆಂದು ತಿಳಿದು ಕೊಂಡುಬಿಟ್ಟರು. ಓಡಿ ಹೋಗಿ ಬದುಕಿಕೊಳ್ಳಲು ಅವರಿಗೆ ಬೇರೆ ಯಾವ ಆಶ್ರಯವೂ ಇರ ಲಿಲ್ಲ. ಮೋತಿಯಮ್ಮನು "ಇಲ್ಲಿ ಹೇಗೆ ದುಡಿದು ತಿನ್ನುತ್ತೇವೋ ಹಾಗೆಯೇ ದುಡಿದು ತಿನ್ನುವುದಕ್ಕೆ ಜಾಗ ಪ್ರಪಂಚದಲ್ಲಿ ಎಲ್ಲಾದರೂ ಸಿಕ್ಕುತ್ತದೆ. ಆದರೆ ನನಗೆ ಸಂಕಟವಾಗುವುದು,ನಾನು ಹೊರಟು ಹೋದರೆ ಈಮನೆಯಲ್ಲಿ ನಮ್ಮ ಕುಮುವನ್ನು ನೋಡಿಕೊಳ್ಳುವವರು ಒಬ್ಬರೂ ಇರುವುದಿಲ್ಲ. ಅದಕ್ಕೇ...." ಎಂದಳು.

ನವೀನನು "ಇಲ್ಲಿ ನೋಡು, ಇದುವರೆಗೆ ನನ್ನ ಜೀವಮಾನದಲ್ಲಿ ಎಷ್ಟೋ ಅವಮಾನಗಳನ್ನು ಸೈರಿಸಿದ್ದೇನೆ. ಈ ಮನೆಯ ಅನ್ನ ನೀರಿನ ಮೇಲಂತೂ ಎಷ್ಟೋ ಸಲ ಅಸಹ್ಯ ಹುಟ್ಟಿದೆ ನನಗೆ... ಆದರೆ ಈಗಾಗಿರುವ ಜಿಗುಪ್ಸೆ!, ಇಂತಹ ಒಳ್ಳೆಯ ಯಜಮಾನಿ ಮನೆಗೆ ಬಂದಿದ್ದೂ ಕೂಡ ಯಾವ ರೀತಿ ಆಕೆಯನ್ನು ಬರಮಾಡಿಕೊಳ್ಳುವುದು, ಯಾವ ರೀತಿ ಆದರಿಸುವುದು, ಇಷ್ಟು ನಮ್ಮಣ್ಣನಿಗೆ ತಿಳಿಯದೆ ಹೋದಮೇಲೆ, ಇನ್ನು ಇದ್ದು ಪ್ರಯೋಜನವೇನು? ಎಲ್ಲಾ ಹಾಳು ಮಾಡಿ ಬಿಟ್ಟ ನಮ್ಮಣ್ಣ....ಅಂತಹ ಒಳ್ಳೆ ಪದಾರ್ಥದ ಮುರಿದು ಹೋದ ಚೂರೇ ಈ ಮನೆಗೆ ಮಾರಿ ಯಾಗುತ್ತೆ." ಎಂದನು.

ಮೋತಿಯಮ್ಮ "ಆ ವಿಷಯ ನಿಮ್ಮಣ್ಣನಿಗೆ ತಿಳಿಯುವುದಕ್ಕೆ ಹೆಚ್ಚು ಕಾಲ ಆಗೋದಿಲ್ಲ. ಆದರೆ ಒಂದು ಸಲ ಮುರಿದ ಮೇಲೆ ಅದನ್ನು ತಿರುಗಿ ಜೋಡಿಸುವುದಕ್ಕೆ ಆಗುವುದಿಲ್ಲ," ಎಂದಳು.

ನವೀನನು "ಲಕ್ಷ್ಮಣನಂತಹ ಮೈದುನನಾಗಿ ಇರುವುದಕ್ಕೆ ನನಗೂ ಅದೃಷ್ಟವಿಲ್ಲ. ಅದೇ ಮನಸ್ಸಿನಲ್ಲಿ ಹೆಚ್ಚು ನೋಯುತ್ತಿರುವುದು. ಯಾವುದು ಎಲ್ಲಾದರೂ ಹಾಳಾಗಿ ಹೋಗಲಿ, ನೀನು ಸಾಮಾನು ಗೀಮಾನೆಲ್ಲಾ ಈಗಲೇ ಕಟ್ಟಿಡು. ಯಾವಾಗ ಸಮಯ ಬರುತ್ತೋ ಆಗ ಈ ಮನೆಯಲ್ಲಿ ಸ್ವಲ್ಪವೂ ತಡ ಮಾಡುವುದಕ್ಕೆ ಸಾಧ್ಯವಿಲ್ಲ."

ಮೋತಿಯಮ್ಮನು ಹೊರಗೆ ಹೋದಳು. ನವೀನನಿಗೆ ಇನ್ನು ನಿಲ್ಲಲಾಗಲಿಲ್ಲ. ಹಾಗೆಯೇ ನಿಧಾನವಾಗಿ ಅವನ ಅತ್ತಿಗೆಯ ಕೋಣೆಯ ಹೊರಗಡೆ ನಿಂತುಕೊಂಡು ನೋಡಿದನು. ಕುಮು

ನೆಲದ ಮೇಲೆ ಹಾಸಿದ್ದ ಹಾಸುಗೆಯ ಮೇಲೆ ಬಿದ್ದು ಕೊಂಡಿದ್ದಳು.

ತಾನು ಹಾಗೆ ಅಣ್ಣನ ಕಾಗದವನ್ನು ಹರಿದು ಹಾಕಿ ಬಂದುದರ ನೋವು ಏನು ಮಾಡಿದರೂ ಮನಸ್ಸಿನಿಂದ ಹೋಗಲಿಲ್ಲ.

ನವೀನನು "ಅತ್ತಿಗೆ,...ಹೋಗುವ ಮುಂಚೆ ನಿಮಗೆ ಪ್ರಣಾಮ ಮಾಡಿ ಹೋಗೋಣವೆಂದು ಬಂದೆ. ನಿಮ್ಮ ಪಾದ ಧೂಳಿಯೂ ನನಗೆ ಸ್ವಲ್ಪ ಬೇಕು." ಎಂದನು.

ಕುಮು "ಬನ್ನಿ, ಕೂತುಕೊಳ್ಳಿ" ಎಂದಳು.

ನವೀನನು ನೆಲದ ಮೇಲೆ ಕೂತು "ನಿಮಗೆ ನನ್ನಿಂದ ಅಲ್ಪ ಸ್ವಲ್ಪ ಸೇವೆಯಾದೀತೆಂಬ ಸಂತೋಷದಿಂದಲೇ ನನ್ನ ಹೃದಯ ತುಂಬಿತ್ತು....ಆದರೆ ಈ ನವೀನನ ಹಣೆಯಲ್ಲಿ ಅಂತಹ ಸೌಭಾಗ್ಯವು ಎಲ್ಲಿ? ಸ್ವಲ್ಪ ದಿನಗಳು ಮಾತ್ರ ನಿಮ್ಮ ಸೇವೆ ಲಭಿಸಿತು ನನಗೆ....ಆದರೇನು, ನಾನೇನು ಮಾಡುವುದಕ್ಕೂ ಆಗಲಿಲ್ಲವಲ್ಲಾ ಎನ್ನುವ ದುಃಖವೇ ನನ್ನಲ್ಲಿ ಉಳಿದು ಹೋಯಿತು."

ಆಗ ಕುಮು "ಎಲ್ಲಿಗೆ ಹೋಗುತ್ತೀರಿ, ನೀವು ?" ಎಂದು ಕೇಳಿದಳು.

ನವೀನನು "ಅಣ್ಣ ನಮ್ಮನ್ನು ನಮ್ಮೂರಿಗೆ ಕಳುಹಿಸುತ್ತಿದ್ದಾನೆ. ಇನ್ನು ಮೇಲೆ ಬಹುಶಃ ನಿಮ್ಮನ್ನು ನೋಡುವ ಅವಕಾಶವಾಗುತ್ತದೋ ಇಲ್ಲವೋ....ಅದಕ್ಕೇ....ಪ್ರಣಾಮುಮಾಡಿ ಬಿಟ್ಟು ಹೋಗೋಣ ಅಂತ ಬಂದೆ...."ಎಂದು ಹೇಳಿ ಸಾಷ್ಟಾಂಗ ಮಾಡುತ್ತಿರುವಾಗ ಮೋತಿಯಮ್ಮನು ಓಡಿ ಓಡಿ ಬಂದು "ಬೇಗ ಬನ್ನಿ, ನಿಮ್ಮಣ್ಣ ಹುಡುಕುತ್ತಾ ಇದಾರೆ," ಎಂದಳು.

ನವೀನನು ಬೇಗ ಬೇಗ ಎದ್ದು ಹೋದನು. ಮೋತಿಯಮ್ಮನೂ ಅವನ ಸಂಗಡ ಹೋದಳು.

ಅವರಣ್ಣ ಅದೇ ಹೊರಗಡೆಯ ಆಫೀಸು ರೂಮಿನಲ್ಲಿ ಡೆಸ್ಕಿನ ಮುಂದೆ ಕೂತಿದ್ದ. ನವೀನನು ಬಂದು ಎದುರಿಗೆ ನಿಂತ. ಬೇರೆ ಯಾವ ದಿನವಾದರೂ ಇಂತಹ ಸಂದರ್ಭದಲ್ಲಿ ಅವನು ಹೆದರಿ, ಹೆದರಿ ನಿಲ್ಲುವಂತೆ ಇಂದು ಇರಲಿಲ್ಲ. ಇಂದು ನಿರ್ಭಯವಾಗಿ ಗಂಭೀರವಾಗಿ ನಿಂತಿದ್ದ. ಮಧುಸೂದನನು "ಡೆಸ್ಕಿನಲ್ಲಿ ಕಾಗದ ಇದ್ದ ವಿಷಯವನ್ನು ನಿಮ್ಮ ದೊಡ್ಡ ಅತ್ತಿಗೆಗೆ ಹೇಳಿದ್ದು ಯಾರು?" ಎಂದು ಕೇಳಿದ.

ನವೀನನು "ನಾನೇ ಹೇಳಿದೆ" ಎಂದ.

"ಇದ್ದಕ್ಕಿದ ಹಾಗೆ ಇಷ್ಟೊಂದು ಧೈರ್ಯ ಎಲ್ಲಿಂದ ಬಂತೋ ನಿನಗೆ ?"

"ಅತ್ತಿಗೆ ತಮ್ಮಣ್ಣನಿಂದ ಕಾಗದ ಬಂದಿದೆಯೇ ಅಂತ ನನ್ನನ್ನು ಕೇಳಿದಳು. ಈ ಮನೆಗೆ ಬರುವ ಕಾಗದಗಳೆಲ್ಲಾ ಮೊದಲು ನಿನ್ನ ಕೈಗೆ ಬಂದು ಆಮೇಲೆ ಆ ಡೆಸ್ಕಿನೊಳಗೆ ಹೋಗುತ್ತವೆ. ಆದ್ದರಿಂದಲೇ ನಾನು ಡೆಸ್ಕು ತೆಗೆದು ನೋಡಿದೆ."

"ನನ್ನನ್ನು ಕೇಳುವವರೆಗೂ ತಡೆಯುವುದಕ್ಕಾಗುತ್ತಿರಲಿಲ್ಲಾ ?"

"ಆಕೆ ಬಹಳ ತೊಂದರೆ ಪಡುತ್ತಿದ್ದಳು ಅಂತ ನೋಡುವುದಕ್ಕಾಗದೆ...."

"ಅದಕ್ಕೆ ನನ್ನ ಮಾತನ್ನು ತೆಗೆದುಹಾಕಬೇಕು ಅಂತಲೇನು ?"

"ಆಕೆ ಈ ಮನೆಗೆ ಯಜಮಾನಿ. ಇಲ್ಲಿ ಆಕೆಯ ಮಾತು ನಡೆಯುವುದಿಲ್ಲ ಅಂತ ನನಗೆ ಹೇಗೆ ಗೊತ್ತಾಗಬೇಕು? ಆಕೆ ಹೇಳಿದ ಮಾತನ್ನು ಆಗುವುದಿಲ್ಲ ಅನ್ನುವುದಕ್ಕೆ ನಾನು ಯಾರು? ಆ ಮೇಲೆ, ಅಣ್ಣ, ನಿನ್ನ ಹತ್ತಿರ ಇದೂ ಹೇಳಿ ಬಿಡ್ತೇನೆ. ಆಕೆ ನಮ್ಮ ಯಜಮಾನಿ ಅಷ್ಟೇ

ಅಲ್ಲ....ಆಕೆ ನನ್ನ ಗುರುವಿನ ಸಮಾನ, ಆಕೆಯ ಮಾತು ಕೇಳುವುದು, ಸುಮ್ಮನೆ ಉಪ್ಪು ತಿಂದದ್ದಕ್ಕಲ್ಲ....ಆಕೆಯ ಮೇಲಣ ಭಕ್ತಿಗೋಸ್ಕರ."

"ಸಾಕೋ....ಸಾಕು....ಇಲ್ಲಿ ನೋಡು ನವೀನ....ನಾನು ನಿನ್ನನ್ನು ಇಷ್ಟು ದಿನಗಳಿಂದ ನೋಡುತ್ತಾ ಇದ್ದೇನೆ. ಈ ಬುದ್ಧಿಯೆಲ್ಲಾ ನಿನ್ನದಲ್ಲ! ಇದು ನನಗೆ ಗೊತ್ತು, ನಿನಗೆ ಬುದ್ಧಿ ಯಾರು ಕಲಿಸಿಕೊಟ್ಟಿದಾರೆ ಅಂತ...ಯಾವುದೆಲ್ಲಾದರೂ ಹೋಗಲಿ....ಇವತ್ತು ಇನ್ನು ಸಮಯವಿಲ್ಲ, ನಾಳೆ ಬೆಳಿಗ್ಗೆ ಟ್ರೈನಿನಲ್ಲೇ ನೀವಿಬ್ಬರೂ ಊರಿಗೆ ಹೋಗಬೇಕಾಗುತ್ತೆ."

"ನಿನ್ನಿಷ್ಟದ ಹಾಗೆ" ಎಂದು ನವೀನನು ಬೇರೆ ಮಾತಾಡದೆ ಬೇಗ ಬೇಗ ಹೊರಟುಹೋದ.

ಇಷ್ಟು ಸಂಕ್ಷೇಪವಾಗಿ 'ನಿನ್ನಿಷ್ಟದ ಹಾಗೆ' ಎಂದು ಹೇಳಿ ನವೀನ ಹೊರಟುಹೋದದ್ದು ಮಧುಸೂದನನಿಗೆ ಸ್ವಲ್ಪವೂ ಸರಿಯೆನ್ನಿಸಲಿಲ್ಲ. ನವೀನನು ಸ್ವಲ್ಪ ಅತ್ತು ಗೋಗರೆದು ಮಾಡಿರ ಬೇಕಾಗಿತ್ತು ಅದರಿಂದೇನೂ ಮಧುಸೂದನನ ಸಂಕಲ್ಪವನ್ನು ತಪ್ಪಿಸುವುದಕ್ಕಾಗುತ್ತಿರಲಿಲ್ಲ .. ಅವನು ನವೀನನನ್ನು ಮತ್ತೆ ಕರೆದು "ಸಂಬಳವನ್ನು ಪೂರ್ತಿಯಾಗಿ ತೆಗೆದುಕೊಂಡು ಹೋಗು... ಆದರೆ ಇನ್ನುಮೇಲಿಂದ ನಿಮ್ಮ ಖರ್ಚಿನ ಬಾಬತನ್ನ ನನಗೆ ಒದಗಿಸುವುದಕ್ಕೆ ಸಾಧ್ಯವಿಲ್ಲ ತಿಳಿ ದುಕೋ..." ಎಂದ.

ನವೀನನು "ಗೊತ್ತು..."ಊರಿನಲ್ಲಿ ನನ್ನ ಭಾಗದ ಜಮೀನಿದೆಯೆಲ್ಲಾ...ಅದನ್ನ ಬೇಸಾಯ ಮಾಡಿಕೊಂಡು ತಿನ್ನುತ್ತೇವೆ...ಹೇಗೋ...!" ಎಂದ.

ಹೀಗೆ ಹೇಳಿ ಬೇರೆ ಯಾವ ಮಾತನ್ನೂ ಎದುರುನೋಡದೆ ಅವನು ಹೊರಟುಹೋದ.

ಮನುಷ್ಯರ ಸ್ವಭಾವವು ನಾನಾ ವಿರುದ್ಧವಾದ ಧಾತುಗಳ ಮಿಶ್ರಣದಿಂದ ತಯಾರಾಗಿರುವಂತ ಹುದು. ಮಧುಸೂದನನು ನವೀನನನ್ನು ಗಾಢವಾಗಿ ಪ್ರೀತಿಸುತ್ತಿದ್ದುದು ಇದಕ್ಕೆ ನಿದರ್ಶನ ಅವನ ಇನ್ನಿಬ್ಬರು ಸೋದರರು ರಜಬಪುರದಲ್ಲಿ ಭೂಮಿ ಕಾಣಿ ನೋಡಿಕೊಂಡು ಹಳ್ಳಿಗಾಡಿನಲ್ಲಿ, ಬಿದ್ದಿದ್ದರು. ಮಧುಸೂದನನಿಗೆ ಅವರ ವಿಷಯವಾಗಿ ಅಂತಹುದೇನೂ ಯೋಚನೆಯೇ ಇಲ್ಲ.

ತಂದೆಯು ಸಾವಾದ ಮೇಲೆ ಮಧುಸೂದನನು ನವೀನನನ್ನು ಕಲಿಕತ್ತೆಗೆ ಕರೆಯಿಸಿಕೊಂಡು ಓದು ಬರೆಹ ಕಲಿಸಿದ್ದ. ಆಮೇಲೆ ಅವನನ್ನು ತನ್ನ ಬಳಿಯಲ್ಲಿಯೇ ಸರಿಯಾಗಿ ಇಟ್ಟುಕೊಂಡಿದ್ದ. ಗೃಹ ಕಾರ್ಯಗಳ ಮೇಲ್ವಿಚಾರಣೆ ನವೀನನಿಗೆ ಸ್ವಭಾವವಾಗಿ ಹೊಂದಿಕೊಂಡು ಬಂದ ಕೆಲಸ. ಅದಕ್ಕೆ ಕಾರಣ, ಅವನು ಬಹಳ ಪ್ರಾಮಾಣಿಕ. ಇನ್ನೊಂದು ಕಾರಣ, ಅವನ ಮಾತು ಕಥೆ ವ್ಯವಹಾರಗಳಿಂದ ಎಲ್ಲರೂ ಅವನನ್ನು ಪ್ರೀತಿಸುತ್ತಿದ್ದರು. ಆ ಮನೆಯಲ್ಲಿ ಯಾವಾಗ ಏನು ಜಗಳವಾದರೂ ನವೀನನು ಸುಲಭವಾಗಿ ತೀರಿಸಿಬಿಟ್ಟು ಸಮಾಧಾನವನ್ನು ನೆಲೆಗೊಳಿಸುತ್ತಿದ್ದ. ನವೀನನು ಎಲ್ಲ ವಿಷಯಗಳಲ್ಲೂ ನಗುಮುಖನಾಗಿರುತ್ತಿದ್ದ....ಅವನು ಜನರ ಬಳಿ ಒಳ್ಳೆಯ ಮಾತಾಡುವುದಷ್ಟೇ ಅಲ್ಲ. ಅವನ ಜೊತೆಯಲ್ಲಿ ಸಂಪರ್ಕವಿಟ್ಟುಕೊಂಡ ಪ್ರತಿಯೊಬ್ಬರೂ ಅವನು ತಮ್ಮಲ್ಲಿ ಹೆಚ್ಚು ಪಕ್ಷಪಾತ ಮಾಡುತ್ತಿದಾನೆಂಬ ಭಾವನೆಯನ್ನು ಹೊಂದುತ್ತಿದ್ದರು. ಹಾಗಿತ್ತು ಅವನ ನಡೆವಳಿಕೆ.

ನವೀನನನ್ನು ಮಧುಸೂದನ ಮನಃ ಪೂರ್ವಕವಾಗಿ ಪ್ರೀತಿಸುತ್ತಿದ್ದುದಕ್ಕೆ ಮತ್ತೊಂದು ನಿದ ರ್ಶನ—ಅವನಿಗೆ ನವೀನನ ಹೆಂಡತಿ ಮೋತಿಯಮ್ಮನನ್ನು ಕಂಡರೆ ಆಗದಿದ್ದುದು. ಯಾರ ಮೇಲೆ ಅವನಿಗೆ ಅಷ್ಟು ಮಮತೆಯೋ ಅವರ ಮೇಲೆ ತನ್ನ ಏಕಾಧಿಪತ್ಯವಿರಬೇಕೆಂದು ಆಸೆ. ಆ

ಕಾರಣದಿಂದಲೇ ಹೆಂಡತಿಯು ನವೀನನ ಮನಸ್ಸನ್ನು ಕೆಡಿಸಿಬಿಟ್ಟಿದ್ದಾಳೆಂದು ಅವನು ಊಹಿಸಿದ್ದ. ತಮ್ಮನ ಮೇಲೆ ಅವನಿಗೆ ಪಿತೃದತ್ತವಾದ ಅಧಿಕಾರವಿರುವಾಗ ಹೊರಗಣಿಂದ ಯಾರೋ ಒಬ್ಬ ಹೆಂಗಸು ಅದಕ್ಕೆ ಅಡ್ಡಿಮಾಡಲು ಬಂದಿರುವಳಲ್ಲಾ ಎಂದುಕೊಳ್ಳುತ್ತಿದ್ದ. ತಮ್ಮನನ್ನು ಮಧುಸೂದನನು ಅಷ್ಟರಮಟ್ಟಿಗೆ ಪ್ರೀತಿಸದೆ ಇದ್ದಿದ್ದರೆ ಇದಕ್ಕೆ ಬಹಳ ದಿನಗಳ ಹಿಂದೆಯೇ ಮೋತಿಯಮ್ಮನಿಗೆ ಗಡೀ ಪಾರಾಗಿ ಬಿಡುತ್ತಿತ್ತು.

ಇಷ್ಟರ ಮಟ್ಟಿಗೆ ಕೆಲಸಮಾಡಿ ಪುನಃ ಆಫೀಸಿಗೆ ಹೊರಟುಹೋಗಬೇಕೆಂದು ಮಧುಸೂದನ ಮನಸ್ಸು ಮಾಡಿದ. ಆದರೆ ಏನು ಮಾಡಿದರೂ ಮನಸ್ಸಿನಲ್ಲಿ ಉತ್ಸಾಹವುಂಟಾಗಲಿಲ್ಲ. ಕುಮು ಹಾಗೆ ಕಾಗದವನ್ನು ಚೂರುಚೂರಾಗಿ ಹರಿದು ಹೋದ ಚಿತ್ರ ಮನಸ್ಸಿನಲ್ಲಿ ಅತ್ಯಂತ ಗಾಢವಾಗಿ ಮುದ್ರಿತವಾಗಿತ್ತು. ಅದೊಂದು ಆಶ್ಚರ್ಯಕರವಾದ ಚಿತ್ರ. ಅಂತಹುದನ್ನೆಂದಿಗೂ ಅವನು ಮನಸ್ಸಿನಲ್ಲಿ ಕೂಡ ಊಹಿಸಲಾರ. ಒಂದು ಸಲ ಅವನ ಚಿರಕಾಲದ ಸಂದೇಹ ಪ್ರಕೃತಿಗೆ ಅನುಗುಣವಾಗಿ ಕುಮುವು ಕಾಗದವನ್ನು ಮೊದಲೇ ಓದಿಬಿಟ್ಟಿರಬೇಕೆಂದು ಮಾಡಿದ್ದ. ಆದರೆ ಕುಮುವಿನ ಮುಖದಲ್ಲಿ ಹೊಳೆಯುತ್ತಿದ್ದ ಆ ನಿರ್ಮಲವಾದ ಸತ್ಯದ ಬೆಳಕನ್ನು ಕಂಡು ಅವಳನ್ನು ಬಹಳ ಕಾಲ ನಂಬದಿರಲು ಮಧುಸೂದನನಿಗೆ ಕೂಡ ಅಸಂಭವ.

ಕುಮುವನ್ನು ತನ್ನ ಕಠಿಣವಾದ ಅಧಿಕಾರದೊಳಗೆ ಇಟ್ಟುಕೊಳ್ಳುವ ಶಕ್ತಿಯನ್ನು ಮಧುಸೂದನ ನೋಡುತ್ತ ನೋಡುತ್ತ ಕಳೆದುಕೊಂಡು ಬಿಟ್ಟಿದ್ದ. ಈಗ ತನ್ನ ಸ್ವಂತ ಕುಂದು ಕೊರತೆಗಳೇ ಅವನನ್ನು ಪೀಡಿಸಲು ಆರಂಭಿಸಿದುವು. ಅವನ ವಯಸ್ಸು ಹೆಚ್ಚು - ಈ ವಿಷಯವನ್ನು ಅವನಿಗೆ ಮರೆಯಲು ಸಾಧ್ಯವಿಲ್ಲ. ಅಷ್ಟೇಕೆ ಅವನ ತಲೆಯ ಕೂದಲಲ್ಲಿ ಹೆಚ್ಚು ಭಾಗ ನರೆದಿದ್ದುದನ್ನು ಅವನು ಹೇಗಾದರೂ ಮಾಡಿ ಮುಚ್ಚಿಟ್ಟರೆ ಬದುಕಿದ ಹಾಗೆ. ತನ್ನ ಬಣ್ಣ ಕಪ್ಪು ಬೇರೆ. ವಿಧಾತನ ಈ ಅನ್ಯಾಯ ಇಷ್ಟು ಕಾಲವಾದಮೇಲೆ ಈಗ ಅವನನ್ನು ಬಾಧಿಸುತ್ತಿತ್ತು. ಕುಮುವಿನ ಮನಸ್ಸು ಈ ರೀತಿಯಾಗಿ ಅವನ ಕೈಯಿಂದ ಜಾರಿಹೋಗುತ್ತಿರುವುದರ ಕಾರಣ, ತನ್ನ ಈ ರೂಪ ಮತ್ತು ಯೌವನದ ಅಭಾವ. ಇವೆರಡೇ ಅನ್ನುವುದರಲ್ಲಿ ಅವನಿಗೆ ಸಂದೇಹವಿರಲಿಲ್ಲ. ಈ ವಿಷಯದಲ್ಲಿ ಅವನು ನಿರಸ್ತ್ರನಾಗಿದ್ದ. ದುರ್ಬಲನಾಗಿದ್ದ.

ಚಟರ್ಜಿಗಳ ಮನೆಯ ಹೆಣ್ಣನ್ನು ಮದುವೆಯಾಗಬೇಕೆಂದೇನೋ ಬಯಸಿದ್ದ. ಆದರೆ ಬ್ರಹ್ಮ ಮೊದಲಿಂದಲೇ ತನ್ನ ಸೋಲನ್ನು ಗೊತ್ತುಮಾಡಿ ಇಟ್ಟಿದ್ದ ಹೆಣ್ಣು ಅವನಿಗೆ ಲಭಿಸುವಳೆಂದು ಅವನು ಊಹಿಸಿಯೂ ಇರಲಿಲ್ಲ....ಹಾಗೆಂದ ಮಾತ್ರಕ್ಕೆ ಅವನ ಹಣ ಬರಹದಲ್ಲಿ ಅವನ ಮಾತನ್ನು ಎದುರಿಲ್ಲದೆ ಕೇಳಿಕೊಂಡಿರುವಂತಹ ಸಾಮಾನ್ಯ ಹೆಣ್ಣೇ ಇದ್ದಿದ್ದರೂ ಸಾಕಾಗಿತ್ತು ಎಂದು ಹೇಳುವ ಹಾಗೆಯೂ ಇಲ್ಲ. ಮಧುಸೂದನನು ಕೇವಲ ಒಂದೇ ಒಂದು ವಿಷಯದಲ್ಲಿ ಬಲವಾಗಿದ್ದ. ಅದು ಐಶ್ವರ್ಯದಲ್ಲಿ. ಅಂದು ಬೆಳಿಗ್ಗೆಯೇ ಅವನ ಮನೆಗೆ ಕೆಲವು ನಗಗಳು ಬಂದಿದ್ದುವು. ಅವುಗಳ ಮಧ್ಯೆಯಿಂದ ಮೂರು ಉಂಗುರಗಳನ್ನು ತೆಗೆದಿಟ್ಟುಕೊಂಡು ಅವುಗಳಲ್ಲಿ ಯಾವುದು ಕುಮುವಿನ ಮನಸ್ಸಿಗೊಪ್ಪುವುದೆಂದು ನೋಡಲು ಇಷ್ಟವುಳ್ಳವನಾಗಿದ್ದ. ಆ ಮೂರು ಉಂಗುರಗಳ ಡಬ್ಬಿಗಳನ್ನು ಜೇಬಿನಲ್ಲಿಟ್ಟುಕೊಂಡು ತನ್ನ ಮಲಗುವ ಮನೆಗೆ ಹೋದ. ಒಂದು ಕೆಂಪಿನದ, ಒಂದು ವೈಢೂರ್ಯ, ಮತ್ತೊಂದು ವಜ್ರದ ಉಂಗುರ. ಮಧುಸೂದನನು ಮನಸ್ಸಿನಲ್ಲೇ ಒಂದು ದೃಶ್ಯವನ್ನು ಕಲ್ಪನೆ ಮಾಡಿಕೊಳ್ಳುತ್ತಿದ್ದ. ಮೊದಲು ಕೆಂಪಿನ ಉಂಗುರದ ಡಬ್ಬಿಯನ್ನು

ಅವನು ನಿಧಾನವಾಗಿ ತೆಗೆಯುವನು. ಕುಮುವಿನ ಆಶಾಭರಿತ ಕಣ್ಣುಗಳು ಉಜ್ವಲವಾಗಿ ಹೋಗುವುವು. ಅದಾದ ಮೇಲೆ ವೈಢೂರ್ಯದ ಉಂಗುರ ಕಾಣಬರುತ್ತದೆ. ಅದರಿಂದ ಅವಳ ಕಣ್ಣುಗಳು ಇನ್ನೂ ವಿಶಾಲವಾಗುತ್ತವೆ. ಅದಾದ ಮೇಲೆ ವಜ್ರದುಂಗುರ. ಅದರ ಅಮೌಲ್ಯವಾದ ಹೊಳಪಿನಿಂದ ಹೆಂಡತಿಯ ವಿಸ್ಮಯಕ್ಕೆ ಎಲ್ಲೆಯೇ ಇಲ್ಲ. ಮಧುಸೂದನನು ಆಗ ರಾಜಶ್ರೀವಿಯಿಂದ "ನಿನಗೆ ಯಾವುದು ಇಷ್ಟವೋ ಅದನ್ನು ತೆಗೆದುಕೋ" ಎಂದು ಹೇಳುವನು. ಕುಮು ವಜ್ರದುಂಗುರವನ್ನು ತೆಗೆದುಕೊಳ್ಳುವಳು. ಅವಳ ಆಸೆಯ ಕ್ಷೀಣಸಾಹಸಕ್ಕೆ ನಕ್ಕು ಮಧುಸೂದನನು ಆ ಮೂರು ಉಂಗುರಗಳನ್ನೂ ಅವಳ ಬೆರಳುಗಳಿಗೆ ತೊಡಿಸಿ ಬಿಡುವನು....ಅದಾದ ನಂತರವೇ ರಾತ್ರಿ ಶಯನ ಮಂಚದ ತೆರೆ ತೆರೆಯಲ್ಪಡುವುದು.

ಅಂದು ರಾತ್ರಿ ಆಹಾರವಾದ ಮೇಲೆಯೇ ಈ ನಾಟಕವಾಗಬೇಕೆಂದು ಮಧುಸೂದನನ ಎಣಿಕೆ. ಆದರೆ ಈ ನಡುವೆ ಮಧ್ಯಾಹ್ನ ಈ ರಾಮಾಯಣವಾದ ಮೇಲೆ ಮಧುಸೂದನನಿಗೆ ಇನ್ನು ತಡೆದಿರಲು ಆಗಲಿಲ್ಲ. ರಾತ್ರಿಯ ಅಂಕವನ್ನು ಅಂದು ಅಪರಾಹ್ಣದಲ್ಲಿಯೇ ಮುಗಿಸಿಬಿಡಬೇಕೆಂದುಕೊಂಡು ಮಲಗುವ ಮನೆಗೆ ಹೋದ. ಅಲ್ಲಿ ಹೋಗಿ ನೋಡಿದರೆ ಕುಮು ಒಂದು ಟಿನ್ನಿನ ಪೆಟ್ಟಿಗೆ ತೆರೆದು ನೆಲದ ಮೇಲೆ ಕೂತು ಸವರಿಸುತ್ತಿದ್ದಾಳೆ. ಸುತ್ತಲೂ ಅವಳ ಬಟ್ಟೆ ಬರೆ, ಮತು ಇತರ ಸಾಮಾನುಗಳು ಹರಡಿವೆ,

"ಇದೇನು ವಿಷಯ ? ಎಲ್ಲಿಗಾದರೂ ಹೋಗುತ್ತೀಯೇನು ?"

"ಹೂಂ."

"ಎಲ್ಲಿಗೆ ?"

"ರಜಬಪುರಕ್ಕೆ."

"ಹಾಗಂದರೆ ಅರ್ಥವೇನು ?"

"ನಿಮ್ಮ ಡೆಸ್ಕಿನ ಡ್ರಾಯರನ್ನು ತೆಗೆದದ್ದಕ್ಕೆ ಮೈದುನನಿಗೆ ಶಿಕ್ಷೆಮಾಡಿದ್ದೀರಿ, ಆ ಶಿಕ್ಷೆ ನನಗೇ ಆಗಬೇಕಾದದ್ದು."

"ನೀನು ಹೋಗಬೇಡ" ಎಂದು ಅನುರೋಧಮಾಡಿ ಕೂಡುವುದು ಮಧುಸೂದನನ ಸ್ವಭಾವಕ್ಕೆ ವಿರೋಧವಾದುದು. ಅವನ ಮನಸ್ಸಿನಲ್ಲಿ ಮೊದಲಸಲ "ಹೋಗಲಿಬಿಡು....ಎಷ್ಟು ದಿನ ಇರುತ್ತಾಳೋ" ಎಂದು ಕೊಂಡು ಅಲ್ಲಿ ಒಂದು ಕ್ಷಣವೂ ನಿಲ್ಲದೆ ದಡದಡನೆ ಅಲ್ಲಿಂದ ಹೊರಟು ಹೋದ.

## ಮೂವತ್ತಾರನೆಯ ಅಧ್ಯಾಯ

ಮಧುಸೂದನನು ಹೊರಗೆ ಹೋಗಿ ನವೀನನನ್ನು ಕರೆದು "ನಿಮ್ಮ ಅತ್ತಿಗೆಯನ್ನು ನೀವೆಲ್ಲಾ ಸೇರಿ ಹುಚ್ಚುಹುಚ್ಚಾಗಿ, ಕುಣಿಸುತ್ತಿದ್ದೀರಿ."

"ಅಣ್ಣಾ, ನಾವಂತೂ ನಾಳೆಯೇ ಹೊರಟು ಹೋಗುತ್ತಾ ಇದ್ದೇವೆ. ನಿನ್ನ ಹತ್ತಿರ ಇನ್ನು ಮೇಲೆ ಹೆದರಿಕೊಂಡು ಹೆದರಿಕೊಂಡು ತಲೆ ಬಾಗಿಸಿಕೊಂಡು ಮಾತಾಡಲಾರೆ. ಇವತ್ತು ನಿನ್ನ ಹತ್ತಿರ ಸ್ಪಷ್ಟವಾಗಿ ಹೇಳಿಹೋಗುತ್ತೇನೆ. ಯಜಮಾನಿಯನ್ನು ಹುಚ್ಚು ಹಿಡಿಸು

ವುದಕ್ಕೆ ಈ ಸಂಸಾರದಲ್ಲಿ ಬೇರೆ ಯಾರೂ ಬೇಕಿಲ್ಲ. ನೀನೊಬ್ಬನೇ ಆ ಕೆಲಸ ಮಾಡಬಲ್ಲೆ. ಇನ್ನೂ ನಾವಿಲ್ಲಿಯೇ ಇದ್ದಿದ್ದರೆ ಸ್ವಲ್ಪ ನೆಮ್ಮದಿಯಾಗಿರುವ ಹಾಗೆ ಮಾಡಬಹುದಾಗಿತ್ತು. ಆದರೆ ಅದು ನಿನಗೆ ಸಹಿಸಲಿಲ್ಲ."

ಮಧುಸೂದನನು ಗರ್ಜನೆ ಮಾಡಿ "ದೊಡ್ಡ ದೊಡ್ಡ ಮಾತೆಲ್ಲಾ ಆಡಬೇಡ. ರಜಬಪುರಕ್ಕೆ ಹೋಗಬೇಕು ಅಂತ ನೀನೇ ಅಲ್ಲವೇ ಅವಳಿಗೆ ಹೇಳಿ ಕೊಟ್ಟದ್ದು ?" ಎಂದು ಕೂಗಿದ.

"ಆ ಮಾತು ಊಹೆಯಲ್ಲೂ ಸಾಧ್ಯವಿಲ್ಲ. ಹಾಗಿರುವಾಗ ಹೇಳಿಕೊಡುವುದು ಹೇಗೆ ?"

"ನೋಡಿಲ್ಲಿ. ಈ ವಿಷಯದಲ್ಲಿ ನೀವೇನಾದರೂ ಕುಣಿಸಿದ್ದೇ ಆದರೆ ನಿಮ್ಮ ಗತಿ ಏನಾಗುತ್ತೋ ನೋಡುತ್ತಿರಿ....ಸ್ಪಷ್ಟವಾಗಿ ಹೇಳಿದ್ದೇನೆ."

"ಅಣ್ಣಾ, ಯಾರಿಗೆ ಹೇಳುತ್ತಾ ಇದ್ದೀಯ, ಈ ಮಾತುಗಳೆಲ್ಲಾ ? ಯಾರಿಗೆ ಹೇಳಿದರೆ ಪ್ರಯೋಜನಕ್ಕೆ ಬರುತ್ತದೋ ಅವರಿಗೆ ಹೇಳು."

"ನೀವು ಅವಳಿಗೇನೂ ಹೇಳಲಿಲ್ಲವೇ ?"

"ಇಗೋ, ನಿನ್ನ ಮೈಮುಟ್ಟಿ ಹೇಳುತ್ತೇನೆ. ಅದನ್ನ ಕಲ್ಪನೆಯಲ್ಲಿ ಕೂಡ ಮಾಡಿಲ್ಲ."

"ನಿಮ್ಮತ್ತಿಗೆ ಹೋಗಬೇಕೆಂದು ಹಠ ಹಿಡಿದು ಕೂತರೆ ಆಗ ಏನು ಮಾಡುತ್ತೀರಿ ?"

"ನಿನಗೆ ಹೇಳಿಕಳುಹಿಸುತ್ತೇವೆ. ನಿಮ್ಮ ಪಹರೆಯವರು, ಭಲ್ಯದವರು, ಬಂದೂಕಿನವರು ಮುಂತಾದ ಸಿಬ್ಬಂದಿಯೆಲ್ಲಾ ಇವಾರೆ. ನೀನು ಆಕೆಯನ್ನು ತಡೆಮಾಡಬಲ್ಲೆ. ಆದರೆ ಇದಾದ ಮೇಲೆ ಈ ಯುದ್ಧದ ಸುದ್ದಿಯನ್ನು ನಿನ್ನ ಶತ್ರುಪಕ್ಷದವರು ಪತ್ರಿಕೆಗಳಲ್ಲಿ ಪ್ರಕಟ ಮಾಡಿದರೆ ಆಗ ಪುನಃ ನಿನ್ನ ನಾದಿನಿಯಮೇಲೆ ಸಂದೇಹಪಡಬೇಡ."

ಮಧುಸೂದನನು ಮತ್ತೆ ಅವನನ್ನು ಗದರಿಸಿ "ಮುಚ್ಚುಬಾಯಿ, ಅವಳು ರಜಬಪುರಕೆ ಹೋಗಬೇಕು ಅಂತಿದ್ದರೆ ಹೋಗಲಿ. ನಾನು ತಡೆಯುವುದಿಲ್ಲ." ಎಂದ.

" ಆಕೆಯ ಊಟ, ಉಪಚಾರದ ವ ವಸ್ಥೆ ?"

"ನಿನ್ನ ಹೆಂಡತಿಯ ಒಡವೆ ಮಾರು ಹೋಗು ! ಹೋಗೊ ! ಹೋಗೋ ಅಂದರೆ...! ಈ ಕ್ಷಣ ಮನೆ ಬಿಟ್ಟು ಹೊರಡು."

ನವೀನನು ಹೊರಟುಹೋದ. ಮಧುಸೂದನನು ಯೂ-ಡಿ-ಕೊಲೋನ್‌ನಲ್ಲಿ ತೋಯಿಸಿದ ಕರವಸ್ತ್ರವನ್ನು ಹಣೆಯಮೇಲಿಟ್ಟುಕೊಂಡು ಪುನಃ ಒಂದು ಸಲ ಆಫೀಸಿಗೆ ಹೋಗುವ ಸಂಕಲ್ಪವನ್ನು ಮನಸ್ಸಿನಲ್ಲಿ ದೃಢಮಾಡಲುತೊಡಗಿದ.

ನವೀನನಿಂದ ನಡೆದ ವಿಷಯವನ್ನೆಲ್ಲಾ ತಿಳಿದುಕೊಂಡ ಮೋತಿಯಮ್ಮನು ಕುಮುವಿನ ಬಳಿ ಓಡಿಬಂದು "ಇದೇನಮ್ಮ, ಏನು ಮಾಡುತ್ತಿದ್ದೀಯ ?" ಎಂದಳು.

"ನಾನು ನಿಮ್ಮ ಜೊತೆಯಲ್ಲಿ ಬರುತ್ತೇನೆ."

"ನಿನ್ನನ್ನು ಕರೆದುಕೊಂಡು ಹೋಗುವುದು ನಮಗೆ ಸಾಧ್ಯವೇ ?"

"ಏಕೆ?"

"ಯಜಮಾನರು ನಮ್ಮ ಮುಖ ಕೂಡ ನೋಡುವುದಿಲ್ಲ."

"ಹಾಗಾದರೆ ನನ್ನ ಮುಖವೂ ನೋಡದೆ ಇರಲಿ."

"ಅದೇನೋ ಸರಿಯೇ, ಆದರೆ ನಾವು ಬಹಳ ಬಡವರು."

"ಬಡತನದಲ್ಲಿ ನಾನೇನೂ ಕಡಮೆಯಿಲ್ಲ. ನನಗೂ ಹೇಗೋ ನಡೆಯುತ್ತೆ."

"ಜನ ಯಜಮಾನರನ್ನ ಕಂಡು ಆಡಿಕೊಳ್ಳುತ್ತಾರೆ."

"ಹಾಗಾದರೆ ನನಗೋಸ್ಕರ ನೀವು ಯಾಕೆ ಶಿಕ್ಷೆ ಅನುಭವಿಸಬೇಕು. ಅದು ನನಗೆ ಸಹಿಸುವುದಿಲ್ಲ."

"ಇಲ್ಲವೇ, ತಂಗಿ....ಇದು ನಿನಗೋಸ್ಕರವಲ್ಲ ಶಿಕ್ಷೆ....ಇದು ನಮ್ಮ ಸ್ವಂತ ಪಾಪಕ್ಕೋಸ್ಕರವೇ...."

"ಏನು ಅಂತಹ ಪಾಪ ನಿಮ್ಮದು ?"

"ನಾವಲ್ಲವೇ ನಿನಗೆ ಆ ಸುದ್ದಿ ಹೇಳಿದ್ದು ?"

"ನಾನು ಸುದ್ದಿ ಕೇಳುವುದಕ್ಕೆ ಇಷ್ಟಪಟ್ಟಿರುವಾಗ, ಸುದ್ದಿ ಹೇಳುವುದೇ ತಪ್ಪಾಗಿ ಹೋಯಿತೇ ?"

"ಹೌದು, ಯಜಮಾನಿಗೆ ತಿಳಿಸದೆಯೇ ಹೇಳಿದುದು ತಪ್ಪು "

ಸರಿ ಹಾಗಾದರೆ. ತಪ್ಪು ನೀವೂ ಮಾಡಿದ್ದೀರಿ. ನಾನೂ ಮಾಡಿದ್ದೇನೆ. ಒಟ್ಟಿಗೇ ಶಿಕ್ಷೆ ಅನುಭವಿಸೋಣ. ನಡಿ."

"ಒಳ್ಳೆಯದು ಹಾಗಾದರೆ....ಹಾಗಾದರೆ ಪಲ್ಲಕ್ಕಿ ತಯಾರು ಮಾಡಿ ಅಂತ ಹೇಳಿ ಬರುತ್ತೇನೆ. ಯಜಮಾನರು ನಿನ್ನನ್ನು ಅಡ್ಡಿ ಮಾಡಕೂಡದು ಅಂತ ಅಪ್ಪಣೆ ಮಾಡಿದಾರೆ....ಈಗ ನಾನೇ ನಿನ್ನ ಸಾಮಾನುಗಳನ್ನ ಕಟ್ಟಿಕೊಡುತೇನೆ. ನೀನು ಕಟ್ಟಿ ಕಟ್ಟಿ ಬೆವರು ಸುರಿಸಿಕೊಳ್ಳುತ್ತಿದ್ದಿ, ಸುಮ್ಮನೆ."

ಹೀಗೆಂದು ಇಬ್ಬರೂ ಸಾಮಾನುಗಳನ್ನು ಕಟ್ಟಿಡಲು ತೊಡಗಿದರು.

ಈ ಸಮಯದಲ್ಲಿ ಹೊರಗಡೆ ಮಚ್-ಮಚ್ ಎಂದು ಚಡಾವುಗಳ ಶಬ್ದವಾಯಿತು. ಮೋತಿಯಮ್ಮನು ಓಟಕಿತ್ತಳು.

ಮಧುಸೂದನನು ಕೋಣೆಯೊಳಗೆ ಪ್ರವೇಶಿಸಿ "ಕುಮುದಿನಿ, ನೀನು ಹೋಗುವುದಕ್ಕಾಗದು." ಎಂದ.

"ಯಾಕೆ ಹೋಗುವುದಕ್ಕಾಗದು ?"

"ನಾನು ಹೇಳುತ್ತೇನೆ ಅಂತ....ಗೊತ್ತಾಯಿತೇ ?"

"ಆಗಲಿ, ಹಾಗಾದರೆ ನಾನು ಹೋಗುವುದಿಲ್ಲ, ಇದಾದ ಮೇಲೆ ಬೇರೆ ಏನು ಅಪ್ಪಣೆ ?"

"ಸಾಮಾನುಗಳನ್ನು ಪ್ಯಾಕ್ ಮಾಡುವುದು ನಿಲ್ಲಿಸಿ ಬಿಡು."

"ಇಗೋ ನಿಲ್ಲಿಸಿಬಿಟ್ಟೆ" ಹೀಗೆಂದು ಹೇಳಿ ಕುಮು ಆ ಕೋಣೆಯನ್ನು ಬಿಟ್ಟು ಹೊರಟಳು.

ಮಧುಸೂದನನು "ಕೇಳಿಲ್ಲಿ ಸ್ವಲ್ಪ" ಎಂದು ಕೂಗಿದ. ಕೂಡಲೇ ಕುಮು ವಾಪಸು ಬಂದು "ಏನು ಹೇಳಿ" ಎಂದಳು.

ಹೇಳುವಂತಹುದು ವಿಶೇಷವೇನೂ ಇರಲಿಲ್ಲ, ಆದರೂ ಸ್ವಲ್ಪ ಯೋಚನೆ ಮಾಡಿ "ನಿನಗೋಸ್ಕರವಾಗಿ ಉಂಗುರಗಳನ್ನು ತಂದಿದ್ದೇನೆ." ಎಂದ.

"ನನಗೆ ಯಾವ ಉಂಗುರ ಅಪೇಕ್ಷೆಯಿತ್ತೋ ಅದನ್ನ ನೀವು ಬೇಡವೆಂದಿರಿ, ಇನ್ನು ನನಗೆ ಉಂಗುರ ಯಾವುದೂ ಬೇಕಿಲ್ಲ."

"ಒಂದು ಸಲ ನೋಡಿಯಾದರೂ ನೋಡಬಾರದೇ...."

ಮಧುಸೂದನನು ಒಂದೊಂದಾಗಿ ಉಂಗುರಗಳ ಡಬ್ಬಿಗಳನ್ನು ತೆಗೆದು ತೋರಿಸಿದ. ಕುಮು ಯಾವ ಮಾತೂ ಆಡಲಿಲ್ಲ.

"ಇದರಲ್ಲಿ ಯಾವುದಿಷ್ಟವೋ ಅದನ್ನ ನೀನು ತೆಗೆದು ಹಾಕಿಕೊಳ್ಳಬಹುದು."

"ನೀವು ಯಾವುದನ್ನು ಹಾಕಿಕೋ ಅಂತ ಅಪ್ಪಣೆ ಮಾಡುತ್ತೀರೋ ಅದನ್ನೇ ನಾನು ಹಾಕಿಕೊಳ್ಳುತ್ತೇನೆ."

"ಮೂರೂ ಮೂರು ಬೆರಳುಗಳಿಗೆ ಹಾಕಿಕೊಂಡರೆ ಚೆನ್ನಾಗಿರುತ್ತೆ ಅಂತ ಅನ್ನಿಸುತ್ತೆ ನನಗೆ."

"ನೀವು ಹೇಳಿದರೆ ಮೂರೂ ಹಾಕಿಕೊಳ್ಳುತ್ತೇನೆ."

"ನಾನೇ ತೊಡಿಸುತ್ತೇನೆ."

"ತೊಡಿಸಿ, ಹಾಗಿದ್ದರೆ."

ಮಧುಸೂದನನು ತೊಡಿಸಿದ. ಕುಮು ಆಗ "ಇನ್ನೇನಾದರೂ ಅಪ್ಪಣೆಯೇ" ಎಂದಳು.

"ಕುಮು, ನನ್ನ ಮೇಲೆ ಕೋಪವೇಕೆ?" ಎಂದ.

"ನನಗೆ ಸ್ವಲ್ಪವೂ ಕೋಪವಿಲ್ಲ," ಹೀಗೆಂದು ಕುಮು ಮತ್ತೆ ಕೋಣೆಬಿಟ್ಟು ಹೊರಗೆ ಹೋದಳು. ಮಧುಸೂದನನು ಅಸ್ಥಿರನಾಗಿ "ಆಹಾ, ಎಲ್ಲಿಗೆ ಹೊರಟೆ, ಬಾಯಿಲ್ಲಿ, ಒಂದು ಮಾತು." ಎಂದು ಕೂಗಿದ.

ಕುಮು ಪುನಃ ವಾಪಸ್ಸು ಬಂದು "ಏನು ಹೇಳಿ" ಅಂದಳು. ಏನು ಹೇಳಬೇಕೆಂದು ತೋಚಲಿಲ್ಲ, ಮಧುಸೂದನನ ಮುಖ ಕೆಂಪಗಾಗಿ ಹೋಯಿತು. ಧಿಕ್ಕಾರದಿಂದ ಗದರುತ್ತಾ "ಹೋಗು, ಹೋಗು ಹಾಗಿದ್ದರೆ" ಎಂದು, ಮತ್ತೆ ಕೋಪದಲ್ಲಿಯೇ "ಕೊಡು, ಆ ಉಂಗುರಗಳನ್ನು ವಾಪಸ್ಸು ಕೊಟ್ಟು ಬಿಡು...." ಎಂದ, ಆ ಕ್ಷಣವೇ ಕುಮು ಉಂಗುರಗಳನ್ನು ಕಳಚಿ ಟೀಪಾಯಿಯ ಮೇಲೆ ಇಟ್ಟು ಬಿಟ್ಟಳು. ಮಧುಸೂದನನು ಗರ್ಜಿಸಿ "ಹೊರಟು ಹೋಗು" ಎಂದ.

ಕುಮು ಕೂಡಲೇ ಹೊರಟು ಹೋದಳು.

ಈ ಸಲ ಮಧುಸೂದನನು ಆಫೀಸಿಗೆ ಹೋಗಬೇಕೆಂದು ದೃಢಪ್ರತಿಜ್ಞೆ ಮಾಡಿದ. ಆಗಂತೂ ಕೆಲಸದ ಹೊತ್ತು ಮೀರಿತ್ತು. ಆಂಗ್ಲೇಯ ನೌಕರರೆಲ್ಲಾ ಟೆನ್ನಿಸ್ ಆಡಲು ಹೊರಟು ಹೋಗಿದ್ದರು. ಮೇಲ್ತರಗತಿಯ ಗುಮಾಸ್ತರುಗಳ ದಳ ಹೊರಡುವುದರಲ್ಲಿದ್ದರು. ಈ ಸಮಯದಲ್ಲಿ ಮಧುಸೂದನನು ಆಫೀಸಿಗೆ ಬಂದು ತಕ್ಷಣವೇ ಕೆಲಸದಲ್ಲಿ ಮುಳುಗಿದನು. ಆರು ಘಂಟೆ ಹೊಡೆಯಿತು. ಏಳು ಹೊಡೆಯಿತು. ಎಂಟೂ ಹೊಡೆಯಿತು. ಆಗ ಲೆಕ್ಕದ ಪುಸ್ತಕಗಳನ್ನು ಮುಚ್ಚಿ ಹೊರಗೆ ಹೊರಟ.

## ಮೂವತ್ತೇಳನೆಯ ಅಧ್ಯಾಯ

ಇಷ್ಟು ದಿನ ಮಧುಸೂದನನ ಬಾಳಿನ ಯಾತ್ರೆಯಲ್ಲಿ ಎಂದೂ ಒಂದು ಸೂತ್ರವೂ ಕಿತ್ತು ಹೋಗಿರಲಿಲ್ಲ. ಪ್ರತಿ ದಿನವೂ, ಪ್ರತಿ ಮುಹೂರ್ತವೂ ನಿಶ್ಚಿತನಿಯಮದಿಂದ ಕಟ್ಟಲ್ಪಟ್ಟಿದ್ದುವು, ಇಂದು ಹಠಾತ್ತಾಗಿ ಅನಿಶ್ಚಿತವಾದುದೊಂದು ಸಂಭವಿಸಿ ಎಲ್ಲವನ್ನು ತಾರುಮಾರು ಮಾಡಿ

ಬಿಟ್ಟಿತು....ಈಗವನು ಆಫೀಸನ್ನು ಬಿಟ್ಟು ಮನೆಯ ಕಡೆ ಹೋಗುತ್ತಿದ್ದಾನೆ. ರಾತ್ರಿ ಹೇಗೆ ಕಳೆಯುವುದೋ ಹೇಳಲು ಸಾಧ್ಯವಿಲ್ಲ. ಮಧುಸೂದನನು ಹೆದರಿಕೊಂಡೇ ಮನೆಗೆ ಬಂದು ನಿಧಾನವಾಗಿ ಊಟಮಾಡಿದ. ಆಮೇಲೆ ಕೂಡಲೇ ಮಲಗುವ ಮನೆಗೆ ಹೋಗಲು ಧೈರ್ಯವಾಗಲಿಲ್ಲ. ಮೊದಲು ಸ್ವಲ್ಪ ಹೊತ್ತು ಹೊರಗಡೆಯ ದಕ್ಷಿಣದ ವರಾಂಡದಲ್ಲಿ ಶತಪದ ತಿರುಗುತ್ತಾ ಇದ್ದ. ಮಲಗುವ ಸಮಯವಾದ ಒಂಬತ್ತುಘಂಟೆ ಹೊಡೆದ ತಕ್ಷಣ ಅಂತಃಪುರಕ್ಕೆ ಹೋದ. ಹೊತ್ತಿಗೆ ಸರಿಯಾಗಿ ಹಾಸುಗೆಯಲ್ಲಿ ಮಲಗಬೇಕು. ಬೇರೆ ಯಾವುದನ್ನೂ ಮಾಡುವುದಿಲ್ಲ—ಎಂದು ದೃಢವಾಗಿ ಮನಸ್ಸು ಮಾಡಿದ್ದ.

ಶೂನ್ಯವಾಗಿದ್ದ ಮಲಗುವ ಮನೆಯನ್ನು ಪ್ರವೇಶಿಸಿ ಸೊಳ್ಳೆಪರದೆಯನ್ನು ಎತ್ತಿ ನೆಟ್ಟಗೆ ಧಪ್ಪೆಂದು ಹಾಸುಗೆಯ ಮೇಲೆ ಬಿದ್ದು ಕೊಂಡ. ನಿದ್ದೆ ಬರಲೇ ಇಲ್ಲ. ರಾತ್ರಿ ಎಷ್ಟೋ ಹೊತ್ತಾದ ಹಾಗೆಲ್ಲ ಒಳಗಿನ ಹಸಿದ ಜೀವ ಕತ್ತಲೆಯಲ್ಲಿ ಮೆಲ್ಲ ಮೆಲ್ಲನೆ ಹೊರಗೆ ಬರುವುದು. ಆಗ ಅದನ್ನು ತಡೆಯುವವರು ಯಾರೂ ಇಲ್ಲ. ಪಹರೆಯವರೆಲ್ಲಾ ದಣಿದು ವಿಶ್ರಾಂತಿ ಪಡೆಯುತ್ತಿರುವರು.

ಗಡಿಯಾರ ಒಂದು ಘಂಟೆ ಹೊಡೆಯಿತು. ಕಣ್ಣಲ್ಲಿ ಸ್ವಲ್ಪವೂ ನಿದ್ದೆಯಿಲ್ಲ. ಇನ್ನು ಅವನಿಗೆ ಸುಮ್ಮನೆ ಇರಲಾಗಲಿಲ್ಲ. ಹಾಸುಗೆಯಿಂದೆದ್ದು "ಈ ಕುಮು ಎಲ್ಲಿ?" ಎಂದು ಯೋಚಿಸಲು ತೊಡಗಿದ. ಬಂಕೂವಿಗೆ ದೀಪ ಸಜ್ಜು ಮಾಡುವ ಕೋಣೆಗೆ ಬೀಗ ಹಾಕಿಡಬೇಕೆಂದು ಮೊದಲೇ ಕಟ್ಟಾಜ್ಞೆ ಮಾಡಲಾಗಿತ್ತು...ಬಿಸಿಲು ಮಾಳಿಗೆಯನ್ನು ಹೋಗಿ ಸುತ್ತಾಡಿಬಂದ ಅಲ್ಲಿ. ಯಾರೂ ಇಲ್ಲ. ಕಾಲಿನ ಮೆಟ್ಟನ್ನು ತೆಗೆದು ಹಾಕಿ ಕೆಳಗಿನ ಮಹಡಿಯ ವರಾಂಡವನ್ನು ದಾಟಿ ನಿಧಾನವಾಗಿ ನಡೆಯುತ್ತ ಹೋದನು. ಮೋತಿಯಮ್ಮನ ಕೋಣೆಯ ಎದುರಿಗೆ ಬಂದಾಗ ಒಳಗೆ ಮಾತು ಕಥೆಯಾಗುತ್ತಿರುವ ಶಬ್ದ ಕೇಳಿದಂತಾಯಿತು. ಬೆಳಿಗ್ಗೆ ಪ್ರಯಾಣವಾಗಿರುವುದರಿಂದ ಇಂದು ಗಂಡ ಹೆಂಡತಿಯರಿಬ್ಬರೂ ಮಾತಾಡಿಕೊಳ್ಳುತ್ತಿದ್ದಾರೆಂದೆಣಿಸಿದ. ಹೊರಗಡೆಯಿಂದಲೇ ಬಾಗಿಲ ಬಳಿ ಕಿವಿಗೊಟ್ಟು ಕೇಳತೊಡಗಿದ. ಇಬ್ಬರೂ ಗುಸು ಗುಸು ಎಂದು ಮಾತಾಡಿ ಕೊಳ್ಳುತ್ತಿದ್ದರು. ಮಾತು ಸರಿಯಾಗಿ ಕೇಳುವುದಿಲ್ಲ, ಆದರೆ ಎರಡು ಧ್ವನಿಗಳೂ ಹೆಂಗಸರದೇ ಖಂಡಿತ. ಹಾಗಾದರೆ ಬಹುಶಃ ಅಗಲಿಕೆಯ ಹಿಂದಿನರಾತ್ರಿ ಮೋತಿಯಮ್ಮನ ಸಂಗಡ ಕುಮು ಅಂತರಂಗದ ಮಾತಾಡಲು ಬಂದಿದ್ದಾಳೆ. ಕೋಪ, ಕ್ಷೋಭೆಗಳಿಂದ ಬಾಗಿಲನ್ನು ಒದ್ದು ದೊಡ್ಡ ಗಲಾಟೆ ಮಾಡಬೇಕೆನ್ನು ಮನಸ್ಸಾಯಿತು....ಆದರೆ ನವೀನ ಎಲ್ಲಿದಾನೆ ಈಗ....ಖಂಡಿತವಾಗಿ ಎಲ್ಲೋ ಹೊರಗಿರಬೇಕು.

ಅಂತಃಪುರದಿಂದ ಹೊರಗೆ ಹೋಗುವ ಪರದೆಯಿಂದಾವೃತವಾದ ಓಣಿಯಲ್ಲಿ ಒಂದು ಲಾಂದ್ರ ಮಸಕು ದೀಪ ಉರಿಯುತ್ತಿತ್ತು. ಅಲ್ಲಿಗೆ ಬಂದು ಮಧುಸೂದನನು ನೋಡಿದಾಗ ಕೆಂ ಶಾಲೊಂದನ್ನು ಮೈಮೇಲೆ ಹೊದೆದು ಶ್ಯಾಮಾ ನಿಂತಿದ್ದಳು. ಅವಳೆದುರಿಗೆ ಮಧುಸೂದನ ನಾಚಿಕೊಂಡು, ಕೂಡಲೇ ಕೋಪದಿಂದ "ಏನು ಮಾಡುತ್ತೀ ರಾತ್ರಿ ಇಷ್ಟು ಹೊತ್ತಿನಲ್ಲಿ?" ಎಂ ಗದರಿದ.

ಶ್ಯಾಮಾ "ಮಲಗಿದ್ದೆ...ಹೊರಗಡೆ ಹೆಜ್ಜೆ ಶಬ್ದ ಕೇಳಿತು. ಹೆದರಿಕೊಂಡು ಏನಾ ದೆಯೋ ಏನೋ..." ಎಂದು ಉತ್ತರ ಕೊಟ್ಟಳು.

ಮಧುಸೂದನನು ಹೂಂಕರಿಸಿ "ತಲೆಯೆಲ್ಲಾ ಹರಟಬೇಡ. ನನ್ನ ಹತ್ತಿರ ಈ ಆಟವೆ

ನಡೆಯುವುದಿಲ್ಲ...ಹುಷಾರ್...ಮಲಗಿಕೋ ಹೋಗಿ." ಎಂದು ಆರ್ಭಟಿಸಿದ.

ಶ್ಯಾಮಾಸುಂದರಿಯು ಕೆಲವು ದಿನಗಳಿಂದಲೂ ಸ್ವಲ್ಪಸ್ವಲ್ಪವಾಗಿ ತನ್ನ ಸಾಹಸದ ಕ್ಷೇತ್ರವನ್ನು ಬೆಳೆಸುತ್ತಾ ಬೆಳೆಸುತ್ತಾ ನಡೆದಿದ್ದಳು. ಇಂದು ಅವೇಳೆಯಲ್ಲಿ, ಅಪ್ರಸ್ತುತವಾದ ಸ್ಥಳದಲ್ಲಿ ಕಾಲಿಟ್ಟೆನೆಂದು ತಿಳಿದಳು. ಅತ್ಯಂತ ಕರುಣೆಯ ಮುಖ ಮಾಡಿಕೊಂಡು ಒಂದು ಸಲ ಮಧುಸೂದನನ ಕಡೆ ನೋಡಿದಳು. ಆಮೇಲೆ ಸೆರಗನ್ನೆಳೆದು ಕಣ್ಣೊರಸಿಕೊಂಡಳು. ತರುವಾಯ ಹೋಗಬೇಕೆಂದು ಅಷ್ಟುದೂರ ಹೊರಟವಳು ಮತ್ತೆ ಹಿಂದಕ್ಕೆ ತಿರುಗಿ ನಿಂತುಕೊಂಡು "ಆಟವೇನೂ ಆಡುತ್ತಿಲ್ಲಪ್ಪಾ...ಆಟವೇಕೆ ?...ಅಲ್ಲ...ನಡೆಯುತ್ತಿರುವುದು ನೋಡಿದರ ಕಣ್ಣಲ್ಲಿ ನಿದ್ದೆಯೇ ಬರುವುದಿಲ್ಲ. ನಾವೇನು ಇವತ್ತು ಬಂದವರಲ್ಲ. ಎಷ್ಟು ಕಾಲದ ಸಂಬಂಧ...ನಾವು ಹೇಗೆ ತಾನೇ ಸಹಿಸಿಕೊಂಡು ಇರಲು ಸಾಧ್ಯ ?" ಎಂದು ಹೇಳಿ ಶ್ಯಾಮಾ ಬೇಗಬೇಗ ಹೊರಟುಹೋದಳು.

ಮಧುಸೂದನನು ಒಂದು ಕ್ಷಣ ಸುಮ್ಮನೆ ನಿಂತಿದ್ದ. ತರುವಾಯ ಹೊರಗಿನ ಮನೆಯ ಕಡೆ ಹೊರಟ. ನೆಟ್ಟಗೆ ಪಹರೆಯವನಿದ್ದ ಸ್ಥಳಕ್ಕೇ ಬಂದುಬಿಟ್ಟ. ಅವನಾಗ ಕಾವಲು ಕಾಯಲು ಹೊರಟಿದ್ದ...ತಾನು ಆಚರಣೆಗೆ ತಂದಿದ್ದ ಕಠಿಣವಾದ ನಿಯಮದ ಫಲವಾಗಿ ತಾನೇ ತನ್ನ ಮನೆಯಲ್ಲಿ ನಿಶ್ಶಬ್ದವಾಗಿ ತಿರುಗಾಡಲು ಸಾಧ್ಯವಿಲ್ಲ. ನಾಲ್ಕು ದಿಕ್ಕುಗಳಲ್ಲೂ ಕೌತುಕದ ದೃಷ್ಟಿಗಳ ವ್ಯೂಹ. ರಾಜಾ ಬಹದ್ದೂರರು ಇಂತಹ ನಡುರಾತ್ರಿಯಲ್ಲಿ ಹಾಸುಗೆ ಬಿಟ್ಟೆದ್ದು ಬರಿಯ ಕಾಲಿನಲ್ಲಿ ಈ ಕತ್ತಲಲ್ಲಿ ಹೊರಗಡೆಯ ವರಾಂಡದಲ್ಲಿ ಭೂತದಂತೆ ಅಲೆದಾಡಲು ಹೊರಬಿದ್ದಿರುವುದು ಅಭೂತಪೂರ್ವವಾದ ವಿಷಯ. ಮೊದಲ ಸಲ ಸರಿಯಾಗಿ ಗುರುತಿಸದೆ ಕಾವಲುಗಾರನು 'ಯಾರದು ?' ಎಂದು ಕೂಗಿ ಆಮೇಲೆ ಹತ್ತಿರಬಂದು ನಾಲಿಗೆ ಕಚ್ಚಿಕೊಂಡು ದೊಡ್ಡದಾಗಿ ಸಲಾಮು ಮಾಡಿ "ರಾಜಾ ಸಾಹೇಬರೇ....ಅಪ್ಪಣೆಯೇನು ?" ಎಂದು ಬಿನ್ನವಿಸಿದ.

ಮಧುಸೂದನನು "ನೋಡಿಕೊಂಡು ಹೋಗೋಣಾಂತ ಬಂದೆ...ಎಲ್ಲಾ ಸರಿಯಾಗಿದೆಯೋ ಇಲ್ಲವೋ ಅಂತ..." ಎಂದ. ಈ ಮಾತೇನೋ ಮಧುಸೂದನನ ವಿಷಯದಲ್ಲಿ ಅಸಂಗತವಲ್ಲ.

ಅದರ ನಂತರ ಮಧುಸೂದನನು ಬೈಠಕು ಖಾನೆಗೆ ಹೋಗಿ ನೋಡಿದರೆ ಅವನು ಅಂದುಕೊಂಡಿದ್ದಂತೆಯೇ, ನವೀನನು ಕೂಡುವ ಕೋಣೆಯಲ್ಲಿನ ಗದ್ದುಗೆಯ ಮೇಲೆ ದಿಂಬಿಗೆ ಒರಗಿಕೊಂಡು ನಿದ್ದೆ ಮಾಡುತ್ತಿದ್ದಾನೆ. ಮಧುಸೂದನನು ಕೋಣೆಯಲ್ಲಿನ ಗ್ಯಾಸ್ ದೀಪವೊಂದನ್ನು ಹಚ್ಚಿದ. ಅದರಿಂದಲೂ ನವೀನನ ನಿದ್ದೆ ಕೆಡಲಿಲ್ಲ. ಅವನ ಮೈಯನ್ನು ಅಲ್ಲಾಡಿಸಲು ಆಗ ಅವನು ದಡಬಡನೆ ಎಚ್ಚರಗೊಂಡು ಎದ್ದ. ಅವನ ಬಳಿ ಯಾವ ವಿಧವಾದ ವಿವರವನ್ನೂ ಅಪೇಕ್ಷಿಸದೆ "ಈಗಲೇ ಹೋಗು, ನಿಮ್ಮತ್ತಿಗೆಗೆ ಹೇಳು..." ಎಂದು ಹೇಳಿ ತಕ್ಷಣ ತಾನು ಅಂತಃಪುರದಕಡೆ ಹೊರಟು ಹೋದ.

ಸ್ವಲ್ಪ ಹೊತ್ತಾದ ನಂತರ ಕುಮು ಮಲಗುವ ಮನೆಗೆ ಬಂದು ಪ್ರವೇಶಮಾಡಿದಳು. ಮಧುಸೂದನನು ಅವಳ ಮುಖದ ಕಡೆ ನೋಡಿದ. ಸಾಧಾರಣವಾದೊಂದು ಕೆಂಪಂಚಿನ ಸೀರೆಯನ್ನುಟ್ಟಿದ್ದಳು. ಸೀರೆಯ ಸೆರಗನ್ನು ತಲೆಯಮೇಲೆಳೆದುಕೊಂಡಿದ್ದಳು. ಆ ನಿರ್ಜನವಾದ ಕೊಠಡಿಯ ಅಲ್ಪ ಬೆಳಕಿನಲ್ಲಿ ಅದೆಂತಹ ಚೆಲುವಿನ ಆವಿರ್ಭಾವ! ಕುಮು ಕೊಠಡಿಯ ಒಂದು ಪಾರ್ಶ್ವದಲ್ಲಿದ್ದ ಸೋಫಾದಮೇಲೆ ಹೋಗಿ ಕೂತಳು.

ಮದುಸೂದನನು ತಕ್ಷಣ ಎದ್ದು ಬಂದು ನೆಲದ ಮೇಲೆ ಅವಳ ಕಾಲುಗಳ ಬಳಿ ಕೂತ.

ಕುಮು ಸಂಕುಚಿತಳಾಗಿ ಬೇಗ ಏಳಲು ಹೋದಾಗ ಮಧುಸೂದನನು ಅವಳ ಕೈಹಿಡಿದು ಎಳೆದು ಕೂಡಿಸಿದ. "ಏಳಬೇಡ...ನನ್ನ ಮಾತು ಸ್ವಲ್ಪ ಕೇಳು...ನನ್ನನ್ನು ಕ್ಷಮಿಸಿ ಬಿಡು...ನಾನು ತಪ್ಪು ಮಾಡಿದ್ದೇನೆ." ಎಂದ.

ಮಧುಸೂದನನು ಹೀಗೆ ಅನಿರೀಕ್ಷಿತವಾಗಿ ಮಾಡಿದ ವಿನಂತಿಯನ್ನು ಕೇಳಿ ಕುಮು ಮಾತಿಲ್ಲದೆ ಮೂಕಳಂತಾದಳು. ಮಧುಸೂದನನು ಮತ್ತೆ ಹೇಳತೊಡಗಿದ. "ನವೀನನನ್ನೂ ಅವನ ಹೆಂಡತಿಯನ್ನೂ ರಜಬಪುರಕ್ಕೆ ಹೋಗದಂತೆ ತಡೆಯುವೆನು...ಅವರುಗಳು ನಿನ್ನ ಸೇವೆಯಲ್ಲಿಯೇ ಇರುವ ಹಾಗೆ ಮಾಡುತ್ತೇನೆ."

ಕುಮುವಿಗೆ ಏನು ಹೇಳಬೇಕೆಂದು ತೋಚಲಿಲ್ಲ. ಮಧುಸೂದನನು ತನ್ನ ಸ್ವಾಭಿಮಾನವನ್ನು ತಗ್ಗಿಸಿಕೊಂಡು ಹೆಂಡತಿಯ ಮನಸ್ಸನ್ನು ಗೆಲ್ಲುವೆನೆಂದುಕೊಂಡ. ಅವಳ ಕೈಹಿಡಿದು ದೈನ್ಯದಿಂದ " ನಾನು ಈಗಲೇ ಬಂದೆ, ನೀನು ಹೊರಟುಹೋಗುವದಿಲ್ಲ ತಾನೇ " ಎಂದು ಕೇಳಿದ.

ಕುಮು " ಇಲ್ಲ....ಹೋಗುವುದಿಲ್ಲ " ಎಂದಳು.

ಮಧುಸೂದನನು ಕೆಳಗೆ ಇಳಿದು ಹೋದ...ಮಧುಸೂದನನು ಕ್ಷುದ್ರನಾದಾಗ, ಕ್ರೂರನಾದಾಗ ಕುಮುದಿನಿಗೆ ಅಷ್ಟು ಕಷ್ಟವಾಗುತ್ತಿರಲಿಲ್ಲ. ಆದರೆ ಇಂದು ಅವನ ಈ ನಮ್ರತೆ, ಹೀಗೆ ತನ್ನನ್ನೇ ಕೀಳಾಗಿ ಮಾಡಿಕೊಳ್ಳುವಿಕೆ—ಈ ನಡೆವಳಿಕೆಗೆ ಕುಮು ಯಾವ ಉತ್ತರ ಕೊಡಬೇಕೆಂದು ಎಷ್ಟು ಯೋಚಿಸಿದರೂ ಹೊಳೆಯಲಿಲ್ಲ. ಹೃದಯದಲ್ಲಿ ಯಾವ ದಾನವನ್ನು ಸಿದ್ಧಮಾಡಿಕೊಂಡು ಬಂದಿದ್ದಳೋ ಅದೆಲ್ಲಾ ಕೆಳಗೆ ಬಿದ್ದು ಚೂರಾಗಿ ಹೋಗಿದೆ. ಪುನಃ ಅದನ್ನು ಮಣ್ಣಿನಿಂದ ಆಯ್ದುಕೊಂಡು ಸರಿಮಾಡಲು ಸಾಧ್ಯವಿಲ್ಲ, ಮತ್ತೊಂದು ಸಲ ಅವಳು ದೇವರನ್ನು ಕೂಗಲು ತೊಡಗಿದಳು. " ಪ್ರಿಯಃಪ್ರಿಯಾಯಾರ್ಹಸಿ ದೇವ ಸೋಢುಂ."

ಸ್ವಲ್ಪಹೊತ್ತಿಗೇ ಮಧುಸೂದನನು ನವೀನ ಮತ್ತು ಮೋತಿಯಮ್ಮನನ್ನು ಸಂಗಡ ಕರೆದುಕೊಂಡು ಕುಮುವಿನ ಎದುರಿಗೆ ಬಂದು ನಿಂತ. ಅವರುಗಳನ್ನು ಸಂಬೋಧನೆ ಮಾಡಿ " ನಾಳೆ ನೀವುಗಳು ರಜಬಪುರಕ್ಕೆ ಹೋಗಬೇಕೆಂದು ಹೇಳಿದ್ದೆ. ಆದರೆ ಈಗ ಹೋಗುವ ಅವಶ್ಯಕವಿಲ್ಲ. ನಾಳೆಯಿಂದ ಯಜಮಾನಿಯ ಸೇವೆಗೆಂದು ನಿಮ್ಮಿಬ್ಬರನ್ನೂ ನೇಮಿಸಿದ್ದೇನೆ," ಎಂದ.

ಈ ಮಾತು ಕೇಳಿ ಅವರಿಬ್ಬರೂ ಮಾತಿಲ್ಲದವರಾದರು. ಅವರಂತೂ ಇಂತಹ ಅಪ್ಪಣೆಯನ್ನೆಂದೂ ನಿರೀಕ್ಷಿಸಿರಲಿಲ್ಲ. ಅದರ ಮೇಲೆ ಇಂತಹ ರಾತ್ರಿಯಲ್ಲಿ ಅವರುಗಳನ್ನು ಕರೆಯಕಳುಹಿಸಿ ಈ ಮಾತನ್ನು ಹೇಳಬೇಕಾದಂತಹ ಅವಸರದ ಪ್ರಮೇಯವೇನಿತ್ತು ?

ಮಧುಸೂದನನ ಧೈರ್ಯವು ವಿಳಂಬವನ್ನು ಸಹಿಸುತ್ತಿರಲಿಲ್ಲ. ಅಂದು ರಾತ್ರಿಯೇ ಕುಮುವಿನ ಮನಸ್ಸನ್ನು ಗೆಲ್ಲುವ ಯತ್ನದಲ್ಲಿ ಕಾರ್ಪಣ್ಯವನ್ನಾಗಲೀ ಸಂಕೋಚವನ್ನಾಗಲೀ ತೋರಲು ಅವನಿಗೆ ಸಾಧ್ಯವಿರಲಿಲ್ಲ. ಈ ರೀತಿಯಾಗಿ ತನ್ನ ಆತ್ಮಗೌರವವನ್ನು ಜೀವಮಾನದಲ್ಲೆಂದೂ ಬಿಟ್ಟುಕೊಟ್ಟಿರಲಿಲ್ಲ...ಅವನು ಯಾವುದನ್ನು ಬಯಸಿದ್ದನೋ ಅದನ್ನು ಪಡೆಯುವುದಕ್ಕೋಸ್ಕರ ತನ್ನಬಳಿಯಿದ್ದ ಎಲ್ಲಕ್ಕಿಂತಲೂ ದೊಡ್ಡ ಬೆಲೆಯ ವಸ್ತುವನ್ನೇ ಕೊಟ್ಟ. " ನಾನು ನಿನ್ನ ಹತ್ತಿರ ನಿಸ್ಸಂಕೋಚವಾಗಿ ಸೋಲೊಪ್ಪಿಕೊಂಡಿದ್ದೇನೆ " ಎಂದು ತನ್ನ ಭಾಷೆಯಲ್ಲಿಯೇ ಕುಮುವಿಗೆ ತಿಳಿಯಪಡಿಸಿದ್ದ.

ಈ ಬಾರಿ ಕುಮುವಿನ ಮನಸ್ಸಿನಲ್ಲಿ ದೊಡ್ಡದೊಂದು ಸಂಕೋಚ ಹುಟ್ಟಿಕೊಂಡಿತು. ಇದನ್ನು ತಾನು ಹೇಗೆ ತಾನೇ ಗ್ರಹಣಮಾಡುವುದೆಂದು ಯೋಚಿಸಲು ತೊಡಗಿದಳು. ಇದಕ್ಕೆ

ಪ್ರತಿಯಾಗಿ ಕೊಡುವುದಕ್ಕೆ ಅವಳಲ್ಲೇನಿದೆ? ಜೀವನದಲ್ಲಿ ಹೊರಗಣಿಂದ ಏನಾದರೂ ಅಪಾಯ ಬಂದರೆ ಆಗ ಅದನ್ನೆದುರಿಸಲು ಶಕ್ತಿ ಬರುವುದು. ಸ್ವಯಂ ದೇವರೇ ಬಂದು ಸಹಾಯ ಮಾಡುವನು. ಹಠಾತ್ತಾಗಿ ಆ ಹೊರಗಿನ ಶತ್ರುವು ಅಸ್ತ್ರವನ್ನ ಕೆಳಗಿಟ್ಟುಬಿಟ್ಟರೆ ಯುದ್ಧವೇನೋ ನಿಂತು ಹೋಗುವುದು. ಆದರೆ ಶಾಂತಿಯಾಗುವುದಿಲ್ಲ. ಆಗ ತನ್ನೊಳಗಿನ ಪ್ರತಿಕೂಲತೆಯೇ ಹೊರಗೆ ಬರುವುದು...ಕುಮುವಿಗೆ ಹಠಾತ್ತಾಗಿ ಆಗ ಕಂಡುಬಂದುದೇನು? ಮಧುಸೂದನನು ಉದ್ಧತನಾಗಿದ್ದಾಗ ಅವನೊಡನೆ ವ್ಯವಹಾರ ಮಾಡುವುದು ಎಷ್ಟೇ ಅಪ್ರಿಯವಾಗಿದ್ದರೂ ಸಹಜವಾಗಿತ್ತು. ಆದರೆ ಅದೇ ಮಧುಸೂದನನು ನಮ್ರನಾದಾಗ ಅವನೊಡನೆ ಹೇಗೆ ನಡೆದುಕೊಳ್ಳಬೇಕೆನ್ನುವುದು ಕುಮುವಿಗೆ ಬಹಳ ಕಷ್ಟವಾಗಿ ಹೋಯಿತು. ಈಗವಳ ಕ್ಷುದ್ರಸ್ವಾಭಿಮಾನಕ್ಕೆ ಆಶ್ರಯವಿಲ್ಲ. ಆ ದೀಪದ ಮನೆಯ ಆಶ್ರಯ ಇನ್ನಾಗದು. ಇನ್ನು ಇಷ್ಟದೇವತೆಯ ಮುಂದೆ ಕೈಜೋಡಿಸಿ ಕೇಳಿಕೊಳ್ಳುವುದರಿಂದ ಏನೂ ಆಗದು.

ಮೋತಿಯಮ್ಮನನ್ನು ಯಾವುದಾದರೂ ನೆಪದಲ್ಲಿ ಅಲ್ಲಿಯೇ ನಿಲ್ಲಿಸಿಕೊಂಡಿದ್ದರೆ ಕುಮು ಹೇಗೋ ಪಾರಾಗಬಹುದಾಗಿತ್ತು. ಆದರೆ ನವೀನ ಹೊರಗೆ ಹೊರಟುಹೋದ. ಬುದ್ಧಿ ತೋಚದೆ ಮೋತಿಯಮ್ಮನೂ ಅವನನ್ನು ಹಿಂಬಾಲಿಸಿದಳು...ಹೋಗುವಾಗ ಬಾಗಿಲಬಳಿ ಸ್ವಲ್ಪ ನಿಂತು ಮುಖ ಮರೆಮಾಡಿ ಉದ್ವಿಗ್ನಭಾವದಿಂದ ಕುಮುದಿನಿಯ ಮುಖದ ಕಡೆ ನೋಡಿ ಹೊರಟುಹೋದಳು. ಗಂಡನ ಪ್ರಸನ್ನತೆಯ ಕೈಗಳಿಂದ ಈ ಹುಡುಗಿಯನ್ನು ಈಗ ರಕ್ಷಿಸುವವರು ಯಾರು?

ಮಧುಸೂದನನು "ಯಜಮಾನಿ, ಬಟ್ಟೆ ಬದಲಾಯಿಸಿ ಮಲಗುವುದಕ್ಕೆ ಬರುವುದಿಲ್ಲವೇ?" ಎಂದ.

ಕುಮು ನಿಧಾನವಾಗಿ ಎದ್ದು ಪಕ್ಕದ ಸ್ನಾನದ ಮನೆಗೆ ಹೋಗಿ ಬಾಗಿಲು ಹಾಕಿಕೊಂಡಳು. ವಿಮುಕ್ತಿಯ ವಾಯಿದೆಯನ್ನು ಎಷ್ಟಾದರಷ್ಟು ಹೆಚ್ಚಿಸಿಕೊಳ್ಳಲು ಅವಳಿಗೆ ಆಸೆ, ಸ್ನಾನಗೃಹದ ಗೋಡೆಯ ಪಕ್ಕದಲ್ಲಿ ಒಂದು ಕುರ್ಚಿಯಿತ್ತು. ಕುಮು ಹೋಗಿ ಅದರ ಮೇಲೆ ಕೂತಳು. ಅವಳ ವ್ಯಾಕುಲ ಪಟ್ಟದೇಹ ತನ್ನ ಮನಸ್ಸಿನಲ್ಲಿಯೇ ತನ್ನ ಅಂತರಾಳವನ್ನು ಹುಡುಕುತ್ತಿತ್ತು.

ಮಧುಸೂದನನು ಮಧ್ಯೆಮಧ್ಯೆ ಗೋಡೆಯ ಮೇಲಿನ ಗಡಿಯಾರದ ಕಡೆ ನೋಡುತ್ತಾ ಬಟ್ಟೆ ಬದಲಾಯಿಸಿಕೊಳ್ಳಲು ಎಷ್ಟು ಹೊತ್ತು ಬೇಕಾಗುವುದೆಂದು ತನ್ನಲ್ಲಿ ತಾನೇ ಗುಣಾಕಾರ ಮಾಡಿಕೊಳ್ಳುತ್ತಿದ್ದ. ಈ ಮಧ್ಯೆ ಅವನು ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಂಡ. ತಲೆಯ ಮೇಲೆ ಎಣ್ಣೆಯಿಂದಲೂ ಸರಿಹೋಗದೆ ನಿಂತುಕೊಂಡಿದ್ದ ಕೆಲವು ಒರಟು ಕೂದಲನ್ನು ಬ್ರಷ್‌ನಿಂದ ನೆಟ್ಟಗೆ ಮಾಡಲು ಪ್ರಯತ್ನಿಸಿದ ಮತ್ತು ಮೈಮೇಲಿನ ಉಡುಗೆಗೆ ಹಲವು ಬಾರಿ ಲ್ಯಾವೆಂಡರಿನ ಪರಿಮಳವನ್ನು ಬಳಿದುಕೊಂಡ.

ಹದಿನೈದು ನಿಮಿಷವಾಯಿತು. ಉಡುಪನ್ನು ಬದಲಾಯಿಸುವುದಕ್ಕೆ ಇಷ್ಟು ಹೊತ್ತು ಯಥೇಷ್ಟ. ಮಧುಸೂದನನು ನಿಶ್ಯಬ್ದವಾಗಿ ಒಂದುಸಲ ಸ್ನಾನದ ಮನೆಯ ಬಾಗಿಲಬಳಿ ಕಿವಿಯಿಟ್ಟು ನಿಂತುಕೊಂಡ. ಒಳಗಡೆ ಓಡಾಡುವ ಶಬ್ದವೇ ಇಲ್ಲ. ಕುಮು ಬಹುಶಃ ಕೂದಲು ಬಾಚಿಕೊಳ್ಳುತ್ತಿರಬಹುದೆಂದು ಭಾವಿಸಿದ. ಜಡೆ ಹೆಣೆದುಕೊಳ್ಳುವುದರಲ್ಲಿ ಮಗ್ನಳಾಗಿರಬಹುದು. ಹೆಂಗಸರಿಗೆ ಅಲಂಕಾರ ಮಾಡಿಕೊಳ್ಳುವುದರಲ್ಲಿ ಹುಚ್ಚೆಂದು ಮಧುಸೂದನನಿಗೆ ಗೊತ್ತು, ಆದ್ದರಿಂದ ಸ್ವಲ್ಪ ಕಾಯಲೇಬೇಕು. ಅರ್ಧ ಘಂಟೆಯಾಯಿತು. ಮಧುಸೂದನನು ಮತ್ತೊಂದು ಸಲ ಬಾಗಿಲ ಬಳಿ ಕಿವಿಯಿಟ್ಟು

ಕೇಳಿದ. ಈಗಲೂ ಯಾವಶಬ್ದವೂ ಇಲ್ಲ. ವಾಪಸು ಬಂದು ಆರಾಮ ಕುರ್ಚಿಯಲ್ಲಿ ಒರಗಿ ಕೂತು ಮಂಚದ ಎದುರುಗಡೆ ಗೋಡೆಯ ಮೇಲೆ ತಗುಲಿ ಹಾಕಿದ್ದ ವಿಲಾಯಿತಿಯ ಚಿತ್ರಗಳ ಕಡೆ ನೋಡುತ್ತ ಇದ್ದ ಹಠಾತ್ತಾಗಿ ಒಂದು ಸಲ ಚಡಪಡಿಸಿ ಎದ್ದು ಮುಚ್ಚಿದ್ದ ಬಾಗಿಲ ಬಳಿ ಬಂದು ನಿಂತು "ಕುಮುದಿನೀ, ಇನ್ನೂ ಆಗಲಿಲ್ಲವೇನು ?" ಎಂದು ಕೂಗಿದ

ಸ್ವಲ್ಪ ಹೊತ್ತಾದ ಮೇಲೆ ನಿದಾನವಾಗಿ ಬಾಗಿಲು ತೆಗೆಯಲ್ಪಟ್ಟಿತು. ಕುಮುದಿನಿಯು ಹೊರಗೆ ಬಂದಳು. ಅವಳನ್ನು ನೋಡಿದರೆ ಕನಸಿನಲ್ಲಿ ಮುಳುಗಿದವಳಂತಿದ್ದಳು. ಉಡಿಗೆ ಮೊದಲು ಉಟ್ಟಿದ್ದುದೇ. ಇದು ರಾತ್ರಿ ಮಲಗಲು ಉಡುವ ಬಟ್ಟೆಯಲ್ಲ, ಮೈಮೇಲೆ ತೋಳುಗಳು ಪೂರ್ತಿಯಾಗಿರುವ ಕಂದುಬಣ್ಣದ ಸರ್ಜ್ ಜಾಕೆಟ್, ಕೆಂಪಂಚಿನದೊಂದು ಬಾದಾಮಿ ಬಣ್ಣದ ಮೇಲು ಹೊದಿಕೆ, ಅದರ ಸೆರಗನ್ನು ತಲೆಯಮೇಲೆ ಎಳೆದು ಹೊದೆದುಕೊಂಡಿದ್ದಳು. ಬಾಗಿಲ ಮೇಲೆ ಎಡಗೈಯಿಟ್ಟು ಖಿನ್ನಳಾದವಳಂತೆ ಏನೋ ಯೋಚಿಸುತ್ತಾ ನಿಂತಿದ್ದಳು. ಅದೊಂದು ಅಪೂರ್ವವಾದ ಚಿತ್ರ. ಮಾಟವಾದ ಗೌರವರ್ಣದ ಕೈಗಳಲ್ಲಿ ಮಕರ ಮುಖದ ಬಂಗಾರದ ಕಡಗ; ಹಿಂದಿನ ಕಾಲದ್ದು. ಬಹುಶಃ ಒಂದು ಕಾಲದಲ್ಲಿ ಅವರ ತಾಯಿಯದೆಂದು ಕಾಣುತ್ತದೆ. ಈ ದಪ್ಪನಾದ ಭಾರಿ ಕಡಗವು ಅವಳ ಕೋಮಲವಾದ ಕೈಗೆ ಕೊಟ್ಟಿದ್ದ ಐಶ್ವರ್ಯದ ಕಳೆ ಅವಳಿಗೆ ಸಹಜವಾಗಿತ್ತು. ಆ ಅಲಂಕಾರದಿಂದ ಅವಳ ಶರೀರಕ್ಕೆ ಸ್ವಲ್ಪವೂ ಆಡಂಬರದ ಛಾಯೆ ಕೂಡ ಹತ್ತಿರಲಿಲ್ಲ. ಮಧುಸೂದನನು ಅವಳನ್ನು ಮತ್ತೆ ಹೊಸದಾಗಿ ನೋಡುತ್ತಿರುವಂತೆ ದಿಟ್ಟಿಸಿ ನೋಡಿದ. ಅವಳ ಸೊಬಗನ್ನು ನೋಡಿ ಮುಗ್ಧನಾಗಿ ಹೋದ. ತಾನು ಚಿರಕಾಲದಿಂದ ಸಂಪಾದಿಸಿದ್ದ ಸಮಸ್ತ ಐಶ್ವರ್ಯವೂ ಇಷ್ಟು ದಿನಗಳಾದ ಮೇಲೆ ಲಕ್ಷ್ಮಿಯನ್ನು ಒಲಿಸಿಕೊಂಡಿತ್ತೆಂದು ಅವನಿಗೆ ಅನ್ನಿಸದೆ ಇರಲಿಲ್ಲ...ಹೊರಗಿನ ಪ್ರಪಂಚದಲ್ಲಿ ಮಧುಸೂದನನು ನೋಡುತ್ತಿದ್ದ, ಬೆರೆಯುತ್ತಿದ್ದ ಜನರೆಲ್ಲರಿಗಿಂತಲೂ ತಾನೇ ಧನ, ಗೌರವಗಳಲ್ಲಿ ಎಷ್ಟೋ ದೊಡ್ಡವನೆಂದು ಹೆಮ್ಮೆ ಪಡುವುದು ಅವನಿಗೆ ಅಭ್ಯಾಸವಾಗಿ ಹೋಗಿತ್ತು. ಇಂದು ಗ್ಯಾಸಿನ ದೀಪದ ಬೆಳಕಿನಲ್ಲಿ ಮಲಗುವ ಮನೆಯ ಬಾಗಿಲ ಬಳಿ ಸ್ತಬ್ಧಳಾಗಿ ನಿಂತಿದ್ದ ಹೆಣ್ಣನ್ನು ಕಂಡು ಮಧುಸೂದನನು "ಇಲ್ಲ...ನನ್ನಲ್ಲಿ ಇವಳ ಯೋಗ್ಯತೆಗೆ ತಕ್ಕಷ್ಟು ಧನವಿಲ್ಲ" ಎಂದುಕೊಂಡ...ಚಕ್ರವರ್ತಿ ಸಮ್ರಾಟನಾಗಿದ್ದಿದ್ದರೆ ಆಗ ಈ ಮನೆ ಅವಳಿಗೆ ತಕ್ಕುದಾಗಿರುತ್ತಿತ್ತು...ಇವಳ ಸ್ವಭಾವವು ಹುಟ್ಟಿದಾಗಿಲಿಂದಲೂ ಲಲಿತವಾದ ಪರಿಶುದ್ಧವಾದೊಂದು ವಂಶಮರ್ಯಾದೆಗೆ ಸೇರಿದ್ದು - ಅಂದರೆ ಅವಳ ಜನ್ಮಕ್ಕೆ ಹಿಂದೆಯೇ ಬಹುಕಾಲದಿಂದ ಅಧಿಕಾರ ಮಾಡುತ್ತ ನಿಂತಿರುವ ವಂಶಗೌರವ. ಅಲ್ಲಿ ಹೊರಗಿನಿಂದ ಅವರಿವರು ಯಾರೂ ಪ್ರವೇಶ ಮಾಡಲಾರರು. ಅಲ್ಲಿ ತನ್ನ ಸ್ವಾಭಾವಿಕ ಸತ್ವದಿಂದ ವಿಪ್ರದಾಸನು ವಿರಾಜಿಸುತ್ತಿದ್ದಾನೆ. ಅವನನ್ನೂ ಕುಮುವಿನಂತೆ ಅವನಿಗೆ ತಿಳಿಯದಂತೆಯೇ, ಸಹಜ ಗೌರವವೊಂದು ಸರ್ವದಾ ಸುತ್ತುವರಿದಿತ್ತು-ಇದನ್ನು ಮಧುಸೂದನನು ಪ್ರತ್ಯಕ್ಷವಾಗಿ ನೋಡಿ ಅರಿತ.

ಅವನು ಈ ಸಂಗತಿಯನ್ನು ಸ್ವಲ್ಪವೂ ಸಹಿಸಲಾರದೆ ಹೋದ. ವಿಪ್ರದಾಸನ ಮಧ್ಯೆ ಔದ್ಧತ್ಯ ಸ್ವಲ್ಪವೂ ಇರಲಿಲ್ಲ, ಅವನಲ್ಲಿದ್ದುದು ಒಂದು ಬಗೆಯ ದೂರತ್ವ ಮಾತ್ರ, ಬಹಳ ಹತ್ತಿರದ ಸ್ನೇಹಿತನೂ ಹಠಾತ್ತಾಗಿ ಬಂದು ಅವನ ಬೆನ್ನ ಮೇಲೆ ಹೊಡೆದು "ಏನಯ್ಯಾ, ಚೆನ್ನಾಗಿದ್ದೀಯಾ ?" ಎಂದು ಹೇಳುವ ಸಂಭವವಿರಲಿಲ್ಲ. ವಿಪ್ರದಾಸನ ಯೋಚನೆ ಬಂದಾಗಲೆಲ್ಲಾ ಮಧುಸೂದನನು ಕುಂಠಿತನಾಗುತ್ತಿದ್ದ. ಇದರಿಂದ ಅವನಿಗೆ ಕೋಪವೂ ಬರುತ್ತಿತ್ತು. ಈ ಸೂಕ್ಷ್ಮವಾದೊಂದು

ಕಾರಣದಿಂದಲೇ ಕುಮುವಿನ ಮೇಲೆ ಮಧುಸೂದನನು ಬಲಾತ್ಕಾರ ಮಾಡಲು ಸಾಧ್ಯವಾಗಲಿಲ್ಲ. ತನ್ನ ಸಂಸಾರದಲ್ಲಿ, ಎಲ್ಲರಿಗಿಂತಲೂ ಹೆಚ್ಚು ಯಜಮಾನಿಕೆ ತೋರಿಸುವ ಅಧಿಕಾರ ತನಗೇ ಇರುವ ಕಡೆಯೇ ಅವನು ಹಿಂದೆ ಬಿದ್ದು ಹೋಗಿದ್ದ. ಆದರೆ ಇದರಿಂದ ಅವನಿಗೆ ಕೋಪವಿಲ್ಲ. ಕುಮುವಿನ ಕಡೆಗೆ ಅವನನ್ನು ಎಳೆಯುತ್ತಿದ್ದ ಆಕರ್ಷಣವು ಬರ ಬರುತ್ತಾ ಪ್ರಬಲವಾಗುತ್ತ ಬಂದಿತ್ತು....ಇಂದು ಕುಮುವನ್ನು ನೋಡಿ ಮಧುಸೂದನನು ಸ್ಪಷ್ಟವಾಗಿ ಅರಿತ. ಇವಳು ಸಿದ್ಧಳಾಗಿ ಬಂದಿಲ್ಲ, ಒಂದು ಅದೃಶ್ಯವಾದ ತೆರೆಯ ಹಿಂದೆ ನಿಂತಿದ್ದಾಳೆ....ಆದರೆ ಅದೆಷ್ಟು ಸುಂದರ ! ಅದೆಷ್ಟು ದೇದೀಪ್ಯಮಾನವಾದೊಂದು ನಿರ್ಮಲತೆ, ಶುಭ್ರತೆ!....ನಿರ್ಜನ ಹಿಮಗಿರಿಯ ಮೇಲಿಂದ ಕಾಣಬರುವ ನಿರ್ಮಲವಾದ ಉಷೆಯಂತೆ !

ಮಧುಸೂದನನು ಸ್ವಲ್ಪ ಹತ್ತಿರ ಬಂದು ಮೆಲ್ಲನೆ "ಮಲಗುವುದಕ್ಕೆ ಬರುವುದಿಲ್ಲವೇ, ಯಜಮಾನಿ." ಎಂದ.

ಕುಮುವಿಗೆ ಆಶ್ಚರ್ಯವಾಗಿ ಹೋಯಿತು. ಅವಳು ಮನಸ್ಸಿನಲ್ಲಿ ಮಧುಸೂದನನು ಕೋಪ ಮಾಡಿಕೊಳ್ಳುತ್ತಾನೆಂದೂ ತನ್ನನ್ನು ಕುರಿತು ಅವಮಾನದ ಮಾತುಗಳನ್ನಾಡುತ್ತಾನೆಂದೂ ಖಂಡಿತವಾಗಿ ತಿಳಿದಿದ್ದಳು. ಹಠಾತ್ತಾಗಿ ಚಿರ ಪರಿಚಿತವಾದೊಂದು ದನಿಯು ಅವಳ ಮನಸ್ಸಿನಲ್ಲಿ ಹುಟ್ಟಿಕೊಂಡಿತು. ಅವಳ ತಂದೆಯು ಮೃದುವಾದ ಸ್ವರದಲ್ಲಿ ಅವಳ ತಾಯಿಯನ್ನು ಹೀಗೆಯೇ "ಯಜಮಾನೀ" ಎಂದು ಕೂಗುತ್ತಿದ್ದರು. ಅದರ ಜೊತೆಯಲ್ಲಿಯೇ ಅವಳ ತಾಯಿ ಅವಳ ತಂದೆಯನ್ನು ಹತ್ತಿರ ಸೇರಿಸದೆ ಹೇಗೆ ಹೊರಟುಹೋಗಿದ್ದಳೆಂಬುದೂ ಮನಸ್ಸಿನಲ್ಲಿ ಬಂತು. ಒಂದು ಮುಹೂರ್ತದಲ್ಲಿ ಅವಳ ಕಣ್ಣು ನೀರಿನಿಂದ ತುಂಬಿತು. ನೆಲದ ಮೇಲೆ ಹಾಗೆಯೇ ಕುಸಿದು ಬಿದ್ದು "ನನ್ನನ್ನು ಕ್ಷಮಿಸಿ" ಎಂದು ಹೇಳಿ ಮಧುಸೂದನನ ಕಾಲನ್ನು ಮುಟ್ಟಿದಳು.

ಮಧುಸೂದನನು ಬೇಗ ಅವಳ ಕೈ ಹಿಡಿದು ಎತ್ತಿ ಕುರ್ಚಿಯ ಮೇಲೆ ಅವಳನ್ನು ಕೂಡಿಸಿ "ಯಾವ ತಪ್ಪು ಮಾಡಿದ್ದೀಯೆಂದು ನಿನ್ನನ್ನ ಕ್ಷಮಿಸಲಿ ?" ಎಂದ.

ಕುಮು "ಇನ್ನೂ ನನ್ನ ಮನಸ್ಸು ಸಿದ್ಧವಾಗಿಲ್ಲ. ನನಗೆ ಸ್ವಲ್ಪ ಅವಕಾಶ ಕೊಡಿ." ಎಂದಳು.

ಆಗ ಮಧುಸೂದನನ ಮನಸ್ಸು ಬಿರುಸಾಗಿ ಹೋಯಿತು. "ಯಾವುದಕ್ಕೋಸ್ಕರ ಅವಕಾಶ ಕೊಡಬೇಕು...ಸರಿಯಾಗಿ ಹೇಳು."

"ಸರಿಯಾಗಿ ಹೇಳುವುದಕ್ಕಾಗದು. ಯಾರಿಗಾದರೂ ತಿಳಿಯುವಂತೆ ಹೇಳಲು ಕಷ್ಟ."

ಮಧುಸೂದನನ ಕಂಠದಲ್ಲಿನ್ನು ಕರುಣೆಯಿಲ್ಲ. "ಏನು ಕಷ್ಟ ? ನಿಮ್ಮನ್ನು ಕಂಡರೆ ನನಗೆ ಇಷ್ಟವಾಗುವುದಿಲ್ಲ ಅಂತ ತಾನೇ ನೀನು ಹೇಳಬೇಕೆಂದಿರುವುದು ?"

ಕುಮುವಿಗೆ ಬಹಳ ಕಷ್ಟವಾಗಿ ಹೋಯಿತು. ಈ ಮಾತು ಸತ್ಯವೇ ಆದರೂ ಸತ್ಯವಲ್ಲ. ಹೃದಯಪೂರ್ವಕವಾಗಿ ನೈವೇದ್ಯಮಾಡಲು ಪ್ರತಿಜ್ಞೆಮಾಡಿಬಂದಿದ್ದಳು. ಆದರೆ ಆ ನೈವೇದ್ಯವೇಕಿನ್ನೂ ಬಂದು ತಲಪಿಲ್ಲ ? ಸ್ವಲ್ಪ ಕಾದರೆ, ಅಡ್ಡಿ ಯಾವುದೂ ಮಾಡದಿದ್ದರೆ, ಬಂದು ಹೇಗೋ ತಲಪುತ್ತೆ.... ಎಂದೆನ್ನಿಸಿತು. ಆದರೆ ತಡವಾಯಿತೆನ್ನುವುದೊಂದೇ ಅಲ್ಲ...ಆ ತಟ್ಟೆ ಇನ್ನೂ ಶೂನ್ಯವಾಗಿದೆಯೆನ್ನುವುದನ್ನು ಒಪ್ಪಿಕೊಳ್ಳಲೇಬೇಕು.

ಕುಮು ಆಗ "ನನಗೆ ನಿಮ್ಮನ್ನು ಮೋಸಮಾಡಲು ಇಷ್ಟವಿಲ್ಲ. ಅದಕ್ಕೇ ಸ್ವಲ್ಪ ಅವಕಾಶ

ಕೊಡಿ ಅಂತ ಕೇಳಿಕೊಳ್ಳುತ್ತೇನೆ." ಎಂದಳು.

ಮಸೂಧುದನನು ಕ್ರಮೇಣ ತಾಳ್ಮೆಯನ್ನು ಕಳೆದುಕೊಂಡವನಾಗಿ ಕಠಿಣವಾದ ಸ್ವರದಲ್ಲಿ "ಅವಕಾಶ ಕೊಟ್ಟರೆ ಎಲ್ಲಾ ಸರಿಹೋಗುತ್ತದೋ ? ನಿಮ್ಮಣ್ಣನ ಉಪದೇಶ ಪಡೆದು ಗಂಡನ ಜೊತೆಯಲ್ಲಿ ಸಂಸಾರ ಮಾಡಬೇಕೆಂದಿದ್ದೀಯೋ ?" ಎಂದ.

ಮಧುಸೂದನನು ಖಂಡಿತವಾಡಿಕೊಂಡಿದ್ದುದೂ ಅದೇ. ವಿಪ್ರದಾಸನ ಅಪೇಕ್ಷೆಯ ಮೇಲೆಯೇ ಕುಮುವಿನ ಸಮಸ್ತವೂ ನಡೆಯುತ್ತಿರುವುದು. ಅಣ್ಣ ಹೇಗೆ ನಡೆ ಎಂದರೆ ಅವಳು ಹಾಗೆ ನಡೆಯುತ್ತಾಳೆಂದು ಅವನ ಅಭಿಪ್ರಾಯ. ಅಣಕದ ಧ್ವನಿಯಲ್ಲಿ "ನಿಮ್ಮಣ್ಣ ನಿನ್ನ ಗುರು ಅಲ್ಲವೇ ?" ಎಂದ.

ಕುಮು ಆ ಕ್ಷಣ ನೆಲದ ಮೇಲಿಂದ ಎದ್ದು ನಿಂತು "ಹೌದು, ನಮ್ಮಣ್ಣ ನನ್ನ ಗುರು" ಎಂದಳು.

"ಅವನ ಅಪ್ಪಣೆಯಿಲ್ಲದೆ ಇವತ್ತು ರಾತ್ರಿ ಬಟ್ಟೆ ಬದಲಾಯಿಸುವುದಿಲ್ಲ. ಹಾಸುಗೆ ಮೇಲೆ ಮಲಗಲು ಬರುವುದಿಲ್ಲ. ಹಾಗೇ ತಾನೇ ?"

ಕುಮುದಿನಿ ಕೈ ಮುಷ್ಟಿಯನ್ನು ಬಿಗಿಯಾಗಿ ಹಿಡಿದುಕೊಂಡು ಕಟ್ಟಿಗೆಯಂತಾಗಿ ಹೋದಳು.

"ಹಾಗಾದರೆ ಹೇಳು. ಟಿಲಿಗ್ರಾಂ ಕೊಟ್ಟು ಅಪ್ಪಣೆ ತರಿಸೋಣ....ರಾತ್ರಿ ಬಹಳ ಹೊತ್ತಾಯಿತು."

ಕುಮು ಅದಕ್ಕೆ ಜವಾಬೇನೂ ಕೊಡದೆ ಬಿಸಿಲುಮಾಳಿಗೆಯ ಕಡೆಯ ಬಾಗಿಲ ದಿಕ್ಕಿಗೆ ನಡೆದಳು.

ಮಧುಸೂದನನು ಗರ್ಜಿಸುತ್ತಾ ರಭಸದಿಂದೆದ್ದು "ಹೋಗಬೇಡ--ಹೇಳಿದ್ದೇನೆ" ಎಂದು ಗದರಿದ.

ಕುಮು ಕೂಡಲೇ ಹಿಂದೆ ತಿರುಗಿ ನಿಂತು "ಏನು ಮಾಡಲಿ, ಹೇಳಿ" ಎಂದಳು.

"ಈಗಲೇ ಬಟ್ಟೆ ಬದಲಾಯಿಸಿಕೊಂಡು ಬಾ" ಎಂದು ಗಡಿಯಾರವನ್ನು ಬಿಚ್ಚಿ "ಐದು ನಿಮಿಷ ಸಮಯ ಕೊಡುತ್ತೇನೆ." ಎಂದ.

ಕುಮು ಕೂಡಲೇ ಮಲಗುವ ಮನೆಗೆ ಹೋಗಿ ಮೇಲಿನ ಬಟ್ಟೆಗಳನ್ನು ತೆಗೆದುಹಾಕಿ ಸೀರೆಯ ಮೇಲೆ ಸಾಧಾರಣದೊಂದು ಒರಟು ದುಪ್ಪಟಿಯನ್ನು ಹೊದ್ದುಕೊಂಡು ಹೊರಗೆ ಬಂದಳು. ಈಗ ಎರಡನೆಯ ಅಪ್ಪಣೆಗೋಸ್ಕರ ಕಾದಿದ್ದಾಳೆ...ಮಧುಸೂದನನು ನೋಡಿ ಅರ್ಥ ಮಾಡಿಕೊಂಡ.

"ಇದು ಯುದ್ಧದ ವೇಷ!" ಎಂದುಕೊಂಡ. ಕೂಡಲೇ ಕೋಪವುಕ್ಕಿ ಬಂತು. ಆದರೆ ಏನು ಮಾಡಬೇಕೆಂದು ತೋಚಲಿಲ್ಲ....ಮೀರಿ ಮೀರಿ ಬರುತ್ತಿರುವ ಕೋಪದೆದುರಿನಲ್ಲೂ ಮಧುಸೂದನನಿಗೆ ವ್ಯವಸ್ಥೆಯ ಬುದ್ಧಿ ಸ್ತಿಮಿತವಾಗಿತ್ತು. ಆದುದರಿಂದಲೇ ಅವನು ತನ್ನನ್ನೇ ತಡೆದುಕೊಂಡು ಮೆಲ್ಲಗೆ "ಈಗೇನು ಮಾಡುವುದು ನನಗೆ ಹೇಳು" ಎಂದ.

"ನೀವು ಏನು ಹೇಳಿದರೆ ಹಾಗೆ ಮಾಡುತ್ತೇನೆ."

ಮಧುಸೂದನನು ಹತಾಶನಾಗಿ ಕುರ್ಚಿಯಮೇಲೆ ಹೋಗಿ ಕೂತ. ಆ ದುಪ್ಪಟಿಯನ್ನು ಹೊದ್ದ ಹೆಣ್ಣನ್ನು ನೋಡಿ ಇದೊಂದು ವಿಧವೆಯ ವೇಷ ಎಂದುಕೊಂಡ. ಅವಳ ಮತ್ತು ಅವಳ ಗಂಡನ

ನಡುವೆ ಯಾವುದೋ ಒಂದು ಅಪಾರವಾದ ಮೃತ್ಯುವಿನ ಸಮುದ್ರವಿದೆ. ಆರ್ಭಟ ಮಾಡಿ ಈ ಸಮುದ್ರವನ್ನು ದಾಟಲು ಸಾಧ್ಯವಿಲ್ಲ. ಪಟಕ್ಕೆ ಯಾವ ಗಾಳಿ ಬೀಸಿದರೆ ದೋಣಿ ನಡೆಯುತ್ತದೆ? ಯಾವತ್ತಾದರೂ ನಡೆಯುತ್ತದೆಯೇ? ಸುಮ್ಮನೆ ಮಾತಾಡದೆ ಕೂತಿದ್ದ. ಗಡಿಯಾರದ ಟಿಕ್, ಟಿಕ್, ಸದ್ದನ್ನು ಬಿಟ್ಟರೆ ಬೇರೆ ಯಾವ ಶಬ್ದವೂ ಇಲ್ಲ. ಕುಮುದಿನಿ ಮನೆಯಿಂದ ಹೊರಗೆ ಹೋಗಲೇ ಇಲ್ಲ. ಮತ್ತೆ ಹಿಂದೆತಿರುಗಿ ಹೊರಗಿನ ಬಿಸಿಲು ಮಹಡಿಯ ಕತ್ತಲಿನ ಕಡೆ ದೃಷ್ಟಿ ಹೊರಳಿಸಿ ಚಿತ್ರದಂತೆ ನಿಶ್ಚೇಷ್ಟಳಾಗಿ ನಿಂತುಬಿಟ್ಟಳು. ಹೊರಗಡೆಯ ರಸ್ತೆಯ ಮಧ್ಯೆಯಿಂದ ಹೆಂಡಕುಡುಕನೊಬ್ಬನ ಗದ್ಗದ ಧ್ವನಿಯ ಹಾಡಿನ ಶಬ್ದ ಕೇಳಬರುತ್ತಿದೆ. ಮತ್ತು ಪಕ್ಕದ ಮನೆಯ ಹಿತ್ತಿಲ ಕಡೆ ನಾಯಿ ಮರಿಯೊಂದು ಕಟ್ಟಿಹಾಕಲ್ಪಟ್ಟಿತ್ತು; ರಾತ್ರಿಯ ಮೌನವನ್ನು ಭೇದಿಸಿಕೊಂಡು ಏಳುತ್ತಿದೆ ಅದರ ತಡೆಯಿಲ್ಲದ ಆರ್ತನಾದ.

ರಾತ್ರಿಯ ಆ ಹೊತ್ತು ತಳವಿಲ್ಲದ ಬಾವಿಯಂತೆ ಶೂನ್ಯವಾಗಿ 'ಬೆಕೋ' ಎನ್ನಿಸುತ್ತಿದೆ. ಮಧುಸೂದನನ ಸಂಸಾರ ಯಂತ್ರದ ಚಕ್ರಗಳೆಲ್ಲಾ ನಿಂತುಹೋಗಿದ್ದುವು. ಮರುದಿನ ಅವನಿಗೆ ಆಫೀಸಿನಲ್ಲಿ ಎಷ್ಟೋ ಕೆಲಸ. ಡೈರೆಕ್ಟರುಗಳ ಮೀಟಿಂಗ್. ಎಷ್ಟೋ ಕಠಿಣವಾದ ಮಸೂದೆಗಳನ್ನು ಸದಸ್ಯರ ಪ್ರತಿಭಟನೆಯನ್ನು ಅತಿಕ್ರಮಿಸಿ ವಿಚಕ್ಷಣೆಯಿಂದ ಮಂಜೂರು ಮಾಡಿಸಬೇಕಾಗಿದೆ. ಆ ಎಲ್ಲ ಅತಿ ಆವಸರದ ಕೆಲಸಗಳೂ ಇಂದು ಅವನ ಮುಂದೆ ಕೇವಲ ಛಾಯೆಯಂತೆ ಅಸ್ಪಷ್ಟವಾಗಿವೆ. ಮೊದಲಿನಂತೆ ಆಗಿದ್ದಿದ್ದರೆ ಮರುದಿನದ ಕಾರ್ಯಪ್ರಣಾಳಿಯನ್ನು ಅಂದು ರಾತ್ರಿಯೇ ನೋಟ್ ಪುಸ್ತಕದಲ್ಲಿ ಗುರುತು ಮಾಡಿಟ್ಟುಕೊಳ್ಳುತ್ತಿದ್ದ. ಎಲ್ಲಾ ಚಿಂತೆಗಳೂ ದೂರವಾಗುತ್ತಿದ್ದುವು. ಈಗ ಜಗತ್ತಿನಲ್ಲಿ ಸುನಿಶ್ಚಿತವಾಗಿ ನಿಂತಿದ್ದ ಕಠಿಣ ಸತ್ಯವೊಂದೇ-ಅದು ಈ ಒರಟು ದುಪ್ಪಟಿಯನ್ನು ಹೊದ್ದ ಹೆಣ್ಣು—ಕೋಣೆಯಿಂದ ಹೊರಗೆ ಹೋಗುವ ದಾರಿಗೆ ಅಡ್ಡವಾಗಿ ಅಲುಗದೆ ನಿಂತಿದ್ದಾಳೆ.

ಸ್ವಲ್ಪ ಹೊತ್ತಾದ ಮೇಲೆ ಮಧುಸೂದನನು ಒಂದು ದೀರ್ಘವಾದ ನಿಟ್ಟುಸಿರನ್ನು ಬಿಟ್ಟು ಕೂತ. ಇಡೀ ಕೊಠಡಿಯೇ ಧ್ಯಾನ ಭಂಗವಾಗಿ ಎದ್ದು ಕೂತಂತಾಯಿತು, ಕುರ್ಚಿಯಿಂದ ಬೇಗನೆ ಎದ್ದು ಕುಮುವಿನ ಹತ್ತಿರ ಹೋಗಿ "ನಿನ್ನ ಮನಸ್ಸು ಕಲ್ಲಿನಿಂದ ಮಾಡಿದೆಯೇನೇ, ಯಜಮಾನಿ?" ಎಂದ.

ಆ 'ಯಜಮಾನಿ' ಎನ್ನುವ ಶಬ್ದ ಕುಮುವಿನ ಮನಸ್ಸಿನಲ್ಲಿ ಮಂತ್ರದಂತೆ ಕೆಲಸಮಾಡಿತು. ತನ್ನಲ್ಲಿಯೇ ಅವಳ ತಾಯಿಯ ಜೀವನದ ಕಡೆಯದಿನಗಳ ಅಪಚಾರವು ಹಠಾತ್ತಾಗಿ ಮನಸ್ಸಿನಲ್ಲಿ ಆಕಾರ ಪಡೆದು ಏಳುತ್ತಿತ್ತು. ಈ 'ಯಜಮಾನೀ' ಎಂಬ ಕೂಗಿಗೆ ಅವಳ ತಾಯಿ ಎಷ್ಟು ದಿನ ಎಷ್ಟು ಸಹಜವಾಗಿ ಉತ್ತರ ಕೊಡುತ್ತಿದ್ದಳು. ಅವಳ ಆ ಅಭ್ಯಾಸವೇ ಕುಮುವಿನಲ್ಲಿ ರಕ್ತಗತವಾದಂತಿತ್ತು. ಅದರಿಂದಲೇ ಕುಮು ಚಕಿತಳಾಗಿ ಮುಖ ತಿರುಗಿಸಿ ನಿಂತಳು, ಮಧುಸೂದನನು ಗಭೀರ ಕಾತರತೆಯಿಂದ "ನಾನು ನಿನಗೆ ಯೋಗ್ಯನಲ್ಲ. ಆದರೆ ನನ್ನ ಮೇಲೆ ಇಷ್ಟು ಕರುಣೆ ತೋರಿಸಲಾರೆಯಾ?" ಎಂದ.

ಕುಮುದಿನಿಯು ವ್ಯಸ್ತಳಾಗಿ "ಛೀ, ಛೀ, ಹಾಗೆಲ್ಲಾ ಹೇಳಬೇಡಿ," ಎಂದಳು. ನೆಲದ ಮೇಲೆ ಬಿದ್ದು ಮಧುಸೂದನನ ಪಾದ ಧೂಳಿಯನ್ನು ತೆಗೆದುಕೊಂಡು "ನಾನು ನಿಮ್ಮ ದಾಸಿ.... ನನಗೆ ನೀವು ಅಪ್ಪಣೆ ಮಾಡಿ" ಎಂದಳು.

ಮಧುಸೂದನನು ಅವಳನ್ನು ಕೈ ಹಿಡಿದು ಎತ್ತಿ ಎದೆಗೆ ಅಪ್ಪಿಕೊಂಡು "ಇಲ್ಲ....ನಿನಗೆ ಅಪ್ಪಣೆ ಮಾಡುವುದಿಲ್ಲ. ನೀನು ನಿನ್ನ ಇಷ್ಟದಿಂದಲೇ ನನ್ನ ಹತ್ತಿರ ಬಾ." ಎಂದ.

ಕುಮುದಿನಿಯು ಮಧುಸೂದನನ ಬಾಹುಬಂಧನದಲ್ಲಿ ಜೋರಾಗಿ ಉಸಿರು ಬಿಡಲು ತೊಡಗಿದಳು. ಆದರೂ ಬಿಡಿಸಿಕೊಳ್ಳಲು ಪ್ರಯತ್ನ ಮಾಡಲಿಲ್ಲ. ಮಧುಸೂದನನು ಬಿಗಿದ ಕಂಠದಿಂದ "ಇಲ್ಲ....ನಿನಗೆ ನಾನು ಅಪ್ಪಣೆಮಾಡುವುದಿಲ್ಲ...ಆದರೂ ನೀನು ನನ್ನ ಹತ್ತಿರಕ್ಕೆ ಬಾ" ಎಂದು ಕುಮುದಿನಿಯನ್ನು ಬಿಟ್ಟು ಬಿಟ್ಟ.

ಕುಮುದಿನಿಯ ಬಿಳಿಯ ಮುಖವು ಕೆಂಪಗಾಗಿ ಹೋಗಿತ್ತು. ಅವಳು ದೃಷ್ಟಿ ಕೆಳಗೆ ಮಾಡಿಕೊಂಡು "ನೀವು ಅಪ್ಪಣೆ ಮಾಡಿದರೆ ನನ್ನ ಕರ್ತವ್ಯ ಸುಲಭವಾಗುತ್ತದೆ. ನಾನು ಸ್ವತಃ ಯೋಚನೆಮಾಡಿ ಏನನ್ನೂ ಮಾಡಲಾಗುವುದಿಲ್ಲ." ಎಂದಳು.

"ಒಳ್ಳೇದು ಹಾಗಾದರೆ-ನೀನು ಮೊದಲು ಆ ಹಾಳು ದುಪ್ಪಟಿಯನ್ನು ಆಕಡೆ ಬಿಸಾಡು.... ನನಗೆ ನೋಡುವುದಕ್ಕಾಗುವುದಿಲ್ಲ."

ಸಂಕೋಚದಿಂದಲೇ ಕುಮುದಿನಿಯು ದುಪ್ಪಟಿಯನ್ನು ಒಂದು ಕಡೆ ತೆಗೆದುಹಾಕಿದಳು.

ಅವಳು ಮೈಮೇಲೊಂದು ಸಣ್ಣ ಅಂಚಿನ ಡೋರಿಯಾ ಸೀರೆಯನ್ನು ಉಟ್ಟಿದ್ದಳು. ಕರಿಯ ಗೆರೆಗಳ ಸಾಲುಗಳು ಕುಮುವಿನ ದೇಹವನ್ನು ರೇಖೆಗಳ ಝರಿಯಂತೆ ಸುತ್ತು ಹಾಕಿದ್ದುವು. ಅವು ಸ್ತಬ್ಧವಾಗಿದ್ದಂತೆ ಕಾಣುತ್ತಿರಲಿಲ್ಲ...ಸುಮ್ಮನೆ ಓಡಾಡುತ್ತಿರುವಂತಿತ್ತು. ಯಾವುದೋ ಒಂದು ಕಾಳದೃಷ್ಟಿಯು ತನ್ನ ತಡೆಯಿಲ್ಲದ ಓಟದ ಗುರುತನ್ನು ರೇಖೆರೇಖೆಯಾಗಿ ಅವಳ ಅಂಗಗಳ ಸುತ್ತಲೂ ಹರಡಿ ಪ್ರದಕ್ಷಿಣೆ ಮಾಡುತ್ತಿದೆ. ಏನು ಮಾಡಿದರೂ ಮುಗಿಯಲೊಲ್ಲದು ಎನ್ನುವ ಹಾಗಿತ್ತು. ಮಧುಸೂದನನು ಮುಗ್ಧನಾಗಿಹೋದ. ಆದರೂ ಅದೇ ಕ್ಷಣದಲ್ಲಿ ಒಂದು ಬೇರೆ ವಿಷಯ ಅವನ ಗಮನಕ್ಕೆ ಬಾರದೆ ಇರಲಿಲ್ಲ. ಆ ಸೀರೆ ಇಲ್ಲಿ ಕೊಟ್ಟುದಲ್ಲ. ಅವರ ಮನೆಯಿಂದ ತಂದದ್ದು. ಕುಮುದಿನಿಗೆ ಅದು ಎಷ್ಟೇ ಒಪ್ಪಿದ್ದರೂ ಅದರ ಬೆಲೆ ಬಹಳ ಅಲ್ಪ...ಅಲ್ಲದೆ ಅದು ಅವಳ ಅಪ್ಪನ ಮನೆಯದು. ಇದೇ ಸ್ನಾನದ ಮನೆಗೆ ಸೇರಿದಂತೆ ಇದ್ದ ಬಟ್ಟೆ ಬದಲಾಯಿಸಿಕೊಳ್ಳುವ ಕೋಣೆಯಲ್ಲಿ ಭಾರೀ ಮರದ ಅಲಮಾರುಗಳ ಕನ್ನಡಿಯಿಂದಾವೃತವಾದ ಪೆಟ್ಟಿಗೆಗಳಲ್ಲಿ ಮದುವೆಯ ಮುಂಚೆಯಿಂದಲೂ ನಾನಾ ವಿಧವಾದ ಬೆಲೆ ಬಾಳುವ ಬಟ್ಟೆಗಳಿದ್ದುವು. ಅವುಗಳ ಮೇಲೆ ಆಸೆಯೇ ಇಲ್ಲ,....ಈ ಹುಡುಗಿಗೆ ಎಷ್ಟು ಗರ್ವ! ಆ ಮೂರು ಉಂಗುರಗಳ ವಿಷಯ ಮನಸ್ಸಿಗೆ ಬಂತು. ಅಸಹನೀಯವಾದ ಉದಾಸೀನದಿಂದ ಕುಮು ಅವುಗಳನ್ನು ಧರಿಸಿಕೊಳ್ಳದೆ ಆ ಹಾಳು ಪಚ್ಚೆಯುಂಗುರಕ್ಕೋಸ್ಕರ ಅಷ್ಟು ಗಲಾಟೆಮಾಡಿದ್ದಳು. ವಿಪ್ರದಾಸ ಮಧುಸೂದನರ ಮಧ್ಯೆ ಕುಮುದಿನಿಯ ಮಮತೆಯ ಬೆಲೆಯಲ್ಲಿ ಎಷ್ಟು ವ್ಯತ್ಯಾಸ! ದುಪಟಿಯನ್ನು ತೆಗೆದು ಹಾಕಿದ ತಕ್ಷಣ ಈ ಯೋಚನೆಗಳೆಲ್ಲಾ ಬಿರುಸಾದ ಬಿರುಗಾಳಿಯ ವೇಗದಲ್ಲಿ ಮಧುಸೂದನನ ಮನಸ್ಸನ್ನು ಒಟ್ಟಿಗೇ ತಾಕಿದುವು. ಆದರೆ, ಅಬ್ಬ, ಇದೇನು ಸೌಂದರ್ಯ....! ಏನು ಆಶ್ಚರ್ಯಕರವಾದ ರೂಪ!....ಮತ್ತು ಈ ತುಳಿಯಲಾಗದ ದರ್ಪ....ಅದೂ ಅವಳಿಗೆ ಅಲಂಕಾರವಾಗಿತ್ತು.... ಈ ಹೆಣ್ಣೇ ಐಶ್ವರ್ಯವನ್ನು ಉಪೇಕ್ಷೆ ಮಾಡಬಲ್ಲವಳು. ಸಹಜವಾದ ಸಂಪತ್ತಿನಿಂದಲೇ ಮಹಾರಾಣಿಯಾಗಿ ಹುಟ್ಟಿ ಬಂದಿರುವಳು.

ಹಣದಿಂದ ಇವಳಿಗೆ ಬೆಲೆ ಕಟ್ಟಲು ಸಾಧ್ಯವಿಲ್ಲ, ಇವಳು ಲೆಕ್ಕಾಚಾರಕ್ಕೆ ಒಳಪಡುವವಳಲ್ಲ.

ಮಧುಸೂದನನು ಅವಳಿಗೆ ಯಾವುದನ್ನ ತಾನೇ ತೋರಿಸಿ ಆಸೆ ಹಿಡಿಸಬಲ್ಲ?

"ಹೋಗು....ನೀನು ಮಲಗು ಹೋಗು" ಎಂದು ಕುಮುವಿಗೆ ಹೇಳಿದ. ಕುಮು ಅವನ ಮುಖದ ಕಡೆಯೇ ನೋಡುತ್ತ ನಿಂತಳು. "ನೀವು ಮುಂಚೆ ಮಲಗಲು ಹೋಗುವುದಿಲ್ಲವೇ?" ಎಂದು ನೀರವವಾಗಿ ಕೇಳುವಂತಿತ್ತು ಆ ದೃಷ್ಟಿ.

ಮಧುಸೂದನನು ದೃಢ ಸ್ವರದಲ್ಲಿ ಮತ್ತೆ "ಹೋಗು, ಇನ್ನು ತಡಮಾಡಬೇಡ" ಎಂದ. ಕುಮು ಹಾಸುಗೆಯ ಮೇಲೆ ಹೋದಾಗ ಮಧುಸೂದನನು ಸೋಫಾದಮೇಲೆ ಕೂತು "ನಾನಿಲ್ಲಿಯೇ ಕೂತಿರುತ್ತೇನೆ. ನೀನು ಕರೆದರೆ ಮಾತ್ರ ಬರುತ್ತೇನೆ....ಹೀಗೆ ವರ್ಷಗಳಾದ ಮೇಲೆ ವರ್ಷಗಳು ಕಾದು ಕೂತಿರುತ್ತೇನೆ ಬೇಕಿದ್ದರೆ." ಎಂದ.

ಕುಮುವಿನ ಮೈಯೆಲ್ಲಾ ಝುಮ್ಮೆಂದಿತು. ಇದೆಂತಹ ಪರೀಕ್ಷೆ ಅವಳಿಗೆ? ಯಾರ ಬಾಗಿಲಲ್ಲಿ ಅವಳು ಹಣೆ ಹೊಡೆದು ಕೊಳ್ಳುವುದು? ದೇವರಂತೂ ಅವಳಿಗೆ ಯಾವ ಸೂಚನೆಯನ್ನೂ ಕೊಡ ಲಿಲ್ಲ. ಯಾವ ದಾರಿಯನ್ನು ಹಿಡಿದು ಅವಳು ಇಲ್ಲಿಗೆ ಬಂದಳೋ ಅದು ಸಂಪೂರ್ಣವಾಗಿ ತಪ್ಪು ದಾರಿ. ಹಾಸುಗೆಯಲ್ಲಿ ಕೂತುಕೊಂಡೇ ಅವಳು ಮನಸ್ಸಿನಲ್ಲಿ "ದೇವರೇ, ನೀನೆಂದಿಗೂ ನನ್ನ ಕೈ ಬಿಡಲಾರೆ, ನನಗೆ ಈಗಲೂ ನಿನ್ನ ಮೇಲೆ ವಿಶ್ವಾಸವಿದೆ. ಕಾಡಿನಲ್ಲಿ ದರ್ಶನ ಕೊಡುತ್ತೇನೆಂದು ನೀನೇ ಅಲ್ಲವೇ ಧ್ರುವನನ್ನ ವನಕ್ಕೆ ಎಳೆದುಕೊಂಡು ಬಂದುದು?" ಎಂದು ಪ್ರಾರ್ಥಿಸಿದಳು.

ಆ ನಿಶ್ಶಬ್ದವಾದ ಕೋಣೆಯಲ್ಲಿ ಬೇರೆ ಯಾವ ಶಬ್ದವೂ ಇಲ್ಲ. ರಸ್ತೆಯ ಮಧ್ಯೆಯಿಂದ ಆ ಹೆಂಡಕುಡುಕನ ಹಾಡು ಕೇಳಬರುತ್ತಿಲ್ಲ. ಆ ಪಕ್ಕದ ಮನೆಯ ನಾಯಿಮರಿ ಮಾತ್ರ ದಣಿದು ಬಿದ್ದಿದ್ದರೂ ಮಧ್ಯೆ ಮಧ್ಯೆ ಆರ್ತನಾದ ಮಾಡುತ್ತಿತ್ತು.

ಸ್ವಲ್ಪ ಸಮಯವಾದರೂ ಬಹಳ ಹೊತ್ತೆಂದು ಮನಸ್ಸಿಗೆ ತೋರಿತು. ಸ್ತಬ್ಧತೆಯ ಭಾರ ಹೊತ್ತ ಪ್ರಹರವು ಮುಂದೆ ಹೋಗಲು ಬಯಸದಂತೆ ಇತ್ತು. ಇದೇ ಏನು ತನ್ನ ದಾಂಪತ್ಯದ ಅನಂತ ಕಾಲದ ಚಿತ್ರ? ಎರಡು ದಡಗಳಲ್ಲೂ ಇಬ್ಬರೂ ನೀರವವಾಗಿ ಕೂತಿದ್ದಾರೆ. ರಾತ್ರಿಗೆ ಅಂತ್ಯವೇ ಇಲ್ಲ. ನಡುವೆ ದಾಟಲಾರದ ಮೌನದ ಕಡಲು. ಕೊನೆಗೆ ಒಂದು ಸಮಯದಲ್ಲಿ ಕುಮು ತನ್ನ ಸಮಸ್ತ ಶಕ್ತಿಯನ್ನು ಸಂಗ್ರಹಿಸಿಕೊಂಡು ಹಾಸುಗೆಯನ್ನು ಬಿಟ್ಟೆದ್ದು ಬಂದು "ನನ್ನನ್ನು ತಪ್ಪಿತಸ್ಥಳಾಗಿ ಮಾಡಬೇಡಿ" ಎಂದಳು.

ಮಧುಸೂದನನು ಗಂಭೀರ ಧ್ವನಿಯಲ್ಲಿ "ಏನು ಬೇಕು ಹೇಳು, ಏನು ಮಾಡಬೇಕು ನಾನು?" ಕಡೆಯ ಮಾತನ್ನೂ ಕೂಡ ಪೂರ್ತಿಯಾಗಿ ಎಳೆದು ಹೊರಗೆಡವ ಬೇಕೆಂದು ಅವನ ಇಚ್ಛೆ.

ಕುಮು "ಮಲಗಿಕೊಳ್ಳಿ, ಬನ್ನಿ" ಎಂದಳು.

ಆದರೆ ಇದನ್ನೇ ಗೆಲ್ಲುವುದೆಂದು ಹೇಳುವುದು?

## ಮೂವತ್ತೆಂಟನೆಯ ಅಧ್ಯಾಯ

ಮರುದಿನ ಬೆಳಗ್ಗೆ ಮೋತಿಯಮ್ಮನು ಕುಮುವಿಗೋಸ್ಕರ ಒಂದು ಬಟ್ಟಲು ಹಾಲನ್ನು ತಂದು ಕೊಟ್ಟಾಗ ಕುಮುವಿನ ಎರಡು ಕಣ್ಣುಗಳೂ ಕೆಂಪಗೆ ಊದಿಕೊಂಡಿದ್ದುವು. ಮುಖದ ಬಣ್ಣವು

ಬೂದಿಯಂತಾಗಿತ್ತು. ಬೆಳಿಗ್ಗೆ ಬಿಸಿಲು ಮಾಳಿಗೆಯ ಮೂಲೆಯಲ್ಲಿ ಚಾಪೆ ಹಾಸಿ ಪೂರ್ವ ದಿಕ್ಕಿಗೆ ಅಭಿಮುಖವಾಗಿ ಮಾನಸ ಪೂಜೆ ಮಾಡುತ್ತಾ ಕೂತಿರುವಾಗ ಆಗ ಅಲ್ಲಿ ಕುಮುವನ್ನು ನೋಡ ಬಹುದೆಂದು ಅವಳು ಎಣಿಸಿದ್ದಳು.

ಆದರೆ ಇಂದು ಅವಳು ಅಲ್ಲಿಲ್ಲ. ಮೆಟ್ಟಲು ಹತ್ತಿದೊಡನೆ ಛಾವಣಿಯಿರುವ ಹಜಾರ ವೊಂದಿತ್ತು. ಅಲ್ಲಿ ಗೋಡೆಗೊರಗಿಕೊಂಡು ಕುಂದಿದ ಮುಖಭಾವವುಳ್ಳವಳಾಗಿ ನೆಲದ ಮೇಲೆ ಕೂತಿದ್ದಳು. ಇಂದವಳು ದೇವರ ಮೇಲೆ ಕೋಪ ಮಾಡಿಕೊಂಡಿದ್ದಂತಿತ್ತು. ನಿರಪರಾಧಿ ಯಾದ ಮಗನನ್ನು ನಿಷ್ಠುರನಾದ ತಂದೆ ಅಕಾರಣವಾಗಿ ಹೊಡೆದಾಗ ಆ ಹುಡುಗ ಹೇಗೆ ಏನೂ ಅರಿಯದೆ ಅಭಿಮಾನದಿಂದ ಪ್ರತಿಭಟಿಸದೆ ಪೆಟ್ಟು ತಿನ್ನುವನೋ, ಪ್ರತಿವಾದ ಮಾಡಲು ಪ್ರಯತ್ನವನ್ನೇ ಮಾಡನೋ, ದೇವರ ಮೇಲೆ ಕುಮುವಿನ ಭಾವವೂ ಅದೇ ರೀತಿಯಾಗಿ ಇತ್ತು.

ಯಾವ ಆಹ್ವಾನವನ್ನು ಅವಳ ದೇವರ ಕರೆಯೆಂದು ಅಂಗೀಕರಿಸಿದ್ದಳೋ ಅದು ಈ ಅಶು ಚಿತ್ವದಲ್ಲಿಯೇ, ಈ ಆಂತರಿಕ ಅಸತೀತ್ವದಲ್ಲಿಯೇ? ದೇವರು ನಾರೀ ಬಲಿಯನ್ನು ಆಶಿಸಿ ತಾನಾ ಗಿಯೇ ಬೇಟೆಯ ಮೃಗವನ್ನು ದಾರಿ ತಪ್ಪಿಸಿ ಕರೆ ತಂದನೆ? ಯಾವ ಶರೀರದಲ್ಲಿ ಮನಸ್ಸೆನ್ನುವುದೇ ಇಲ್ಲವೋ ಆ ಮಾಂಸ ಪಿಂಡವನ್ನೇ ಅವನಿಗೆ ನೈವೇದ್ಯ ಒಪ್ಪಿಸುವದು?....ಇಂದು ಏನು ಮಾಡಿದರೂ ಭಕ್ತಿ ಜಾಗರಿತವಾಗಲಿಲ್ಲ. ಇಷ್ಟು ದಿನ ಕುಮು ಬಾರಿ ಬಾರಿಗೂ ನನ್ನನ್ನು ನೀನು ಸಹಿಸಿಕೊಳ್ಳಲೆಂದು ದೇವರಿಗೆ ಹೇಳಿಕೊಂಡು ಬಂದಿದ್ದಳು. ಇಂದು ಅವಳ ವಿದ್ರೋಹಿ ಮನಸ್ಸು ದೇವರನ್ನೇ "ನಾನು ನಿನ್ನನ್ನು ಹೇಗೆ ಸಹಿಸಲಿ" ಎಂದು ಹೇಳುತ್ತಿದೆ. "ಯಾವ ನಾಚುಗೆಯಿಂದ ನಿನ್ನ ಪೂಜಾ ದ್ರವ್ಯವನ್ನು ತರಲಿ? ನಿನ್ನ ಭಕ್ತಳನ್ನು ನೀನೇ ಗ್ರಹಣ ಮಾಡದೆ ಅವಳನ್ನು ಯಾವುದೋ ದಾಸಿಯರ ಸಂತೆಯಲ್ಲಿ ಮಾರಿಬಿಡುವುದೇ? ಎಲ್ಲಿ ಮೀನು ಮಾಂಸಗಳ ಬೆಲೆಗೆ ಹೆಣ್ಣು ಮಕ್ಕಳನ್ನು ಬಿಕರಿ ಮಾಡುವರೋ ಅಂತಹ ಸಂತೆಯಲ್ಲಿ? ಎಲ್ಲಿ ನಿರ್ಮಾಲ್ಯ ಪಡೆಯುವುದ ಕ್ಕಾಗಿ ಯಾರೂ ಶ್ರದ್ಧೆಯಿಂದ ಪೂಜೆ ಮಾಡುವುದಿಲ್ಲವೋ ಅಂತಹ ಕಡೆ? ಎಲ್ಲಿ ಆಡಿನ ಮರಿ ಯಿಂದ ಹೂದೋಟವನ್ನು ಮೇಯಿಸಿ ಹಾಕುವರೋ ಅಂತಹ ಕಡೆಯೇ ಮಾರುವುದು?" ಎಂದು ದೂರುತ್ತಿದೆ.

ಮೋತಿಯಮ್ಮನು ಹಾಲು ಕುಡಿಯೆಂದು ಬಲವಂತ ಮಾಡಿದಾಗ ಕುಮು "ಇರಲಿ ಬಿಡು" ಎಂದಳು. ಮೋತಿಯಮ್ಮನು "ಯಾಕೆ, ಯಾಕೆ ಬಿಡುವುದು? ನನ್ನ ಹಾಲಿನ ಬಟ್ಟಲು ಏನು ತಪ್ಪು ಮಾಡಿದೆ?" ಎಂದಳು. ಕುಮು "ಇನ್ನೂ ಸ್ನಾನ ಮಾಡಿಲ್ಲ. ಪೂಜೆ ಮಾಡಿಲ್ಲ" ಎಂದಳು.

ಮೋತಿಯಮ್ಮನು "ನಡಿ, ನೀನು ಸ್ನಾನ ಮಾಡುವೆಯಂತೆ....ಹಾಗಾದರೆ ನಾನು ಕಾದು ಕೊಂಡು ಇರುತ್ತೇನೆ" ಎಂದಳು.

ಕುಮು ಸ್ನಾನ ಮುಗಿಸಿ ಬಂದಳು.

ಮೋತಿಯಮ್ಮನು "ಈಗ ಹೋಗಿ ಬಿಸಿಲು ಮಾಳಿಗೆಯ ಮೂಲೆಯಲ್ಲಿ ಹೋಗಿ ಕೂಡು ತ್ತಾಳೆ." ಎಂದುಕೊಂಡಳು. ಕುಮು ಮುಹೂರ್ತ ಮಟ್ಟಿಗೆ ಅಭ್ಯಾಸ ಬಲದಿಂದ ಬಿಸಿಲು ಮಾಳಿ ಗೆಯ ದಿಕ್ಕಿನಲ್ಲಿ ಕಾಲು ಹಾಕುತ್ತಿದ್ದವಳು, ಹೋಗದೆ ಹಿಂದಿರುಗಿ ಮತ್ತೆ ಅದೇ ನೆಲದ ಮೇಲೆ ಬಂದು ಕೂತಳು. ಅವಳ ಮನಸ್ಸು ಸಿದ್ಧವಾಗಿರಲಿಲ್ಲ.

ಮೋತಿಯಮ್ಮನನ್ನು ಕುಮು ಪ್ರಶ್ನೆ ಮಾಡಿದಳು "ನಮ್ಮಣ್ಣನ ಕಾಗದ ಬಂದಿಲ್ಲವೇ?"

ಇಂದು ಬಂದಿದ್ದರೂ ಬಂದಿರಬಹುದೆಂದು ಮೋತಿಯಮ್ಮನು ಬೆಳಿಗ್ಗೆ ಅಷ್ಟು ಹೊತ್ತಿಗೇ ಹೊರಮನೆಯ ಆಫೀಸು ರೂಮಿಗೆ ಹೋಗಿ ಟಪಾಲಿನ ಡ್ರಾಯರನ್ನು ಎಳೆದಾಗ ಅದಕ್ಕೆ ಬೀಗ ಹಾಕಿದ್ದದ್ದು ಕಂಡು ಬಂತು. ಹಾಗಾದರೆ ಇನ್ನು ಮೇಲೆ ಕಳ್ಳತನದಿಂದ ದಾಳಿ ನಡೆಸುವ ರಸ್ತೆಗೆ ಆತಂಕ ಬಂದಂತೆ ಆಯಿತು.

ಮೋತಿಯಮ್ಮನು "ಸರಿಯಾಗಿ ಹೇಳಲಿಕ್ಕೆ ಸಾಧ್ಯವಿಲ್ಲಮ್ಮ...ವಿಚಾರಿಸಿಕೊಂಡು ಬಂದು ತಿಳಿಸುತ್ತೇನೆ" ಎಂದಳು.

ಈ ಸಮಯದಲ್ಲಿ ಹಠಾತ್ತಾಗಿ ಶ್ಯಾಮಾ ಬಂದು ನಿಂತಳು." ಏನಕ್ಕಾ,...ಇದೇನು ಇಷ್ಟು ಸಪ್ಪಗಿದ್ದೀಯಲ್ಲಾ? ಮೈ ಹುಷಾರಿಲ್ಲವೇನು?" ಎಂದಳು.

ಕುಮು "ಇಲ್ಲಮ್ಮ"ಎಂದಳು.

"ತೌರು ಮನೆಗೋಸ್ಕರ ಮನಸ್ಸು ಹೊಡಕೊಳ್ಳುತ್ತೆ ಅಲ್ಲವೆ...." ಅದು ನ್ಯಾಯವೇ-ಪಾಪ! ಆದರೆ ನಿಮ್ಮಣ್ಣನೇ ಬರುತ್ತಾರಲ್ಲ....ಆಗ ನೋಡಬಹುದು."

ಕುಮು ಚಕಿತಳಾಗಿ ಎದ್ದು ಶ್ಯಾಮಳ ಮುಖದ ಕಡೆ ಉತ್ಸುಕತೆಯಿಂದ ನೋಡುತ್ತಾ ನಿಂತಳು. ಮೋತಿಯಮ್ಮನು "ಈ ಸುದ್ದಿಯನ್ನು ನೀನೆಲ್ಲಿ ಕೇಳಿದೆಯೇ,...?" ಎಂದು ಕೇಳಿದಳು.

"ಎಲ್ಲಿ ಕೇಳಿದೇನೆ ? ಚೆನ್ನಾಯಿತು.

"ಇದು ಎಲ್ಲರಿಗೂ ಗೊತ್ತಿರುವ ವಿಷಯ. ನಮ್ಮ ಅಡುಗೆ ಮನೆಯ ಪಾರ್ವತಿ ಇದ್ದಾಳಲ್ಲ ? ಅವಳು ಹೇಳಿದಳು....ಅವಳ ತಂದೆ ಮನೆಯ ಕರಣೀಕರು ರಾಜಾ ಬಹದ್ದೂರರ ಹತ್ತಿರ ಬಂದಿದ್ದರು....ನಮ್ಮ ಯಜಮಾನಿಯ ಯೋಗಕ್ಷೇಮ ವಿಚಾರಿಸಿಕೊಳ್ಳುವುದಕ್ಕೆ....ಅವರ ಬಾಯಿಂದ ಕೇಳಿದಳಂತೆ....ಹೀಗೆ....ಚಿಕಿತ್ಸೆಗೋಸ್ಕರ ಯಜಮಾನಿಯ ಅಣ್ಣಂದಿರು ಇವತ್ತು ನಾಳೆಯೊಳಗಾಗಿ ಕಲಿಕತ್ತೆಗೆ ಬರುತ್ತಾರಂತೆ...."

ಕುಮು ಉದ್ವಿಗ್ನಳಾಗಿ "ನಮ್ಮಣ್ಣನ ಕಾಯಿಲೆ ಹೆಚ್ಚಿದೆಯೇನು ?" ಎಂದಳು.

"ಅದು ನನಗೆ ಗೊತ್ತಿಲ್ಲಮ್ಮ....ಬಹುಶಃ ಹಾಗೇನೂ ಇಲ್ಲ ಅಂತ ಕಾಣುತ್ತೆ....ಹಾಗಿದ್ದಿದ್ದರೆ ಯಾರಾದರೂ ಹೇಳುತ್ತಾ ಇದ್ದರು."

ಹೆಂಡತಿಯ ಮನಸ್ಸಿನ್ನೂ ತನ್ನ ಕಡೆ ಒಲಿದಿಲ್ಲವಾದುದರಿಂದ ಅವಳಿನ್ನೂ ತೌರುಮನೆಯ ಕಡೆಯೇ ಹೆಚ್ಚು ಯೋಚನೆ ಮಾಡಬಹುದೆಂಬ ಶಂಕೆಯಿಂದ ಮಧುಸೂದನ ಅವಳಿಗೆ ಅವರಣ್ಣನ ವಿಷಯವಾಗಿ ಹೇಳಲಿಲ್ಲವೆಂದು ಶ್ಯಾಮಾ ಅರಿತಳು.

ಕುಮುವಿನ ಮನಸ್ಸನ್ನು ಉತ್ತೇಜಿಸಲು ಶ್ಯಾಮಾ "ನಿಮ್ಮಣ್ಣನಂತಹ ಮನುಷ್ಯ ಇನ್ನೆಲ್ಲೂ ಸಿಗಲಾರರು, ಅಂತ ಎಲ್ಲರ ಬಾಯಲ್ಲೂ ಕೇಳುತಾಯಿದೇನೆ...." ಎಂದು ಮೋತಿಯಮ್ಮನ ಕಡೆ ತಿರುಗಿ "ನಡಿಯೇ ಹೋಗೋಣ, ಹೊತ್ತಾಯಿತು. ಉಗ್ರಾಣದಿಂದ ಅಡುಗೆ ಸಾಮಾನುಗಳನ್ನು ಸಿದ್ಧಮಾಡಿಕೊಡಬೇಕಾಗುತ್ತೆ. ಕಛೇರಿ ಹೊತ್ತಿಗೆ ಅಡುಗೆ ಮಾಡಬೇಕಲ್ಲ, ಇನ್ನು...."ಎಂದಳು.

ಮೋತಿಯಮ್ಮನು ಹಾಲಿನ ಬಟ್ಟಲನ್ನು ಮತ್ತೊಂದು ಸಲ ಕುಮುವಿನ ಹತ್ತಿರ ತಂದು "ಹಾಲು ತಣ್ಣಗಾಗಿ ಹೋಯಿತು....ಕುಡಿದು ಬಿಡಮ್ಮ....ನನ್ನ ತಾಯಿ...."ಎಂದು ಬಲವಂತ ಮಾಡಿದಳು. ಈಸಲ ಕುಮು ಹಾಲು ಕುಡಿಯಲು ಹಠಮಾಡಲಿಲ್ಲ.

ಮೋತಿಯಮ್ಮನು ಅವಳ ಕಿವಿಯಲ್ಲಿ "ಉಗ್ರಾಣಕ್ಕೆ ಬರುತ್ತೀಯಾ ನನ್ನ ಜೊತೆಯಲ್ಲಿ?"

ಎಂದು ಕೇಳಿದಳು.

ಕುಮು "ಇವತ್ತು ಬೇಡ. ಗೋಪಾಲನ್ನ ನನ್ನ ಹತ್ತಿರ ಒಂದು ಸಲ ಕಳುಹಿಸಿಕೊಡು ಮತ್ತೆ" ಎಂದಳು.

ಕಪ್ಪಾದ, ಕಠೋರವಾದೊಂದು ಹಸಿದ ಮುಪ್ಪು ಹೊರಗಿನಿಂದ ಕುಮುವನ್ನು ರಾಹುವಂತೆ ನುಂಗುತ್ತಿದೆ. ತುಂಬು ಪ್ರಾಯದ ಶಾಂತ, ಸ್ನಿಗ್ಧ, ಸುಗಂಭೀರ ವಯಸ್ಸಿನವಳಂತಿಲ್ಲ ಇವಳು. ಸಂಯಮವಿಲ್ಲದ ವ್ಯಾಮೋಹದಿಂದ ಪ್ರೀತಿಯಿಲ್ಲದೆ ವಿಷಯಾಸಕ್ತನಾದವನ ಬೆವರು ಬೆರತ ಸ್ಪರ್ಶದಿಂದ ಅಷ್ಟು ಜಿಗುಪ್ಸೆ ಪಟ್ಟಿದಾಳೆ ಇವಳು. ಗಂಡನ ವಯಸ್ಸು ಹೆಚ್ಚೆಂದು ಆಕ್ಷೇಪಣೆಯಿಲ್ಲ ಕುಮುವಿಗೆ. ಆದರೆ ಆ ವಯಸ್ಸಿನಲ್ಲಿ ತನ್ನ ಆತ್ಮ ಗೌರವ ಮರೆತಿದ್ದರೆಂದೇ ಅವಳ ಬಾಧೆ. ಸಂಪೂರ್ಣ ಆತ್ಮನಿವೇದನ ಒಂದು ಫಲದಂತೆ. ಗಾಳಿ ಬೆಳಕುಗಳ ಸ್ವಚ್ಛಂದ ಆವರಣದಲ್ಲಿ ಅದು ಪಕ್ವವಾಗುತ್ತದೆ, ಕಸುಗಾಯನ್ನು ಒರಳು ಕಲ್ಲಿನಲ್ಲಿ ಹಾಕಿ ಒತ್ತಿದರೆ ಪಕ್ವವಾದ ರಸ ಬರುತ್ತದೆಯೇ? ಸಾಕಷ್ಟು ಅವಕಾಶವಿಲ್ಲವೆಂದೇ ಗಂಡನ ಸಹವಾಸದಿಂದ ಕುಮುವಿಗೆ ಅಷ್ಟು ನೋವು, ಅಷ್ಟು ಅವಮಾನ! ಆದರೆ ಓಡಿಹೋಗುವುದೆಲ್ಲಿಗೆ? ಗೋಪಾಲನನ್ನು ಕಳುಹಿಸು ಎಂದು ಮೋತಿಯಮ್ಮನಿಗೆ ಹೇಳಿದುದು ಹೀಗೆ ಓಡಿಹೋಗಲು ದಾರಿ ಹುಡುಕುವುದಕ್ಕಾಗಿಯೇ; ಮುದಿತನದ ಮೈಲಿಗೆಯಿಂದ ಎಳೆತನದ ಹೊಸ ನಿರ್ಮಲತೆಗೆ, ಕೆಟ್ಟ ನಿಶ್ವಾಸದ ಗಾಳಿಯಿಂದ ಹೂದೋಟದ ಹವಾಸೇವನೆಗೆ ತಪ್ಪಿಸಿಕೊಂಡು ಹೋಗುವ ದಾರಿ!

ತೆಳುವಾದ ಹೂಗಳ ಚೀಟಿಯ ಅಂಗಿಯನ್ನು ತೊಟ್ಟು ಹಾಬಲೂ ಮೆಟ್ಟಲ ಬಾಗಿಲಲ್ಲಿ ಬಂದು ಹೆದರಿ ಹೆದರಿ ನಿಂತನು. ಅವನ ತಾಯಿಯಂತೆಯೇ ದೊಡ್ಡ ದೊಡ್ಡ ಕಪ್ಪಾದ ಕಣ್ಣುಗಳು, ಹಾಗೆಯೇ ನೀರು ತುಂಬಿದ ಮೇಘದಂತೆ ಸುರಸವಾದ ಶ್ಯಾಮಲ ವರ್ಣ, ಕೆನ್ನೆಗಳು ಹೂವಿನಂತೆ ಉಬ್ಬಿದ್ದುವು. ತಲೆಗೂದಲು ಪೂರ್ತಿಯಾಗಿ ಕತ್ತರಿಸಲ್ಪಟ್ಟಿತ್ತು.

ಕುಮು ಎದ್ದು ಹೋಗಿ ನಾಚಿಕೊಳ್ಳುತ್ತಿದ್ದ ಹಾಬಲೂವನ್ನು ಕೈಹಿಡಿದು ಹತ್ತಿರಕ್ಕೆಳೆದು ಎದೆಗವಚಿಕೊಂಡಳು. "ತುಂಟು ಹುಡುಗ, ಯಾಕೋ ಎರಡು ಮೂರು ದಿನದಿಂದ ಈ ಕಡೆ ಬರಲಿಲ್ಲ?" ಎಂದಳು.

ಹಾಬಲೂ ಕುಮುವಿನ ಕೊರಳ ಮೇಲೆ ಕೈ ಹಾಕಿ ಅಪ್ಪಿ ಕಿವಿಯಲ್ಲಿ "ದೊಡ್ಡಮ್ಮಾ, ನಾನು ನಿನಗೆ ಏನು ತಂದಿದ್ದೀನಿ ಹೇಳು ಮತ್ತೆ?" ಎಂದ. ಕುಮು ಅವನ ಕೆನ್ನೆಯನ್ನು ಮುತ್ತಿಟ್ಟು "ರತ್ನ ತಂದಿದ್ದೀಯೇನೋ, ಗೋಪಾಲ?" ಎಂದಳು.

"ನನ್ನ ಜೇಬಿನಲ್ಲಿದೆ, ನೋಡು."

"ಒಳ್ಳೇದು. ಹಾಗಾದರೆ ತೆಗಿ."

"ಏನು ಅಂತ ನಿನಗೆ ಹೇಳೋದಕ್ಕಾಗುವುದಿಲ್ಲವೇ?"

"ನನಗೆ ಅಷ್ಟು ಬುದ್ಧಿಯಿಲ್ಲಪ್ಪಾ, ಕಣ್ಣಲ್ಲಿ ನೋಡಿದರೂ ಹೇಳಲಿಕ್ಕೆ ಸಾಧ್ಯವಿಲ್ಲ. ಇನ್ನು ನೋಡದೆ ಹೋದರೆ ಹೇಗೆ ಹೇಳು."

ಆಗ ಹಾಬಲೂ ಮೆಲ್ಲಗೆ ಜೇಬಿನಿಂದ ಖಾಕಿ ಕಾಗದದ ಪೊಟ್ಟಣವೊಂದನ್ನ ಹೊರಗೆ ತೆಗೆದು ಕುಮುವಿನ ಉಡಿಯಲ್ಲಿಟ್ಟು ಓಡಿ ಹೋಗುವುದರಲ್ಲಿದ್ದ.

"ಇಲ್ಲ....ನೀನು ಓಡಿ ಹೋದರೆ ಬಿಡುವುದಿಲ್ಲ."

ಹಾಬಲು ಪೊಟ್ಟಣವನ್ನು ಕೈಯಿಂದ ಮುಚ್ಚಿ "ಹಾಗಾದರೆ ಈಗ ಇದನ್ನ ನೋಡಕೂಡದು" ಎಂದನು.

"ಇಲ್ಲ. ಹೆದರ ಬೇಡ. ನೀನು ಹೊರಟು ಹೋದ ಮೇಲೆ ತೆಗೆಯುತ್ತೇನೆ."

"ಹೋಗಲಿ, ದೊಡ್ಡಮ್ಮಾ, ಜಡೆದೆವ್ವವನ್ನು ನೋಡಿದ್ದೀಯಾ ?"

"ಹೇಗೆ ಹೇಳಲಿ....ನೋಡಿದ್ದರೂ ನೋಡಿರಬಹುದು. ಆದರೆ ಗುರುತು ಹಿಡಿಯುವುದಕ್ಕೆ ಸಮಯ ಇರಲಿಲ್ಲವೇನೋ...."

"ಕೆಳಗಿನಂತಸ್ತಿನಲ್ಲಿ ಅಂಗಳದ ಪಕ್ಕದಲ್ಲಿ ಇದ್ದಲು ತುಂಬುವ ಕೋಣೆಯಲ್ಲಿ ಸಾಯಂಕಾಲದ ಹೊತ್ತು ಬಾವಲಿಯ ಬೆನ್ನ ಮೇಲೆ ಸವಾರಿ ಮಾಡಿಕೊಂಡು ಬರುತ್ತಾಳೆ."

"ಬಾವಲಿಯ ಮೇಲೆ ಸವಾರಿ ಮಾಡಿಕೊಂಡು ಬರುತ್ತಾಳೆಯೇ ?"

"ಮನಸ್ಸು ಮಾಡಿದರೆ ಅವಳು ಬಹಳ ಪುಟ್ಟದಾಗಿ ಬಿಡುತ್ತಾಳೆ, ಕಣ್ಣಿಗೆ ಕೂಡ ಕಾಣಿಸಲಾರದಷ್ಟು."

"ಆ ಮಂತ್ರ ನಾನೂ ಅವಳ ಹತ್ತಿರ ಕಲಿತುಕೋಬೇಕಲ್ಲ ?"

"ಯಾಕೆ ದೊಡ್ಡಮ್ಮ ?"

"ನಾನೇನಾದರೂ ಓಡಿಹೋಗುವುದಕ್ಕೋಸ್ಕರ ಇದ್ದಲಿನ ಕೋಣೆಯಲ್ಲಿ ಬಚ್ಚಿಟ್ಟುಕೊಂಡರೂ ನನ್ನನ್ನ ಯಾರೂ ಕಂಡುಹಿಡಿಯಲಾಗುವುದಿಲ್ಲ."

ಹಾಬಲೂ ಈ ಮಾತಿಗೆ ಅರ್ಥವೇನೂ ತಿಳಿದುಕೊಳ್ಳಲಾರದೆ "ಇದ್ದಲಿನ ಕೋಣೆಯಲ್ಲಿ ಕುಂಕುಮದ ಡಬ್ಬಿ ಮುಚ್ಚಿಟ್ಟಿದ್ದಾಳೆ. ಆ ಕುಂಕುಮ ಎಲ್ಲಿಂದ ತಂದಳು ಗೊತ್ತಾ ?"

"ಓ....ಗೊತ್ತು ಅಂತ ಕಾಣುತ್ತೆ."

"ಒಳ್ಳೇದು ಹೇಳು ನೋಡೋಣ."

"ಮುಂಜಾನೆಯ ಮೇಘದ ಒಳಗಣಿಂದ." ಹಾಬಲು ಸ್ವಲ್ಪ ಬೆಪ್ಪಾದ. ಅವನಿಗೆ ಈ ವಿಶೇಷದ ಸುದ್ದಿಯನ್ನು ಹೇಳಿದವರು ಸಾಗರದಾಚೆಯ ದೈತ್ಯಪುರಿಯಿಂದ ಬಂದವರು ಎಂದು ಹೇಳಿದ್ದರು. ಆದರೆ ದೊಡ್ಡಮ್ಮನ ಮಾತೇ ನಂಬತಕ್ಕದ್ದೆಂದು ಅವನಿಗೆ ಅನ್ನಿಸಿತು. ಅದಕ್ಕೇ ಹೆಚ್ಚು ತರ್ಕಮಾಡದೆ "ಆ ಕುಂಕುಮದ ಭರಣಿ ಹುಡುಕಿ ತಗೊಂಡು ಬಂದು ಹಣೆಗೆ ಹಚ್ಚಿಕೊಳ್ಳುವ ಹುಡುಗಿ ಮಹಾರಾಣಿಯಾಗುತ್ತಾಳೆ. ಗೊತ್ತಾ?" ಎಂದ.

"ದೇವರೇ ಗತಿ....ಹಾಗಾದರೆ ಯಾವ ನತದೃಷ್ಟೆಗೋ ಆ ಸುದ್ದಿ ತಿಳಿದುಬಿಟ್ಟಿದೆಯೋ ನೋ ?"

"ಚಿಕ್ಕಮ್ಮನ ಮಗಳು ಖುದೀಗೆ ಗೊತ್ತು. ಬುಟ್ಟಿಯಲ್ಲಿ ಬೆಳಗಿನ ಹೊತ್ತು ಪ್ರತಿ ದಿನ ಛನ್ನು ಇದ್ದಿಲು ತರಲು ಹೊಗುವಾಗ ಖುದಿ ಅವನ ಜೊತೆಯಲ್ಲಿ ಹೋಗುತ್ತಾಳೆ. ಅವಳಿಗೆ ಸ್ವಲ್ಪವೂ ಹೆದರಿಕೆಯಿಲ್ಲ."

"ಅವಳಿನ್ನೂ ಪುಟ್ಟ ಹುಡುಗಿ. ಅದಕ್ಕೇ ಮಹಾರಾಣಿಯಾಗುವುದಕ್ಕೆ ಅವಳಿಗೆ ಹೆದರಿಕೆಯಿಲ್ಲ."

ಹೊರಗಡೆ ಚಳಿ ಗಾಳಿ ಬೀಸುತ್ತಿದ್ದುದರಿಂದ ಮೋತಿಯನ್ನು ಕರೆದುಕೊಂಡು ಕುಮು ಕೋಣೆಯೊಳಕ್ಕೆ ಹೋದಳು. ಅಲ್ಲಿ ಹೋಗಿ ಸೋಫಾದ ಮೇಲೆ ಕೂತುಕೊಂಡು ಅವನನ್ನು ತೊಡೆಯ ಮೇಲೆ ಎತ್ತಿ ಕೂಡಿಸಿಕೊಂಡಳು. ಪಕ್ಕದ ಟೀಪಾಯಿಯ ಮೇಲೆ ಬೆಳ್ಳಿಯ ತಟ್ಟೆ

ಯೊಂದರ ಮೇಲೆ ಶೀತಕಾಲದ ಹೂವುಗಳು ಕೆಲವಿದ್ದುವು. ಕುಂದ ಪುಷ್ಪ, ಜಾಜಿ, ಸಂಜೆ ಮಲ್ಲಿಗೆ, ಯುವಾ ಪುಷ್ಪ ಮುಂತಾದುವು. ಪ್ರತಿ ನಿತ್ಯದ ರೂಢಿಯಂತೆ ತೋಟಗಾರನು ಕುಯ್ದು ತಂದಿಟ್ಟಿದ್ದ. ಕುಮು ಬಿಸಿಲು ಮಾಳಿಗೆಯ ಮೂಲೆಯಲ್ಲಿ ಸೂರ್ಯೋದಯದ ದಿಕ್ಕಿಗೆ ಅಭಿಮುಖವಾಗಿ ಕೂತು ದೇವರನ್ನು ಆಹ್ವಾನಿಸಿ ಅರ್ಪಿಸುವುದಕ್ಕೋಸ್ಕರ ಅವುಗಳಿದ್ದುದು. ಇಂದು ಆ ಇನ್ನೂ ನೈವೇದ್ಯ ಮಾಡದಿದ್ದ ಹೂವುಗಳ ತಟ್ಟೆಯನ್ನೇ ಹಾಬಲು ಮುಖದ ಮುಂದೆ ಹಿಡಿದು "ಬೇಕೇ ಹೂವು ?" ಎಂದಳು.

"ಹೂಂ—ಬೇಕು."

"ಏನು ಮಾಡುತ್ತಿ ಹೇಳು."

"ಸಮರ್ಪಯಾಮಿ ಸಮರ್ಪಯಾಮಿ ಆಟ ಆಡುತ್ತೇನೆ." ಕುಮು ಸೊಂಟದಿಂದ ರೇಶಿಮೆಯ ಕರವಸ್ತ್ರವೊಂದನ್ನು ತೆಗೆದು ಅದರಲ್ಲಿ ಹೂಗಳನ್ನು ಕಟ್ಟಿ ಅವನನ್ನು ಚುಂಬಿಸಿ "ಇಗೋ ಹಿಡಿ" ಎಂದು ಹೇಳಿದಳು. ಮನಸ್ಸಿನಲ್ಲೇ "ನನ್ನದೂ ಸಮರ್ಪಯಾಮಿ, ಸಮರ್ಪಯಾಮಿ ಆಟ ಆಗಿ ಹೋಯಿತು." ಎಂದುಕೊಂಡಳು. ಹಾಬಲೂವನ್ನು ಕುರಿತು "ಗೋಪಾಲ, ಇವುಗಳ ಮಧ್ಯೆ ಯಾವ ಹೂವು ನಿನಗೆ ಎಲ್ಲಕ್ಕಿಂತಲೂ ಚೆನ್ನಾಗಿದೆ, ಹೇಳು ಮತ್ತೆ?"

ಹಾಬಲು "ಯವಾಪುಷ್ಪ" ಎಂದನು. "ಯಾಕೆ ಯವಾಪುಷ್ಪ ಇಷ್ಟ ಅಂತ ಹೇಳಲೇ ?"

"ಹೇಳು ನೋಡೋಣ."

"ಯಾಕೆ ಗೊತ್ತಾ....ಅದೇ ಬೆಳಗಿನ ಝಾವಕ್ಕೆ ಸರಿಯಾಗಿ ಜಡೆದೆವ್ವದ ಆ ಕುಂಕುಮ ಭರಣಿ ಕದ್ದು ಬಿಡುತ್ತೆ....ಅಲ್ಲವಾ ?"

ಹಾಬಲೂ ಸ್ವಲ್ಪ ಹೊತ್ತು ಗಂಭೀರವಾಗಿದ್ದು ಕೂತು ಯೋಚಿಸಿದ. ಹಠಾತ್ತಾಗಿ "ದೊಡ್ಡಮ್ಮ, ಯವಾ ಪುಷ್ಪದ ಬಣ್ಣ ಸರಿಯಾಗಿ ನಿಮ್ಮ ಶೀರೆಯ ಕೆಂಪಂಚಿನ ಹಾಗೆಯೇ ಇದೆ." ಇಷ್ಟರಿಂದಲೇ ಅವನ ಮನಸ್ಸಿನ ಮಾತುಗಳನ್ನೆಲ್ಲಾ ಹೇಳಿದಂತಾಯಿತು.

ಈ ಸಮಯದಲ್ಲಿ ಹಠಾತ್ತಾಗಿ ಹಿಂದೆ ನೋಡಿದರೆ ಮಧುಸೂದನ ನಿಂತಿದ್ದುದು ಕಾಣಬಂತು. ಅವನ ಹೆಜ್ಜೆಯ ಸದ್ದೇ ಕೇಳಿಸಿರಲಿಲ್ಲ. ಈಗ ಅಂತಃಪುರಕ್ಕೆ ಬರುವ ಸಮಯವಲ್ಲ, ಈ ಸಮಯದಲ್ಲಿ ಹೊರಗಿನ ಆಫೀಸು ರೂಮಿನಲ್ಲಿ ಹಿಂದಿನ ದಿನದ ವ್ಯಾಪಾರ ವಿಷಯಗಳ ಉಚ್ಛಿಷ್ಟ, ಪರಿಶಿಷ್ಟಗಳು ಯಾವುದು ಉಳಿದಿತ್ತೋ ಅವುಗಳ ವಿಲೇವಾರಿಯಾಗುತ್ತದೆ. ಈ ವೇಳೆಯಲ್ಲಿಯೇ ದಳ್ಳಾಳಿಗಳು ಬರುತ್ತಾರೆ, ಅರ್ಜಿದಾರರು ಬರುತ್ತಾರೆ. ವಿಧವಿಧವಾದ ಜುಜುಬಿ ಸುದ್ದಿಗಳನ್ನು ತೆಗೆದುಕೊಂಡು ಸೆಕ್ರೆಟರಿಗಳು ಬರುತ್ತಾರೆ. ನಿತ್ಯದ ಮುಖ್ಯ ಕೆಲಸಕ್ಕಿಂತ ಈ ಚಿಲ್ಲರೆ ಕೆಲಸಗಳ ಗಲಾಟೆಯೇನು ಕಡಮೆಯಿಲ್ಲ."

## ಮೂವತ್ತೊಂಬತ್ತನೆಯ ಅಧ್ಯಾಯ

ಜೋಳಿಗೆಯಲ್ಲಿ ಅಕ್ಕಿಯ ಬದಲು ಬರಿಯ ಹೊಟ್ಟು ತುಂಬಿಕೊಂಡು ಬಂದ ಭಿಕ್ಷುಕನಂತೆ. ಮನಸ್ಸುಳ್ಳವನಾಗಿ ಮಧುಸೂದನನು ಅಂದು ಬೆಳಿಗ್ಗೆ ವಿಪರೀತ ಜುಗಪ್ಸೆಯಿಂದ ಹೊರಗೆ ಹೊರಟಿದ್ದ. ಆದರೆ ಅತೃಪ್ತಿಯ ಆಕರ್ಷಣ ಬಹಳ ಪ್ರಚಂಡ. ನೋವೇ ನೋವಿನ ಕಡೆ ಎಳೆದು

ಕೊಂಡು ಹೋಗುತ್ತದೆ.

ಅವನನ್ನ ನೋಡಿದೊಡನೆ ಹಾಬಲೂವಿನ ಮುಖ ಒಣಗಿ ಹೋಯಿತು. ಆದರೂ ನಡುಗುತ್ತಾ ಎದ್ದು ಓಡಿ ಹೋಗಲು ನೋಡಿದ. ಕುಮು ಬಲವಾಗಿ ಹಿಡಿದುಕೊಂಡಿದ್ದಳು. ಓಡಲು ಬಿಡಲಿಲ್ಲ.

ಮಧುಸೂದನನು ಅದನ್ನ ನೋಡಿದನು. ಹಾಬಲೂವನ್ನು ಗದರಿಸುತ್ತಾ "ಏನೋ ಮಾಡುತ್ತೀಯಾ ಇಲ್ಲಿ? ಓದುವುದಕ್ಕೆ ಹೊತ್ತಾಗಲಿಲ್ಲ?" ಎಂದ.

ಮಾಸ್ಟರು ಬರುವ ಹೊತ್ತಾಗಿರಲಿಲ್ಲ ಇನ್ನೂ....ಹೀಗೆಂದು ಹೇಳುವ ಸಾಹಸ ಹಾಬಲೂವಿಗೆ ಇರಲಿಲ್ಲ. ಗದರಿಕೆಯನ್ನು ನಿಶ್ಶಬ್ದವಾಗಿ ತಡೆದುಕೊಂಡು ತಲೆ ತಗ್ಗಿಸಿಕೊಂಡು ನಿದಾನವಾಗಿ ಹೊರಟುಹೋದ. ಅವನನ್ನ ತಡೆಯಲು ಕುಮು ಉದ್ಯುಕ್ತಳಾದವಳು ಆ ಮೇಲೆ ಸುಮ್ಮನಾದಳು. "ನಿನ್ನಹೂವು ಬಿಟ್ಟು ಹೋದೆಯಲ್ಲೋ...! ತೆಗೆದುಕೊಂಡು ಹೋಗುವುದಿಲ್ಲ?" ಎಂದಳು. ಹೀಗೆ ಹೇಳಿ ಹೂವುಗಳನ್ನು ಕಟ್ಟಿದ್ದ ಅಂಗವಸ್ತ್ರವನ್ನು ಅವನ ಮುಂದೆ ಹಿಡಿದಳು, ಹಾಬಲೂ ಅದನ್ನು ತೆಗೆದುಕೊಳ್ಳದೆ ಭಯದಿಂದ ಅವರ ದೊಡ್ಡಪ್ಪನ ಮುಖದ ಕಡೆ ನೋಡುತ್ತಿದ್ದ.

ಮಧುಸೂದನನು ಪಟ್ಟೆಂದು ಕರವಸ್ತ್ರದ ಗಂಟನ್ನು ಕುಮುವಿನ ಕೈಯಿಂದ ಕಸಿದುಕೊಂಡು "ಯಾರದೇ ಈ ಕರವಸ್ತ್ರ?" ಎಂದು ಕೇಳಿದ.

ಒಂದು ಕ್ಷಣದಲ್ಲಿ ಕುಮುವಿನ ಮುಖ ಕೆಂಪಗಾಗಿ ಹೋಯಿತು. "ನನ್ನದು" ಎಂದಳು.

ಆ ಕರವಸ್ತ್ರವೇನೋ ಸಂಪೂರ್ಣವಾಗಿ ಕುಮುವದು. ಅದರಲ್ಲಿ ಸಂದೇಹವೇ ಇಲ್ಲ; ಅಂದರೆ ಮದುವೆಯ ಹಿಂದಿನ ಸ್ವತ್ತು. ಅದಕ್ಕೆ ಹಾಕಿದ್ದ ರೇಶಿಮೆದಾರದ ಕಸೂತಿಯೂ ಕುಮುವಿನ ಕೈವಾಡ.

ಹೂಗಳನ್ನು ತೆಗೆದು ನೆಲದ ಮೇಲೆ ಬಿಸಾಡಿ ಮಧುಸೂದನನು ಕರವಸ್ತ್ರವನ್ನು ಜೇಬಿನಲ್ಲಿ ಮಡಿಸಿಟ್ಟುಕೊಂಡ.

"ಇದನ್ನ ನಾನೇ ತೆಗೆದುಕೊಳ್ಳುತ್ತೇನೆ. ಹುಡುಗ ಇದನ್ನಿಟ್ಟುಕೊಂಡು ಏನು ಮಾಡುತ್ತಾನೆ?....ನೀನು ಹೋಗೋ" ಎಂದ.

ಮಧುಸೂದನನ ಈ ಒರಟುತನ ಕುಮುವನ್ನು ಪೆಚ್ಚುಮಾಡಿಬಿಟ್ಟಿತು. ಹಾಬಲೂ ಕೂಡ ಪೆಚ್ಚುಮೋರೆಯಿಂದ ಅಲ್ಲಿಂದ ಹೊರಟುಹೋದ. ಕುಮು ಏನೂ ಹೇಳಲಿಲ್ಲ.

ಅವಳ ಮುಖಭಾವವನ್ನು ನೋಡಿ ಮಧುಸೂದನ "ನೀನೇನೋ ದಾನ ಛತ್ರವನ್ನೇ ತೆರೆದಿದ್ದೀಯ. ಆದರೆ ನನ್ನ ಪಾಲಿಗೆ ಮಾತ್ರ ಸೊನ್ನೆ ಅಂತ ಕಾಣುತ್ತೆ...ಈ ಕರವಸ್ತ್ರ ನನ್ನ ಹತ್ತಿರವೇ ಇರಲಿ. ನಿನ್ನಿಂದ ಏನಾದರೂ ಪಡೆದೆನಲ್ಲಾ ಅಂತ ಮನಸ್ಸಿನಲ್ಲಿರುತ್ತೆ." ಎಂದ.

ಮಧುಸೂದನ ಯಾವುದನ್ನು ಬಯಸಿದ್ದನೋ ಅದನ್ನು ಪಡೆಯುವುದಕ್ಕೆ ಅವನ ಸ್ವಭಾವದಲ್ಲಿಯೇ ದೊಡ್ಡ ಅಡಚಣೆಯಿತ್ತು.

ಕುಮು ಕೆಳಗಡೆ ನೋಡುತ್ತ ಸೋಫಾದಲ್ಲಿ ಒಂದು ಕಡೆ ಮಾತಾಡದೆ ಕೂತಿದ್ದಳು ಸೀರೆಯ ಕೆಂಪಂಚು ಅವಳ ತಲೆಯನ್ನು ಸುತ್ತುಹಾಕಿ ಮುಖವನ್ನು ಮುಚ್ಚಿ ಕೆಳಗಡೆ ಜೋತಾಡುತ್ತಿತ್ತು. ಅದರ ಸಂಗಡವೇ ಅವಳ ಒದ್ದೆಯಾದ ಕೂದಲು ಇಳಿಬಿದ್ದು ಜೋತಾಡುತ್ತಿತ್ತು. ಕೊರಳಿನ ಶುಭ್ರವಾದ ಕೋಮಲತೆಯನ್ನು ಸುತ್ತಿದೆ ಒಂದೆಳೆ ಚಿನ್ನದ ಸರ. ಈ ಸರ ಅವಳ

ತಾಯಿಯದು. ಅದಕ್ಕೇ ಅದನ್ನ ಯಾವಾಗಲೂ ತೊಟ್ಟಿರುವಳು. ಇನ್ನೂ ಜಾಕೆಟ್ಟನ್ನು ತೊಟ್ಟಿರಲಿಲ್ಲ. ಒಳಗಡೆ ತೆಳುವಾದ ಒಂದು ಕುಪ್ಪುಸವನ್ನು ತೊಟ್ಟಿದ್ದಳು. ತೋಳುಗಳೆರಡೂ ಕಾಣುವಂತೆ ತೊಡೆಯಮೇಲೆ ಸ್ತಬ್ಧವಾಗಿ ಊರಿಕೊಂಡಿದ್ದುವು. ಅತಿ ಸುಕುಮಾರವಾದ ಶುಭ ವಾದ ಕೈಗಳು. ಸಮಸ್ತ ದೇಹದ ವಾಣಿಯೂ ಇಲ್ಲಿಯೇ ಉಕ್ಕಿ ಹರಿದಂತೆ ಇತ್ತು.

ಮಧುಸೂದನನು ಕಣ್ಣು ತಗ್ಗಿಸಿ ಈ ಅಭಿಮಾನಿಯಾದ ಚೆಲುವೆಯನ್ನು ಸುಮ್ಮನೆ ನೋಡುತ್ತಲೇ ಇದ್ದ. ಆ ದಪ್ಪನಾದ ಚಿನ್ನದ ಕಡಗಗಳನ್ನು ಧರಿಸಿದ ಕೈಗಳ ಕಡೆಯಿಂದ ದೃಷ್ಟಿ ತಿರುಗಿಸಲಾಗಲೇ ಇಲ್ಲ. ಸೋಫಾದ ಒಂದು ಕಡೆ ಕೂತು ಒಂದು ಕೈಯನ್ನ ತನ್ನ ಕಡೆ ಎಳೆದುಕೊಳ್ಳಲು ಪ್ರಯತ್ನ ಪಟ್ಟ. ಏನೋ ಒಂದು ವಿಶೇಷವಾದ ಅಡ್ಡಿಯನ್ನು ಅನುಭವಿಸಿದ. ಕುಮು ಕೈಯನ್ನು ಹಿಂದಕ್ಕೆ ಎಳೆದುಕೊಳ್ಳಲಿಲ್ಲ. ಅವಳ ಕೈಯಲ್ಲಿ ಒಂದು ಕಾಗದದ ಪೊಟ್ಟಣ ಮುಚ್ಚಿರುವುದನ್ನು ಮಧುಸೂದನನು ಕಂಡ.

"ಆ ಕಾಗದದಲ್ಲಿ ಕಟ್ಟಿರುವುದು ಏನು ?"

"ಗೊತ್ತಿಲ್ಲ.?

"ಗೊತ್ತಿಲ್ಲ ಅಂದರೆ ಏನರ್ಥ ?"

"ಅದರರ್ಥ ನನಗೆ ಗೊತ್ತಿಲ್ಲ ಅಂತ."

ಮಧುಸೂದನನಿಗೆ ಅವಳ ಮಾತಿನಲ್ಲಿ ನಂಬಿಕೆಯಾಗಲಿಲ್ಲ. "ನನಗೆ ಕೊಡು ಅದನ್ನ. ನೋಡೋಣ."

ಕುಮು "ಅದು ನನ್ನ ಗುಟ್ಟು. ತೋರಿಸುವುದಕ್ಕೆ ಆಗುವುದಿಲ್ಲ." ಎಂದಳು.

ಬಾಣದಂತೆ ತೀಕ್ಷ್ಣವಾದ ಕೋಪವು ಒಂದು ಮುಹೂರ್ತದಲ್ಲಿ ಮಧುಸೂದನನ ತಲೆಗೇರಿತು. "ಏನಂದೆ ? ಪೊಂಡುತನ ಕಡಮೆಯಿಲ್ಲ ನಿನಗೆ !" ಎಂದು ಜೋರಾಗಿ ಕೈಯಿಂದ ಆ ಪೊಟ್ಟಣವನ್ನು ಕಿತ್ತುಕೊಂಡು ತೆಗೆದು ನೋಡಿದನು. ನೋಡಿದರೆ ಅದರಲ್ಲಿ ಮತ್ತೇನೂ ಇಲ್ಲ. ಒಂದು ಹಿಡಿಯಷ್ಟು ಸಕ್ಕರೆಯ ಕುಸುರಿಕಾಳು. ತಾಯಿಯು ನಿತ್ಯವೂ ಕೊಡುತ್ತಿದ್ದ ಅಗ್ಗದ ತಿಂಡಿ, ಪದಾರ್ಥಗಳಲ್ಲಿ ಇದೇ ಹಾಬಲುವಿಗೆ ಹೆಚ್ಚು ಇಷ್ಟವಾದುದು. ಅದಕ್ಕೇ ಅದನ್ನು ಅಷ್ಟು ಜೋಪಾನವಾಗಿ ಕುಮುವಿಗೆ ಕಾಗದದಲ್ಲಿ ಕಟ್ಟಿ ತಂದಿದ್ದುದು....

ಮಧುಸೂದನನಿಗೆ ಆಶ್ಚರ್ಯವಾಗಿ ಹೋಯಿತು,....ಏನಿದು ವಿಚಿತ್ರ !....ಬಹುಶಃ ಅವಳ ತೌರುಮನೆಯಲ್ಲಿಯೂ ಇದೇ ತರಹೆಯ ತಿಂಡಿಗಳು ಅಭ್ಯಾಸವೆಂದು ಕಾಣುತ್ತೆ ಇವಳಿಗೆ ! ಅದಕ್ಕೇ ಮುಚ್ಚಿಟ್ಟುಕೊಂಡು ತಂದಿದ್ದಾಳೆ. ಹೊರಗೆ ತೋರಿಸುವುದಕ್ಕೆ ನಾಚುಗೆ. ಅವನು ಮನಸ್ಸಿನಲ್ಲೇ ನಕ್ಕನು. "ಲಕ್ಷ್ಮಿಯ ದಾನ ಸ್ವೀಕರಿಸುವುದಕ್ಕೆ ಕೂಡ ತಡವಾಗುತ್ತೆ" ಎಂದು ಕೊಂಡು ಚಟ್ಟೆಂದು ಯೋಚನೆಯೊಂದು ಹೊಳೆಯಿತು. ಬೇಗನೆ ಎದ್ದು ಹೊರಗಡೆ ಹೊರಟುಹೋದ.

ಕುಮು ಆಗ ಡ್ರಾಯರನ್ನ ತೆಗೆದು ಅದರಲ್ಲೊಂದು ಚಿಕ್ಕ ಗಂಧದ ಪೆಟ್ಟಿಗೆಯನ್ನು ಹೊರಗೆ ತೆಗೆದಳು. ಅದರಲ್ಲಿ ಆ ಕುಸುರಿಕಾಳಿನ ಪೊಟ್ಟಣವನ್ನು ಇಟ್ಟು ಅವರಣ್ಣನಿಗೆ ಕಾಗದ ಬರೆಯಲು ಕುಳಿತಳು. ಮೂರು, ನಾಲ್ಕು ಪಂಕ್ತಿ ಬರೆಯುವಷ್ಟರಲ್ಲಿ ಮಧುಸೂದನನು ಮತ್ತೆ ಬಂದು ಎದುರಿಗೆ ನಿಂತ.

ಬೇಗ ಬೇಗ ಕಾಗದವನ್ನು ಮರೆಮಾಡಿ ಕುಮು ದೇಹವನ್ನು ಬಿಗಿಸಿಕೊಂಡು ಕೂತಳು.

ಮಧುಸೂದನನ ಕೈಯಲ್ಲಿ ಚಿನ್ನ ಬೆಳ್ಳಿಯ ಎನಾಮೆಲ್ ಹಾಕಿದ ಹಿಡಿಯುಳ್ಳ ಫಲದಾನಿಯಿತ್ತು. ಅದರ ಮೇಲೆ ಹೂಗಳಿಂದ ಚಿತ್ರಿತವಾಗಿದ್ದ ಸುಗಂಧ ಬೀರುವ ಕರವಸ್ತ್ರವೊಂದು ಇತ್ತು. ನಗ್ನ ಮುಖದಿಂದ ಮೇಜಿನ ಮೇಲೆ ಅದನ್ನ ಕುಮುವಿಗೆದುರಾಗಿಯೇ ಇಟ್ಟ. "ಅದರಲ್ಲೇನಿದೆ ತೆಗೆದು ನೋಡು" ಅಂದ.

ಕುಮು ಕರವಸ್ತ್ರವನ್ನು ಎತ್ತಿ ತೆಗೆದುಕೊಂಡು ನೋಡಿದಳು. ಆ ಬೆಲೆಯಾದ ಫಲದಾನಿಯು ತುಂಬ ಕುಸುರಿಕಾಳು. ಅವಳೊಬ್ಬಳೇ ಇದ್ದಿದ್ದರೆ ನಕ್ಕು ಬಿಡುತ್ತಿದ್ದಳು. ಈಗ ಏನೂ ಮಾತಾಡದೆ ಕುಮು ಗಂಭೀರವಾಗಿ ಸುಮ್ಮನೆ ಇದ್ದಳು. ಹೀಗಿರುವುದಕ್ಕಿಂತಲೂ ನಕ್ಕಿದ್ದರೇನೇ ಚೆನ್ನಾಗಿತ್ತು.

ಮಧುಸೂದನನು "ಕುಸುರಿ ಕಾಳನ್ನು ಗುಟ್ಟಾಗಿ ತಿನ್ನುವ ಅವಶ್ಯಕತೆಯೇನು ಹೇಳು? ಆದರಲ್ಲಿ ಸಂಕೋಚವೇನು? ಪ್ರತಿನಿತ್ಯವೂ ತರಿಸಿಕೊಡುತ್ತೇನೆ ಬೇಕಾದರೆ...ಎಷ್ಟು ಬೇಕು ಹೇಳು...ನನಗೆ ಮುಂಚೆಯೇ ಏಕೆ ಹೇಳಲಿಲ್ಲ?" ಎಂದ.

ಕುಮು "ನಿಮಗೆ ಅದನ್ನ ತಂದುಕೊಡಲು ಆಗುವುದಿಲ್ಲ" ಎಂದಳು.

"ಆಗುವುದಿಲ್ಲವೇ...? ಒಳ್ಳೇ ಮಾತಂದೆ!"

"ಇಲ್ಲ...ನಿಮಗೆ ಆಗುವುದಿಲ್ಲ."

"ವಿಪರೀತ ಬೆಲೆ ಅಲ್ಲವೆ ಇದಕ್ಕೆ?"

"ಹೌದು. ದುಡ್ಡು ಕೊಟ್ಟರೆ ಸಿಗುವುದಿಲ್ಲ ಇದು."

ಇದನ್ನು ಕೇಳಿ ಮಧುಸೂದನನ ತಲೆಯಲ್ಲಿ ತಕ್ಷಣ ಸಂದೇಹವೊಂದು ಅಂಕುರಿಸಿತು. "ನಿಮ್ಮಣ್ಣ ಪಾರ್ಸೆಲ್ ಮಾಡಿ ಕಳುಹಿಸಿದ ಅಂತ ಕಾಣುತ್ತೆ." ಎಂದ.

ಕುಮುವಿಗೆ ಈ ಪ್ರಶ್ನೆಗೆ ಜವಾಬು ಕೊಡಲು ಇಷ್ಟವಾಗಲಿಲ್ಲ. ಫಲಧಾನಿಯನ್ನು ಕುಕ್ಕಿ ಹೊರಟುಹೋಗಲೆಂದು ಎದ್ದು ನಿಂತಳು. ಮಧುಸೂದನನು ಕೈಹಿಡಿದು ಬಲಾತ್ಕಾರವಾಗಿ ಅವಳನ್ನು ಮತ್ತೆ ಕೂಡಿಸಿದನು.

ಮಧುಸೂದನನು ಮಾತಾಡುವುದಕ್ಕೆ ಮುಂಚೆಯೇ ಕುಮು "ಅಣ್ಣನ ಕಡೆಯಿಂದ ಅವರ ಯೋಗಕ್ಷೇಮ ತಿಳಿಸಲು ಯಾರಾದರೂ ಬಂದಿದ್ದರೆ? ಎಂದು ಕೇಳಿದಳು.

ಈ ಸಮಾಚಾರವನ್ನು ಕುಮು ಮುಂಚೆಯೇ ಹೇಗೋ ತಿಳಿದುಕೊಂಡು ಬಿಟ್ಟಿದ್ದುದು ಅವನಿಗೆ ಬಹಳ ಬೇಸರವಾಯಿತು.

"ಆ ಸಮಾಚಾರ ಹೇಳುವುದಕ್ಕೇ ನಾನು ಇವತ್ತು ಬೆಳಿಗ್ಗೆ ನಿನ್ನ ಹತ್ತಿರ ಬಂದಿದ್ದು" ಎಂದ. ಇದು ಪೂರ್ತಿ ಸುಳ್ಳೆಂದು ಬೇರೆ ಹೇಳಬೇಕಾಗಿಲ್ಲ,

"ಅಣ್ಣ ಯಾವಾಗ ಬರುತ್ತಾರೆ?"

"ಒಂದೆರಡು ವಾರಗಳಲ್ಲೇ."

ವಿಪ್ರದಾಸನು ಮರುದಿನವೇ ಬರುತ್ತಾನೆಂದು ಮಧುಸೂದನನಿಗೆ ಗೊತ್ತು. ಒಂದೆರಡು ವಾರಗಳೆಂದು ಹೇಳಿ ವಿಷಯವನ್ನು ಅನಿರ್ದಿಷ್ಟವಾಗಿಯೇ ಇಡಬೇಕೆಂದು ಅವನ ಇಷ್ಟ.

"ಅಣ್ಣನ ಆರೋಗ್ಯ ಇನ್ನೂ ಕೆಟ್ಟಿದೆಯೇನು?"

"ಇಲ್ಲ. ಅಂತಹುದೇನೂ ಕೇಳಿಲ್ಲ" ಈ ಮಾತಿನಲ್ಲಿಯೂ ದಾರಿ ತಪ್ಪಿಸುವ ಉದ್ದೇಶವಿತ್ತು.

ದಿಪ್ರದಾಸನು ಚಿಕಿತ್ಸೆಗೋಸ್ಕರವೇ ಕಲಿಕತ್ತೆಗೆ ಬರುತ್ತಿದ್ದುದು. ಅಂದರೆ ಅವನ ಆರೋಗ್ಯವಿನ್ನೂ ಚೆನ್ನಾಗಿರಲಿಲ್ಲ,

"ಅಣ್ಣನ ಕಾಗದ ಬಂದಿದೆಯೇನು?"

"ಟಪಾಲಿನ ಪೆಟ್ಟಿಗೆ ಇನ್ನೂ ತೆಗೆದು ನೋಡಿಲ್ಲ. ಏನಾದರೂ ಇದ್ದರೆ ನಿನಗೆ ಕೊಟ್ಟು ಕಳುಹಿಸುತ್ತೇನೆ."

ಕುಮು ಮಧುಸೂದನನ ಮಾತಿನಲ್ಲಿ ಅಪನಂಬಿಕೆ ಪಡಲು ಶುರುಮಾಡಲಿಲ್ಲ. ಅದಕ್ಕೇ ಈ ಮಾತನ್ನೂ ನಂಬಿದಳು.

"ಅಣ್ಣನ ಕಾಗದ ಬಂದಿದೆಯೇ ಇಲ್ಲವೇ ಒಂದು ಸಲ ತಿಳಿಸಿ ಹೇಳುತ್ತೀರಾ?"

"ಕಾಗದ ಬಂದಿದ್ದರೆ ಊಟವಾದ ಮೇಲೆ ಮಧ್ಯಾಹ್ನ ನಾನೇ ತಂದು ಕೊಡುತ್ತೇನೆ."

ಕುಮು ಅಧೈರ್ಯವನ್ನು ಅಡಗಿಸಿಕೊಂಡು ನೀರವವಾಗಿ ಸಮ್ಮತಿಸಿದಳು. ಆಗ ಮತ್ತೊಂದು ಸಲ ಮಧುಸೂದನನು ಅವಳ ಕೈಯನ್ನು ತನ್ನ ಕಡೆ ಎಳೆದುಕೊಳ್ಳಲು ಪ್ರಯತ್ನ ಮಾಡುತ್ತಿದ್ದಾಗ ಆ ಸಮಯಕ್ಕೆ ಸರಿಯಾಗಿ ಶ್ಯಾಮಾ ಹಠಾತ್ತಾಗಿ ಕೋಣೆಯೊಳಗೆ ಪ್ರವೇಶಿಸಿ "ಅಯ್ಯಮ್ಮ.... ಪೈದಂದಿರು" ಎಂದು ನಾಲಿಗೆ ಕಚ್ಚಿಕೊಂಡು ಹೋಗುವುದರಲ್ಲಿದ್ದಳು.

ಮಧುಸೂದನನು "ಯಾಕೆ ಏನಾಗಬೇಕು ನಿನಗೆ?" ಎಂದ.

"ಯಜಮಾನಿಯನ್ನು ಉಗ್ರಾಣಕ್ಕೆ ಕರೆಯೋಣ ಅಂತ ಬಂದೆ. ಮಹಾರಾಣಿಯಾದರೂ ಮನೆಯ ಗೃಹಿಣಿ ತಾನೇ? ಹೋಗಲಿ ಬಿಡಿ....ಇವತ್ತು ಹೇಗಾದರೂ ಆಗುತ್ತೆ" ಎಂದು ಹೇಳುತ್ತಿರುವಾಗ ಮಧುಸೂದನನು ಯಾವ ಮಾತೂ ಆಡದೆ ಬೇಗ ಬೇಗ ಹೊರಗಡೆ ಹೊರಟುಹೋದ. ಊಟವಾದ ಮೇಲೆ ಯಥಾಪ್ರಕಾರ ಮಲಗುವ ಮನೆಯ ಮಂಚದ ಮೇಲೆ ದಿಂಬಿಗೆ ಒರಗಿಕೊಂಡು ತಾಂಬೂಲ ಮೆಲ್ಲುತ್ತ ಮಧುಸೂದನನು ಕುಮುವಿಗೆ ಹೇಳಿಕಳುಹಿಸಿದ. ಕುಮು ಬೇಗ ಬೇಗ ಅಲ್ಲಿಗೆ ಬಂದಳು. ಇವತ್ತು ಅಣ್ಣನ ಕಾಗದ ಬಂದಿದೆಯೆಂದು ಅವಳಿಗೆ ಗೊತ್ತು. ಮಲಗುವ ಮನೆಯನ್ನು ಪ್ರವೇಶಿಸಿ ಮಂಚದ ಪಕ್ಕದಲ್ಲಿ ನಿಂತಳು. ಮಧುಸೂದನನು ಗುಡು ಗುಡಿಯ ಕೊಳವೆಯನ್ನು ಪಕ್ಕದಲ್ಲಿಟ್ಟು ಕುಮುವನ್ನು ನೋಡಿ 'ಕೂತುಕೋ' ಎಂದ. ಕುಮು ಕೂತಳು. ಮಧುಸೂದನನು ಅವಳ ಕೈಗೆ ಕೊಟ್ಟ ಕಾಗದದಲ್ಲಿ ಈ ಕೆಲವು ಮಾತುಗಳು ಬರೆಯಲ್ಪಟ್ಟಿದ್ದುವು.

"ಪ್ರಾಣ ಪ್ರತಿಮಾಸು

ಶುಭಾಶೀರ್ವಾದಾಶಯಃ ಸಂತು—

ಚಿಕಿತ್ಸೆಗೋಸ್ಕರ ಶೀಘ್ರದಲ್ಲಿಯೇ ಕಲಿಕತ್ತೆಗೆ ಬರುತ್ತಿದ್ದೇನೆ. ಸ್ವಸ್ಥವಾದರೆ ನಿನ್ನನ್ನು ನೋಡಲು ಬರುತ್ತೇನೆ. ಗೃಹ ಕೆಲಸಗಳ ಮಧ್ಯೆ ಆದಷ್ಟು ಅವಕಾಶ ಮಾಡಿಕೊಂಡು ಆಗಾಗ ಕುಶಲ ಸಂವಾದ ಕಳುಹಿಸಿದರೆ ನಿರುದ್ವಿಗ್ನನಾಗಿರುವೆನು."

ಈ ಚಿಕ್ಕ ಕಾಗದವನ್ನು ಮಾತ್ರ ಪಡೆದು ಕುಮುವಿನ ಮನಸ್ಸು ಮೊದಲಲ್ಲಿ ಸ್ವಲ್ಪ ಖಿನ್ನವಾಯಿತು.....ಹೊರಗಿನವಳಾಗಿ ಬಿಟ್ಟೆ, ಎಂದು ಮನಸ್ಸಿನಲ್ಲಿಯೇ ಹೇಳಿಕೊಂಡಳು. ಮನಸ್ಸಿನ ನೋವು ಹೆಚ್ಚಾಗುವುದರೊಳಗೇ "ಅಣ್ಣನ ಆರೋಗ್ಯ ಚೆನ್ನಾಗಿಲ್ಲ. ನನ್ನದು ಎಷ್ಟು ಚಿಕ್ಕ ಮನಸ್ಸು.... ನನ್ನ ವಿಷಯವೇ ಎಲ್ಲದಕ್ಕೂ ಮೊದಲು ಮನಸ್ಸಿಗೆ ಬರುತ್ತೆ." ಎಂದು ತನ್ನನ್ನೇ ಹಳಿದುಕೊಂಡಳು.

ಕುಮು ಹೊರಡಬೇಕೆಂದು ಏಳುತ್ತಿರುವುದನ್ನು ಕಂಡು ಮಧುಸೂದನನು "ಎಲ್ಲಿಗೆ ಹೊರಟೆ-ಕೂತುಕೋ ಸ್ವಲ್ಪ" ಎಂದ. ಕುಮುವಿಗೇನೋ ಕೂತುಕೊಳ್ಳಲು ಹೇಳಿದ. ಆದರೆ ಅವಳೊಡನೆ ಯಾವ ಮಾತನಾಡುವುದೆಂಬುದೇ ತಲೆಗೆ ಹೊಳೆಯಲಿಲ್ಲ. ವಿಳಂಬ ಮಾಡದೆ ಏನಾದರೂ ಹೇಳಲೇ ಬೇಕು. ಆದ್ದರಿಂದ ಬೆಳಗ್ಗೆಯಿಂದಲೂ ಯಾವ ವಿಷಯ ಮನಸ್ಸಿನೊಳಗೆ ಚುಚ್ಚುತ್ತಾ ಇತ್ತೋ ಅದೇ ಬಾಯಿಂದ ಹೊರಗೆ ಬಂತು. "ಆ ಕುಸುರಿ ಕಾಳಿಗೋಸ್ಕರ ಅಷ್ಟು ಗಲಾಟೆ ಮಾಡಿದೆ ಯಲ್ಲಾ ಯಾಕೆ? ಅದರಲ್ಲಿ ನಾಚಿಕೊಳ್ಳುವ ವಿಷಯ ಏನಿತ್ತು ?" ಎಂದ.

"ಅದು ನನ್ನ ಗೋಪ್ಯ ವಿಷಯ" "ಗೋಪ್ಯವಿಷಯವೆ? ನನ್ನ ಹತ್ತಿರ ಕೂಡ ಹೇಳಲು ಆಗುವುದಿಲ್ಲವೇ ?"

"ಇಲ್ಲ"

ಮಧುಸೂದನನ ಕೊರಳು ಕಠಿಣವಾಗುತ್ತ ಬಂತು. "ಇದು ನಿಮ್ಮ ಆ ನೂರ್ ನಗರದ ಚಾಳಿ....ಅಣ್ಣನ ಸ್ಕೂಲಿನಲ್ಲಿ ಕಲಿತದ್ದು."

ಕುಮು ಯಾವ ಉತ್ತರವನ್ನೂ ಕೊಡಲಿಲ್ಲ. ಮಧುಸೂದನನು ದಿಂಬನ್ನು ತಳ್ಳಿ ಎದ್ದು ಕೂತ. "ಆ ಚಾಳಿಯನ್ನು ನಿನ್ನಿಂದ ಬಿಡಿಸದೆ ಹೋದರೆ ನನ್ನ ಹೆಸರು ಮಧುಸೂದನನಲ್ಲ." ಎಂದ.

"ಏನು ನಿಮ್ಮಪ್ಪಣೆ- ಹೇಳಿ."

"ಆ ಪೊಟ್ಟಣವನ್ನು ಯಾರು ನಿನಗೆ ಕೊಟ್ಟಿದ್ದು ಹೇಳು."

"ಹಾಬಲೂ."

"ಹಾಬಲೂ ! ಅದಕ್ಕೋಸ್ಕರ ಇಷ್ಟು ಮುಚ್ಚು ಮರೆಯೇಕೆ ?"

"ಸರಿಯಾಗಿ ಹೇಳಲು ಆಗುವುದಿಲ್ಲ."

"ಬೇರೆ ಯಾರಾದರೂ ಅವನ ಕೈಯಲ್ಲಿ ಕೊಟ್ಟು ಕಳುಹಿಸಿದರೇನು ?"

"ಇಲ್ಲ."

"ಮತ್ತೆ ?"

"ಅಷ್ಟೆ. ಬೇರೆ ಏನೂ ವಿಶೇಷವಿಲ್ಲ."

"ಹಾಗಾದರೆ ಇಷ್ಟು ಮುಚ್ಚು ಮರೆ ಯಾಕೆ ಅಂತ ಕೇಳಿದೆ ".

"ನಿಮಗೆ ಅರ್ಥವಾಗುವುದಿಲ್ಲ."

ಆಗವನು ಕುಮುವಿನ ಕೈಯನ್ನು ಅದುಮಿ ಹಿಡಿದು " ಏನು ಅಸಹ್ಯ ಹಠ ನಿನ್ನದು ?" ಎಂದು ಗದರಿದ.

ಕುಮುವಿನ ಮುಖ ಕೆಂಪಗಾಗಿ ಹೋಯಿತು. ಶಾಂತಸ್ವರದಿಂದ "ನಿಮಗೇನು ಬೇಕು. ಸರಿಯಾಗಿ ತಿಳಿಸಿ ಹೇಳಿ, ನಿಮ್ಮಗಳ ಪದ್ಧತಿ ನನಗೆ ಅಭ್ಯಾಸವಿಲ್ಲ. ಅದನ್ನ ಒಪ್ಪಿಕೊಳ್ಳುತ್ತೇನೆ." ಎಂದಳು.

ಮಧುಸೂದನನ ಹಣೆಯ ನರಗಳು ಉಬ್ಬಿಕೊಂಡುವು. ಯಾವ ಜವಾಬನ್ನೂ ಹೇಳಲು ಬರದೆ ಅವಳನ್ನ ಹೊಡೆಯಬೇಕೆಂಬ ಇಚ್ಛೆಯಾಯಿತು. ಈ ಸಮಯದಲ್ಲಿ ಹೊರಗಡೆಯಿಂದ ಗಂಟಲು ಸರಿಮಾಡಿಕೊಳ್ಳುವ ಶಬ್ದ ಕೇಳ ಬಂತು, ಜೊತೆಯಲ್ಲಿಯೇ "ಆಫೀಸಿನ ಸಾಹೇಬರು

ಬಂದು ಕೂತಿದ್ದಾರೆ" ಎಂದು ಹೇಳಿದ ಮಾತೂ ಕೇಳಿಸಿತು..."ಇಂದು ಡೈರೆಕ್ಟರುಗಳ ಮೀಟಿಂಗೆಂದು ಜ್ಞಾಪಕಕ್ಕೆ ಬಂತು. ತಾನು ಇದಕ್ಕೆ ಸಿದ್ಧವಾಗಿಲ್ಲವೆಂದು ಯೋಚಿಸಿ ನಾಚುಗೆ ಪಟ್ಟ. ಬೆಳಿಗ್ಗೆಯೆಲ್ಲಾ ಹೀಗೆ ಸಂಪೂರ್ಣವಾಗಿ ವ್ಯರ್ಥವಾಗಿ ಹೋಗಿತ್ತು. ಅವನ ಸ್ವಭಾವಕ್ಕೂ ಅಭ್ಯಾಸಕ್ಕೂ ವಿರುದ್ಧವಾದ ಇಷ್ಟು ದೊಡ್ಡ ಒಡಕು ಸಂಭವಿಸಿದ್ದಾದರೂ ಹೇಗೆಂದು ಯೋಚಿಸಿ ಆವನು ಸ್ತಂಭಿತನಾದ.

## ನಲವತ್ತನೆಯ ಅಧ್ಯಾಯ

ಮಧುಸೂದನನು ಹೊರಟುಹೋದಮೇಲೆ ಕುಮು ಮಂಚದಿಂದ ಇಳಿದು ನೆಲದಮೇಲೆ ಕೂತುಕೊಂಡಳು. ಜೀವವಿರುವವರೆಗೂ ಈ ತೀರವಿಲ್ಲದ ಸಮುದ್ರದಲ್ಲಿ ಈಜುತ್ತಾ ಹೋಗ ಬೇಕೇ ? ಇವರುಗಳ ಸಂಗಡ ತನ್ನ ಬದುಕಿನ ಕ್ರಮವೇ ವಿರುದ್ಧವೆಂದು ಮಧುಸೂದನ ಹೇಳಿದ್ದು ನಿಜವಾದ ಮಾತೇ. ಬೇರೆ ಎಲ್ಲಾ ವ್ಯತ್ಯಾಸಕ್ಕಿಂತಲೂ ಈ ವ್ಯತ್ಯಾಸವೇ ಬಹಳ ದುಸ್ಸಹವಾದುದು, ಇದಕ್ಕೆ ಚಿಕಿತ್ಸೆಯಲ್ಲಿದೆ ?

ಒಂದು ಸಮಯ ಹಠಾತ್ತಾಗಿ ಮನಸ್ಸಿನಲ್ಲಿ ಏನೆನ್ನಿಸಿತೋ ಕುಮು ಕೆಳಗಿನ ಮಹಡಿಗೆ ಹೋಗಿ ಮೋತಿಯಮ್ಮನನ್ನು ಹುಡುಕಿಕೊಂಡು ಹೊರಟಳು. ಮೆಟ್ಟಲಿಳಿಯುತ್ತಿರುವಾಗ ಶ್ಯಾಮ ಸುಂದರಿಯು ಮೇಲಕ್ಕೆ ಹತ್ತಿ ಬರುತ್ತಿರುವುದನ್ನು ನೋಡಿದಳು.

"ಏನಮ್ಮಾ, ಎಲ್ಲಿಗೆ ಹೊರಟೆ ? ನಾನು ನಿನ್ನನ್ನ ಹುಡುಕಿಕೊಂಡೇ ಹೊರಟಿದ್ದೆ."

"ಯಾಕೆ....ಏನಾದರೂ ಹೇಳ ಬೇಕಾಗಿತ್ತೆ ?"

"ಅಂಥಾದ್ದೇನೂ ಇಲ್ಲ. ಯಜಮಾನರ ಮುಖಭಾವ ಕೆಟ್ಟಿರುವುದು ಕಂಡು ಬಂತು. ಹೊಸ ಪ್ರಣಯದಲ್ಲಿಯಾವ ಕಡೆ ಪೆಟ್ಟು ಬಿದ್ದಿದೆಯೋ ಏನೋ ನಿನ್ನನ್ನ ಕೇಳೋಣವೆಂದು ಬಂದೆ. ಅವರ ಜೊತೆಯಲ್ಲಿ ಯಾವರೀತಿಯಾಗಿ ಹೊಂದಿಕೊಂಡು ಹೋಗಬೇಕೆನ್ನುವ ವಿಷಯದಲ್ಲಿ ನಾನು ನಿನಗೆ ಹೇಳಿಕೊಡುತ್ತೇನೆ—ಜ್ಞಾಪಕದಲ್ಲಿಟ್ಟುಕೋ....ಬಕುಳದ ಹೂವಿನ ಕೊಠಡಿಗೆ ಹೋಗುತ್ತೀ ಅಂತ ಕಾಣುತ್ತೆ, ಮನಸ್ಸಿನ ಭಾರ ಕಳೆದು ಕೊಂಡು ಬಾ ಹೋಗು, ಅಗತ್ಯವಾಗಿ." ಎಂದಳು.

ಶ್ಯಾಮಾಸುಂದರಿ ಮತ್ತು ಮಧುಸೂದನ ಇಬ್ಬರೂ ಒಂದೇ ಮಣ್ಣಿನಲ್ಲಿ ಒಬ್ಬ ಕುಂಬಾರನ ಚಕ್ರದಿಂದಲೇ ತಯಾರಾದವರೆಂದು ಹಠಾತ್ತಾಗಿ ಇಂದು ಕುಮುವಿನ ಮನಸ್ಸಿಗೆ ಹೊಳೆಯಿತು. ಈ ವಿಷಯ ಇದ್ದಕ್ಕಿದ್ದ ಹಾಗೆ ತಲೆಯಲ್ಲಿ ಹೇಗೆ ಬಂತೋ ಹೇಳಲು ಸಾಧ್ಯವಿಲ್ಲ. ಅವರ ಸ್ವಭಾವ ವನ್ನು ವಿಶ್ಲೇಷಣಮಾಡಿ ಈ ನಿರ್ಣಯಕ್ಕೆ ಬಂದುದಲ್ಲ. ಆಕಾರ, ವೇಷ ಭೂಷಣಗಳಲ್ಲೂ ಆ ಬಗೆಯ ಹೋಲಿಕೆಯಿಲ್ಲ. ಆದರೂ ಇಬ್ಬರ ಮನೋಭಾವಗಳಲ್ಲೂ ಒಂದು ಬಗೆಯಾದ ಸಾಮ ರಸ್ಯವಿತ್ತು. ಶ್ಯಾಮಸುಂದರಿಯ ಜಗತ್ತಿನಲ್ಲಿಯೂ ಮಧುಸೂದನನ ಜಗತ್ತಿನಲ್ಲಿಯೂ ಒಂದೇ ರೀತಿಯ ಹವಾಮಾನವಿರುವಂತೆ ಇತ್ತು. ಶ್ಯಾಮಾಸುಂದರಿ ಅವಳ ಬಳಿ ಸ್ನೇಹಾರ್ಥಿಯಾಗಿ ಬಂದಾಗ ಕುಮುವಿಗೆ ಅದಕ್ಕೆ ವಿರುದ್ಧವಾದ ಭಾವ ಬರುತ್ತಿತ್ತು. ಮೈ ಹೇಗೆ ಹೇಗೋ ಆಗು ತ್ತಿತ್ತು.

ಮೋತಿಯಮ್ಮನ ಮಲಗುವ ಮನೆಯಲ್ಲಿ ಪ್ರವೇಶಿಸಿ ಕುಮು ಯಾವುದೋ ವಿಷಯವಾಗಿ ನವೀನನು ಹೆಂಡತಿಯೊಂದಿಗೆ ಕಿತ್ತಾಡುತ್ತಿದ್ದುದನ್ನು ನೋಡಿದಳು. ಹಾಗೇ ಹಿಂದೆ ಹೋಗ ಬೇಕೆಂದಿರುವಷ್ಟರಲ್ಲಿ ನವೀನನು "ಅತ್ತಿಗೆ, ಹೋಗಬೇಡಿ, ಹೋಗಬೇಡಿ-ನಿಮ್ಮ ಹತ್ತಿರವೇ ಬರ ಬೇಕೆಂದಿದ್ದೆ. ದೂರು ಹೇಳುವುದಕ್ಕೆ" ಎಂದ.

"ಯಾರ ಮೇಲೆ ದೂರು ?"

"ಸ್ವಲ್ಪ ಕೂಡಿ, ನನ್ನ ದುಃಖದ ಕಥೆ ಹೇಳುತ್ತೇನೆ."

ಮಂಚದ ಮೇಲೆ ಕುಮು ಕೂತಳು. ನವೀನನು "ವಿಪರೀತ ಅನ್ಯಾಯ, ಈ ದೊಡ್ಡ ಮನು ಷ್ಯಳು ನನ್ನ ಪುಸ್ತಕವನ್ನು ಮುಚ್ಚಿಟ್ಟಿದ್ದಾಳೆ."

"ಯಾಕೆ ಅಂತಹ ಶಿಕ್ಷೆ?"

"ಇನ್ನೇಕೆ....? ಹೊಟ್ಟೆಯುರಿ—ಅದಕ್ಕೆ ! ತನಗೆ ಇಂಗ್ಲೀಷು ಓದಲು ಬರುವುದಿಲ್ಲವಲ್ಲಾ. ನಾನೇನೋ ಸ್ತ್ರೀ ವಿದ್ಯಾಭ್ಯಾಸದ ಪಕ್ಷಪಾತಿ, ಆದರೆ ಈಕೆ ಪತಿ ವಿದ್ಯಾಭ್ಯಾಸದ ವಿರೋಧಿ. ನನ್ನ ಬುದ್ಧಿ ಉನ್ನತಿ ಹೊಂದಿದಷ್ಟು ಅವಳ ಬುದ್ಧಿಯೊಂದಿಗೆ ಸರಿಸಮಾನವಾಗುವುದಲ್ಲಾ ಅಂತ ಅವಳಿಗೆ ಸಂಕಟ. ಇಷ್ಟು ಹೇಳಿ ಹೇಳಿ ಸಾಕಾಯಿತು ನನಗೆ—ಅಂತಹ ಸೀತೆ ಕೂಡ ಶ್ರೀರಾಮ ಚಂದ್ರನ ಹಿಂದೆ ಹಿಂದೆ ನಡೆದು ಹೋದಳು ಅಂತ. ವಿದ್ಯಾ ಬುದ್ಧಿಯಲ್ಲಿ ನಾನು ನಿನಗಿಂತಲೂ ಬಲು ಮುಂದೆ ಹೋಗಬೇಕೆಂದಿದ್ದೇನೆ. ಇದಕ್ಕೆ ಅಡ್ಡಿ ಬರಬೇಡ ಅಂತ."

"ನಿಮ್ಮ ವಿದ್ಯೆಯ ವಿಷಯ ಆ ಸರಸ್ವತಿ ಮಾತೆಗೇ ಗೊತ್ತು, ಆದರೆ ಬುದ್ಧಿಯ ವಿಷಯ ದಲ್ಲಿ ಬಡಾಯಿ ಕೊಚ್ಚಿಕೊಳ್ಳಬೇಡಿ."

ಅತ್ಯಂತ ವಿಪತ್ತಿಗೆ ಗುರಿಯಾಗಿರುವಂತಹ ನವೀನನ ಮುಖ ಭಾವವನ್ನು ನೋಡಿ ಕುಮು ಘೊಳ್ಳೆಂದು ನಕ್ಕಳು. ಈ ಮನೆಗೆ ಬಂದ ಮೇಲೆ ಇಷ್ಟು ದಿನದ ವರೆಗೂ ಹೀಗೆ ಮನಸ್ಸು ಬಿಚಿ ನಕ್ಕಿದ್ದು ಇದೇ ಮೊದಲು. ಈ ನಗು ನವೀನನಿಗೆ ಬಲು ಮಧುರವಾಗಿ ತೋರಿತು. ಆಗವನು "ಅಂತೂ ನಾನು ನಮ್ಮತ್ತಿಗೆಯನ್ನು ನಗುವ ಹಾಗೆ ಮಾಡಿದೆನಲ್ಲಾ !" ಎಂದು ಕೊಂಡ.

ಕುಮು ನಗುತ್ತಾ ನಗುತ್ತಾ ಮೋತಿಯಮ್ಮನನ್ನು ಕುರಿತು "ಯಾಕಮ್ಮಾ ನಮ್ಮ ಮೈದುನನ ಪುಸ್ತಕ ಬಚ್ಚಿಟ್ಟಿರುವುದು ?" ಎಂದು ಕೇಳಿದಳು.

"ಇಲ್ಲಿ ನೋಡೇ ಅಕ್ಕಾ...ಮಲಗುವ ಮನೆಯಲ್ಲಿ ಇವರ ಪಾಠಶಾಲೆಯ ಗುರು ಮಹಾಶಯರು ಕೂತಿದ್ದಾರೇನು ? ದಿನವೆಲ್ಲಾ ದುಡಿದು ರಾತ್ರಿ ಕೋಣೆಗೆ ಬಂದರೆ ಸುಮ್ಮನೆ ಮಂಚದ ಹತ್ತಿರ ದೀಪಸ್ತಂಭ ಉರಿಯುತ್ತಿರುತ್ತೆ. ಅದು ಸಾಲದು ಅಂತ ಜೊತೆಯಲ್ಲಿ ಇನ್ನೊಂದು ಲಾಂದ್ರ ಬೇರೆ. ಮಹಾ ಪಂಡಿತರು ಓದುತ್ತಾ ಕೂತಿರುತ್ತಾರೆ. ಊಟ ಆರಿ ಹೋಗುತ್ತಿದೆ ಎಂದು ಎಷ್ಟು ತಗಾದೆ ಮಾಡಿದರೂ ಮೈಮೇಲೆ ಜ್ಞಾನವೇ ಇರುವುದಿಲ್ಲ."

"ಇದು ನಿಜವೇ, ನವೀನಣ್ಣಾ ?"

"ಅತ್ತಿಗೆ, ತಿಂಡಿಯಲ್ಲಿ ಆಸೆಯಿಲ್ಲದಂತಹ ಮಹಾ ತಪಸ್ವಿ ನಾನಲ್ಲ, ಆದರೆ ಅದಕ್ಕಿಂತಲೂ ನನಗೆ ಹೆಚ್ಚು ಇಷ್ಟವೇನೆಂದರೆ ಅವಳ ಬಾಯಿಂದ ಬರುವ ಸವಿಯಾದ ಆಕ್ಷೇಪಣೆಗಳು-ಅದಕ್ಕೋ ಸ್ಕರವೇ ಬೇಕೆಂದು ಊಟಕ್ಕೆ ತಡವಾಗುತ್ತೆ. ಪುಸ್ತಕ ಓದುವುದು ಒಂದು ನೆಪ, ಅಷ್ಟೆ."

"ಇವರ ಸಂಗಡ ಮಾತಿನಲ್ಲಿ ಸೋಲೊಪ್ಪಿಕೊಳ್ಳುತ್ತೇನಮ್ಮಾ."

"ಮತ್ತೆ ನಾನು ಈಕೆ ಮಾತು ನಿಲ್ಲಿಸಿದಾಗ ಸೋಲೊಪ್ಪಿಕೊಳ್ಳುತ್ತೇನೆ."

"ಹಾಗೆಂದಿಗೂ ನಡೆಯುವುದೇ ಇಲ್ಲವೇ ನವೀನಣ್ಣಾ ?"

"ಒಂದೆರಡು ಬೇಕಿದ್ದರೆ ಇತ್ತೀಚಿನ ಹೊಸ ದೃಷ್ಟಾಂತಗಳು ಕೊಡುತ್ತೇನೆ. ಕಣ್ಣೀರಿನ ಹೊಳೆಯುವ ಅಕ್ಷರಗಳಲ್ಲಿ ಮನಸ್ಸಿನಲ್ಲಿ ಬರೆದಿಟ್ಟಿದೇನೆ."

"ಸರಿ, ಸರಿ ಬಿಡಿ ಸಾಕು, ನಿಮ್ಮ ದೃಷ್ಟಾಂತಗಳು. ಈಗ ನನ್ನ ಬೀಗದ ಕೈ ಎಲ್ಲಿದೆ ಅದು ಹೇಳಿ ಮೊದಲು...ನೋಡೇ ಅಕ್ಕಾ. ನನ್ನ ಬೀಗದ ಕೈ ಬಚ್ಚಿಟ್ಟಿದ್ದಾರೆ."

"ಮನೆಯವರ ಮೇಲೆ ಪೋಲೀಸು ಕೇಸು ಜಾರಿ ಮಾಡುವುದು ಸಾಧ್ಯವಿಲ್ಲ. ಅದಕ್ಕೆ ಕಳ್ಳ ನಿಗೆ ಕಳ್ಳತನದಿಂದಲೇ ಶಿಕ್ಷೆ ಮಾಡಬೇಕಾಗುತ್ತೆ. ಮೊದಲು ನನ್ನ ಪುಸ್ತಕ ತೆಗೆದುಕೊಡು ಹೊರಗೆ."

"ನಿಮ್ಮ ಕೈಗೆ ಕೊಡುವುದಿಲ್ಲ. ನಿಮ್ಮ ಅತ್ತಿಗೆಯ ಕೈಯಲ್ಲಿ ಕೊಡುತ್ತೇನೆ." ಎಂದಳು. ಕೋಣೆಯ ಒಂದು ಮೂಲೆಯಲ್ಲಿದ್ದ ಬುಟ್ಟಿಯಲ್ಲಿ ರೇಶಿಮೆಯ ದಾರಗಳೂ, ಬಟ್ಟೆಗಳ ತುಂಡು ಗಳು, ಹರಕಲು ಕಾಲುಚೀಲಗಳೂ ತುಂಬಿದ್ದುವು, ಅವುಗಳಡಿಯಿಂದ ಒಂದು ಸಂಕ್ಷಿಪ್ತ ಇಂಗ್ಲೀಷ್ ಎನ್ಸೈಕ್ಲೋಪೀಡಿಯಾ (ವಿಶ್ವಕೋಶ)ದ ಎರಡನೆಯ ಭಾಗವನ್ನು ಹೊರಗೆ ತೆಗೆದು ಮೋತಿ ಯಮ್ಮನು ಕುಮುವಿನ ಉಡಿಯಲ್ಲಿಟ್ಟು "ಇದನ್ನ ನಿನ್ನ ಕೋಣೆಗೆ ತೆಗೆದುಕೊಂಡು ಹೋಗು, ಕುಮು, ಅವರಿಗೆ ಕೊಡಬೇಡ...ನಿನ್ನ ಹತ್ತಿರ ಜಗಳವಾಡಲಿ, ನೋಡೋಣ." ಎಂದಳು.

ನವೀನನು ಮಂಚದ ಸೊಳ್ಳೆಪರದೆಯ ತಲೆಯ ಮೇಲಿಂದ ಬೀಗದ ಕೈ ತೆಗೆದು ಕುಮುವಿನ ಕೈಯಲ್ಲಿಟ್ಟು "ಇದನ್ನ ಬೇರೆ ಯಾರ ಕೈಗೂ ಕೊಡಬೇಡ ಅತ್ತಿಗೆ, ನೋಡೋಣ, ಬೇರೆ ಯಾರಾ ದರೂ ನಿನ್ನ ಹತ್ತಿರ ಹೇಗೆ ವ್ಯವಹರಿಸುತ್ತಾರೋ...."ಎಂದ.

ಕುಮು ಪುಸ್ತಕದ ಹಾಳೆಗಳನ್ನು ತಿರುವಿಹಾಕುತ್ತಾ "ಈ ಪುಸ್ತಕದ ಮೇಲೆಯೇ ನಮ್ಮ ಮೈದುನನ ಗೀಳು ಹಿಡಿದಿರುವುದು ?" ಎಂದಳು.

"ಅವರಿಗೆ ಗೀಳು ಇಲ್ಲದಿರುವ ಪುಸ್ತಕ ಯಾವುದಿದೆ? ಒಂದು ದಿನ ಪಶುಪಾಲನೆಯ ಮೇಲೆ ಒಂದು ಪುಸ್ತಕ ಹಿಡಿದು ಕೂತಿದ್ದರು."

"ನನ್ನ ಸ್ವಂತ ಶರೀರದ ರಕ್ಷಣೆಗೋಸ್ಕರ ಅದನ್ನು ಓದುತ್ತಿರಲಿಲ್ಲ. ಆದ್ದರಿಂದ ಅದರಲ್ಲಿ ನಾಚಿಕೊಳ್ಳುವಂತಹ ವಿಷಯವೇನೋ ನನಗೆ ಗೊತ್ತಿಲ್ಲ."

"ಕುಮು, ನೀನು ನನ್ನ ಜತೆಯಲ್ಲಿ ಮಾತಾಡಬೇಕಾದ್ದು ಏನಾದರೂ ಇದ್ದರೆ ಹೇಳು. ಈ ಮಾತಿನ ಮಲ್ಲರನ್ನು ಈಗಲೇ ಹೊರಗೆ ಕಳುಹಿಸಿಬಿಡುತ್ತೇನೆ."

"ಛೀ...ಹಾಗೇನೂ ಮಾಡಬೇಡ. ನಮ್ಮಣ್ಣ ಎರಡು ಮೂರು ದಿನಗಳಲ್ಲೇ ಬರುತ್ತಾರೆಂದು ಕೇಳಿದೆ."

ಆಗ ನವೀನನು "ಹೌದು...ಅವರು ನಾಳೆಯೇ ಬರುತ್ತಾರಂತೆ." ಎಂದ.

"ನಾಳೆಯೇ ?" ಕುಮು ವಿಸ್ಮಿತಳಾಗಿ ಸ್ವಲ್ಪ ಹೊತ್ತು ಸುಮ್ಮನೆ ಕೂತುಬಿಟ್ಟಳು. ಆ ಮೇಲೆ ನಿಟ್ಟುಸಿರುಬಿಟ್ಟು "ಅವರನ್ನು ನಾನು ನೋಡುವುದು ಹೇಗೆ ಹೇಳು."

ಮೋತಿಯಮ್ಮನು "ನೀನು ನಿಮ್ಮ ಯಜಮಾನರಿಗೇನೂ ಹೇಳಲಿಲ್ಲವೇ ?" ಎಂದಳು. ಕುಮು ತಲೆಯಲ್ಲಾಡಿಸಿ "ಇಲ್ಲ" ಎಂದಳು. ನವೀನನು "ಒಂದು ಸಲ ಹೇಳಿ ನೋಡಿ, ಮತ್ತೆ"

ಎಂದನು. ಕುಮು ಸುಮ್ಮನೆ ಕೂತಿದ್ದಳು. ಮಧುಸೂದನನ ಹತ್ತಿರ ಅಣ್ಣನ ಮಾತೆತ್ತುವುದು ಬಹಳ ಕಷ್ಟ. ಅಣ್ಣನ ವಿಷಯವಾಗಿ ಅವನ ಮನಸ್ಸಿನಲ್ಲಿ ಒಂದು ಬಗೆಯಾದ ತಿರಸ್ಕಾರ ಮನೆ ಮಾಡಿಕೊಂಡಿತ್ತು. ಅದನ್ನು ಸ್ವಲ್ಪ ಕೂಡ ಕೆದಕುವುದರಿಂದ ಅವಳಿಗೆ ವಿಪರೀತ ಸಂಕಟವಾಗುತ್ತಿತ್ತು.

ಕುಮುವಿನ ಮುಖಭಾವವನ್ನು ನೋಡಿ ನವೀನನ ಮನಸ್ಸು ವ್ಯಥಿತವಾಯಿತು. "ನೀವೇನೂ ಚಿಂತೆ ಮಾಡಬೇಡಿ, ಅತ್ತಿಗೆ. ನಾವೆಲ್ಲಾ ಸರಿಮಾಡುತ್ತೇವೆ. ನೀವೇನೂ ಯಾವ ಮಾತೂ ಆಡಬೇಕಾಗಿಲ್ಲ. ಸುಮ್ಮನಿರಿ." ಎಂದನು.

ಅಣ್ಣನ ಬಳಿ ನವೀನನಿಗೆ ಚಿಕ್ಕವಯಸ್ಸಿನಿಂದಲೂ ಅತ್ಯಂತ ಭಯವಿತ್ತು. ಅತ್ತಿಗೆ ಬಂದು ಅವನ ಮನ್ಸಿನಿಂದ ಈ ಭಯವನ್ನು ಓಡಿಸಿಬಿಟ್ಟಂತಿತ್ತು.

ಕುಮು ಹೊರಟು ಹೋದಮೇಲೆ ಮೋತಿಯಮ್ಮನು ನವೀನನನ್ನು ಕುರಿತು "ಏನು ಉಪಾಯ ಯೋಚಿಸಿದ್ದೀರಿ, ಹೇಳಿ ನೋಡೋಣ. ಅವತ್ತು ರಾತ್ರಿ ನಿಮ್ಮಣ್ಣ ನಮ್ಮಿಬ್ಬರನ್ನೂ ಕರೆದು ಅತ್ತಿಗೆಯ ಎದುರಿನಲ್ಲಿ ತಮ್ಮನ್ನು ತಾವೇ ಅಷ್ಟು ಸಣ್ಣವರಾಗಿ ಮಾಡಿಕೊಂಡಲಾಗಾಯಿತು ಇದು ಒಳ್ಳೆಯದಲ್ಲವೆಂದು ಆಗಲೇ ತಿಳಿದುಕೊಂಡೆ. ಅದಾದ ಮೇಲೆ ನಿಮ್ಮನ್ನು ಕಂಡರೆ ಮುಖ ತಿರುಗಿಸಿಕೊಂಡು ಹೊರಟುಹೋಗುತ್ತಾರೆ" ಎಂದಳು.

"ಅಣ್ಣನಿಗೆ ತಾನು ಮೋಸಹೋದನೆಂದು ತಿಳಿದು ಹೋಗಿದೆ. ಯಾವುದೋ ಆವೇಶದಲ್ಲಿ ಥೈಲಿ ಖಾಲಿ ಮಾಡಿ ಮುಂಗಡವಾಗಿ ಬೆಲೆಕೊಟ್ಟು ಆಗಿ ಹೋಗಿದೆ. ಈ ಕಡೆ ತೂಕಕ್ಕೆ ಸರಿಯಾಗಿ ಸಾಮಾನು ಸಿಗಲಿಲ್ಲ. ನಾವು ಅವನ ತಿಳಿಗೇಡಿತನಕ್ಕೆ ಸಾಕ್ಷಿಯಿದ್ದೇವೆ ಅಂತಲೇ ನಮ್ಮ ನೆರಳು ಕಂಡರೆ ಆಗದು ಅವನಿಗೆ."

ಮೋತಿಯಮ್ಮನು "ಅದು ಹೇಗಾದರೂ ಇರಲಿ, ಆದರೆ ವಿಪ್ರದಾಸನ ಮೇಲೆ ಕೋಪ ಅವರಿಗೆ ಹುಚ್ಚು ಹಿಡಿಸುತ್ತಾ ಇದೆ. ಬರುತ್ತ ಬರುತ್ತ ದಿನ ದಿನಕ್ಕೂ ಹೆಚ್ಚುತ್ತಾ ಹೋಗುತ್ತಿದೆ ಇದೇನು ಅನಿಷ್ಟ, ಹೇಳಿ ಮತ್ತೆ!" ಎಂದಳು.

ನವೀನನು "ಈ ಬಗೆಯ ಮನುಷ್ಯರ ಭಕ್ತಿಯ ಪ್ರಕಾಶವಾಗುವುದು ವಿಚಿತ್ರ ರೀತಿಯಲ್ಲಿ. ಜಾತಿಯ ಜನ ಒಳಗೊಳಗೇ ಯಾರನ್ನು ಶ್ರೇಷ್ಠರೆಂದು ತಿಳಿದಿದ್ದಾರೋ ಹೊರಗೆ ಅವರನ್ನು ಬೈಯುತ್ತಾರೆ. ಎಷ್ಟೋ ಜನ ಹೇಳುವುದಿಲ್ಲವೇ?....ಶ್ರೀರಾಮನ ಮೇಲೆ ರಾವಣನಿಗೆ ನಿಜವಾಗಿ ಆಂತರ್ಯದಲ್ಲಿ ಅಸಾಧಾರಣ ಭಕ್ತಿಯಿತ್ತಂತೆ....ಅದಕ್ಕೆ ಇಪ್ಪತ್ತು ಕೈಗಳಿಂದಲೂ ನೈವೇದ್ಯ ನಡೆಸಿದನಂತೆ. ನಾನೀಗಲೇ ನಿನಗೆ ಹೇಳಿದ್ದೀನಿ. ಅತ್ತಿಗೆ ಅವರಣ್ಣನನ್ನು ನೋಡುವುದು ಅಷ್ಟು ಸುಲಭವಾಗುವುದಿಲ್ಲ." ಎಂದ.

"ಹಾಗಾದರೆ ಹೇಗೆ? ಏನಾದರೂ ಯುಕ್ತಿ ಮಾಡಬೇಕು."

"ಯುಕ್ತಿಯೇನೋ ನನ್ನ ತಲೆಯಲ್ಲಿದೆ."

"ಏನು ಹೇಳಿ ನೋಡೋಣ."

"ಊಹೂ. ಹೇಳಲಿಕ್ಕೆ ಸಾಧ್ಯವಿಲ್ಲ."

"ಯಾಕೆ ಸಾಧ್ಯವಿಲ್ಲ. ಹೇಳಿ."

"ನಾಚುಕೆಯಾಗುತ್ತೆ."

"ನನ್ನ ಹತ್ತಿರವೂ ನಾಚುಗೆಯೇ."

"ನಿನ್ನ ಹತ್ತಿರವೂ ನಾಚುಗೆ."

"ಕಾರಣವೇನು ಹೇಳಿ."

"ಅಣ್ಣ ನನ್ನ ಮೋಸಪಡಿಸಬೇಕಾಗುತ್ತೆ.

"ಅದನ್ನ ನಿನಗೆ ಹೇಳಿ ಪ್ರಯೋಜನವಿಲ್ಲ."

"ಪ್ರೀತಿಸುವವರಿಗೋಸ್ಕರ ಮೋಸಮಾಡಿದರೂ ಸ್ವಲ್ಪವೂ ಸಂಕೋಚಪಡಬೇಕಾಗಿಲ್ಲ.

"ಮೋಸ ಮಾಡುವ ವಿದ್ಯೆಯನ್ನು ನನ್ನ ಮೇಲೆ ಪ್ರಯೋಗಿಸಿ ಚೆನ್ನಾಗಿ ಪಳಗಿಸಿಕೊಂಡಿದ್ದೀಯೆಂದು ಕಾಣುತ್ತೆ."

"ಆ ವಿದ್ಯೆಯನ್ನು ಸಹಜವಾಗಿ ಪ್ರಯೋಗಿಸಲು ನಿಮ್ಮಂತಹ ಮನುಷ್ಯ ಬೇರೆಲ್ಲಿ ಸಿಗುತ್ತಾರೆ?"

"ಹಾಗೋ....ಮಹಾರಾಣೀ....ಒಪ್ಪಿಗೆ ಪತ್ರ ಬೇಕಾದರೆ ರುಜುಮಾಡಿ ಕೊಡುತ್ತೇನೆ. ಯಾವಾಗ ಬೇಕೋ ಆಗ ಮೋಸಮಾಡಬಹುದು."

"ಅಷ್ಟು ಆತುರವೇಕೋ ಕಾಣೆ."

"ಯಾಕೆ ಹೇಳಲೇ....ಬ್ರಹ್ಮ ನಿನ್ನ ಕೈಯಲ್ಲಿ ಮೋಸಮಾಡುವ ಯಾವ ವಿದ್ಯೆಗಳನ್ನು ಕೊಟ್ಟಿದಾನೋ ಅವುಗಳಲ್ಲಿ ಮಧು ತುಂಬಿಟ್ಟಿದಾನೆ. ಆ ಮಧು ತುಂಬಿದ ಮೋಸಕ್ಕೇ ಮಾಯೆ ಅನ್ನುವುದು."

"ಹಾಗಾದರೆ ಅದನ್ನು ಕಡಿದು ಹಾಕುವುದೇ ಒಳ್ಳೆಯದು."

"ದೇವರೇಗತಿ....ಮಾಯೆಯನ್ನೇ ಕಡಿದು ಹಾಕಿದರೆ ಸಂಸಾರದಲ್ಲಿ ಬೇರೆ ಏನಿದೆ?"

ಪ್ರತಿಮೆಯ ಮೇಲಿನ ಬಣ್ಣ ಕೆರೆದು ಬಿಟ್ಟರೆ ಬರಿ ಮಣ್ಣಿನ ಉಂಡೆ ಉಳಿಯುತ್ತೆ. ಹೇ ದೇವಿ, ಭಕ್ತನನ್ನ ಮೈಮರೆಯಿಸು, ಮೋಸಮಾಡು. ಕಣ್ಣು ಕತ್ತಲೆ ಮಾಡು. ಮನಸ್ಸಿನಲ್ಲಿ ಅಮಲೇರಿಸು, ಏನಿಷ್ಟವೋ ಹಾಗೆ ಮಾಡು."

ಇದಾದ ಮೇಲೆ ಆದ ಮಾತುಕಥೆಗಳಾವುದೂ ಕೆಲಸಕ್ಕೆ ಬರುವುದಲ್ಲ. ಈ ಕಥೆಯೊಡನೆ ಅವುಗಳ ಸಂಬಂಧವೇನೂ ಇಲ್ಲ.

# ನಲವತ್ತೊಂದನೆಯ ಅಧ್ಯಾಯ

ಮೀಟಿಂಗಿನಲ್ಲಿ ಈ ಸಲವೇ ಮಧುಸೂದನನಿಗೆ ಮೊದಲನೆ ಸೋಲು. ಇದಕ್ಕೆ ಮುಂಚೆ ಅವನ ಯಾವ ಪ್ರಸ್ತಾಪವನ್ನಾಗಲೀ, ಯಾವ ವ್ಯವಸ್ಥೆಯನ್ನಾಗಲೀ ಯಾರೂ ಎಂದೂ ಅಡ್ಡಿ ಮಾಡಿರಲಿಲ್ಲ. ತನಗೆ ತನ್ನ ಮೇಲೆ ಎಂತಹ ವಿಶ್ವಾಸವಿತ್ತೊ ಅವನ ಸಹಯೋಗಿಗಳಿಗೂ ಅಷ್ಟೇ ವಿಶ್ವಾಸ ಮಧುಸೂದನನ ಮೇಲೆ ಇತ್ತು. ಇದೇ ಭರವಸೆಯಲ್ಲಿಯೇ ಮೀಟಿಂಗಿನಲ್ಲಿ ಯಾವುವಾದರೂ ಅತಿತುರುತಿನ ಮಸೂದೆಯನ್ನು ನಿರ್ಧರಗೊಳಿಸುವುದಕ್ಕೆ ಮುಂಚೆಯೇ ಆ ಕೆಲಸವನ್ನು ಬಹಳ ಮಟ್ಟಿಗೆ ಮಾಡಿಸಿ ಬಿಟ್ಟಿರುತ್ತಿದ್ದ. ಈ ಸಲ ಹಳೆಯ ನೀಲಿ ಕಾರ್ಖಾನೆಯಿದ್ದ ಒಂದು ಜೋಡಿ ಗ್ರಾಮವನ್ನು ಅದರ ನೀಲಿ ವ್ಯಾಪಸಾಯದ ಜೊತೆಗೆ ಕೊಳ್ಳುವ ಏರ್ಪಾಡನ್ನು ಮಾಡಿದ್ದ. ಅದರ ಸಂಬಂಧವಾಗಿ ಖರ್ಚು, ಪತ್ರದ ಸಹಿಯೂ, ಆಗಿಹೋಗಿತ್ತು. ಪತ್ರಕ್ಕೆ ಸ್ಟಾಂಪು ಹಚ್ಚಿ ರಿಜಿಸ್ಟರು

ಮಾಡುವುದೊಂದೇ ಉಳಿದಿತ್ತು. ಯಾರು ಯಾರನ್ನು ಈ ಹೊಸ ಉದ್ಯಮದಲ್ಲಿ ನಿಯಮಿಸಿಕೊಳ್ಳ ಬೇಕೋ ಅವರಿಗೆಲ್ಲಾ ಆಶೆ ಹೇಳಿದುದಾಗಿತ್ತು. ಈ ಸಮಯದಲ್ಲಿ ಅಡ್ಡಿ ಬಂತು. ಈಚೆಗೆ ಅವರ ಮಧ್ಯೆ ಯಾವುದೋ ಖಜಾಂಚಿಯ ಕೆಲಸ ಖಾಲಿಯಾಗಿ ಅದಕ್ಕೆ ಆ ಡೈರೆಕ್ಟರುಗಳಲ್ಲೊಬ್ಬನ ಅಳಿಯನಿಗೆ ಅದನ್ನು ಕೊಡಿಸಬೇಕೆಂದು ಪ್ರಯತ್ನ ನಡೆಯುತ್ತಿತ್ತು. ಯೋಗ್ಯತೆಯಿಲ್ಲದವನನ್ನು ಉದ್ಧಾರ ಮಾಡಲು ಇಷ್ಟವಿಲ್ಲದೆ ಮಧುಸೂದನನು ಆ ಸಲಹೆಗೆ ಕಿವಿಗೊಡಲಿಲ್ಲ. ಇದೇ ವ್ಯಾಪಾರವು ಬೀಜದಂತೆ ಮಣ್ಣಿನೊಳಗೇ ಇದ್ದು ಹಠಾತ್ತಾಗಿ ಈ ಹೊಸ ಉದ್ಯಮಕ್ಕೆ ವಿರುದ್ಧತೆಯ ರೂಪತಾಳಿ ಮೊಳಕೆಯಾಗಿ ಹುಟ್ಟಿಕೊಂಡಿತು. ಅದರಲ್ಲಿ ಒಂದು ಒಡಕೂ ಇತ್ತು. ಮಧುಸೂದನನು ಕೊಳ್ಳ ಬೇಕೆಂದಿದ್ದ ಗ್ರಾಮದ ಮಾಲೀಕ ಅವನಿಗೆ ದೂರದ ಸಂಬಂಧದ ಚಿಕ್ಕಮ್ಮನಿಗೆ ಸೋದರ ಳಿಯನಾಗಬೇಕು. ಆ ಚಿಕ್ಕಮ್ಮ ಬಂದು ನಾನಾ ವಿಧವಾಗಿ ಅಂಗಲಾಚಿದಳು. ಗ್ರಾಮ ಅಗ್ಗವಾಗಿ ಸಿಕ್ಕುವುದು, ಮಧುಸೂದನನಿಗೆ ಅದರಿಂದ ತಕ್ಕಮಟ್ಟಿಗೆ ಲಾಭವಾಗುವುದೊಂದೇ ಅಲ್ಲದೆ ಬಂಧು ಬಾಂಧವರಲ್ಲಿ ಅವನಿಗೆ ತಮ್ಮವನನ್ನು ಸಹಾಯ ಮಾಡಿದ ಗೌರವವೂ ಉಳಿಯುತ್ತದೆ. ಮಧುಸೂಧನ ನಿಗೆ ಚಿಕ್ಕಮ್ಮ ಹೇಳಿದುದು ಅಸಮಂಜಸವಾಗಿ ಕಾಣಲಿಲ್ಲ....ಆದರೆ ಈ ನಡುವೆ ಖಜಾಂಚಿಯ ಕೆಲಸ ಸಿಕ್ಕದೇ ಇದ್ದ ಅಳಿಯನ ಮಾವನಾದವನು ಮಧುಸೂದನನ ಈ ಬಂಧು ವಾತ್ಸಲ್ಯದ ಪಕ್ಷ ಪಾತಕ್ಕೆ ಉದಾಹರಣೆಯನ್ನು ಕಂಡುಹಿಡಿದು ಬೇಕಾದ ಕಡೆಗಳಲೆಲ್ಲಾ ಹರಡಿದ್ದ, ಅಲ್ಲದೆ ಕಂಪ ನಿಯ ಎಲ್ಲಾ ಬಗ್ಗೆಯ ಕೊಳ್ಳಾಟ—ಮಾರಾಟಗಳ ಸಂದರ್ಭಗಳಲ್ಲಿಯೂ ಮಧುಸೂದನ ಗುಟ್ಟಾಗಿ ಕಮಿಷನ್ ತೆಗೆದುಕೊಳ್ಳುತ್ತಿರುವನು ಎಂಬ ಆಧಾರವಿಲ್ಲದ ಸಂಶಯವನ್ನೂ ಕಿವಿಯಿಂದ ಕಿವಿಗೆ ಪ್ರಚಾರ ಮಾಡುವ ಭಾರವನ್ನೂ ಆ ಡೈರೆಕ್ಟರನೇ ಹೊತ್ತಿದ್ದ. ಈ ನಿಂದೆಗಳೆಲ್ಲಕ್ಕೂ ಹೆಚ್ಚು ಜನ ರುಜುವಾತನ್ನು ಕೇಳುವುದಿಲ್ಲ, ಏಕೆಂದರೆ ತಮ್ಮೊಳಗೊಳಗೇ ಇರುವ ಲೋಭ ಮಾತ್ಸರ್ಯಗಳೇ ಸಾಕಷ್ಟು ಸಾಕ್ಷಿ, ರುಜುವಾತುಗಳಾಗಿರುತ್ತವೆ. ಜನಗಳ ಮನಸ್ಸನ್ನು ಕೆಡಿಸುವುದಕ್ಕೆ ಒಂದು ಕಾರಣ ಬೇಕಾಗಿದ್ದರೆ, ಆ ಕಾರಣ, ಮಧುಸೂದನನ ಐಶ್ವರ್ಯ ವೃದ್ಧಿ ಮತ್ತು ಆತನ ವ್ಯವಹಾರದ ವಿಷಯದಲ್ಲಿದ್ದ ನಿಷ್ಕಳಂಕ ಖ್ಯಾತಿಯೇ ಸಾಕಾದಷ್ಟಾಗಿತ್ತು. ಆಳವಾದ ನೀರಿನಲ್ಲಿ ಮುಳುಗಿಸಲು ಬಕಧ್ಯಾನ ಮಾಡುತ್ತಿದ್ದೂ ಹತ್ತರ ಜಲಾಶಯವೇ ಸಿಕ್ಕದೆ ಒದ್ದಾಡುತ್ತಿದ್ದ ಲೋಲುಪರು ಈ ಸಣ್ಣ ಅಪವಾದದಿಂದಲೇ ಮಧುಸೂದನ ಮುಳುಗಿ ಗುಟುಕು ನೀರು ಕುಡಿದದ್ದು ನೋಡಿ ತೃಪ್ತಿ ಪಟ್ಟರು.

ಜೋಡಿ ಗ್ರಾಮದ ಮಾಲೀಕನಿಗೆ ಮಧುಸೂದನ ಮಾತು ಕೊಟ್ಟದ್ದಾಗಿತ್ತು. ನಷ್ಟವಾಗು ವುದೆಂಬ ಭಯದಿಂದ ಮಾತಿಗೆ ತಪ್ಪುವವನಲ್ಲ ಅವನು. ಈ ಕರಣದಿಂದ ತಾನೇ ಗ್ರಾಮವನ್ನು ಕೊಳ್ಳಬೇಕೆಂದು ನಿರ್ಣಯಿಸಿ ಈ ಮೂಲಕ ಕಂಪನಿಯವರಿಗೆ ತಾವೆಷ್ಟು ಮಟ್ಟಿಗೆ ಮೋಸ ಹೋದ ರೆಂದು ತಿಳಿಸಬೇಕೆಂದು ಹಠ ತೊಟ್ಟ.

ಮಧುಸೂದನನು ಮನೆಗೆ ಸ್ವಲ್ಪ ನಿದಾನವಾಗಿಯೇ ಬಂದ. ತನ್ನ ಒಳ್ಳೆಯ ಅದೃಷ್ಟದ ವಿಷಯ ದಲ್ಲಿ ಅವನಿಗೆ ಒಂದು ವಿಧವಾದ ಅಂಧ ವಿಶ್ವಾಸ ಹುಟ್ಟಿಕೊಂಡಿತ್ತು. ಇಂದು ತನ್ನ ಬಾಳಿನ ಬಂಡಿ ಯನ್ನು ಅದೃಷ್ಟ ಒಂದು ಪರ್ಯಾಯದ ಪಂಕ್ತಿಯಿಂದ ಮತ್ತೊಂದು ಪರ್ಯಾಯದ ಪಂಕ್ತಿಗೆ ತಪ್ಪಿಸಿಕರೆದುಕೊಂಡು ಹೋಗುತ್ತಿದೆಯೇನೋ ಎಂದು ಭಯ ಪಟ್ಟ. ಮೊದಲಿನ ಉಚ್ಚಾಟನೆಗೇ ಎದೆಜಲ್ಲೆಂದಿತು. ಮೀಟಿಂಗಿನಿಂದ ಮರಳಿ ಬಂದು ಆಫೀಸು ರೂಮಿನಲ್ಲಿ ಆರಾಮ ಕುರ್ಚಿಯಲ್ಲಿ ಒರಗಿ ಕೊಂಡು ಗುಡುಗುಡಿಯ ಹೊಗೆ ಸುರುಳಿಗಳೊಂದಿಗೆ ತನ್ನ ಮನಸ್ಸಿನ ದುಶ್ಚಿಂತೆಗಳನ್ನು ಜೊತೆ

ಗೂಡಿಸುತ್ತಾ ಕೂತಿದ್ದ.

ಆಗ ನವೀನನು ಬಂದು ವಿಪ್ರದಾಸನ ಮನೆಯ ಕಡೆಯಿಂದ ಯಾರೋ ನೋಡಲು ಬಂದಿದ್ದಾರೆಂದು ತಿಳಿಸಿದನು. ಮಧುಸೂದನನು ರೇಗಿ "ಹೋಗು ಅಂತ ಹೇಳು. ನನಗೆ ಪುರಸೊತ್ತಿಲ್ಲ" ಎಂದು ಗದರಿಸಿದ.

ನವೀನನು ಮಧುಸೂದನನ ಸ್ಥಿತಿಯನ್ನು ನೋಡಿ ಮೀಟಿಂಗಿನಲ್ಲಿ ಏನೋ ಆಗಬಾರದು ಆಗಿದೆಯೆಂದು ತಿಳಿದನು. ಅಣ್ಣನ ಮನಸ್ಸು ಈಗ ದುರ್ಬಲವಾಗಿದೆಯೆಂದು ಅರಿತ. ದೌರ್ಬಲ್ಯವು ಸ್ವಭಾವತಃ ಉದಾರತೆಯಿಲ್ಲದ್ದು. ದುರ್ಬಲರ ಆತ್ಮಗ್ಲಾನಿಯು ಕ್ಷಮೆಯಿಲ್ಲದ ನಿಷ್ಠುರತೆಯ ರೂಪವನ್ನು ತಾಳುವುದು. ಅಣ್ಣನ ಪೆಟ್ಟು ತಿಂದ ಮನಸ್ಸು ಅತ್ತಿಗೆಯ ಮೇಲೆ ಕ್ರೂರವಾದ ಏಟು ಕೊಡಲು ಬಯಸುತ್ತದೆ. ಈ ವಿಷಯದಲ್ಲಿ ನವೀನನಿಗೆ ಸಂದೇಹವಿರಲಿಲ್ಲ.

ಈ ಪೆಟ್ಟನ್ನು ಏನಾದರೂ ಮಾಡಿ ತಪ್ಪಿಸಲೇಬೇಕು. ಇಷ್ಟುರವರೆಗೆ ಅವನ ಮನಸ್ಸಿನಲ್ಲಿ ಸಂದೇಹವಿತ್ತು. ಆ ಸಂದೇಹವೀಗ ಪೂರ್ತಿಯಾಗಿ ಅಳಿಸಿ ಹೋಯಿತು. ಸ್ವಲ್ಪ ಹೊತ್ತು ಮನೆಯಲ್ಲಿ ಅಲ್ಲಿ ಇಲ್ಲಿ ಸುತ್ತಿ ಮತ್ತೆ ಆಫೀಸು ರೂಮಿಗೆ ಬಂದು ನೋಡಿದರೆ ಅಣ್ಣ ವಿಳಾಸಗಳ ಪಟ್ಟಿಯ ಪುಸ್ತಕದ ಹಾಳೆಗಳನ್ನು ತಿರುವಿ ಹಾಕುತ್ತಿದ್ದ. ನವೀನನು ಬಂದು ಎದುರಿಗೆ ನಿಂತಾಗ ಮಧುಸೂದನನು ಮುಖವೆತ್ತಿ ಕೋಪಧ್ವನಿಯಲ್ಲಿ "ಮತ್ತೆ ಏನೋ ಕೆಲಸ? ನಿಮ್ಮ ವಿಪ್ರದಾಸ ಬಾಬುಗಳ ಪರವಾಗಿ ವಕಾಲತೀ ಮಾಡುವುದಕ್ಕೆ ಬಂದಿದ್ದೀ ಅಂತ ಕಾಣುತ್ತೆ." ಎಂದುಕೇಳಿದ. ನವೀನನು "ಇಲ್ಲಣ್ಣಾ, ಹಾಗೇನೂ ಹೆದರಬೇಡ. ಅವರ ಕಡೆಯ ಆಳು ಎಂತಹ ಮಾತು ತಿಂದು ಹೋಗಿದ್ದಾನೆಂದರೆ, ಪುನಃ ನೀನಾಗಿ ಹೇಳಿಕಳುಹಿಸಿದರೂ ಅವನು ಈ ಮನೆ ಹೊಸ್ತಿಲು ತುಳಿಯುವುದಿಲ್ಲ, ಗೊತ್ತಾ ?" ಎಂದ. ಈ ಮಾತು ಮಧುಸೂದನನಿಗೆ ಸಹ್ಯವಾಗಲಿಲ್ಲ. "ಸುಮ್ಮನಿರೋ ಸಾಕು....ಕಿರುಬೆರಳು ಅಲ್ಲಾಡಿಸಿದರೆ ಸಾಕು, ಕಾಲ ಮೇಲೆ ಬಂದು ಬೀಳಬೇಕಾಗುತ್ತೆ....ಯಾತಕ್ಕೆ ಬಂದಿದ್ದದ್ದು ಅವನು?" ಎಂದ.

"ಯಾಕೂ ಇಲ್ಲ. ವಿಪ್ರದಾಸರು ಕಲಿಕತ್ತೆಗೆ ಬರಬೇಕಾದದ್ದು ಎರಡು ದಿನ ತಳ್ಳಿಹಾಕಬೇಕಾಯಿತಂತೆ, ಮೈ ಇನ್ನೂ ಸ್ವಲ್ಪ ಹುಷಾರಾದ ಮೇಲೆ ಬರುತ್ತಾರಂತೆ, ಈ ಸುದ್ದಿ ತಿಳಿಸುವುದಕ್ಕೆ ಬಂದಿದ್ದ."

"ಸರಿ....ಸರಿ....ಅದರ ವಿಷಯವಾಗಿ ನನಗೇನು ಅಷ್ಟು ಆತುರವಿಲ್ಲ." ನವೀನನು "ಅಣ್ಣಾ, ನಾಳೆ ಬೆಳಗ್ಗೆ ನನಗೆ ಒಂದೆರಡು ಘಂಟೆ ಹೊತ್ತು ರಜಾ ಬೇಕು" ಎಂದ.

"ಯಾಕೆ ?"

"ಹೇಳಿದರೆ ನಿನಗೆ ಕೋಪ ಬರುತ್ತೆ."

"ಹೇಳದೆ ಹೋದರೆ ಇನ್ನೂ ಕೋಪ ಬರುತ್ತೆ."

"ಕುಂಭಕೋಣದಿಂದ ಒಬ್ಬ ಜೋಯಿಸರು ಬಂದಿದ್ದಾರೆ. ಅವರ ಹತ್ತಿರ ಹೋಗಿ ಒಂದು ಸಲ ನನ್ನ ಜಾತಕ ತೋರಿಸಿಕೊಂಡು ಬರೋಣ ಅಂತ ಇದ್ದೀನಿ."

ಮಧುಸೂದನನ ಎದೆ ಧಡ್ಡೆಂದಿತು. ಈಗಲೇ ಅವನ ಹತ್ತಿರ ಹೋಗಿ ಬರೋಣವೇ ಅನ್ನಿಸಿತು. ಆದರೆ ಬಾಯಲ್ಲಿ ಮಾತ್ರ ಗದರಿಸುತ್ತ "ನಿನಗೆ ನಂಬಿಕೆಯಿದೆಯೇನೋ ಅದರಲ್ಲೆಲ್ಲಾ?" ಎಂದ.

"ಚೆನ್ನಾಗಿರುವಾಗ ನಂಬಿಕೆಯಿರುವುದಿಲ್ಲ, ಏನಾದರೂ ಭಯವಾದಾಗ ನಂಬುತ್ತೇನೆ."

"ಭಯವೇನೋ ಅಂಥಾದ್ದು ? ನಿನಗೆ?" ನವೀನನು ಉತ್ತರವೇನೂ ಕೊಡದೆ ತಲೆಯನ್ನು ಕೆರೆಯತೊಡಗಿದ.

"ಭಯ ಯಾತರದು ಹೇಳೋ ಮತ್ತೆ ?"

"ಪ್ರಪಂಚದಲ್ಲಿ ನಿನ್ನೊಬ್ಬನ ಹೊರತು ಇನ್ಯಾರಿಗೂ ನಾನು ಭಯಪಡುವುದಿಲ್ಲ. ಕೆಲವು ದಿನ ಗಳಿಂದ ನಿನ್ನ ಅವಸ್ಥೆ ನೋಡಿ ಮನಸ್ಸಿಗೆ ನೆಮ್ಮದಿಯೇ ಇಲ್ಲ."

ಕುಟುಂಬದ ಜನ ಮಧುಸೂದನನನ್ನು ಕಂಡರೆ ಹುಲಿಗೆ ಹೆದರಿದಂತೆ ಹೆದರುತ್ತಿದ್ದ ವಿಷಯ ಕೇಳಿ ಅವನಿಗೆ ಬಹಳ ತೃಪ್ತಿ. ನವೀನನ ಮುಖದ ಕಡೆ ನಿಟ್ಟಿಸಿ ನೋಡುತ್ತಾ ನಿಶ್ಶಬ್ದವಾಗಿ ಗಂಭೀರಭಾವದಿಂದ ಗುಡುಗುಡಿಯನ್ನೆಳೆಯುತ್ತ ಎಳೆಯುತ್ತಾ ತನ್ನ ಮಾಹಾತ್ಮ್ಯೆಯ ಅನುಭವ ಪಡೆಯುತ್ತಾ ಕೂತ.

ನವೀನನು ಮತ್ತೆ "ಅದಕ್ಕೋಸ್ಕರವೇ ಒಂದುಸಲ ಗ್ರಹಗಳು ನನ್ನನ್ನು ಏನು ಮಾಡ ಬೇಕೆಂದಿವೆ ಎಂದು ಸ್ಪಷ್ಟವಾಗಿ ತಿಳಿಯಲು ಆಸೆ. ಆಮೇಲೆ ಎಲ್ಲಿಯವರೆಗೆ ಅವು ನನ್ನನ್ನು ಬಿಡುವುದಿಲ್ಲ ಅನ್ನುವುದನ್ನೂ ತಿಳಿದುಕೊಂಡು ಬಂದುಬಿಡೋಣ ಅಂತ."ಅಂದ.

"ನಿನ್ನಂತಹ ನಾಸ್ತಿಕ...ನಿನಗೆ ಯಾವುದರಲ್ಲೂ ನಂಬಿಕೆಯಿಲ್ಲ...ಕಡೆಗೆ ನೀನೂ"—

"ದೇವರ ಮೇಲೆ ನಂಬಿಕೆಯಿದ್ದಿದ್ದರೆ ಗ್ರಹಗಳ ಮೇಲೆ ನಂಬುತಾಯಿರಲಿಲ್ಲಣ್ಣಾ, ಡಾಕ್ಟರಲ್ಲಿ ನಂಬದೇ ಇರುವವನು ಅಳಲೇಕಾಯಿ ಪಂಡಿತರಲ್ಲಿ ನಂಬಿದರೆ ಅಡ್ಡಿಯೇನು ?"

ತನ್ನ ಗ್ರಹಗತಿಗಳನ್ನು ವಿಚಾರಿಸಿ ತಿಳಿಯಲು ಮಧುಸೂದನನಿಗೆ ಎಷ್ಟರ ಮಟ್ಟಿಗೆ ಆತುರ ಇತ್ತೋ ಅಷ್ಟೇ ಆವೇಶಭರಿತ ವ್ಯಂಗ್ಯದಲ್ಲಿ "ಓದು ಬರೆಹ ಕಲಿತ ಕೋತಿ ನೀನು...ಇದೇನೇ ನಿನ್ನ ವಿದ್ಯೆ? ಆ ಹಾ ಹಾ, ಯಾರು ಏನು ಹೇಳುತ್ತಾರೋ ಅದನ್ನ ನಂಬಿಬಿಡುತ್ತೀಯಾ ?" ಎಂದ.

"ಈ ಮನುಷ್ಯನ ಹತ್ತಿರ ಭೃಗುಸಂಹಿತೆ ಇದೆ. ಅದರಲ್ಲಿ ಯಾರು ಯಾರು ಯಾವ ಕಾಲ ದಲ್ಲಿ ಹುಟ್ಟಿದಾರೆ, ಹುಟ್ಟುತ್ತಾರೆ, ಹೀಗೆ ಎಲ್ಲರ ಕುಂಡಲಿಯೂ ತಯಾರಾಗಿದೆಯಂತೆ; ಸಂಸ್ಕೃತ ಭಾಷೆಯಲ್ಲಿ ಬರೆದಿರುತ್ತೆ. ಇನ್ನು ಅದರ ಮೇಲೆ ಬೇರೆ ಮಾತೇ ಇಲ್ಲ: ಬೇಕಾದರೆ ಹೋಗಿ ಪರೀಕ್ಷೆ ಮಾಡಿ ನೋಡು."

"ಮೂರ್ಖರನ್ನ ಮರುಳು ಮಾಡಿಯೇ ಹೊಟ್ಟೆ ಹೊರೆದುಕೊಳ್ಳುವವರಿಗೋಸ್ಕರ ದೇವರು ನಿನ್ನಂತಹ ಮೂರ್ಖರನ್ನ ಬೇಕಾದಷ್ಟು ಸೃಷ್ಟಿಮಾಡಿಯೇ ಇದಾನೆ ಅಂತ ಇಟ್ಟುಕೋ."

"ಹಾಗೇ ಅನ್ನು. ಅಂತಹ ಮೂರ್ಖರೂ ಬದುಕಬೇಕಲ್ಲ. ಅವರನ್ನ ಬದುಕಿಸುವುದಕ್ಕೋ ಸ್ಕರ ನಿನ್ನಂತಹ ಬುದ್ಧಿಶಾಲಿಗಳನ್ನೂ ಸೃಷ್ಟಿಸಿದ್ದಾನೆ. ಹೊಡೆಯುವವರ ಮೇಲೆ ದೇವರಿಗೆ ಎಷ್ಟು ಕರುಣೆಯಿದೆಯೋ ಹೊಡೆತ ತಿನ್ನುವವರ ಮೇಲೂ ಅಷ್ಟೆ ಕರುಣೆಯಿರುತ್ತದೆ...ಭೃಗು ಸಂಹಿತೆಯ ಮೇಲೆ ನಿನ್ನ ಚುರುಕುಬುದ್ಧಿ ತೋರಿಸು ಮತ್ತೆ ನೋಡೋಣ."

"ಸರಿ, ಹಾಗಾದರೆ...ನಾಳೆ ಬೆಳಿಗ್ಗೆ ನನ್ನನ್ನ ಕರೆದುಕೊಂಡು ಹೋಗು. ನೋಡೋಣ ನಿನ್ನ ಕುಂಭಕೋಣಂ ಮನುಷ್ಯನ ಜಾಣತನ!"

"ಅಣ್ಣಾ, ನಿನ್ನ ಅಪನಂಬಿಕೆ ಜೋರಾದಷ್ಟೂ. ಗ್ರಹಗಳ ಲೆಕ್ಕಾಚಾರದಲ್ಲಿ ಸೊನ್ನೆಯಾಗುವ ಸಂಭವವಿದೆ. ಈಗ ಪ್ರಪಂಚದಲ್ಲಿ ನೋಡು, ಮನುಷ್ಯನ ಮೇಲೆ ನಂಬುಗೆಯಿಟ್ಟರೇನೇ ಮನುಷ್ಯ

ನಂಬಿಕಸ್ಥನಾಗುತ್ತಾನೆ. ಗ್ರಹಗಳ ಪದ್ಧತಿಯೂ ಹಾಗೆಯೇ. ನೋಡು ಮತ್ತೆ...ಇಂಗ್ಲೀಷ್ ಜನ ಗ್ರಹಗಳನ್ನ ನಂಬುವುದಿಲ್ಲ. ಗ್ರಹಗಳ ಫಲವೂ ಅವರಿಗಿಲ್ಲ. ಅವತ್ತು ನೋಡಿದೆಯಲ್ಲ, ಹದಿಮೂರನೆಯ ನಂಬರಿನ ಕುದುರೆಯ ಮೇಲೆಯೇ ಹಣಕಟ್ಟಿ ನಿಮ್ಮ ಚಿಕ್ಕ ಸಾಹೇಬ ಕುದುರೆ ಜೂಜನಲ್ಲಿ ಹಣ ಗೆದ್ದನಲ್ಲಾ...ನಾನೇ ಹಾಗೆ ಬಾಜೀ ಕಟ್ಟಿದ್ದಿದ್ದರೆ ಆ ಕುದುರೆ ನೆಟ್ಟಗೆ ನನ್ನ ಹೊಟ್ಟೆಯ ಮೇಲೆಯೇ ಹೊಡೆದು ಹೋಗುತ್ತಿತ್ತು. ಅಣ್ಣಾ, ಈ ಗ್ರಹ ನಕ್ಷತ್ರಗಳ ವಿಷಯದಲ್ಲಿ ಮಾತ್ರ ನಿನ್ನ ಬುದ್ಧಿ ಚಲಾಯಿಸುವುದಕ್ಕೆ ಹೋಗಬೇಡ. ಸ್ವಲ್ಪವಾದರೂ ನಂಬಿಕೆಯಿಟ್ಟುಕೋ ಮನಸ್ಸಿನಲ್ಲಿ."

ಮಧುಸೂದನನು ಸಂತೋಷ ಪಟ್ಟು ಮುಗುಳ್ನಗೆಯಿಂದ ಗುಡುಗುಡಿಯನ್ನು ಸೇದುವುದರಲ್ಲಿ ಮಗ್ನನಾದ.

ಮರುದಿನ ಬೆಳಿಗ್ಗೆ ಏಳು ಘಂಟೆಯ ವೇಳೆಗೆ ಮಧುಸೂದನ ನವೀನನೊಡನೆ ಕೊಳಕು ಕೊಳಕಾದ ಒಂದು ಇಕ್ಕಟ್ಟಾದ ಗಲ್ಲಿಯನ್ನು ದಾಟಿ ವೆಂಕಟ ಶಾಸ್ತ್ರಿಯ ಮನೆಗೆ ಹೋಗಿ ಸೇರಿದ. ಕತ್ತಲೆ ತುಂಬಿದ ಮಹಡಿಯಿಲ್ಲದ ಹಳೆಯ ಮನೆ. ತೇವದಿಂದ ಹರಕು ಹರಕಾಗಿ ಮಚ್ಚೆಗಳಿಂದ ತುಂಬಿದ್ದ ಸುಣ್ಣ ಬಳಿಯದ ಗೋಡೆ ಚರ್ಮ ರೋಗದಿಂದ ಪೀಡಿತವಾಗಿದ್ದಂತೆ ಅಲ್ಲಲ್ಲಿ ಗುಳಿಗಳಿಂದ ಕೂಡಿತ್ತು. ನವಾರುಗಳಿಂದ ಕಟ್ಟಿದ ಮಂಚದ ಮೇಲೆ ಮಾಸಿದ ಹರುಕುಲು ಜಮಖಾನವೊಂದು ಹಾಸಿತ್ತು. ಒಂದು ಪಾರ್ಶ್ವದಲ್ಲಿ ಸಿಕ್ಕಾಪಟ್ಟೆ ಜೋಡಿಸಿಟ್ಟಿದ್ದ ತಾಳೆಗರಿಯ ಕಟ್ಟುಗಳು ಬಿದ್ದಿದ್ದುವು. ಗೋಡೆಯ ಮೇಲೆ ಶಿವ ಪಾರ್ವತಿಯರ ಒಂದು ಪಟ.

ನವೀನನು "ಶಾಸ್ತ್ರಿಗಳೇ" ಎಂದು ಕೂಗು ಹಾಕಿದ. ಮಾಸಿದ ಚೀಟಿಯ ರಜಾಯಿಯೊಂದನ್ನು ಮೈಮೇಲೆ ಹಾಕಿಕೊಂಡು, ತಲೆಯ ಮುಂಭಾಗದ ಕೂದಲನ್ನು ಕ್ಷೌರ ಮಾಡಿಸಿಕೊಂಡು, ತಲೆಯಹಿಂದೆ ಸಣ್ಣ ಜುಟ್ಟಿನ ಗಂಟುಳ್ಳ, ಕಪ್ಪನೆಯ, ಕುಳ್ಳಾದ, ರೋಗದಿಂದ ಕೃಶನಾದ ವ್ಯಕ್ತಿಯೊಬ್ಬನು ಒಳಗಣಿಂದ ಬಂದು ನಿಂತ. ನವೀನನು ಅವನ ಮುಂದೆ ಆಡಂಬರದಿಂದ ಪ್ರಣಾಮ ಮಾಡಿದ. ಅವನ ಚಹರೆಯನ್ನು ನೋಡಿದರೆ ಮಧುಸೂದನನಿಗೆ ಅವನ ಮೇಲೆ ಸ್ವಲ್ಪವೂ ಭಕ್ತಿಯುಂಟಾಗಲಿಲ್ಲ. ಆದರೆ ದೈವದೊಂದಿಗೆ ದೈವಜ್ಞರಿಗೆ ಯಾವುದೋ ಒಂದು ಬಗೆಯ ಆತ್ಮೀಯತೆ ಇರುವುದೆಂದು ತಿಳಿದು, ಹೆದರಿ ಹೆದರಿ ಬೇಗ ಅರ್ಧಮರ್ಧವಾಗಿ ಏನೋ ಒಂದು ತರಹೆ ನಮಸ್ಕಾರವನ್ನು ಮಾಡಿದನು. ನವೀನನು ಮಧುಸೂದನನ ಜಾತಕವನ್ನು ಜೋಯಿಸನ ಎದುರಿಗೆ ಹಿಡಿಯಲು ಅದನ್ನು ಕೈಯಲ್ಲಿ ತೆಗೆದುಕೊಳ್ಳದೆ ಅವನು ಮಧುಸೂದನನ ಹಸ್ತವನ್ನು ನೋಡಲು ಇಷ್ಟಪಟ್ಟ. ಮರದ ಪೆಟ್ಟಿಗೆಯೊಳಗಿಂದ ಕಾಗದ, ಲೇಖನಿಗಳನ್ನು ತೆಗೆದು ತಾನೇ ಒಂದು ಚಕ್ರವನ್ನು ಬರೆ... ಮಧುಸೂದನನ ಮುಖದಕಡೆ ತಿರುಗಿ "ಪಂಚಮ ವರ್ಗ" ಎಂದ. ಮಧುಸೂದನನಿಗೆ ಸ್ವಲ್ಪವೂ ಅರ್ಥವಾಗಲಿಲ್ಲ. ಜೋಯಿಸನು ಬೆರಳುಗಳ ಮಡಿಕೆಗಳನ್ನು ಎಣಿಸುತ್ತಾ 'ಕವರ್ಗ, ಚವರ್ಗ, ಟವರ್ಗ, ತವರ್ಗ, ಪವರ್ಗ' ಎಂದು ಪಠಿಸುತ್ತಾ ಹೋದ. ಇದರಿಂದಲೂ ಮಧುಸೂದನನ ಬುದ್ಧಿಗೆ ಏನೂ ಹೊಳೆಯಲಿಲ್ಲ. ಜೋಯಿಸನು "ಪಂಚಮ ವರ್ಣ" ಎಂದ. ಮಧುಸೂದನನು ಧೈರ್ಯವಹಿಸಿ ಸುಮ್ಮನೆ ಇದ್ದ. ಜೋಯಿಸನು ಪ, ಫ, ಬ, ಭ, ಮ ಎಂದು ಪಠಿಸಿದ. ಮಧುಸೂದನನು ಅದರ ಭೃಗುಮುನಿಯ ವ್ಯಾಕರಣದ ಪ್ರಥಮ ಅಧ್ಯಾಯದಿಂದ ಅವನ ಸಂಹಿತೆಯನ್ನು ಆರಂಭಮಾಡಿದನೆಂದು ಮಾತ್ರ ಅರ್ಥಮಾಡಿಕೊಂಡ. ಇಂತಹ ಸಮಯದಲ್ಲಿ ವೆಂಕಟಶಾಸ್ತ್ರಿಯ

"ಪಂಚಾಕ್ಷರಕಃ" ಎಂದ.

ನವೀನ ಚಕಿತನಾಗಿ ಮಧುಸೂದನನ ಕಿವಿಯಲ್ಲಿ ಮೆಲ್ಲ ಮೆಲ್ಲಗೆ "ಅರ್ಥವಾಯಿತಣ್ಣ" ಎಂದ.

"ಏನೋ ಅರ್ಥವಾಯಿತು ?"

"ಪಂಚಮ ವರ್ಗದ ಪಂಚಮ ವರ್ಣ'ಮ; ಅದಾದ ಮೇಲೆ ಐದು ಅಕ್ಷರಗಳ ಮ-ಧು ಸೂ-ದ-ನ. ಜನ್ಮ ಗ್ರಹಗಳ ಅದ್ಭುತ ಕೃಪೆಯಿಂದ ಮೂರು ಐದುಗಳೂ ಒಂದು ಕಡೆಯೇ ಸೇರಿವೆ."

ಮಧುಸೂದನ ಸ್ತಂಭಿತನಾದ. ತಂದೆ ತಾಯಿಯರು ನಾಮಕರಣ ಮಾಡುವದಕ್ಕೆ ಎಷ್ಟೋ ಸಾವಿರ ವರ್ಷಗಳ ಹಿಂದೆ ಭೃಗುಮುನಿಯ ಖಾತೆಯಲ್ಲಿ ನಾಮಕರಣವಾಗಿ ಹೋಗಿದೆ! ಏನಿದು ನಕ್ಷತ್ರಗಳ ಮಹಿಮೆ! ಅದಾದ ಮೇಲೆ ಹತ ಬುದ್ಧಿಯುಳ್ಳವನಾಗಿ ಸಂಸ್ಕೃತ ಭಾಷೆಯಲ್ಲಿ ರಚಿತವಾದ ತನ್ನ ಜೀವನದ ಸಂಕ್ಷಿಪ್ತ ಇತಿಹಾಸವನ್ನು ಜೋಯಿಸನ ಬಾಯಿಂದ ಕೇಳಿದ. ಭಾಷೆ ಕಮ್ಮಿ ಅರ್ಥವಾದಷ್ಟೂ ಭಕ್ತಿ ಹೆಚ್ಚಾಯಿತು. ತನ್ನ ಜೀವನ ಮೊದಲಿಂದ ಕಡೆಯವರೆಗೂ ಋಷಿವಾಕ್ಯದಲ್ಲಿ ಮೂರ್ತಿಮಂತವಾಗಿತ್ತು. ತನ್ನ ಎದೆಯ ಮೇಲೆ ಕೈ ನೇವರಿಸಿಕೊಳ್ಳುತ್ತಾ ನೋಡಿಕೊಂಡ, ಅವನ ದೇಹವು ಯಾವುದೋ ತಪೋವನದಲ್ಲಿ ಬರೆದ ಒಂದು ಪುಸ್ತಕದಲ್ಲಿದ್ದಂತೆ ಅನುಸ್ವಾರ, ವಿಸರ್ಗ, ತದ್ಧಿತ ಪ್ರತ್ಯಯಗಳನ್ನು ಕೂಡಿಸಿ ಮಾಡಲ್ಪಟ್ಟಿತ್ತು. ಅದಾದ ಮೇಲೆ ದೈವಜ್ಞನ ಕಡೆಯ ಮಾತೇನೆಂದರೆ:—ಮಧುಸೂದನನ ಮನೆಯಲ್ಲಿ ಅಷ್ಟರಲ್ಲಿಯೇ ಲಕ್ಷ್ಮಿಯ ಆವಿರ್ಭಾವವಾಗುತ್ತದೆ. ಅದಕ್ಕಾಗಿಯೇ ಮೊದಲಿಂದಲೇ ಸೌಭಾಗ್ಯದ ಸೂಚನೆಗಳು ಉಂಟಾಗಿವೆ. ಕೆಲವೇ ದಿನಗಳ ಹಿಂದೆ ಲಕ್ಷ್ಮಿ ಹೊಸ ಹೆಂಡತಿಯ ಆಶ್ರಯದಲ್ಲಿ ಬಂದಿದ್ದಾಳೆ. ಇನ್ನು ಮೇಲೆ ಸಾವಧಾನವಾಗಿರಬೇಕು. ಆಕೆಯ ಮನಸ್ಸಿಗೆ ನೋವಾದರೆ ಭಾಗ್ಯಲಕ್ಷ್ಮಿಗೂ ಕೋಪ ಬರುತ್ತದೆ."

ವೆಂಕಟಶಾಸ್ತ್ರಿಯು "ಕೋಪದ ಲಕ್ಷಣಗಳು ಕಾಣಿಸಿಕೊಳ್ಳುತ್ತಿವೆ. ಜಾತಕದವನು ಈಗಲೂ ವಿವೇಕ ತಂದುಕೊಳ್ಳದಿದ್ದರೆ ವಿಪತ್ತು ಬರುವುದು ಖಂಡಿತ." ಎಂದ. ಮಧುಸೂದನ ಸ್ತಂಭಿತನಾಗಿ ಕೂತೇ ಇದ್ದ. ಮದುವೆಯ ದಿನದ ಆ ಬಹಳ ದೊಡ್ಡ ಲಾಭದ ವಿಷಯ ಜ್ಞಾಪಕಕ್ಕೆ ಬಂತು, ಮತ್ತು ಅದರ ಕೆಲವು ದಿನಗಳ ಒಳಗೇ ಈ ಪರಾಭವ! ಸ್ವಯಂ ಲಕ್ಷ್ಮಿಯೇ ತನ್ನ ಹತ್ತಿರ ಬಂದುದು ಸೌಭಾಗ್ಯವೇ....ಆದರೆ ಅದರ ಜವಾಬುದಾರಿ ಕೂಡ ಅಷ್ಟೇ ಭಯಂಕರ.

ಮನೆಗೆ ಹಿಂದಿರುಗುತ್ತಿರುವಾಗ ಮಧುಸೂದನ ಗಾಡಿಯಲ್ಲಿ ಸ್ತಬ್ಧನಾಗಿ ಕೂತಿದ್ದ. ಒಂದು ಸಲ ನವೀನನು "ಈ ವೆಂಕಟಶಾಸ್ತ್ರಿಯ ಮಾತಿನಲ್ಲಿ ನನಗೆ ಎಳ್ಳಷ್ಟೂ ನಂಬಿಕೆಯಿಲ್ಲ. ಖಂಡಿತ ಅವನು ಯಾರ ಹತ್ತಿರವೋ ನಿನ್ನ ವಿಚಾರವಾಗಿ ಎಲ್ಲಾ ವಿಷಯಗಳನ್ನು ತಿಳಿದುಕೊಂಡಿದ್ದಾನೆ.". ಎಂದ.

"ಬಹಳ ಭಾರಿ ಬುದ್ಧಿ ನಿನ್ನದು? ಲಕ್ಷಾಂತರ ಜನ ಇರುವ ಈ ಊರಿನಲ್ಲಿ ಪ್ರತಿಯೊಬ್ಬರದೂ ಹೀಗೆ ಮೊದಲೇ ಸಮಾಚಾರ ತಿಳಿದುಕೊಂಡು ಬಿಡುತಾನೆ! ಅಷ್ಟು ಸುಲಭವಾದ ವಿಷಯ, ಅಲ್ಲ ?"

"ಮನುಷ್ಯರು ಹುಟ್ಟುವುದಕ್ಕೆ ಮುಂಚಿತವಾಗಿಯೇ ಅವರ ಕೋಟಿ ಕೋಟಿ ಕುಂಡಲಿಗಳನ್ನು ಬರೆದಿಡುವುದಕ್ಕಿಂತಲೂ ಇದು ಎಷ್ಟೋ ಸುಲಭವಾದ ಕೆಲಸ. ಭೃಗುಮುನಿಗೆ ಇಷ್ಟೊಂದು

ಕಾಗದಗಳೆಲ್ಲಿ ಸಿಕ್ಕಿದುವು? ಮತ್ತೆ ವೆಂಕಟಶಾಸ್ತ್ರಿಯ ಆ ಮನೆಯಲ್ಲಿ ಅಷ್ಟು ಜಾಗವಾದರೂ ಎಲ್ಲಿದೆ?"....

"ಒಂದೇ ಪಂಕ್ತಿಯಲ್ಲಿ ಸಾವಿರ ಮಾತುಗಳನ್ನ ಬರೆಯುವವರು ಅವರು."

"ಅಸಂಭವ!"

"ನಿನ್ನ ಬುದ್ಧಿಗೆ ಯಾವುದು ಹಿಡಿಸುವುದಿಲ್ಲವೋ ಅದು ಅಸಂಭವವೇ....ನಿನ್ನ ಸೈಯನ್ಸ್ ಬಹಳ ಭಾರಿ ಬಿಡೋ! ಸಾಕಿನ್ನು ನಿನ್ನ ತರ್ಕ. ಅವತ್ತು ಅವಳ ತೌರುಮನೆಯಿಂದ ಗುಮಾಸ್ತೆ ಬಂದಿದ್ದನಲ್ಲಾ....ಅವನನ್ನು ನೀನೇ ಸ್ವತಃ ಹೋಗಿ ಕರೆದುಕೊಂಡು ಬಾ ಇವತ್ತೇ, ತಡಮಾಡ ಬೇಡ."

ಅಣ್ಣನನ್ನು ಹೀಗೆ ಮೋಸಮಾಡಿದ ನವೀನನ ಮನಸ್ಸಿಗೆ ಅತ್ಯಂತ ವ್ಯಥೆಯಾಯಿತು. ಉಪಾಯ ಎಷ್ಟು ಸುಲಭ! ಆದರೂ ಅದರ ಸಫಲತೆಯು ಅಣ್ಣನ ಬಗ್ಗೆ ಎಷ್ಟು ಹಾಸ್ಯಕರವಾಗಿದ್ದರೂ, ಆತನ ಅವಮರ್ಯಾದೆಯೇ ಅವನಿಗೆ ಅಷ್ಟು ಲಜ್ಜೆ ಮತ್ತು ವ್ಯಥೆಯನ್ನುಂಟು ಮಾಡಿತು. ಅಣ್ಣನಿಗೆ ಇದಕ್ಕೆ ಮೊದಲು ಪರಿಸ್ಥಿತಿಗನುಗುಣವಾಗಿ ಎಷ್ಟೋ ಸಲ ಸಣ್ಣ ಪುಟ್ಟ ವಿಷಯಗಳಲ್ಲಿ ಮೋಸಮಾಡಿದ್ದಾಗಿತ್ತು. ಆದರೆ ಅದು ಯಾವುದೂ ಮನಸ್ಸಿಗೆ ಕಷ್ಟವಾಗುತ್ತಿರಲಿಲ್ಲ. ಈಗ ಇಷ್ಟು ವಿಚಕ್ಷಣೆಯಿಂದ ಏರ್ಪಡಿಸಿದ್ದ ಇಂತಹ ದೊಡ್ಡ ಮೋಸಮಾಡಿದ ಗ್ಲಾನಿ ಅವನ ಮನಸ್ಸನ್ನು ಅಶುಚಿಮಾಡಿ ಬಿಟ್ಟಿತು.

## ನಲವತ್ತೆರಡನೆಯ ಅಧ್ಯಾಯ

ಮಧುಸೂದನನ ಮನಸ್ಸಿನಿಂದ ದೊಡ್ಡದೊಂದು ಭಾರವಿಳಿದುಹೋಯಿತು—ಆತ್ಮಗೌರವದ ಭಾರ, ಆ ಕಠೋರವಾದ ಗೌರವದ ಅರಿವು ಅವನಲ್ಲಿ ಅರಳುತ್ತಿದ್ದ ಅನುರಾಗದ ಮೇಲೆ ಕಲ್ಲು ಮುಚ್ಚಿದಂತೆ ಮುಚ್ಚಿಹಾಕಿತ್ತು. ಕುಮುವಿನ ಬಗ್ಗೆ ಅವನ ಮನಸ್ಸು ಮುಗ್ಧವಾಗಿದ್ದಾಗಲೂ, ಇದೇ ವಿಫಲತೆಯ ವಿರುದ್ಧವಾಗಿ ಒಳಗೊಳಗೇ ಹೋರಾಟವಾಗುತ್ತಿತ್ತು. ಬೇರೆ ಉಪಾಯ ಕಾಣದೆ ಕುಮುವಿನ ಎಷ್ಟು ಹತ್ತಿರ ಸೋಲುತ್ತಿದ್ದನೋ ಅಷ್ಟಕ್ಕಷ್ಟು ತನಗೆ ತಿಳಿಯದೆಯೇ ಅವಳಮೇಲೆ ಕ್ರೋಧವೂ ಹೆಚ್ಚಾಗಿ ಬೆಳೆಯುತ್ತಿತ್ತು. ಈ ಸಮಯದಲ್ಲಿ ಸ್ವಯಂ ನಕ್ಷತ್ರಗಳ ಕಡೆಯಿಂದ ಲಕ್ಷ್ಮಿ ಮನೆಗೆ ಬಂದಿರುವಳೆಂಬ ಸುದ್ದಿ ತಿಳಿದು ಬಂದಮೇಲೆ ಅವಳನ್ನು ಸಂತೋಷವಾಗಿಟ್ಟಿರಬೇಕು—ಎಂಬ ನಿರ್ಣಯದಿಂದ ಸಕಲ ದ್ವಂದ್ವವೂ ನಿರ್ಮೂಲವಾಗಿ ಅವನ ದೇಹ ಮನಗಳು ರೋಮಾಂಚಿತವಾಗಿ ಹೋದುವು. ಬಾರಿ ಬಾರಿಗೂ "ಲಕ್ಷ್ಮಿ, ನನ್ನ ಮನೆಯಲ್ಲೇ ಲಕ್ಷ್ಮಿ, ನನ್ನ ಭಾಗ್ಯದ ಪರಮ ದಾನ," ಎಂದು ಪಿಸಿಸತೊಡಗಿದ. ಈಗಲೇ ಎಲ್ಲಾ ಸಂಕೋಚವನ್ನೂ ದೂರ ಮಾಡಿ ಕುಮುವಿನ ಹತ್ತಿರ ಹೋಗಿ ಅವಳನ್ನು ಹೊಗಳಿ ಬರೋಣವೇ, ಏನಾದರೂ ಮರೆತು ತಪ್ಪು ಮಾಡಿದ್ದರೆ ತಪ್ಪೆಂದು ತಿಳಿದುಕೊಳ್ಳಬೇಡ ಎಂದು ಹೇಳಿ ಬರೋಣವೇ ಎಂದು ಅನ್ನಿಸುತ್ತಿತ್ತು. ಆದರೆ ಇಂದು ಅದಕ್ಕೆ ಅವಕಾಶವಿರಲಿಲ್ಲ...ಉದ್ಯಮದ ಒಡಕನ್ನು ಸರಿಮಾಡುವುದಕ್ಕೋಸ್ಕರ ಕೂಡಲೇ ಆಫೀಸಿಗೆ ಹೋಗಬೇಕು. ಮನೆಯಲ್ಲಿ ಊಟಮಾಡುವುದಕ್ಕೆ ಕೂಡ ಅವಕಾಶ ಸಿಕ್ಕಲಿಲ್ಲ.

ಈ ಕಡೆ ಇಡೀ ದಿವಸ ಕುಮುವಿನ ಮನಸ್ಸಿನಲ್ಲಿ ತುಮುಲ ನಡೆಯುತ್ತಿತ್ತು. ಮಾರನೆ ದಿನವೇ ಅಣ್ಣ ಬರುತ್ತಾನೆ, ಅವನ ಆರೋಗ್ಯ ಚೆನ್ನಾಗಿಲ್ಲ ಎಂದು ಅವಳಿಗೆ ಗೊತ್ತಿತ್ತು. ಅದರ ಜೊತೆಯಲ್ಲಿಯೇ ಅವನೊಡನೆ ಭೇಟಿ ಮಾಡುವುದು ಸುಲಭವಾಗಿ ಆಗುತ್ತದೋ ಇಲ್ಲವೋ ಎಂಬುದನ್ನು ಖಂಡಿತವಾಗಿ ತಿಳಿಯುವುದಕ್ಕೋಸ್ಕರ ಮನಸ್ಸು ಉದ್ವಿಗ್ನವಾಗಿತ್ತು. ನವೀನಣ್ಣ ಎಲ್ಲಿ ಯಾವ ಕೆಲಸದ ಮೇಲೆ ಹೋಗಿದ್ದಾನೋ, ಇನ್ನೂ ಮನೆಗೇ ಬಂದಿಲ್ಲ. ಅವನು ಇಂದು ಮಧುಸೂದನ ಬಂದು ಸ್ವತಃ ಯಜಮಾನಿಯನ್ನು ಎಲ್ಲಾ ವಿಧಗಳಲ್ಲೂ ಪ್ರಸನ್ನಳನ್ನಾಗಿ ಮಾಡುವನೆಂದು ನಿಸ್ಸಂದೇಹವಾಗಿ ತಿಳಿದಿದ್ದ, ಮೊದಲೇ ಸೂಚನೆ ಕೊಟ್ಟು ರಸಭಂಗ ಮಾಡುವ ಉದ್ದೇಶವಿರಲಿಲ್ಲ ಅವನಿಗೆ.

ಇಂದು ಬಿಸಿಲು ಮಾಳಿಗೆಯ ಮೇಲೆ ಹೋಗಿ ಕೂಡಲು ಸೌಕರ್ಯವಿರಲಿಲ್ಲ. ಹಿಂದಿನ ದಿನ ಸಾಯಂಕಾಲದಿಂದ ಮೋಡ ಕೂಡಿಕೊಳ್ಳುತ್ತಾ ಇತ್ತು. ಇಂದು ಮಧ್ಯಾಹ್ನದಿಂದ ಟಪ್, ಟಪ್ ಎಂದು ಮಳೆ ಸುರಿಯುತ್ತಿತ್ತು. ಚಳಿಗಾಲದ ಮೋಡ ಕರೆಯಿಸಿ ಕೊಳ್ಳದ ಅತಿಥಿಯಂತೆ. ಮೇಘಗಳಿಗೆ ಬಣ್ಣವಿಲ್ಲ. ಮಳೆಯಲ್ಲಿ ಧ್ವನಿಯಿಲ್ಲ, ತೇವ ತುಂಬಿದ ಗಾಳಿಯಲ್ಲಿ ಲವಲವಿಕೆಯೇ ಇರಲಿಲ್ಲ. ಸೂರ್ಯನ ಬೆಳಕಿಲ್ಲದ ಆಕಾಶದ ದೀನತೆಯಿಂದ ಪೃಥ್ವಿಯೇ ಸಂಕುಚಿತವಾಗಿತ್ತು. ಮೆಟ್ಟಲು ಹತ್ತಿದೊಡನೆ ಮಲಗುವ ಕೋಣೆಗೆ ಹೋಗುವ ದಾರಿಯಲ್ಲಿ ಛಾವಣಿ ಹಾಕಿದ ಮಾಳಿಗೆಯಲ್ಲಿ ನೆಲದ ಮೇಲೆ ಗೋಡೆಗೆ ಒರಗಿ ಕೊಂಡು ಕುಮು ಕೂತಿದ್ದಳು. ಆಗಾಗ ಮಳೆಯ ಇರಿಚಲು ಮೈಮೇಲೆ ಬೀಳುತ್ತಿತ್ತು. ಇಂದು ಈ ಮೋಡ ತುಂಬಿದ ಮ್ಲಾನವಾದ ನೀರಸವಾದ ಹಗಲು ಕುಮುವಿನ ಮನಸ್ಸಿನಲ್ಲಿ "ತನ್ನ ಜೀವನವೇ ತನ್ನನ್ನು ಒಂದು ಹೆಬ್ಬಾವಿನಂತೆ ನುಂಗಿ ಹಾಕುತ್ತಿದೆ. ಅದರ ಕಲ್ಮಶ ತುಂಬಿದ ಜಠರದಲ್ಲಿ ಸ್ವಲ್ಪವಾದರೂ ತಪ್ಪಿಸಿಕೊಳ್ಳಲು ದ್ವಾರವಿಲ್ಲ." ಎಂದು ಅನ್ನಿಸುತ್ತಿತ್ತು. ಯಾವ ದೇವರು ಅವಳನ್ನು ಮೋಸಮಾಡಿ ಇಂದು ಈ ನಿರುಪಾಯದ ನಿರಾಶೆಯ ಮಧೆ ತಂದು ಬಿಸಾಟಿದ್ದನೋ ಆತನ ಮೇಲೆ ಅವಳಲ್ಲಿ ಹೊಗೆಯಾಡುತ್ತಿದ್ದ ಭಗ್ನವಾದ ಆತ್ಮಗೌರವದ ಕ್ರೋಧಾಗ್ನಿಯು ಉರಿದೆದ್ದಿತು. ಹಠಾತ್ತಾಗಿ ಎದ್ದು ಹೊರಟಳು. ಡೆಸ್ಕನ್ನು ತೆಗೆದು ಅದೇ ತನ್ನ ದೇವರ ಯುಗಳ ರೂಪದ ಪಟವನ್ನು ಹೊರಕ್ಕೆ ತೆಗೆದಳು. ಬಣ್ಣದ ರೇಶಿಮೆಯ ವಸ್ತ್ರದಲ್ಲಿ ಅದನ್ನು ಸುತ್ತಿತ್ತು. ಆ ಪಟವನ್ನು ಅವಳು ಒಡೆದುಹಾಕಿಬಿಡಲು ಬಯಸುತ್ತಿದ್ದಳು. "ನಿನ್ನ ಮೇಲೆ ಸ್ವಲ್ಪವೂ ನನಗೆ ನಂಬಿಕೆಯಿಲ್ಲ." ಎಂದು ಚೀತ್ಕಾರ ಮಾಡಿ ಹೇಳೋಣವೆನ್ನಿಸಿತು. ಕೈಗಳು ನಡುಗುತ್ತಿದ್ದುವು. ಆದ್ದರಿಂದಲೇ ಗಂಟು ಬಿಚ್ಚಲಾಗಲಿಲ್ಲ. ಎಳೆದು ಎಳೆದು ಅದು ಇನ್ನೂ ಬಿಗಿಯಾಯಿತು. ಬೇಸರವಾಗಿ ಅದನ್ನು ಹಲ್ಲಿನಿಂದ ಕಚ್ಚಿ ಕಿತ್ತುಬಿಟ್ಟಳು. ಅಷ್ಟು ಚಿರಪರಿಚಿತವಾದ ಆ ಮೂರ್ತಿ ಅನಾವೃತವಾಗಿ ಕಣ್ಣಿಗೆ ಬಿದ್ದೊಡನೆ ಅವಳಿಗೆ ತಡೆಯಲು ಆಗದೆ ಅದನ್ನು ಎದೆಗೆ ಅವಚಿಕೊಂಡು ಅತ್ತಳು. ಮರದ ಫ್ರೇಮು ಎದೆಗೆ ಒತ್ತಿದಷ್ಟೂ ಮತ್ತಷ್ಟು ಅದನ್ನು ಅಪ್ಪಿಕೊಂಡಳು.

ಇದೇ ಸಮಯದಲ್ಲಿ ಮಲಗುವ ಮನೆಗೆ ಹಾಸಿಗೆ ಸರಿಮಾಡುವ ಮುರಳಿ ಎಂಬ ಆಳು ಬಂದ. ಅವನ ಮೈ ಚಳಿಯಲ್ಲಿ ನಡುಗುತ್ತಿತ್ತು. ಮೈಮೇಲೆ ಹರಿದು ಹೋದ ಕೊಳೆಯ ಹೊದಿಕೆ ....ಬಟ್ಟತಲೆ - ಬತ್ತಿಹೋದ ಕೆನ್ನೆಗಳು....ಎಷ್ಟೋ ದಿನಗಳಿಂದ ಕ್ಷೌರ ಮಾಡಿಕೊಳ್ಳದೆಯಿದ್ದ ಮುಳ್ಳು ಮುಳ್ಳಾದ ಗಡ್ಡ ಕಪ್ಪು, ಬಿಳುಪು ಕೂದಲುಗಳಿಂದ ಮಿಶ್ರವಾಗಿ ಪೊದೆಯಂತೆ ಬೆಳೆದು ಹೋಗಿದೆ. ಸ್ವಲ್ಪ ಕಾಲದ ಹಿಂದೆ ಅವನು ಮಲೇರಿಯಾ ರೋಗವನ್ನನುಭವಿಸಿದ್ದ. ಮೈಯಲ್ಲಿ

ರಕ್ತವೇ ಇಲ್ಲ ಎನ್ನುವ ಹಾಗಿದಾನೆ. ಡಾಕ್ಟರು ಕೆಲಸ ಬಿಟ್ಟು ಊರಿಗೆ ಹೋಗಿ ವಿಶ್ರಾಂತಿ ತೆಗೆದುಕೊಂಡರೆ ಸರಿಹೋಗುವುದೆಂದು ಹೇಳಿದ್ದರು. ಆದರೆ ನಿಷ್ಠುರವಾದ ಹಣೆಬರಹ....ಎಲ್ಲಿ ಸಾಧ್ಯ!

ಕುಮು "ಬಹಳ ಚಳಿಯೇ, ಮುರಲೀ?" ಎಂದು ಕೇಳಿದಳು.

"ಹೌದಮ್ಮಾ, ಮೋಡ ಕವಿದು ಚಳಿಯಾಗ್ತಾ ಇದೆ."

"ಬೆಚ್ಚಗೆ ಬಟ್ಟೆ ಇಲ್ಲವೇನಪ್ಪಾ?"

"ಖಿಲ್ಲತ್ತು ಬಂದಾಗ ಮಹಾರಾಜರು ಕೊಟ್ಟಿದ್ದರು—ಅಮ್ಮಣ್ಣಿಯವರೇ - ಮೊಮ್ಮಗನಿಗೆ ಕೆಮ್ಮಲು ಬಂದಾಗ ಡಾಕ್ಟರು ಹೇಳಿದರು—ಅವನಿಗೆ ಕೊಟ್ಟು ಬಿಟ್ಟೆ...."

ಕುಮು ಒಂದು ಹಳೆಯ ಬೂದು ಬಣ್ಣದ ಶಾಲನ್ನು ಪಕ್ಕದ ಕೋಣೆಯ ಅಲಮಾರಿನಿಂದ ತೆಗೆದು ತಂದು "ತಗೋ ಈ ಬಟ್ಟೆ ಬೆಚ್ಚಗಿರುತ್ತೆ. ಹೊದ್ದುಕೋ." ಎಂದಳು.

ಮುರಲಿ ಹಿಂದೆಗೆಯುತ್ತಾ "ಕ್ಷಮಿಸಬೇಕಮ್ಮಣ್ಣಿ, ಮಹಾರಾಜರು ಕೋಪ ಮಾಡುತ್ತಾರೆ." ಎಂದ.

ಈ ಮನೆಯಲ್ಲಿ ಕನಿಕರಕ್ಕೆ ಸ್ಥಳವಿಲ್ಲವೆಂದು ಕುಮುವಿಗೆ ಅನ್ನಿಸಿತು. ಆದರೆ ದೇವರ ಹತ್ತಿರ ತಮ್ಮ ಸ್ವಂತಕ್ಕೋಸ್ಕರವಾದರೂ ದಯೆಯನ್ನು ಕೋರುವವರಿಗೆ ಪುಣ್ಯ ಕರ್ಮ ದಾರಿಯಲ್ಲಿಯೇ ಇರುತ್ತೆ. ಕುಮು ಕ್ಷೋಭದಿಂದ ಶಾಲನ್ನು ನೆಲದ ಮೇಲೆ ಬಿಸಾಟಳು.

ಮುರಳಿಯು ಕೈ ಜೋಡಿಸಿ "ರಾಣಿಯವರೇ, ನೀವು ನಮ್ಮ ತಾಯಿ ಲಕ್ಷ್ಮಿಯಂತೆ, ಕೋಪ ಮಾಡಿಕೋ ಬೇಡಿ, ತಾಯಿ. ನನಗೆ ಉಣ್ಣೆಬಟ್ಟೆ ಆವಶ್ಯಕವಿಲ್ಲ, ನಾನು ಹುಕ್ಕಾದವನ ಕೋಣೆಯಲ್ಲಿ ಹೋಗಿ ಇರುತ್ತೇನೆ. ಅಲ್ಲಿ ಅಗ್ಗಿಷ್ಟಿಕೆಯಲ್ಲಿ ಸದಾ ಬೆಂಕಿಯಿರುತ್ತದೆ. ನಾನು ಅಲ್ಲಿ ಬೆಚ್ಚಗೆ, ಹಾಯಾಗಿರುತ್ತೇನೆ." ಎಂದ.

ಕುಮು "ಮುರಳೀ, ನವೀನಪ್ಪನವರು ಮನೆಗೆ ಬಂದಿದ್ದರೆ ಸ್ವಲ್ಪ ಕರೀತೀಯಾ ಅವರನ್ನ?" ಎಂದಳು.

ನವೀನನು ಕೋಣೆಯನ್ನು ಪ್ರವೇಶಿಸಿದೊಡನೆ "ನವೀನಣ್ಣಾ, ನೀವು ಒಂದು ಕೆಲಸ ಮಾಡಿಕೊಡಬೇಕು....ಮಾಡಿ ಕೊಡುತ್ತೀರಾ ಹೇಳಿ...."ಎಂದಳು.

"ನನಗೇನಾದರೂ ಅದರಿಂದ ಹಾನಿಯಾಗುವ ಹಾಗಿದ್ದರೆ ಈ ಕ್ಷಣ ಮಾಡುತ್ತೇನೆ. ನಿಮಗೆ ಆಗುವ ಹಾಗಿದ್ದರೆ ಮಾಡುವುದಿಲ್ಲ."

"ನನಗೆ ಇನ್ನು ಬೇರೆ ಹಾನಿ ಯಾವುದಿದೆ? ನನಗೆ ಹೆದರಿಕೆಯಿಲ್ಲ" ಎಂದು ಹೇಳಿ ಕುಮು ತನ್ನ ಕೈಯಿಂದ ದಪ್ಪ ಚಿನ್ನದ ಕಂಕಣವನ್ನು ತೆಗೆದು "ನನ್ನ ಈ ಬಳೆ ಮಾರಿ ನಮ್ಮಣ್ಣನ ಹೆಸರಿನಲ್ಲಿ ಶುಭ ಪುಣ್ಯಾಹ ಮಾಡಿಸಬೇಕು" ಎಂದಳು.

"ಅದರದೇನೂ ಆವಶ್ಯಕವಿಲ್ಲ, ಅತ್ತಿಗೆ...ನೀವು ಅವರ ಮೇಲೆ ಇಟ್ಟಿರುವ ಭಕ್ತಿಯೇ ಸಾಕು, ಅದು ಪ್ರತಿ ಮುಹೂರ್ತವೂ ಅವರನ್ನು ಶುಭವಾಗಿ ಇಟ್ಟಿರುತ್ತೆ."

ನವೀನಣ್ಣಾ, ನಮ್ಮಣ್ಣನಿಗೋಸ್ಕರ ಬೇರೆ ಏನೂ ಮಾಡಲಾರೆ. ಮಾಡುವ ಹಾಗಿರುವುದೆಂದ ಇದು, ದೇವರ ಪೂಜೆಯ ಮೂಲಕ ಅವರಿಗೆ ಸೇವೆ ಸಲ್ಲಿಸಲು ಸಾಧ್ಯ."

"ನೀವು ಏನೂ ಮಾಡಬೇಕಾಗಿಲ್ಲ, ಅತ್ತಿಗೆ. ನಾವು ಇದ್ದೇವಲ್ಲಾ ನಿಮ್ಮ ಸೇವಕರು—ಏನ

ಮಾಡಬೇಕಾದರೂ."

"ನೀವು ಏನು ಮಾಡಲಾಗುತ್ತೆ, ಹೇಳಿ?"

"ನಾವು ಪಾಪಿಷ್ಠರು....ಪಾಪ ಮಾಡಬಲ್ಲೆವು. ಹಾಗೆ ಮಾಡಿದರೂ ನಿಮಗೇನಾದರೂ ಉಪಕಾರವಾಗುವ ಹಾಗಿದ್ದರೆ ಧನ್ಯರಾದೆವು."

"ನವೀನಣ್ಣಾ, ಈ ವಿಷಯದಲ್ಲಿ ಮಾತ್ರ ಹಾಸ್ಯ ಮಾಡ ಬೇಡಿ."

"ಹಾಸ್ಯ ಸ್ವಲ್ಪವೂ ಇಲ್ಲ, ಅತ್ತಿಗೆ. ಪುಣ್ಯ ಮಾಡುವುದಕ್ಕಿಂತಲೂ ಪಾಪ ಮಾಡುವುದೇ ಎಷ್ಟೋ ಕಷ್ಟ. ದೇವರಿಗೆ ಇದು ಅರ್ಥವಾದರೆ ಆಗ ನಮಗೆ ವರ ಕೊಡುತ್ತಾನೆ."

ನವೀನನ ಮಾತಿನ ಭಾವದಲ್ಲಿ ದೇವರ ವಿಷಯದಲ್ಲಿ ಔದಾಸೀನ್ಯವನ್ನು ಕಂಡುಕೊಂಡು ಕುಮುವಿಗೆ ಸಾಧಾರಣವಾಗಿ ಮನಸ್ಸಿನಲ್ಲಿ ನೋವಾಗಬಹುದಾಗಿತ್ತು. ಆದರೆ ಅವಳ ಅಣ್ಣನೂ ಮನಸ್ಸಿನಲ್ಲಿ ದೇವರ ಮೇಲೆ ಅಷ್ಟಾಗಿ ನಂಬಿಕೆಯಿಟ್ಟಿರಲಿಲ್ಲವೆಂಬ ಸಂಗತಿ ಇಂತಹ ಭಕ್ತಿಹೀನತೆಯ ಮೇಲೆ ಕೋಪಗೊಳ್ಳದಿರುವಂತೆ ಮಾಡಿತ್ತು. ಚೇಷ್ಟೆ ಮಾಡುವ ಮಕ್ಕಳ ಮೇಲೆ ತಾಯಿಗೆ ಪ್ರೀತಿಯಿರುವ ಹಾಗೆ ಈ ಬಗೆಯ ತಪ್ಪು ಮಾಡಿದವರ ಮೇಲೆ ಕೂಡ ಕುಮುವಿಗೆ ಸಹನೆಯಿರುತ್ತಿತ್ತು.

ಕುಮು ಮ್ಲಾನವಾದ ಮುಗುಳ್ನಗೆಯಿಂದ "ನೋಡಣ್ಣ, ನೀವು ಸಂಸಾರದಲ್ಲಿ ನಿಮ್ಮ ಸ್ವಂತ ಶಕ್ತಿಯಿಂದ ಏನು ಕೆಲಸ ಬೇಕಾದರೂ ಮಾಡುತ್ತೀರಿ. ನಮ್ಮಗಳಿಗೆ ಅಂತಹ ಶಕ್ತಿಯಿಲ್ಲ. ನಾವು ಯಾರನ್ನು ಪ್ರೀತಿಸುತ್ತೇವೋ ಮತ್ತು ಅವರ ಕಲ್ಯಾಣಕ್ಕೋಸ್ಕರ ನಾವು ಏನು ತಾನೇ ಮಾಡಬಲ್ಲೆವು? ದಿನ ಕಳೆಯುವುದು ಕಷ್ಟ, ದಾರಿ ತೋರದು. ನಮ್ಮ ಮೇಲೆ ಕರುಣೆ ತೋರಿಸಲು ಎಲ್ಲೂ ಯಾರೂ ಇಲ್ಲವೇನು?"

ನವೀನನ ಕಣ್ಣಿನಲ್ಲಿ ನೀರು ತುಂಬಿತು. "ಅಣ್ಣನನ್ನು ಉದ್ದೇಶಿಸಿ ನಾನು ಏನಾದರೂ ಮಾಡಲೇಬೇಕು ನವೀನಣ್ಣಾ. ಏನಾದರೂ ದಾನ ಮಾಡಬೇಕು. ಈ ಬಳೆ ನಮ್ಮ ತಾಯಿಯದು. ಈ ಬಳೆಯನ್ನೇ ನಾನು ದೇವರಿಗೆ ಕೊಡುತ್ತೇನೆ."

"ದೇವರಿಗೆ ಕೈಯಿಂದ ಏನೂ ಕೊಡಬೇಕಾಗಿಲ್ಲ, ಅತ್ತಿಗೆ; ಆತನು ತಾನೇ ತೆಗೆದುಕೊಳ್ಳುತ್ತಾನೆ. ಎರಡು ದಿನ ತಡೆದುಕೊಳ್ಳಿ. ಒಂದು ಪಕ್ಷ ಅವನು ಪ್ರಸನ್ನನಾಗದೆ ಹೋದರೆ ಆಗ ನೀವು ಏನು ಹೇಳಿದರೂ ಹಾಗೆ ಮಾಡುತ್ತೇನೆ. ಯಾವ ದೇವರು ನಿಮ್ಮ ಮೇಲೆ ಕನಿಕರ ತೋರಿಸುತ್ತಿಲ್ಲವೋ ಅವನನ್ನೂ ತೃಪ್ತಿಪಡಿಸಿ ಬರುತ್ತೇನೆ."

ಆ ರಾತ್ರಿ ಕತ್ತಲೆಯಾಗುತ್ತಾ ಬಂದಿತ್ತು. ಹೊರಗಡೆ ಮಹಡಿಯ ಮೆಟ್ಟಲುಗಳ ಕಡೆಯಿಂದ ಅದೇ ಪರಿಚಿತವಾದ ಮೆಟ್ಟುಗಳ ಶಬ್ದ. ನವೀನನೇ ಚಕಿತನಾಗಿ ನೋಡಿದ. ಅಣ್ಣ ಬರುತ್ತಿರುವನೆಂದು ತಿಳಿದ. ಆದರೆ ಓಡಿ ಹೋಗಲಿಲ್ಲ. ಧೈರ್ಯವಹಿಸಿ ಅವನಿಗಾಗಿಯೇ ಎದುರು ನೋಡುತ್ತಾ ನಿಂತ. ಈಕಡೆ ಕುಮುವಿನ ಮನಸ್ಸು ಒಂದು ಮುಹೂರ್ತದಲ್ಲಿ ಬಹಳ ಸಂಕುಚಿತವಾಗಿ ಹೋಯಿತು. ಈ ಅದೃಶ್ಯವಾದ ವಿರೋಧದ ಪೆಟ್ಟು ಇಷ್ಟು ಬಲವಾಗಿ ಅವಳ ಪ್ರತಿಯೊಂದು ನಾಡಿಯನ್ನೂ ಬೆಚ್ಚಿಸಿ ಬೀಳಿಸುವುದನ್ನು ಕಂಡು ಅವಳಿಗೆ ಅತ್ಯಂತ ಭಯವಾಯಿತು. ಈ ಪಾಪವೇಕೆ ಇಷ್ಟು ದುರ್ಜಯ ಶಕ್ತಿಯನ್ನು ಹೊಂದಿ ಅವಳ ತಲೆಯ ಮೇಲೆ ಕೂತಿದೆ?

ಹಠಾತ್ತಾಗಿ ಕುಮು ನವೀನನನ್ನು ಕುರಿತು "ನವೀನಣ್ಣ, ನನಗೆ ಗುರುವಿನಂತೆ ಉಪದೇಶ

ಕೊಡುವವರು ಯಾರಾದರೂ ಗೊತ್ತೇ ?" ಎಂದಳು.

"ಯಾತಕ್ಕೆ ಅತ್ತಿಗೆ?"

"ಸ್ವಂತ ಮನಸ್ಸಿನಲ್ಲಿ ನಡೆಯುವಂತೆ ಸರಿಯಾಗಿ ನಿರ್ಧಾರ ಮಾಡಲಾರೆ."

"ಅದು ನಿನ್ನ ಮನಸ್ಸಿನ ದೋಷವಲ್ಲ."

"ವಿಪತ್ತೇನೋ ಹೊರಗಿನದು. ದೋಷ ಸ್ವಂತ ಮನಸ್ಸಿನದು. ನಮ್ಮ ಅಣ್ಣನ ಬಳಿ ಈ ಮಾತನ್ನು ಬಾರಿ ಬಾರಿಗೂ ಕೇಳಿದ್ದೆ."

"ನಿಮ್ಮಣ್ಣನೇ ನಿಮಗೆ ಉಪದೇಶ ಕೊಡುತ್ತಾನೆ. ಭಯಪಡಬೇಡಿ."

"ಆ ಕಾಲ ಪುನಃ ನನಗೆಲ್ಲಿ ಬರುತ್ತದೆ ?"

ಮಧುಸೂದನನ ವ್ಯವಹಾರ ಬುದ್ಧಿಯೊಂದಿಗೆ ಅವನ ಪ್ರೀತಿಯೂ ಸೇರಿ ಬಂದು ಅದು ಅವನ ಎಲ್ಲ ಕೆಲಸ ಕಾರ್ಯಗಳಲ್ಲಿಯೂ ವ್ಯಕ್ತವಾಗಲು ತೊಡಗಿತು. ಕುಮುವಿನ ಸುಂದರ ಮುಖವೇ ಅವನಿಗೆ ಅಭಯ ದಾನದ ವರದಂತಿತ್ತು. ಪರಾಭವವು ತೊಡೆದು ಹೋಗುವುದೆಂಬುದಕ್ಕೆ ಇಂದೇ ಸೂಚನೆ ಕಂಡು ಬಂತು. ಹಿಂದಿನ ದಿನ ಯಾರು ಅವನ ಸಲಹೆಗೆ ವಿರುದ್ಧವಾಗಿ ಮತ ಕೊಟ್ಟಿದ್ದರೋ ಅವರಲ್ಲಿ ಪ್ರತಿಯೊಬ್ಬರೂ ಸ್ವರ ಬದಲಾಯಿಸಿ ಅವನಿಗೆ ಕಾಗದ ಬರೆದಿದ್ದರು. ಮಧುಸೂದನನು ಆ ಜೋಡಿ ಗ್ರಾಮವನ್ನು ತಾನೇ ಕೊಳ್ಳುವುದಾಗಿ ಹೇಳಿದ ಮೇಲೆ ಅವರಲ್ಲಿ ಒಬ್ಬೊಬ್ಬರಿಗೂ ತಾವು ಮೋಸಹೋದೆವೆಂದು ಅನ್ನಿಸಿತು. ಅವರೆಲ್ಲಾ ಈ ಪ್ರಸ್ತಾಪವನ್ನು ಪುನಃ ಚರ್ಚೆಗೆ ತಂದರೊಳ್ಳೆಯದು ಎಂದು ಸೂಚಿಸಿದರು. ಕೆಲಸಕ್ಕೆ ತಪ್ಪಿಸಿಕೊಂಡನೆಂಬ ತಪ್ಪಿನ ಮೇಲೆ ಆಫೀಸಿನ ದಫೇದಾರನೊಬ್ಬನಿಗೆ ಹದಿನೈದು ದಿನಗಳ ಸಂಬಳದ ಜುಲ್ಮಾನೆ ಹಾಕಲಾಗಿತ್ತು. ಇಂದು ಮಧ್ಯಾಹ್ನದ ಉಪಹಾರದ ಸಮಯದಲ್ಲಿ ಅವನು ಬಂದು ಮಧುಸೂದನನ ಕಾಲು ಹಿಡಿದೊಡನೆ ಮಧುಸೂದನ ಅವನಿಗೆ ಮಾಫು ಮಾಡಿಬಿಟ್ಟ. ಮಾಫು ಮಾಡುವುದೆಂದರೆ ತನ್ನ ಸ್ವಂತ ಜೇಬಿನಿಂದ ದಫೇದಾರನ ಜುಲ್ಮಾನೆಯನ್ನು ಭರ್ತಿ ಮಾಡುವುದೆಂದರ್ಥ. ಏಕೆಂದರೆ ಖಾತೆಯಲ್ಲಿ ಜುಲ್ಮಾನೆ ಸ್ಥಿರವಾಗಿ ಹೋಗಿತ್ತು. ನಿಯಮದ ಅತಿಕ್ರಮವಾಗಬಾರದಲ್ಲ.

ಇಂದಿನ ದಿನ ಮಧುಸೂದನನಿಗೆ ಆಶ್ಚರ್ಯಕರವಾದ ದಿನ. ಹೊರಗೆ ಆಕಾಶವೋ ಮೇಘದಿಂದ ಮುಚ್ಚಿದೆ. ಟಪ್, ಟಪ್ ಎಂದು ಮಳೆ ಸುರಿಯುತ್ತಿದೆ. ಆದರೆ ಇಷ್ಟಾದರೂ ಅವನ ಮನಸ್ಸಿನೊಳಗಿನ ಆನಂದ ಹೆಚ್ಚುತ್ತಲೇ ಇತ್ತು. ಆಫೀಸಿನಿಂದ ವಾಪಸ್ಸು ಬಂದು ರಾತ್ರಿ ಊಟದ ಸಮಯದವರೆಗೂ ಹೊರಗಿನ ರೂಮಿನಲ್ಲಿಯೇ ಕಾಲ ಕಳೆಯುತ್ತಿದ್ದ. ಮದುವೆಯಾದ ಮೇಲೆ ಕೆಲವು ದಿನ ಅವೇಳೆಯಲ್ಲಿ ನಿಯಮಕ್ಕೆ ವಿರುದ್ಧವಾಗಿ ಅಂತಃಪುರಕ್ಕೆ ಹೋಗುವ ಸಮಯದಲ್ಲಿ ಜನಗಳ ದೃಷ್ಟಿಯನ್ನು ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದ. ಇಂದಾದರೋ ಬೇಕೆಂದು ಹೆಜ್ಜೆ ಶಬ್ದ ಮಾಡುತ್ತಾ ತಾನು . ಕುಮುವನ್ನು ನೋಡಲು ಹೋಗುತ್ತೇನೆಂಬ ವಿಷಯವನ್ನು ಮನೆಯವರಿಗೆಲ್ಲರಿಗೂ ತಿಳಿಯಪಡಿಸಬೇಕೆಂದು ಆಶಿಸುವಂತೆ ಹೋಗುತ್ತಿದ್ದ. ತನ್ನ ಇಷ್ಟು ದೊಡ್ಡ ಸೌಭಾಗ್ಯವನ್ನು ನೋಡಿ ಪ್ರಪಂಚವೇ ಕರುಬ ಬೇಕೆಂದು ಅವನ ಆಸೆ.

ಸ್ವಲ್ಪ ಹೊತ್ತಿನಿಂದ ಮಳೆ ನಿಂತಿದೆ. ಕೋಣೆಗಳೆಲ್ಲದರಲ್ಲೂ ಇನ್ನೂ ದೀಪ ಹಚ್ಚಿಲ್ಲ. ಆನಂದಿ ಎಂಬ ಮುದಿ ದಾದಿ ಧೂಪದ ತಟ್ಟೆ ಕೈಯಲ್ಲಿ ಹಿಡಿದುಕೊಂಡು ಕೋಣೆ ಕೋಣೆಗಳಿಗೆ ಧೂಪ ಹಾಕುತ್ತಾ ತಿರುಗುತ್ತಿದ್ದಾಳೆ. ಬಾವಲಿಯೊಂದು ಅಂಗಳದ ಮೇಲಿನ ಆಕಾಶದಿಂದ ಲಾಂ

ತೂಗಾಡುತ್ತಿರುವ ಅಂತಃಪುರದ ಪಥದವರೆಗೆ ಚಕ್ರಾಕಾರವಾಗಿ ಸುಮ್ಮನೆ ಸುತ್ತುತ್ತಿದೆ. ವರಾಂಡದಲ್ಲಿ ಕಾಲು ಚಾಚಿಕೊಂಡು ತೊಡೆಯ ಮೇಲೆ ಬತ್ತಿಗಳನ್ನು ಹೊಸೆಯುತ್ತಿದ್ದ ದಾದಿಯರು ಯಜಮಾನನನ್ನು ನೋಡಿ ಬೇಗೆದ್ದು ಮುಸುಕೆಳೆದು ಪಲಾಯನ ಮಾಡಿದರು. ಕಾಲು ಸಪ್ಪಳ ಕೇಳಿ ತನ್ನ ಕೋಣೆಯಿಂದ ಹೊರಗೆ ಬಂದಳು ಶ್ಯಾಮಾ ಸುಂದರಿ, ಅವಳ ಕೈಯಲ್ಲಿ ತಾಂಬೂಲ ತಟ್ಟೆಯಿತ್ತು. ಮಧುಸೂದನನು ಆಫೀಸಿನಿಂದ ಬಂದಾಗ ನಿಯಮದಂತೆ ಇವಳೇ ಹೊರಗಿನ ಕೊಠಡಿಗೆ ತಾಂಬೂಲವನ್ನು ಕಳುಹಿಸುತ್ತಿದ್ದಳು. ಮಧುಸೂದನನ ರುಚಿಗೆ ತಕ್ಕಂತೆ ತಾಂಬೂಲವನ್ನು ಅಣಿ ಮಾಡಲು ಶ್ಯಾಮಸುಂದರಿಯೊಬ್ಬಳಿಗೇ ಗೊತ್ತೆಂದು ಎಲ್ಲರೂ ತಿಳಿದಿದ್ದರು. ಹೀಗೆ ತಿಳಿದಿರುವ ವಿಷಯದಲ್ಲಿ ಇನ್ನೂ ಸ್ವಲ್ಪ ಹೆಚ್ಚಾಗಿ ತಿಳಿದಿರುವಂತೆ ಸೂಚನೆಯೂ ಇತ್ತು. ಅದೇ ರೀತಿಯಾಗಿ ದಾರಿಯ ಮಧ್ಯೆ ಶ್ಯಾಮಾ ಮಧುವಿನ ಮುಂದೆ ತಾಂಬೂಲದ ತಟ್ಟೆಯನ್ನು ಹಿಡಿದು "ನಿಮ್ಮ ತಾಂಬೂಲ ಸಿದ್ಧವಾಗಿದೆ, ಹಾಕಿಕೊಂಡು ಹೋಗಿ" ಎಂದಳು. ಮೊದಲಿನಂತೆ ಆಗಿದ್ದರೆ ಈ ನೆಪದಲ್ಲಿ ಒಂದೆರಡು ಮಾತುಕಥೆ ಕೂಡ ನಡೆಯುತ್ತಿತ್ತು. ಆ ಮಾತುಕಥೆಗಳಲ್ಲಿ ಅಲ್ಪ ಸ್ವಲ್ಪ ಮಧುರ ರಸವೂ ಸೇರಿಕೊಳ್ಳುತ್ತಿತ್ತು, ಇಂದು ಏನಾಯಿತೋ ಯಾರಿಗೆ ಗೊತ್ತು, ದೂರದಿಂದ ಕೂಡ ಶ್ಯಾಮಳ ನೆರಳು ತಗುಲೀತೆಂಬ ಭಯದಿಂದೇನೋ ಎನ್ನುವಂತೆ ಅವಳನ್ನು ದೂರವಿಟ್ಟು ತಾಂಬೂಲವನ್ನು ತೆಗೆದುಕೊಳ್ಳದೆ ಬೇಗ ಬೇಗ ಹೊರಟು ಹೋದ. ಶ್ಯಾಮಳ ದೊಡ್ಡ ದೊಡ್ಡ ಕಣ್ಣುಗಳು ಅಭಿಮಾನದಿಂದ ಉರಿದು ಕಿಡಿಕಿಡಿಯಾದುವು. ಆಮೇಲೆ ದೊಡ್ಡ ದೊಡ್ಡ ಕಂಬನಿ ತೊಟ್ಟಿಕ್ಕಿತು. ಅಂತರ್ಯಾಮಿಗೇ ಗೊತ್ತು, ಪಾಪ, ಶಾಮಾ ಸುಂದರಿ ಮಧುಸೂದನನ್ನು ಪ್ರೀತಿಸುತ್ತಿದ್ದಳೆಂಬುದು.

ಮಧುಸೂದನ ಕೋಣೆಯೊಳಗೆ ಪ್ರವೇಶಿಸುತ್ತಲೂ ನವೀನ ಕುಮುವಿನ ಪಾದ ಧೂಳಿಯನ್ನು ತೆಗೆದುಕೊಂಡು ಎದ್ದು ನಿಂತು "ಗುರುವಿನ ವಿಷಯ ಜ್ಞಾಪಕದಲ್ಲಿರುತ್ತೆ. ಹುಡುಕಿ ಬಂದು ಹೇಳುತ್ತೇನೆ" ಎಂದು ಅಣ್ಣನ ಕಡೆ ತಿರುಗಿ "ಅತ್ತಿಗೆ ಗುರುಗಳ ಕಡೆಯಿಂದ ಶಾಸ್ತ್ರ ಉಪದೇಶ ಕೇಳಲು ಹಾತೊರೆಯುತ್ತಿದ್ದಾಳೆ. ನಮ್ಮ ಗುರುಮಹಾಶಯರಿದ್ದಾರಲ್ಲ? ಆದರೆ ಅವರು....!" ಎಂದನು.

ಮಧುಸೂದನನು ಉದ್ರೇಕಗೊಂಡು,

"ಶಾಸ್ತ್ರದ ಉಪದೇಶವೇ? ಆಗಲಿ, ನೋಡಿಕೊಳ್ಳೋಣ. ನೀನೇನೂ ಮಾಡಬೇಕಾಗಿಲ್ಲ ಆ ವಿಷಯದಲ್ಲಿ" ಎಂದ.

ನವೀನನು ಹೊರಟು ಹೋದನು. ಮಧುಸೂದನನು ಇಂದು ದಾರಿಯುದ್ದಕ್ಕೂ ಮನಸ್ಸಿನಲ್ಲಿ "ಯಜಮಾನಿ, ನೀನು ಬಂದೆ, ನಮ್ಮ ಮನೆ ಬೆಳಕಾಯಿತು" ಎಂದು ಹೇಳೋಣವೆಂದು ಪಠಿಸಿಕೊಂಡು ಬಂದಿದ್ದ. ಹೀಗೆ ಮನಸ್ಸಿನಲ್ಲಿದ್ದ ಮಾತನ್ನು ಬಾಯಲ್ಲಿ ಹೇಳುವುದು ಅವನ ಅಭ್ಯಾಸದಲ್ಲೆಂದಿಗೂ ಇರಲಿಲ್ಲ. ಆದ್ದರಿಂದ ಕೋಣೆಯನ್ನು ಪ್ರವೇಶಿಸಿದೊಡನೆಯೇ ಕುಮುವಿನ ಮುಂದೆ ಮೊದಲ ಆವೇಶದಲ್ಲಿಯೇ ಹೇಳಿಬಿಡಬೇಕೆಂದು ಮನಸ್ಸು ಮಾಡಿದ್ದ. ಆದರೆ ನವೀನನನ್ನು ಅಲ್ಲಿ ನೋಡಿದ ತಕ್ಷಣ ಆ ಮಾತು ಹಾಗೆಯೇ ಉಡುಗಿ ಹೋಯಿತು. ಕೂಡಲೇ ಶಾಸ್ತ್ರೋಪದೇಶದ ಮಾತು ತಲೆ ಹಾಕಿತು. ಅವನ ಬಾಯಿ ಪೂರ್ತಿಯಾಗಿ ಮುಚ್ಚಿಹೋಯಿತು. ಒಳಗೆ ಯಾವ ಹಂಚಿಕೆಯನ್ನು ಮಾಡಿಕೊಂಡಿದ್ದನೋ ಈ ಸಣ್ಣದೊಂದು ಅಡ್ಡಿಯಿಂದಲೇ ನಿರಸ್ತ್ರನಾಗಿಬಿಟ್ಟ.

ಅದಾದ ನಂತರ ಕುಮುವಿನ ಮುಖದ ಮೇಲೆ ಭಯದ ಭಾವವೊಂದು ಕಂಡು ಬಂತು. ದೇಹ, ಮನಸ್ಸು ಎಲ್ಲಾ ಸಂಕುಚಿತವಾಗಿದ್ದಂತೆ ತೋರಿತು. ಬೇರೆ ದಿನವಾಗಿದ್ದರೆ ಇದು ಕಣ್ಣಿಗೆ

ಬೀಳುತ್ತಿರಲಿಲ್ಲ. ಇಂದು ಅವನ ಮನಸ್ಸಿನಲ್ಲಿ ಉರಿಯುತ್ತಿದ್ದ ಬೆಳಕಿನಿಂದ ಅವನಿಗೆ ಎಲ್ಲವನ್ನೂ ನೋಡಬಲ್ಲ ಶಕ್ತಿ ಹೆಚ್ಚಿತ್ತು. ಕುಮುವಿನ ಸಂಬಂಧದಲ್ಲಿ ಚಿತ್ತದ ಸೂಕ್ಷ್ಮ ಸ್ಪರ್ಶವಾದಂತೆ ಬೋಧವಾಯಿತು. ಇಂತಹ ದಿನದಲ್ಲೂ ಕುಮುವಿನ ಮನಸ್ಸಿನಲ್ಲಿ ಈ ಸಂಕೋಚವೇ! ಇದು ಬಹಳ ನಿಷ್ಠುರವಾದ ಅಪಚಾರದಂತೆ ಅವನ ಮನಸ್ಸಿಗೆ ಅನ್ನಿಸಿತು. ಆದರೂ ತಾನು ವಿಚಲಿತನಾಗುವುದಿಲ್ಲೆಂದು ಹಠ ತೊಟ್ಟ. ಆದರೆ ಸಹಜವಾಗಿ ಆಗಬೇಕಾಗಿದ್ದುದು ಇನ್ನು ಸಹಜವಾಗಿರಲು ಸಾಧ್ಯವಿಲ್ಲ.

ಸ್ವಲ್ಪ ಹೊತ್ತು ಸುಮ್ಮನಿದ್ದು ಮಧುಸೂದನ "ಯಜಮಾನಿ, ಹೋಗಬೇಕೆಂದು ನಿನ್ನಿಷ್ಟವೇ? ಒಂದು ಕ್ಷಣ ಕೂಡ ಇಲ್ಲಿರುವುದಿಲ್ಲವೇ ?" ಎಂದ.

ಮಧುಸೂದನನ ಮಾತನ್ನೂ ಮತ್ತು ಅವನ ಧ್ವನಿಯನ್ನೂ ಕೇಳಿ ಕುಮು ವಿಸ್ಮಿತಳಾದಳು.

ಆಮೇಲೆ "ಇಲ್ಲ. ಯಾಕೆ ಹೋಗಲಿ" ಎಂದಳು.

"ನಿನಗೋಸ್ಕರವಾಗಿ ಒಂದು ಸಾಮಾನನ್ನು ತಂದಿದ್ದೇನೆ. ತೆಗೆದು ನೋಡು" ಎಂದು ಅವಳ ಕೈಯಲ್ಲಿ ಚಿಕ್ಕದೊಂದು ಬಂಗಾರದ ಕರಂಡಿಕೆಯನ್ನು ಕೊಟ್ಟನು.

ಕರಂಡಿಕೆಯನ್ನು ತೆಗೆದು ಕುಮು ನೋಡಿದಾಗ ಅದರಲ್ಲಿ ಅಣ್ಣ ಕೊಟ್ಟಿದ್ದ ಪಚ್ಚೆಯುಂಗುರ ಇತ್ತು. ಎದೆ ಡವ ಡವ ಹೊಡೆದುಕೊಂಡಿತು. ಏನು ಮಾಡಬೇಕೆಂದು ತೋಚಲಿಲ್ಲ.

"ಈ ಉಂಗುರವನ್ನು ನಿನಗೆ ತೊಡಿಸಲೇ ?"

ಕುಮು ಕೈ ಚಾಚಿದಳು. ಮಧುಸೂದನನು ಕುಮುವಿನ ಕೈಯನ್ನು ಹಿಡಿದುಕೊಂಡು ಬಹಳ ನಿದಾನವಾಗಿ, ಮೃದುವಾಗಿ ಉಂಗುರವನ್ನು ತೊಡಿಸಲಾರಂಭಿಸಿದ. ಬೇಕೆಂದೇ ತೊಡಿಸಲು ಹೆಚ್ಚು ಸಮಯ ತೆಗೆದುಕೊಂಡ. ಅದರ ಮೇಲೆ ಕೈಯನ್ನು ಎತ್ತಿ ಹಿಡಿದು ಮುತ್ತಿಟ್ಟು "ನಿನ್ನ ಕೈಯಲ್ಲಿನ ಉಂಗುರ ಕಿತ್ತುಕೊಂಡು ತಪ್ಪು ಮಾಡಿದ್ದೆ. ನಿನ್ನ ಕೈಯಲ್ಲಿ ಯಾವ ಒಡವೆ ಕೊಟ್ಟರೂ ದೋಷವಾಗುವುದಿಲ್ಲ." ಎಂದ.

ಕುಮುವನ್ನು ಹೊಡೆದಿದ್ದರೂ ಅವಳಿಗೆ ಇದಕ್ಕಿಂತಲೂ ಹೆಚ್ಚು ವಿಸ್ಮಯವಾಗುತ್ತಿರಲಿಲ್ಲ. ಎಳೆಯ ಹುಡುಗಿಯಂತೆ ಕುಮುವಿನ ಈ ವಿಸ್ಮಯದ ಭಾವವನ್ನು ನೋಡಿ ಮಧುಸೂದನನಿಗೆ ತಾನು ಮಾಡಿದ ದಾನವೇನೋ ಸಾಮಾನ್ಯವಾದುದಲ್ಲ ಎನ್ನುವುದು ಸುಸ್ಪಷ್ಟವಾಗಿತ್ತು. ಆದರೆ ಇನ್ನೂ ಸ್ವಲ್ಪ ದಾನವನ್ನು ಉಳಿಸಿಟ್ಟುಕೊಂಡಿದ್ದ. ಅದನ್ನೂ ಪ್ರಕಟಗೊಳಿಸುತ್ತಾ "ನಿಮ್ಮ ಊರಿನ ಕಾಳೂ ಮುಖರ್ಜಿ ಬಂದಿದಾನೆ. ಅವನನ್ನು ನೋಡಬೇಕೆಂದಿದೆಯೋ!" ಎಂದ. ಕುಮುವಿನ ಮುಖ ಉಜ್ವಲವಾಗಿ "ನಮ್ಮ ಕಾಳಣ್ಣ ?" ಎಂದಳು.

"ಅವನನ್ನ ಕಳುಹಿಸಿಕೊಡುತೇನೆ. ನೀನು ಬೇಕಾದರೆ ಅವನೊಂದಿಗೆ ಮಾತನಾಡು. ಅಷ್ಟು ಹೊತ್ತಿನವರೆಗೆ ನಾನು ಊಟ ಮುಗಿಸಿ ಬರುತ್ತೇನೆ."

ಕೃತಜ್ಞತೆಯಿಂದ ಕುಮುವಿನ ಕಣ್ಣಲ್ಲಿ ನೀರು ತುಂಬಿತು.

## ನಲವತ್ತೆರಡನೆಯ ಅಧ್ಯಾಯ

ಚಟರ್ಜಿ ಮನೆತನದವರೊಂದಿಗೆ ಕಾಳೂವಿಗೆ ಪರಂಪರೆಯಾಗಿ ಬಂದ ಬಂಧುತ್ವ. ನಂಬಿ

ಕೆಯ ಕೆಲಸಗಳನ್ನೆಲ್ಲ ಈತನೇ ನಡೆಯಿಸುತ್ತಿದ್ದ. ಇವನ ಪೂರ್ವಿಕರಲ್ಲೊಬ್ಬನು ಚಟರ್ಜಿಗಳಿ ಗೋಸ್ಕರ ಜೈಲಿಗೂ ಹೋಗಿದ್ದ. ಕಾಳು ಇಂದು ವಿಪ್ರದಾಸನ ಪರವಾಗಿ ಒಂದು ಕಂತು ಬಡ್ಡಿ ಪಾವತಿ ಮಾಡಿ ರಸೀತಿ ಪಡೆಯಲು ಮಧುಸೂದನನ ಆಫೀಸಿಗೆ ಬಂದಿದ್ದ. ಕುಳ್ಳಾದ ಗೌರವರ್ಣದ ಆಳು, ಪರಿಪುಷ್ಟವಾದ ಚಹರೆ, ಸ್ವಲ್ಪ ಕಂದು ಬಣ್ಣದ ಉಬ್ಬಿದ ಕಣ್ಣುಗಳು, ಅವುಗಳ ಮೇಲೆ ಒತ್ತಾಗಿ ಬೆಳೆದಿದ್ದ ಕಪ್ಪು, ಬಿಳುಪು ಕೂದಲಿನ ಹುಬ್ಬುಗಳು; ಚೆನ್ನಾಗಿ ಬೆಳೆದ ನರೆತ ಮೀಸೆ; ಆದರೆ ತಲೆ ಕೂದಲು ಮಾತ್ರ ಇನ್ನೂ ಕಪ್ಪಾಗಿಯೇ ಇತ್ತು. ಸಾವಧಾನವಾಗಿ ನಿಷ್ಠೆಯಿಂದ ನೆರಿ ಹಿಡಿದು ಕಟ್ಟಿದ್ದ ಶಾಂತಿಪುರದ ಧೋತರ, ಮತ್ತು ಯಜಮಾನರ ಮನೆತನದ ಗೌರವ ಉಳಿಸುವುದ ಕ್ಕೋಸ್ಕರ ಮೈಮೇಲೆ ಹಿಂದಿನ ಕಾಲದ ಬೆಲೆಯುಳ್ಳ ನಿಲುವಂಗಿ, ಕೈ ಬೆರಳಲ್ಲಿ ಒಂದು ಉಂಗುರ. ಅದರಲ್ಲಿನ ಕಲ್ಲೇನೂ ಕಡಿಮೆ ಬೆಲೆಯುದಲ್ಲ.

ಕಾಳು ಕೋಣೆಯನ್ನು ಪ್ರವೇಶಮಾಡಿದೊಡನೆ ಕುಮು ಅವನಿಗೆ ಪ್ರಣಾಮ ಮಾಡಿದಳು. ಇಬ್ಬರೂ ಜಮಖಾನೆಯ ಮೇಲೆ ಕೂತರು. ಕಾಳು "ಏನು ಮಗು, ಇನ್ನು ನೆನ್ನೆಯಲ್ಲ ಮೊನ್ನೆ ಬಂದದ್ದು, ಆದರೂ ಎಷ್ಟೋ ವರ್ಷಗಳಾದ ಹಾಗೆ ಆಗಿದೆಯಲ್ಲ?" ಎಂದ.

"ಅಣ್ಣ ಹೇಗಿದ್ದಾರೆ ಮೊದಲು ಹೇಳು."

"ದೊಡ್ಡ ಯಜಮಾನರ ಆರೋಗ್ಯದ ವಿಷಯವಾಗಿ ಕಳವಳವಾಗಿಯೇ ಇತ್ತು. ನೀನು ಹೊರಟು ಬಂದ ಎರಡನೆ ದಿನವೆ ಜ್ವರ ಹೆಚ್ಚಾಗಿ ಬಿಟ್ಟಿತ್ತು. ಆದರೆ ಬಲಿಷ್ಠವಾದ ದೇಹವಾದ್ದ ರಿಂದ ನೋಡುತ್ತಾ ನೋಡುತ್ತಾ ಹುಷಾರಾಗಿ ಬಿಟ್ಟರು. ಡಾಕ್ಟರುಗಳು ಆಶ್ಚರ್ಯಪಟ್ಟುಬಿಟ್ಟರು."

"ಅಣ್ಣ ನಾಳೆ ಬರುತ್ತಾನೆಯೇ ?"

"ಹಾಗಂತಲೇ ಗೊತ್ತಾಗಿತ್ತು, ಆದರೆ ಈಗ ಇನ್ನೂ ಎರಡು ಮೂರು ದಿನಗಳಾಗುತ್ತೆ. ಹುಣ್ಣಿಮೆ ಬಂದಿದೆ ನೋಡು. ಅದಕ್ಕೆ ಪುನಃ ಎಲ್ಲಾದರೂ ಜ್ವರ ಕೆರಳಿ ಬಿಟ್ಟೀತು ಅಂತ ಎಲ್ಲರೂ ಬೇಡ ಅಂತ ಅಂದರು. ಅದು ಹೇಗೂ ಇರಲಿ. ನೀನು ಹೇಗಮ್ಮಾ ಇದ್ದೀಯ, ಮಗು?"

"ನಾನು ಚೆನ್ನಾಗಿಯೇ ಇದ್ದೇನೆ." ಕಾಳು ಏನನ್ನೂ ಹೇಳಲು ಇಷ್ಟಪಡಲಿಲ್ಲ. ಆದರೆ ಈ ಕುಮುವಿನ ಮುಖದ ಲಾವಣ್ಯ ಎಲ್ಲಿ ಹೋಯಿತು? ಕಣ್ಣುಗಳ ಕೆಳಗೆ ಆ ಕರಿಯ ವರ್ತುಲ ಗಳೇಕೆ? ಬಂಗಾರದಂತಹ ಮೈಬಣ್ಣ ಹೀಗೆ ಬಿಳುಚಿಕೊಂಡಿದ್ದು ಏತರಿಂದ?,...

ಕುಮುವಿನಮನಸ್ಸಿನಲ್ಲಿ ಏನೋ ಒಂದು ಕೇಳೋಣವೆಂದು ಅನ್ನಿಸುತ್ತಿತ್ತು. "ಅಣ್ಣ ನನ್ನನ್ನ ನೆನಪುಮಾಡಿಕೊಂಡು ಏನೂ ಹೇಳಿ ಕಳುಹಿಸಲಿಲ್ಲವೇ?" ಎಂಬ ಪ್ರಶ್ನೆ ಬಾಯಿಂದ ಆಡಲು ಮಾತ್ರ ಆಗಲಿಲ್ಲ. ಅವಳು ಹೇಳಲಾಗದಿದ್ದ ಈ ಪ್ರಶ್ನೆಯ ಉತ್ತರವಾಗಿಯೇ ಏನೋ ಎಂಬಂತೆ ಕಾಳು "ದೊಡ್ಡ ಬಾಬುಗಳು ನನ್ನ ಕೈಯಲ್ಲಿ ನಿನಗೆ ಕೊಡೆಂದು ಒಂದು ಸಾಮಾನನ್ನು ಕಳುಹಿಸಿದ್ದಾರೆ." ಎಂದ. ಕುಮು ವ್ಯಗ್ರಳಾಗಿ "ಏನನ್ನ ಕಳುಹಿಸಿದ್ದಾರೆ....ಎಲ್ಲದು?" ಎಂದಳು.

"ಅದನ್ನ ಹೊರಗಡೆ ಇಟ್ಟು, ಬಂದಿದ್ದೀನಿ."

"ಯಾಕೆ ಒಳಗೆ ತೆಗೆದುಕೊಂಡು ಬರಲಿಲ್ಲ?"

"ಆತುರ ಪಡಬೇಡ ಮಗು, ರಾಜಾ ಸಾಹೇಬರು ತಾವೇ ಸ್ವತಃ ತೆಗೆದುಕೊಂಡು ಬಂದು ಕೊಡುತೇವೆಂದರು."

"ಅದು ಯಾವ ಪದಾರ್ಥ, ಹೇಳು ಮತ್ತೆ." "ಹೇಳಕೂಡದು ಅಂತ ಅವರು ಹೇಳಿ ಬಿಟ್ಟಿ

ದಾರೆ." ಕೋಣೆಯ ನಾಲ್ಕು ಕಡೆಯೂ ನೋಡಿ ಕಾಳು "ಒಳ್ಳೆ ಚೆನ್ನಾಗಿಯೇ ಇಟ್ಟುಕೊಂಡಿದಾರೆ ನಿನ್ನನ್ನ! ದೊಡ್ಡ ಬಾಬುಗಳಿಗೆ ಹೋಗಿ ಹೇಳಿದರೆ ಸಂತೋಷ ಪಡುತ್ತಾರೆ. ಮೊದಲು ಎರಡು ದಿನ ನಿನ್ನಿಂದ ಸುದ್ದಿ ಬರುವುದು ತಡವಾಗಲು ಅವರು ಬಹಳ ಪೇಚಾಡುತಾಯಿದ್ದರು. ಟಪಾಲಿನಲ್ಲೇನೋ ತೊಂದರೆಯಾಯಿತೇನೋ....ಮೂರು ಕಾಗದಗಳು ಒಟ್ಟಿಗೆ ಒಂದೇ ಸಲ ಬಂದು ಬಿಟ್ಟುವು."

ಟಪಾಲಿನ ತೊಂದರೆ ಯಾವ ರೀತಿಯಾಗಿರಬಹುದೆಂದು ಕುಮು ಊಹಿಸಬಲ್ಲವಳಾಗಿದ್ದಳು.

ಕಾಳೂ ಅಣ್ಣನನ್ನು ಊಟಕ್ಕೆಬ್ಬಿಸಲು ಕುಮುವಿಗೆ ಆಸೆ, ಆದರೆ ಹೇಳಲು ಬಾಯಿ ಬರಲಿಲ್ಲ. ಸ್ವಲ್ಪ ಸಂಕೋಚದಿಂದ "ಕಾಳಣ್ಣ....ನಿಮ್ಮದಿನ್ನೂ ಊಟ ಆಗಿಲ್ಲವೇ ?" ಎಂದಳು.

"ನೋಡು ಮಗು, ಈ ಹಾಳು ಕಲಿಕತ್ತೆಗೆ ಬಂದರೆ ಸಾಯಂಕಾಲದ ಹೊತ್ತು ಹಸಿವೇ ಆಗುವುದಿಲ್ಲ. ಅದಕ್ಕೇ ನಮ್ಮ ರಾಮಸದಯ ಕವಿರಾಜರ ಹತ್ತಿರ ಮಕರ ಧ್ವಜ ತಂದು ತಿಂದೆ. ಆದರೂ ಗುಣವೇನೂ ಕಂಡು ಬರಲಿಲ್ಲ, ನೋಡು"

ಕಾಳುವಿಗೆ ಗೊತ್ತು, ಕುಮು ಮನೆಗೆ ಇನ್ನು ಹೊಸ ಸೊಸೆ, ಅವಳಿಗೆ ಇನ್ನೂ ಯಜಮಾನಿಕೆ ಬಂದಿಲ್ಲ, ಬಾಯಿ ತೆಗೆದು ಊಟಕ್ಕೆಬ್ಬಿಸಲು ಆಗದೆ, ಸುಮ್ಮನೆ ಪೇಚಾಡುತ್ತಾಳೆ ಎಂದು.

ಇಂತಹ ಸಮಯದಲ್ಲಿ ಮೋತಿಯಮ್ಮನು ಬಾಗಿಲ ಮರೆಯಲ್ಲಿ ನಿಂತು ಕೈಸನ್ನೆ ಮಾಡಿ ಕುಮುವನ್ನು ಕರೆದು "ನಿಮ್ಮ ಊರಿನಿಂದ ಮುಖರ್ಜಿ ಮಹಾಶಯರು ಬಂದಿದ್ದಾರಲ್ಲ. ಅವರಿಗೆ ಊಟ ತಯಾರಾಗಿದೆ. ಕೆಳಗಿನ ಕೊಠಡಿಗೆ ಅವರನ್ನು ಕರೆದುಕೊಂಡು ಬಾ. ಅಲ್ಲಿ ಎಲೆ ಹಾಕಿ ಬಡಿಸುತ್ತಾರೆ." ಎಂದಳು.

ಕುಮು ಹಿಂದಕ್ಕೆ ಬಂದು "ಕಾಳಣ್ಣ, ನಿಮ್ಮ ಕವಿರಾಜರ ಮಾತು ಹಾಗಿರಲಿ, ನೀನು ಇಲ್ಲಿ ಊಟ ಮಾಡಲೇ ಬೇಕು." ಎಂದಳು.

"ಅರೆ....ಇದೊಳ್ಳೆ ಪಂಚಾಯತಿ! ಬೇಡಮ್ಮ....ಬೇಡ, ಬಲವಂತ ಮಾಡ ಬೇಡ....ಇವತ್ತಿರಲಿ....ಇನ್ನೊಂದು ದಿನ ಮಾಡೋಣಂತೆ."

"ಇಲ್ಲ....ಆಗುವುದೇ ಇಲ್ಲ....ಮಾಡಲೇ ಬೇಕು....ನಡಿ."

ಕಡೆಯಲ್ಲಿ ಮಕರ ಧ್ವಜದ ಫಲ ಚೆನ್ನಾಗಿಯೇ ಆಗಿತ್ತು, ಹಸಿವಿನಲ್ಲಿ ಎಳ್ಳಷ್ಟಾದರೂ ಅಭಾವವಿರಲಿಲ್ಲ ಅನ್ನುವುದು ದೃಢೀಕರಿಸಲ್ಪಟ್ಟಿತು. ಕಾಳು ಅಣ್ಣನಿಗೆ ಊಟ ಮಾಡಿಸಿದನಂತರ ಕುಮು ಮಲಗುವ ಮನೆಗೆ ಹೊರಟು ಬಂದಳು. ಇಂದು ಮನಸ್ಸು ತಂದೆಯ ಮನೆಯ ನೆನಪುಗಳಿಂದ ತುಂಬಿಹೋಗಿತ್ತು. ಇಷ್ಟು ದಿನಗಳಿಗೆ ಆಗಲೇ ನೂರ್‌ನಗರದ ಹಿತ್ತಿಲ ಕಡೆಯ ತೋಟದಲ್ಲಿ ಮಾವಿನ ಮರಗಳು ಹೂತಿರುತ್ತವೆ. ಕುಸುಮಿತವಾದ ನೇರಳೇ ಮರದ ತಳದಲ್ಲಿ ಪುಷ್ಕರಿಣಿಗೆ ಹೋಗುವ ದಾರಿಯಲ್ಲಿ ಮಧ್ಯಾಹ್ನದ ಹೊತ್ತು ಕುಮು ಕೈ ಮೇಲೆ ತಲೆಯಿಟ್ಟುಕೊಂಡು ತಲೆಗೂದಲನ್ನು ಸುತ್ತ ಹರಡಿಕೊಂಡು ಎಷ್ಟು ಹೊತ್ತು ಕಳೆಯುತ್ತಿದ್ದಳೋ....! ದುಂಬಿಗಳ ಝೇಂಕಾರದಿಂದ ಪ್ರತಿಧ್ವನಿಸುತ್ತಾ ನೆರಳು-ಬೆಳಕುಗಳ ಹಾಸು ಹೊಕ್ಕಿನಿಂದ ತುಂಬಿದ್ದ ಆ ಮಧ್ಯಾಹ್ನ ಕಾಲ! ಆಗ ಎದೆಯೊಳಗೆ ಏನೋ ಅವ್ಯಕ್ತವಾದ ವೇದನೆಯು ಹುಟ್ಟಿಕೊಳ್ಳುತ್ತಿತ್ತು. ಅದರರ್ಥವೇನೆಂದು ಗೊತ್ತಾಗುತ್ತಿರಲಿಲ್ಲ, ಅದೇ ವೇದನೆಯಲ್ಲಿ ಸಂಜೆಯ ಹೊತ್ತಿನ ಬೃಂದಾವನದ ಹಾದಿಯ ಗೋವಿನ ಹಿಂಡುಗಳ ಪದ ಧೂಳಿಯಿಂದ ಅವಳ ಕನಸು ಬಣ್ಣ ಪಡೆದು ಬೆಳಗುತ್ತಿತ್ತು. ಇನ್ನೂ ಬಾರದೆ

ಇರುವ ಅವಳ ಯೌವನದ ಒಡನಾಡಿಯು ಜಲ ಸ್ಥಳಗಳಲ್ಲಿ ಮಾಯೆಯನ್ನು ತುಂಬಿಸಿಟ್ಟಿರುವನೆಂದೂ, ಅವಳ ಯುಗಳ ಮೂರ್ತಿಯ ಉಪಾಸನೆಯಲ್ಲಿ ಅವನೇ ಕಣ್ಣುಮುಚ್ಚಾಲೆಯಾಡುತ್ತಿರುವನೆಂದೂ, ಅವನನ್ನೇ ತನ್ನ ಏಸ್‌ರಾಜಿನ ಮೆಟ್ಟಲುಗಳಲ್ಲಿ, ಮುಲ್ತಾನ್ ರಾಗದ ಮೂರ್ಛನೆಯಲ್ಲಿ ತನ್ನ ಚಿತ್ತದ ಮರ್ಮಸ್ಥಾನದಲ್ಲಿ ಎಳೆಯುತ್ತಿರುವಳೆಂದೂ ಅರಿಯಳು. ಅವಳ ಪ್ರಥಮ ಯೌವನದ ಅದೇ ಅಪ್ರಾಪ್ತ ಸ್ನೇಹಿತನ ಪ್ರಭಾವವೇ ಅವಳು ವಾಸವಾಗಿದ್ದ ಆ ಹಿಂದಿನ ಕಾಲದ ಮನೆಯ ಪ್ರತಿಯೊಂದು ಸ್ಥಳದಲ್ಲಿಯೂ ಪ್ರತಿಬಿಂಬಿಸಿತ್ತು. ಗ್ರಾಮದ ಡೊಂಕು ಡೊಂಕಾದ ರಸ್ತೆಯ ಪಕ್ಕದಲ್ಲಿನ ಪುಷ್ಪಭರಿತವಾದ ಸಾಸುವೆಯ ಹೊಲಗಳು ದೃಷ್ಟಿಗೆ ಬೀಳುತ್ತಿದ್ದ ಮಹಡಿಯ ಮೇಲಣ ಏಕಾಂತಗೃಹದಲ್ಲಿ, ಹಿತ್ತಿಲ ಕಡೆಯಲ್ಲಿ, ಯಾವುದೋ ಪುರಾತನಕಾಲದ ಕಥೆಯು ಗೋಡೆಯ ಮೇಲಣ ಪಾಚಿಯ ಹಸುರು ಹಿನ್ನೆಲೆಯಲ್ಲಿ ಕರಿಯ ರೇಖೆಗಳಿಂದ ಚಿತ್ರಿತವಾದಂತೆ ಕಂಡು ಬರುವುದನ್ನು ಎಲ್ಲಿ ಕೂತು ನೋಡುತ್ತಿದ್ದಳೋ ಆ ಪೌಳೀ ಗೋಡೆಯ ಪಕ್ಕದ ಮಣ್ಣು ದಿಣ್ಣೆಯಲ್ಲಿ, ಎರಡನೆಯ ಅಂತಸ್ತಿನಲ್ಲಿದ್ದ ಅವಳ ಮಲಗುವ ಮನೆಯ ಕಿಟಕಿಯಲ್ಲಿ ಕೂತು, ಬೆಳಿಗ್ಗೆ ನಿದ್ದೆಯಿಂದೆದ್ದು ದೂರದ ರಂಗುರಂಗಾದ ಆಕಾಶದ ದಿಗಂತದ ತೆಕ್ಕೆಯಲ್ಲಿ ಮನಸ್ಸಿನ ನಿರುದ್ದೇಶ ಬಯಕೆಗಳಂತೆ ಓಡುತ್ತಿರುವ ಪಟವ ದೋಣಿಗಳನ್ನು ನೋಡುತ್ತಿದ್ದಳು. ಪ್ರಥಮ ಯೌವನದ ಅದೇ ಮರೀಚಿಕೆಯು ಕಲಿಕತ್ತೆಯಲ್ಲಿ ಕೂಡ ಅವಳ ಪೂಜೆಯಲ್ಲಿ, ಅವಳ ಹಾಡುಗಳಲ್ಲಿ ಬಂದು ನೆಲೆಸಿತ್ತು. ಅದೇ ಬಿಸಿಲುಗುದುರೆಯೇ ದೈವವಾಣಿಯ ರೂಪ ತಾಳಿ ಅವಳನ್ನೀ ಮದುವೆಯ ಉರುಲಿಗೆ ಅಂಧಭಾವದಲ್ಲಿ ಸಿಕ್ಕಿಸಿ ಎಳೆದು ತಂದಿದೆ. ಅಲ್ಲದೆ ಈ ಪ್ರಚಂಡವಾದ ಬಿಸಿಲಿನಲ್ಲಿ ತಾನು ಮಾತ್ರ ಸೇರಿಕೊಂಡು ಮಾಯವಾಗಿದೆ.

ಈ ಮಧ್ಯೆ ಯಾವಾಗಲೋ ಮಧುಸೂದನನು ಹಿಂದುಗಡೆಯಿಂದ ಬಂದು ಗೋಡೆಯಲ್ಲಿ ತಗುಲಿಹಾಕಿದ್ದ ಕನ್ನಡಿಯಲ್ಲಿ ಕುಮುವಿನ ಮುಖದ ಪ್ರತಿಬಿಂಬದ ಕಡೆ ಎವೆಯಿಕ್ಕದೆ ನೋಡುತ್ತಿದ್ದ. ಕುಮುವಿನ ಮನಸ್ಸು ಯಾವ ಕಡೆ ಲೀನವಾಗಿ ಸೋತು ಹೋಗಿತ್ತೋ ಆ ಅದೃಶ್ಯ, ಅಜ್ಞಾತ ವ್ಯಕ್ತಿಯೊಂದಿಗೆ ತಾನು ಸರಿತೂಗಲಾರೆನೆಂದು ಅವನಿಗೆ ತಿಳಿದು ಹೋಯಿತು. ಬೇರೆ ದಿನವಾಗಿದ್ದರೆ ಕುಮುವಿನ ಈ ಅನ್ಯಮನಸ್ಕ ಭಾವವನ್ನು ಕಂಡು ರೇಗಿ ಬೀಳುತ್ತಿದ್ದ. ಇಂದು ಮಾತು ಶಾಂತವಾಗಿ ಸ್ವಲ್ಪ ವಿಷಾದದಿಂದ ಕೂಡಿದ ಧ್ವನಿಯಲ್ಲಿ ಕುಮುವಿನ ಪಕ್ಕದಲ್ಲಿ ಬಂದು ಕೂತು "ಏನು ಯೋಚನೆ ಮಾಡುತ್ತ ಇದ್ದೀಯಾ, ಕುಮು" ಎಂದು ಕೇಳಿದ.

ಕುಮು ಬೆಚ್ಚಿಬಿದ್ದಳು. ಮುಖ ಬಣ್ಣಗೆಟ್ಟಿತು. ಮಧುಸೂದನನು ಅವಳ ಕೈಯನ್ನು ಬಿಗಿಯಾಗಿ ಹಿಡಿದುಕೊಂಡು "ಏನು ಮಾಡಿದರೂ ನೀನು ನನ್ನವಳಾಗಲಾರೆಯೇನು ?" ಎಂದು ಕೇಳಿದ.

ಈ ಮಾತಿಗೆ ಉತ್ತರವೇ ಅವಳ ಮನಸ್ಸಿಗೆ ಹೊಳೆಯಲಿಲ್ಲ. ಏತಕ್ಕೆ ಅವನಿಗೆ ವಶಳಾಗಲಾರಳೆಂಬ ಪ್ರಶ್ನೆಯನ್ನು ಅವಳೇ ಕೇಳಿಕೊಳ್ಳುವಳು. ಮಧುಸೂದನ ಕಠಿಣವಾಗಿ ನಡೆದುಕೊಳ್ಳುತ್ತಿದ್ದಾಗ ಅದಕ್ಕೆ ಉತ್ತರವು ಸುಲಭವಾಗಿತ್ತು. ಆಗ ಅವನನ್ನು ಸ್ವೀಕಾರ ಮಾಡದೆ ಇರುವುದಕ್ಕೆ ತನ್ನನ್ನೇ ನಿಂದಿಸಿಕೊಳ್ಳುತ್ತಿದ್ದಳು. ಗಂಡನಿಗೆ ಪ್ರಾಣ ಮನಗಳನ್ನು ಸಮರ್ಪಣೆ ಮಾಡದಿರುವುದು ಮಹಾಪಾಪ, ಈ ವಿಷಯದಲ್ಲಿ ಕುಮುವಿಗೆ ಸಂದೇಹವಿಲ್ಲ. ಆದರೆ ಅವಳಿಗೆ ಈ ದಶೆಯು ಏಕೆ ಉಂಟಾಯಿತು? ಸತೀ ಸಾವಿತ್ರಿಯಂತಾಗ ಬೇಕೆಂದಲ್ಲವೇ ಹೆಂಗಸರ ಏಕ ಮಾತ್ರ ಗುರಿ? ಆ ಗುರಿ

ಯಿಂದ ಭ್ರಷ್ಟಳಾಗುವ ಪರಮ ದುರ್ಗತಿಯಿಂದ ತನ್ನನ್ನೇ ಕಾಪಾಡಿಕೊಳ್ಳಲು ಬಯಸಿದಳು. ಆದ್ದರಿಂದಲೇ ಇಂದು ಕುಮು ವ್ಯಾಕುಲಳಾಗಿ ದಿಕ್ಕು ತೋಚದೆ "ನೀವು ನನ್ನ ಮೇಲೆ ಕರುಣೆ ತೋರಿಸಿ" ಎಂದಳು.

"ಯಾತಕ್ಕೋಸ್ಕರ ಕರುಣೆ ತೋರಿಸಬೇಕು ?"

"ನನ್ನನ್ನ ನಿಮ್ಮವಳನ್ನಾಗಿ ಮಾಡಿಕೊಳ್ಳಿ, ನನಗೆ ಆಜ್ಞೆಮಾಡಿ, ಶಿಕ್ಷೆಮಾಡಿ. ನಾನು ನಿಮಗೆ ತಕ್ಕವಳಲ್ಲವೆಂದು ನನಗೆ ಅನ್ನಿಸುತ್ತದೆ."

ಕೇಳಿ ಬಹಳ ದುಃಖಿತನಾಗಿ ಮಧುಸೂದನ ವಿಷಾದದಿಂದ ನಕ್ಕ. ಕುಮು ಪತಿವ್ರತೆಯ ಕರ್ತವ್ಯವನ್ನು ಮಾಡಲು ಬಯಸುವಳು. ಕುಮು ಸಾಧಾರಣ ಗೃಹಿಣಿ ಮಾತ್ರವಾಗಿದ್ದಿದ್ದರೆ ಅವನಿಗಿಷ್ಟೇ ಯಥೇಷ್ಟವಾಗುತ್ತಿತ್ತು. ಆದರೆ ಕುಮು ಅವನ ದೃಷ್ಟಿಯಲ್ಲಿ ಮಂತ್ರ ಹೇಳಿದ ಹೆಂಡತಿಗಿಂತಲೂ ಬಹಳ ಶ್ರೇಷ್ಠಳು. ಆ ಶ್ರೇಷ್ಠತೆಯನ್ನು ಪಡೆಯುವುದಕ್ಕೋಸ್ಕರ ತಾನು ಎಷ್ಟು ಬೆಲೆ ಕೊಟ್ಟರೂ ವ್ಯರ್ಥವಾಗಿಹೋಗಿತ್ತು ತನ್ನ ಅಲ್ಪತನವೇ ಹೊರಬೀಳುತ್ತಿತ್ತು. ಕುಮುವಿನ ಪಕ್ಕದಲ್ಲಿ ತನ್ನ ತಪ್ಪಿಸಿಕೊಳ್ಳಲಾಗದ ಕೀಳ್ತನಕ್ಕಾಗಿ ವ್ಯಾಕುಲವು ಹೆಚ್ಚುತ್ತಲೇ ಇತ್ತು.

ಮಧುಸೂದನನು ದೊಡ್ಡ ನಿಟ್ಟುಸಿರುಬಿಟ್ಟು "ಒಂದು ಸಾಮಾನನ್ನ ನಿನಗೆ ಕೊಟ್ಟರೆ ನೀನು ಏನು ಕೊಡುತ್ತಿ, ಹೇಳು" ಎಂದ.

ಅವನು ಪ್ರಸ್ತಾಪ ಮಾಡುತ್ತಿರುವುದು ಅಣ್ಣ ಕೊಟ್ಟು ಕಳುಹಿಸಿದ ಪದಾರ್ಥದ ವಿಷಯವೇ ಎಂದು ಕುಮುವಿಗೆ ತಿಳಿಯಿತು. ವ್ಯಗ್ರತೆಯಿಂದ ಮಧುಸೂದನನ ಮುಖದ ಕಡೆಯೇ ನೋಡುತ್ತ ಕೂತಳು.

"ಆ ಪದಾರ್ಥ ಎಂತಹುದೋ ಅಂಥದೇ ಉಪಯುಕ್ತ ಬೆಲೆಯನ್ನು ತೆಗೆದುಕೊಳ್ಳುತ್ತೇನೆ, ಬಿಡು" ಎಂದು ಹೇಳಿ ಮಂಚದ ಕೆಳಗಿನಿಂದ ರೇಶಿಮೆಯ ಹೊದಿಕೆಯಲ್ಲಿ ಮುಚ್ಚಿದ್ದ ಏಸ್‌ರಾಜನ್ನು ಹೊರಗೆ ತೆಗೆದು ಅದರ ಹೊದಿಕೆಯನ್ನು ಬಿಚ್ಚಿಹಾಕಿದನು. ಕುಮುವಿನ ಚಿರಪರಿಚಿತವಾದ ಏಸ್‌ರಾಜ್, ದಂತದ ಮೆಟ್ಟಲುಗಳಿಂದ ಹೊಳೆಯುತ್ತಿದ್ದ ಏಸ್‌ರಾಜ್ ! ಮನೆಯಿಂದ ಬರುವಾಗ ಇದನ್ನೇ ಬಿಟ್ಟು, ಬಿಟ್ಟು, ಬಂದಿದ್ದಳು.

ಮಧುಸೂದನನು "ಸಂತೋಷವಾಯಿತು ತಾನೇ? ಈಗದರ ಬೆಲೆ ಕೊಡು" ಎಂದ.

ಮಧುಸೂದನನು ಅಪೇಕ್ಷಿಸುತ್ತಿದ್ದ ಬೆಲೆ ಯಾವುದೆಂದು ಅವಳಿಗೆ ಹೊಳೆಯಲಿಲ್ಲ. ಸುಮ್ಮನೆ ನೋಡುತ್ತ ಕೂತಳು. ಮಧುಸೂದನನು "ಅದನ್ನು ಬಾರಿಸುತ್ತೀಯಾ ಒಂದು ಸಲ, ಕೇಳೋಣಂತೆ." ಎಂದ.

ಇದೇನು ಅಂತಹ ದೊಡ್ಡದಲ್ಲ. ಆದರೂ ಸ್ವಲ್ಪ ಕಠಿಣವಾದ ಕೆಲಸವೇ. ಮಧುಸೂದನನಿಗೆ ಸಂಗೀತದಲ್ಲಾವ ಅಭಿರುಚಿಯೂ ಇಲ್ಲವೆಂದು ಕುಮುವಿಗೆ ಗೊತ್ತು. ಇಂತಹವನ ಎದುರಿನಲ್ಲಿ ಕೂತು ಸಂಕೋಚವಿಲ್ಲದೆ ಬಾರಿಸುವುದು ಅವಳಿಗೆ ಕಷ್ಟವೆಂದೇ ತೋರಿತು, ಕುಮು ತಲೆ ತಗ್ಗಿಸಿಕೊಂಡು ಏಸ್‌ರಾಜಿನ ಕಮಾನನ್ನು ಆಡಿಸತೊಡಗಿದಳು.

ಮಧುಸೂದನನು "ಬಾರಿಸು ಕುಮು, ನನ್ನ ಮುಂದೆ ನಾಚುಗೆಯೇಕೆ?" ಎಂದ.

ಕುಮು "ಶ್ರುತಿ ಸರಿಯಾಗಿಲ್ಲ" ಎಂದಳು.

"ನಿನ್ನ ಮನಸ್ಸಿನ ಶ್ರುತಿಯೇ ಸರಿಹೋಗಿಲ್ಲ. ಹಾಗೆ ಹೇಳುವುದು ತಾನೆ?"

ಈ ಮಾತಿನ ಸತ್ಯವು ಕುಮುವಿನ ಮನಸ್ಸಿಗೆ ಆಗಲೇ ನೋವುಂಟುಮಾಡಿತು. "ವಾದ್ಯವನ್ನು ಸರಿಯಾಗಿ ಮಾಡಿ ಇನ್ನೊಂದು ದಿನ ನಿಮ್ಮ ಮುಂದೆ ಬಾರಿಸುತ್ತೇನೆ" ಎಂದಳು.

"ಯಾವಾಗ ಬಾರಿಸುತ್ತೀ ಸರಿಯಾಗಿ ಹೇಳು. ನಾಳೆ ?"

"ಆಗಲಿ, ನಾಳೆ."

"ಸಾಯಂಕಾಲ ಆಫೀಸಿನಿಂದ ಬಂದ ಮೇಲೆ."

"ಹೂಂ. ಹಾಗೇ ಆಗಲಿ."

"ಏಸ್‌ರಾಜನ್ನು ಪಡೆದು ಬಹಳ ಸಂತೋಷವಾಯಿತು ತಾನೇ ?"

"ಬಹಳ ಸಂತೋಷವಾಯಿತು."

ಆಗ ಶಾಲಿನೊಳಗಿಂದ ಚರ್ಮದ ಪೆಟ್ಟಿಗೆಯೊಂದನ್ನು ಹೊರಕ್ಕೆ ತೆಗೆದು "ನಿನಗೋಸ್ಕರ ತಂದಿರುವ ಈ ಮುತ್ತಿನ ಹಾರ ಹಾಕಿಕೊಂಡರೂ ಅಷ್ಟೇ ಸಂತೋಷವಾಗುತ್ತೆ ತಾನೇ ?"

ಇಂತಹ ಕಠಿಣವಾದ ಪ್ರಶ್ನೆಯನ್ನೇಕೆ ಹಾಕುವುದು? ಕುಮು ಮಾತಿಲ್ಲದೆ ಏಸ್‌ರಾಜಿನ ಕಮಾನನ್ನು ಆಡಿಸುತ್ತಿದ್ದಳು.

"ಗೊತ್ತಾಯಿತು. ನನ್ನ ಅರ್ಜಿ ಮಂಜೂರಾಗಲಿಲ್ಲ."

ಕುಮುವಿಗೆ ಮಾತಿನರ್ಥವನ್ನು ಸರಿಯಾಗಿ ತಿಳಿದುಕೊಳ್ಳಲಾಗಲಿಲ್ಲ.

ಮಧುಸೂದನನು "ನಿನ್ನ ಹೃದಯದ ಬಳಿ ನನ್ನ ಈ ಮನಸ್ಸಿನ ಅರ್ಜಿಯನ್ನು ಸೇರಿಸಿಡಬೇಕೆಂದು ನನ್ನ ಆಸೆಯಿತ್ತು. ಆದರೆ ಅದು ಮುಂಚೆಯೇ ವಜಾ ಆಗಿ ಹೋಯಿತು" ಎಂದ.

ಕುಮುವಿನ ಎದುರಿಗೆ ನೆಲದಮೇಲೆಯೇ ಆ ಒಡವೆಯ ಪೆಟ್ಟಿಗೆ ತೆರೆದಿತ್ತು. ಇಬ್ಬರಲ್ಲಿ ಒಬ್ಬರೂ ಮಾತಾಡಲಿಲ್ಲ. ನಡುನಡುವೆ ಕುಮು ಸ್ವಪ್ನವಿಷ್ಟಳಾಗುತ್ತಿದ್ದಂತೆಯೇ ಈಗಲೂ ಅದೇ ಭಾವದಲ್ಲಿದ್ದಳು. ಸ್ವಲ್ಪ ಹೊತ್ತಾದ ನಂತರ ತಕ್ಷಣ ಎಚ್ಚರಬಂದವಳಂತೆ ಮಾಲೆ ಕೈಯಲ್ಲೆತ್ತಿ ಕೊರಳಿಗೆ ಹಾಕಿಕೊಂಡಳು. ಆಮೇಲೆ ಮಧುಸೂದನನಿಗೆ ಪ್ರಣಾಮಮಾಡಿದಳು. "ನೀವು ನನ್ನ ಏಸ್‌ರಾಜ್ ಬಾರಿಸುವುದನ್ನು ಕೇಳುತ್ತೀರಾ ?" ಎಂದಳು.

ಮಧುಸೂದನನು "ಹೂಂ. ಕೇಳುತ್ತೀನಿ" ಎಂದ.

"ಹಾಗಾದರೆ ಈಗಲೇ ಬಾರಿಸುತ್ತೇನೆ" ಎಂದು ಏಸರಾಜನ್ನು ಕೈಯಲ್ಲಿ ತೆಗೆದುಕೊಂಡು ಆಲಾಪ ಶುರುಮಾಡಿದಳು. ಕೋಣೆಯಲ್ಲಿ ಯಾರಿದ್ದಾರೆನ್ನುವುದನ್ನು ಸಂಪೂರ್ಣವಾಗಿ ಮರೆತು ಕೇದಾರದಿಂದ ಛಾಯಾನಟವವರೆಗೂ ಬಂದಳು. ಅವಳ ಅಚ್ಚುಮೆಚ್ಚಿನ "ಠಾಡೀ ರಹೋ ಮೇರೆ ಆಂಖನಕೇ ಆಗೇ" (ನಿಂತೇ ಇರ್ರೈ ಎನ್ನ ಕಣ್ಣೆದಿರಿನಲಿ) ಎಂಬ ಕೀರ್ತನೆಯನ್ನು ಬಾರಿಸಿದಾಗ ಯಾರನ್ನು ಕುಮು ಗಾನದ ಮಧ್ಯೆ ಪಡೆದಿದ್ದಳೋ, ಪ್ರಾಣದ ಮಧ್ಯೆ ಪಡೆದಿದ್ದಳೋ, ಕೇವಲ ಕಣ್ಣು ಮುಂದೆ ಪಡೆಯುವ ಕಾತರದಿಂದ ಯಾರಿಗೋಸ್ಕರ ವಿರಹದ ಬಿನ್ನಹ ಮಾಡಿಕೊಳ್ಳುತ್ತ ಚಿರದಿನವೂ ಕಂಗೆಟ್ಟು ಹೋಗಿದ್ದಳೋ--ಅಂದು ಸ್ವರ-ತಾನಗಳ ಆಕಾಶದಲ್ಲಿ ವರ್ಣಗಳ ಛಾಯೆಯೆಸೆಯುತ್ತಾ ಆ ಅಪೂರ್ವ ಮೂರ್ತಿಯೇ ಆವಿರ್ಭಾವವಾದನು. "ಠಾಡಿ ರಹೋ ಮೇರೆ ಆಂಖನಕೇ ಆಗೇ."

ಮಧುಸೂದನನಿಗೆ ಸಂಗೀತ ರಸದ ಮಾಧುರ್ಯದರಿವಿರಲಿಲ್ಲ. ಆದರೆ ಕುಮುವಿನ ವಿಶ್ವಮೋಹಕ ಮುಖದಮೇಲೆ ಲಾಸ್ಯವಾಡುತ್ತಿದ್ದ ಆ ಸ್ವರ, ಏಸರಾಜಿನ ಮೆಟ್ಟಲು ಮೆಟ್ಟಲುಗಳ

ಮೇಲೆ ಕುಮುವಿನ ಬೆರಳುಗಳ ಚಲನೆಯಿಂದ ಕುಣಿಯುತ್ತಿದ್ದ ಆ ಛಂದಸ್ಸು, ಅವನ ಹೃದಯವನ್ನೇ ಕರಗಿಸಿ ಕಲಕಿಬಿಟ್ಟಿತ್ತು. ತನಗೆ ಯಾರಿಂದಲೋ ವರ ಲಭಿಸಿದಂತೆ ಅನ್ನಿಸಿತು. ತದೇಕ ಮನದಿಂದ ಬಾರಿಸುತ್ತಿದ್ದ ಕುಮು ಹಠಾತ್ತಾಗಿ ಒಂದುಸಲ ತಲೆ ಎತ್ತಿ ನೋಡಿದಾಗ ಮಧುಸೂದನ ಅವಳ ಮುಖದ ಕಡೆಯೇ ನಟ್ಟದೃಷ್ಟಿಯಿಂದ ನೋಡುತ್ತಿದ್ದ. ಆ ಕ್ಷಣ ಅವಳ ಕೈ ಹಾಗೆಯೇ ನಿಂತುಹೋಯಿತು. ನಾಚುಗೆಯಾಯಿತು. ಬಾರಿಸುವುದನ್ನು ನಿಲ್ಲಿಸಿಬಿಟ್ಟಳು.

ಮಧುಸೂದನನ ಮನಸ್ಸು ಮೆಚ್ಚುಗೆಯಿಂದ ಉಬ್ಬಿ ವಿಶ್ವಾಸದಿಂದ ಉಕ್ಕಿ ಹರಿಯಿತು.

"ಕುಮು, ನಿನಗೇನು ಬೇಕೋ ಹೇಳು....ಹೂಂ....ಹೇಳು" ಎಂದ.

ಕುಮು ಏನಾದರೂ ಕೆಲವು ದಿನಗಳು ಅಣ್ಣನಿಗೆ ಶುಶ್ರೂಷೆ ಮಾಡಲು ಇಷ್ಟವೆಂದು ಹೇಳಿದ್ದರೆ ಮಧುಸೂದನನು ಅದಕ್ಕೂ ಒಪ್ಪುತ್ತಿದ್ದ. ಏತಕ್ಕೆಂದರೆ ಇಂದು ಕುಮುವಿನ ಗೀತಮುಗ್ಧ ಮುಖವನ್ನು ನೋಡಿ ನೋಡಿ ಅವನು ತನಗೆ ತಾನೇ "ಎಲಾ....ಇವಳು ಈಗ ತಾನೇ ನನ್ನ ಮನೆಗೆ ಬಂದಿರುವಳಲ್ಲಾ ! ಇದೆಂತಹ ಆಶ್ಚರ್ಯವಾದ ಸತ್ಯ !" ಎಂದುಕೊಳ್ಳುತ್ತಿದ್ದ.

ಕುಮು ಏಸರಾಜನನ್ನು ನೆಲದಮೇಲಿಟ್ಟು ಸುಮ್ಮನೆ ನೋಡುತ್ತ ಕೂತಿದ್ದಳು.

ಮಧುಸೂದನ ಮತ್ತೊಂದು ಸಲ ಅನುನಯದ ಸ್ವರದಲ್ಲಿ "ಕುಮೂ ನನ್ನಿಂದ ಏನಾದರೂ ಕೇಳು ..ನೀನು ಏನು ಕೇಳಿದರೂ ಅದನ್ನು ಕೊಡುತ್ತೇನೆ" ಎಂದ.

ಕುಮು "ಮುರಳಿ ಅಂತ ಆಳಿದ್ದಾನಲ್ಲ, ಅವನಿಗೊಂದು ಬೆಚ್ಚಗಿರುವ ಬಟ್ಟೆ ಕೊಡಿ ಮತ್ತೆ" ಎಂದಳು.

ಅವಳು ನನಗೇನೂ ಬೇಡವೆಂದಿದ್ದರೇನೇ ಎಷ್ಟೋ ಚೆನ್ನಾಗಿತ್ತು. ಆದರೆ ಮುರಲಿ,ಆ ಆಳು ಮುರಲಿ! ಅವನಿಗೋಸ್ಕರ ಬೆಚ್ಚಗಿರುವ ಬಟ್ಟೆಯಂತೆ!...ತಲೆಯ ಮೇಲಿನ ಕಿರೀಟವನ್ನೇ ಕೊಡಲು ಸಿದ್ಧವಾಗಿರುವಾಗ, ಜೋಡಿನ ಬಾರವನ್ನೇ ಕೇಳುವುದು ?

ಮಧುಸೂದನನು ಮಾತಿಲ್ಲದವನಾದ. ಆ ಆಳಿನ ಮೇಲೆ ಕೋಪ ಬಂತು.

"ಆ ಹಾಳು ಮುರುಳಿ ಬಂದು ನಿನ್ನನ್ನು ಪೀಡಿಸಿದಾನೆ ಅಂತ ಕಾಣುತ್ತೆ" ಎಂದ.

"ಇಲ್ಲ. ನಾನೇ ಸ್ವತಃ ಅವನಿಗೆ ಒಂದು ಶಾಲನ್ನ ಕೊಡುವುದಕ್ಕೆ ಹೋದೆ. ಅವನು ತೆಗೆದುಕೊಳ್ಳಲಿಲ್ಲ. ನೀವೇ ಆಜ್ಞೆ ಮಾಡಿದರೆ ಆಗ ಅವನಿಗೆ ತೆಗೆದುಕೊಳ್ಳುವುದಕ್ಕೆ ಧೈರ್ಯ ಬರುತ್ತೆ."

ಮಧುಸೂದನನು ಸ್ತಬ್ಧನಾದ. ಕೆಲವು ನಿಮಿಷಗಳಾದ ಮೇಲೆ "ಭಿಕ್ಷೆ ಕೊಡಬೇಕೆಂದಿದ್ದೀಯೇನು ? ಒಳ್ಳೆಯದು, ಆ ಶಾಲೆಲ್ಲಿ ನೋಡೋಣ" ಎಂದ.

ಕುಮು ತಾನು ಬಹಳ ದಿನಗಳಿಂದ ಉಪಯೋಗಿಸುತ್ತಿದ್ದ ಬಾದಾಮಿ ಬಣ್ಣದ ಶಾಲನ್ನು ಹೋಗಿ ತಂದಳು. ಮಧುಸೂದನ ಅದನ್ನು ತೆಗೆದುಕೊಂಡು ತನ್ನ ಮೈಮೇಲೆಯೇ ಹೊದ್ದುಕೊಂಡ. ಟೀಪಾಯಿಯ ಮೇಲಿದ್ದ ಚಿಕ್ಕ ಬಲ್ಲನ್ನು ಹೊಡೆದಾಗ ಮುದಿ ದಾದಿಯೊಬ್ಬಳು ಬಂದಳು. "ಮುರಳಿಯನ್ನು ಬರಹೇಳು" ಎಂದ. ಮುರಳಿ ಬಂದವನೇ ಕೈ ಕಟ್ಟಿಕೊಂಡು ನಿಂತುಕೊಂಡ ಚಳಿಯಿಂದಲೂ ಹೆದರಿಕೆಯಿಂದಲೂ ಅವನ ಕೈಗಳು ನಡಗುತ್ತಿದ್ದುವು.

"ಅಮ್ಮಾವರು ನಿನಗೊಂದು ಬಕ್ಷೀಸು ಕೊಟ್ಟಿದಾರೆ" ಎಂದು ಮಧುಸೂದನ ಜೇಬಿನಿಂದ ಪರ್ಸನ್ನು ತೆಗೆದು ಒಂದು ನೂರು ರೂಪಾಯಿಗಳ ನೋಟೊಂದನ್ನು ಹೊರತೆಗೆದು ಅದರ ಮಡಿಕೆಯನ್ನು ಬಿಚ್ಚಿ ಕುಮುವಿನ ಕೈಯಲ್ಲಿ ಕೊಟ್ಟ. ಈ ಬಗೆಯ ಅಕಾರಣವಾದ, ಅಯಾಚಿತವಾ

ದಾನ ಮಧುಸೂದನನ ಕೈಯಿಂದ ಜೀವನದಲ್ಲಿ ಎಂದಿಗೂ ಬಂದಿರಲಿಲ್ಲ. ಈ ಅಸಂಭವ ವ್ಯಾಪಾರ ದಿಂದ ಆಳು ಮುರಳಿಯ ಭಯವು ಇನ್ನೂ ಹೆಚ್ಚಾಯಿತು. ಕಂಪಿಸುವ ದನಿಯಲ್ಲಿ "ಹುಜೂರ್.... ಎಂದ.

"ಹುಜೂರ್ ಏನೋ....ಮಗನೇ....! ಮುತ್ಕಾಳನ್ನ ತಗೊಂಡು ಬಂದು....ತಗೋ ನಿಮ್ಮ ಅಮ್ಮಾವರ ಕೈಯಿಂದ ಈ ರೂಪಾಯಿ ತಗೊಂಡು ನಿನಗೆಷ್ಟು ಬೆಚ್ಚಗಿರುವ ಬಟ್ಟೆ ಬೇಕೋ ಅದನ್ನು ಕೊಂಡುಕೋ ಹೋಗು."

ವ್ಯಾಪಾರ ಇಷ್ಟರಮಟ್ಟಿಗೆ ಬಂದು ಮುಗಿದು ಹೋಯಿತು. ಅದರ ಸಂಗಡವೇ ಅಂದಿನ ದಿನ ಉಳಿದುದೆಲ್ಲಾ ಮುಗಿದು ಹೋದಂತಾಯಿತು. ಯಾವ ಪ್ರವಾಹದಲ್ಲಿ ಕುಮುವಿನ ಮನಸ್ಸು ಹರಿಯತೊಡಗಿತ್ತೋ ಅದು ಹಠಾತ್ತಾಗಿ ನಿಂತುಹೋಯಿತು. ಮಧುಸೂದನನ ಮನಸ್ಸಿನಲ್ಲಿ ಕೂಡ ಸ್ವಾರ್ಥತ್ಯಾಗದ ಸೆಳೆಯೊಂದು ಹುಟ್ಟಿಕೊಂಡು, ಮನಸ್ಸಿನ ಸ್ವಾಭಾವಿಕ ಇಕ್ಕಟ್ಟನ್ನು, ಅಲ್ಪ ತೆಯ ಮೇರೆಯನ್ನು ಮುಚ್ಚಿ ಹರಿದಿದ್ದುದು, ಸಾಮಾನ್ಯ ಆಳೊಬ್ಬನ ತುಚ್ಛವಾದ ಬೇಡಿಕೆಯ ಬೆಂಡೊಂದನ್ನು ಮುಟ್ಟಿ ಮತ್ತೆ ಪಾತಾಳಕ್ಕೆ ಉಡುಗಿಹೋಯಿತು. ಇಷ್ಟಾದಮೇಲೆ ಸಹಜವಾಗಿ ಮಾತು ಕಥೆಯಾಡುವುದು ಇಬ್ಬರಿಗೂ ಅಸಾಧ್ಯವಾಯಿತು. ಅಂದು ಸಂಜೆಯ ಹೊತ್ತು ಅದೇ ಗ್ರಾಮದ ಕೊಳ್ಳುವಿಕೆಯ ಸಲುವಾಗಿ ಮಾತು ಕಥೆಯಾಡಲು ಜನಗಳು ಬಂದು ಹೊರಮನೆಯ ಆಫೀಸು ರೂಮಿನಲ್ಲಿ ಕಾದಿದ್ದರು, ಈ ವಿಷಯ ಮಧುಸೂದನನ ಮನಸ್ಸಿಗೆ ಬಂದಿರಲಿಲ್ಲ. ಇಷ್ಟು ಹೊತ್ತಾದಮೇಲೆ ಚಕಿತನಾಗಿ ಎದ್ದು ತನ್ನ ಮೇಲೆಯೇ ಧಿಕ್ಕಾರ ಮಾಡಿಕೊಂಡ. "ಹೂ....ಇನ್ನು ಬರುತ್ತೇನೆ. ಕೆಲಸವಿದೆ" ಎಂದು ಕೂಡಲೇ ಬೇಗ ಬೇಗ ಹೊರಟುಬಿಟ್ಟ.

ದಾರಿಯಲ್ಲಿ ಶ್ಯಾಮಾಸುಂದರಿಯ ಕೋಣೆಯ ಎದುರಿನಲ್ಲಿ ಬಂದು ನಿಂತು ಚೆನ್ನಾಗಿ ತಿಳಿಯುವ ದನಿಯಲ್ಲಿ "ಇದ್ದೀಯಾ ಒಳಗೆ?" ಎಂದು ಕೇಳಿದ.

ಶ್ಯಾಮಾಸುಂದರಿ ಇಂದು ಊಟವೇ ಮಾಡಿರಲಿಲ್ಲ. ಒಂದು ದುಪ್ಪಟಿಯನ್ನು ಹೊದ್ದು ಕೊಂಡು ಚಾಪೆಯಮೇಲೆ ಸುಮ್ಮನೆ ಬಿದ್ದುಕೊಂಡಿದ್ದಳು, ಮಧುಸೂದನನ ಕೂಗನ್ನು ಕೇಳಿ ಎದ್ದು ಬೇಗ ಬೇಗ ಬಾಗಿಲಬಳಿ ಬಂದು "ಓ, ಮೈದುಂದಿರೋ....?" ಎಂದಳು.

"ತಾಂಬೂಲ ಕೊಡಲಿಲ್ಲವಲ್ಲ, ನನಗೆ. ?"

# ನಲವತ್ತನಾಲ್ಕನೆಯ ಅಧ್ಯಾಯ

ಹೊರಗಡೆ ಅಂಧಕಾರದಲ್ಲಿ ಇಷ್ಟು ಹೊತ್ತೂ ಬಾಗಿಲ ಮರೆಯಲ್ಲಿ ಒಂದು ವ್ಯಕ್ತಿ ನಿಂತಿತ್ತು; ಹಾಬಲೂ. ಅವನೇನು ಕಡಿಮೆ ಸಾಹಸದವನಲ್ಲ. ಮಧುಸೂದನನನ್ನು ಕಂಡರೆ ಯಮನಂತೆ ಹೆದರು ತ್ತಿದ್ದ. ಆದರೂ ಮರದ ಬೊಂಬೆಯಂತಾಗಿ ಚಲಿಸದೆ ಅಲ್ಲಿಯೇ ನಿಂತಿದ್ದ. ಅಂದು ಮಧುಸೂದನ ನಿಂದ ಗದರಿಸಲ್ಪಟ್ಟ ಮೇಲಿಂದ ದೊಡ್ಡಮ್ಮನ ಹತ್ತಿರ ಬರುವುದಕ್ಕೆ ಅವಕಾಶ ಒದಗಿರಲಿಲ್ಲ. ಮನಸ್ಸಿನೊಳಗೇ ಚಡಪಡಿಸುತ್ತಿದ್ದ. ಇಂದು ಸಂಜೆಯವೇಳೆ ಬರುವುದಕ್ಕೂ ನಿರಾತಂಕವಾಗಿರ ಲಿಲ್ಲ. ಆದರೂ ಅವನನ್ನು ತಾಯಿ ಹಾಸುಗೆಯಲ್ಲಿ ಮಲಗಿಸಿ ಮನೆ ಕೆಲಸಕ್ಕೆ ಹೋಗಲು ಆ ಸಮಯದಲ್ಲಿ ಏಸರಾಜನ ಧ್ವನಿ ಕಿವಿಗೆ ಬಿತ್ತು. ಯಾರು ಬಾರಿಸುತ್ತಾರೆ, ಏನು ಬಾರಿಸುತ್ತಾರೆ

ಎಂದು ಗೊತ್ತಿಲ್ಲದೆ ಹೋದರೂ ದೊಡ್ಡಮ್ಮನ ಕೋಣೆಯಿಂದ ಧ್ವನಿ ಬರುತ್ತಿದೆಯೆಂದು ಮಾತ್ರ ಗೊತ್ತಾಯಿತು. ದೊಡ್ಡಪ್ಪ ಅಲ್ಲಿ ಇಲ್ಲವೆಂದೇ ಅವನ ಅಭಿಪ್ರಾಯ. ಏಕೆಂದರೆ ಅವರೆದುರಿನಲ್ಲಿ ಯಾರಾದರೂ ವಾದ್ಯ ಬಾರಿಸುವಷ್ಟು ಧೈರ್ಯವಿರುತ್ತದೆಯೇ ಎಂಬ ಸಂಶಯ. ಎರಡನೆಯ ಅಂತಸ್ತಿಗೆ ಹತ್ತಿ ಕೋಣೆಯ ಬಾಗಿಲಿಗೆ ಬಂದವನು ಬಾಗಿಲಲ್ಲಿ ದೊಡ್ಡಪ್ಪನ ಚಡಾವನ್ನು ನೋಡಿ ಓಡಿ ಹೋಗೋಣವೆಂದು ಮನಸ್ಸು ಮಾಡಿದ್ದ. ಆದರೆ ಹೊರಗಿನಿಂದಲೇ ಬಾರಿಸುತ್ತಿದ್ದುದು ದೊಡ್ಡಮ್ಮನೇ ಎಂದು ಕಾಣಬರಲು ಓಡಿ ಹೋಗುವುದಕ್ಕೆ ಕಾಲುಬರಲಿಲ್ಲ. ಬಾಗಿಲ ಮರೆಯಲ್ಲಿಯೇ ನಿಂತು ಕೇಳಲು ತೊಡಗಿದ. ಮೊದಲಿನಲ್ಲಿಯೇ ದೊಡ್ಡಮ್ಮನನ್ನು ಕಂಡು ಆಶ್ಚರ್ಯಪಟ್ಟಿದ್ದ. ಇಂದು ಆದ ವಿಸ್ಮಯಕ್ಕೆ ಪಾರವೇ ಇಲ್ಲ. ಮಧುಸೂದನ ಹೊರಟುಹೋದಮೇಲೆ ಮನಸ್ಸಿನ ಉಚ್ಛ್ವಾಸವನ್ನು ಇನ್ನು ತಡೆದಿಟ್ಟುಕೊಳ್ಳಲಾರದೆ ಕೋಣೆಯನ್ನು ಪ್ರವೇಶಿಸಿ ಕುಮುವಿನ ತೊಡೆಯಮೇಲೆ ಹೋಗಿ ಕೂತು, ಕೊರಳನ್ನಾಲಂಗಿಸಿ ಕಿವಿಯ ಬಳಿ 'ದೊಡ್ಡಮ್ಮಾ' ಎಂದ.

ಕುಮು ಅವನನ್ನು ಎದೆಗವುಚಿಕೊಂಡು "ಇದೇನೋ. ನಿನ್ನ ಕೈಗಳು ಇಷ್ಟು ತಣ್ಣಗಿವೆ. ಶೀತಗಾಳಿ ಬೀಸಿದೆ ಅಂತ ಕಾಣುತ್ತೆ." ಎಂದಳು. ಹಾಬಲೂ ಮಾತಾಡಲಿಲ್ಲ. ಅವನಿಗೆ ಭಯವಾಯಿತು. ಈ ದೊಡ್ಡಮ್ಮ ತನ್ನನ್ನ ಆಗಲೇ ಹಾಸುಗೆಯಲ್ಲಿ ಹೋಗಿ ಮಲಗು ಎಂದು ಕಳುಹಿಸಿ ಬಿಡುತಾಳೇನೋ ಎಂದೆಣಿಸಿದ. ಕುಮು ಶಾಲಿನಿಂದ ಚೆನ್ನಾಗಿ ಹೊದಿಸಿ ಕೂಡಿಸಿಕೊಂಡು ತನ್ನ ಮೈ ಶಾಖದಿಂದಲೇ ಅವನನ್ನು ಬೆಚ್ಚಗೆ ಮಾಡಿ "ಇನ್ನೂ ಮಲಗುವುದಕ್ಕೆ ಹೋಗಲಿಲ್ಲವೇನೋ ಗೋಪಾಲ" ಎಂದಳು.

"ನಾನು ನೀನು ಬಾರಿಸುವುದನ್ನು ಕೇಳುವುದಕ್ಕೆ ಬಂದಿದ್ದೆ. ನಿನಗೆ ಹೇಗೆ ಬಾರಿಸುವುದಕ್ಕೆ ಬರುತ್ತೆ ದೊಡ್ಡಮ್ಮಾ?"

"ನೀನು ಕಲಿತರೆ ನಿನಗೂ ಬರುತ್ತೆ."

"ನನಗೆ ಕಲಿಸಿಕೊಡುತೀಯಾ ?"

ಈ ಸಮಯದಲ್ಲಿ ಮೋತಿಯಮ್ಮನು ಬಿರುಗಾಳಿಯ ರಭಸದಲ್ಲಿ ಕೋಣೆಯೊಳಕ್ಕೆ ಬಂದು "ಈ ಕಳ್ಳನ್ನ ನೋಡು, ಇಲ್ಲಿ ಬಂದು ಅಡಗಿದಾನೆ. ನಾನು ಊರೆಲ್ಲಾ ಹುಡುಕಿಕೊಂಡು ಅಲೆದಾಡಿದೆ. ಅಲ್ಲ, ಸಾಯಂಕಾಲ ಆಯಿತೆಂದರೆ ರೂಮಿನ ಹೊರಗೆ ಕಾಲಿಡುವುದಕ್ಕೆ ಧಿಗಿಲಾಗುತ್ತೆ ಅಂತಾನೆ. ದೊಡ್ಡಮ್ಮನ ರೂಮಿಗೆ ಬರುವುದಕ್ಕೆ ಮಾತ್ರ ಧಿಗಿಲು ಎಲ್ಲಿ ಓಡಿಹೋಗುತ್ತೋ.... ನಡಿ, ಮಲಗು ನಡಿ." ಎಂದಳು.

ಹಾಬಲು ಕುಮುವನ್ನು ಇನ್ನೂ ಗಟ್ಟಿಯಾಗಿ ಅಪ್ಪಿಕೊಂಡು ಕೂತ.

ಕುಮು "ಆಹಾ ಇರಲಿ ಬಿಡಮ್ಮ, ಇನ್ನೂ ಸ್ವಲ್ಪ ಹೊತ್ತು." ಎಂದಳು.

"ಸುಮ್ಮನಿರು ನೀನು, ಹೀಗೇ ಹೆಚ್ಚಿಸಿಬಿಟ್ಟರೆ ಆಮೇಲೆ ನನಗೆ ಬರುತ್ತೆ ಕಷ್ಟ. ಅವನನ್ನ ಮಲಗಿಸಿಬಿಟ್ಟು ನಾನು ಈಗಲೇ ಬರುತ್ತೇನೆ."

ಹಾಬಲೂಗೆ ಏನಾದರೂ ತಿಂಡಿಯೋ ಆಟದ ಸಾಮಾನೋ ಕೊಡಬೇಕೆಂದು ಕುಮುವಿಗೆ ಬಹಳ ಆಸೆಯಾಯಿತು. ಆದರೆ ಕೊಡುವಂತಹ ಪದಾರ್ಥವಾವುದೂ ಅವಳ ಹತ್ತಿರಿರಲಿಲ್ಲ. ಆದ್ದರಿಂದ ಅವನ ಕೆನ್ನೆಗೆ ಮುತ್ತಿಟ್ಟು "ಇವತ್ತು ಹೋಗಿ ಮಲಗಪ್ಪಾ, ನನ್ನ ಚಿನ್ನ, ನಾಳೆ ಮಧ್ಯಾಹ್ನ ನಿನ್ನ ಮುಂದೆ ವಾದ್ಯ ಬಾರಿಸುತ್ತೇನೆ." ಎಂದಳು. ಹಾಬಲೂ ಪೆಚ್ಚು ಮುಖ ಹಾಕಿ

ಕೊಂಡು ಅಮ್ಮನ ಸಂಗಡ ಹೊರಟುಹೋದ.

ಸ್ವಲ್ಪ ಹೊತ್ತಾದ ಮೇಲೆ ಮೋತಿಯಮ್ಮನು ಪುನಃ ಬಂದಳು. ನವೀನನ ತಂತ್ರದಿಂದ ಯಾವ ಫಲವಾಯಿತೋ ತಿಳಿಯಲು ಅವಳು ಉತ್ಸುಕಳಾಗಿದ್ದಳು. ಕುಮುವಿನ ಹತ್ತಿರ ಬಂದು ಕೂತಾಗ ಅವಳ ಕಣ್ಣಿಗೆ ಕುಮುವಿನ ಕೈಮೇಲೆ ಪಚ್ಚೆಯುಂಗುರ ಇರುವುದು ಕಣ್ಣಿಗೆ ಬಿತ್ತು. ಆಗ ತಂತ್ರಫಲಿಸಿದೆ ಎಂದುಕೊಂಡಳು. ಈ ಮಾತನ್ನೇ ಎತ್ತುವ ಉದ್ದೇಶದಿಂದ "ಕುಮು, ನಿನ್ನ ವಾದ್ಯ ಹೇಗೆ ಸಿಕ್ಕಿತು ಪುನಃ ?" ಎಂದಳು.

"ಅಣ್ಣ ಕಳುಹಿಸಿ ಕೊಟ್ಟರು."

"ಯಜಮಾನರು ತಂದು ಕೊಟ್ಟರು ಅಂತ ಕಾಣುತ್ತೆ."

ಕುಮು ಸಂಕ್ಷೇಪವಾಗಿ 'ಹೂ' ಎಂದಳು.

ಮೋತಿಯಮ್ಮನು ಕುಮುವಿನ ಮುಖದ ಕಡೆ ನೋಡಿ ಸಂತೋಷವಾಗಲೀ ಆಶ್ಚರ್ಯವಾಗಲೀ ಅವಳಲ್ಲಿ ತೋರದಿದ್ದುದನ್ನು ಕಂಡು ಬೆರಗಾದಳು.

"ನಿಮ್ಮಣ್ಣನ ವಿಚಾರವೇನಾದರೂ ಹೇಳಿದರೆ ?"

"ಇಲ್ಲ."

"ನಾಳಿದ್ದು ಅವರೇ ಬರುತಾರಲ್ಲ. ನೀನು ಅವರನ್ನು ನೋಡುವುದಕ್ಕೆ ಹೋಗುವ ವಿಷಯವನ್ನು ಎತ್ತಲಿಲ್ಲವೆ ?"

"ಇಲ್ಲ, ಅಣ್ಣನ ವಿಷಯವಾಗಿ ಪ್ರಸ್ತಾಪವೇ ಬರಲಿಲ್ಲ."

"ನೀನೇಕೆ ಕೇಳಲಿಲ್ಲ ?"

"ಅವರ ಹತ್ತಿರ ಬೇರೆ ಏನಾದರೂ ಕೇಳ ಬಲ್ಲೆ. ಆದರೆ ಇದು ಮಾತ್ರ ಆಗೊಲ್ಲ."

"ನೀನು ಕೇಳಲೇ ಬೇಕಾಗಿಲ್ಲ ಬಿಡು. ನೀನು ಹಾಗೆಯೇ ಅಣ್ಣನ್ನ ನೋಡುವುದಕ್ಕೆ ಹೋಗಿಬಿಡು, ಸುಮ್ಮನೆ, ಯಜಮಾನರು ಏನೂ ಅನ್ನುವುದಿಲ್ಲ."

ಮೋತಿಯಮ್ಮನು ಒಂದು ವಿಷಯವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಲು ಸಮರ್ಥಳಾಗಿಲ್ಲ. ಅದು ಮಧುಸೂದನನ ಇತ್ತೀಚಿನ ಅನುಕೂಲತೆಯು ಕುಮುವಿಗೆ ಸಂಕಟವಾಗಿ ಬಿಟ್ಟಿದೆ, ಅದಕ್ಕೆ ಬದಲಾಗಿ ಮಧುಸೂದನನಿಗೇನು ಬೇಕೋ ಅದನ್ನು ಕುಮು ಇಷ್ಟಪಟ್ಟರೂ ಕೊಡಲಾರಳು. ಅವಳ ಹೃದಯವೇ ದಿವಾಳಿಯಾಗಿ ಬಿಟ್ಟಿದೆ. ಇದಕ್ಕೋಸ್ಕರವೇ ಮಧುಸೂದನನಿಂದ ಅನುಗ್ರಹ ಪಡೆದರೆ ಋಣ ಹೆಚ್ಚಾಗುವುದೆಂದೇ ಅವಳಿಗೆ ಇಷ್ಟು ಸಂಕೋಚ. ಅಣ್ಣ ಇನ್ನೂ ಕೆಲವು ದಿನಗಳು ತಡ ಮಾಡಿ ಬಂದರೂ ಒಳ್ಳೆಯದೆಂದು ಕೂಡ ಕುಮುವಿಗೆ ಅನ್ನಿಸುತ್ತಿದೆ.

ಸ್ವಲ್ಪ ಹೊತ್ತು ಅವಳಿಂದ ಉತ್ತರವನ್ನು ಎದುರು ನೋಡಿ ಮೋತಿಯಮ್ಮನು "ಇವತ್ತು ನಿಮ್ಮ ಯಜಮಾನರ ಮನಸ್ಸು ಒಳ್ಳೆ ಖುಷಿಯಾಗಿ ಇದ್ದ ಹಾಗೆ ಕಂಡು ಬಂತು" ಎಂದಳು.

ಸಂಶಯ ವ್ಯಾಕುಲಗಳು ತುಂಬಿದ ಕಣ್ಣುಗಳಿಂದ ನೆಗೆಣ್ಣಿಯ ಮುಖದ ಕಡೆ ನೋಡುತ್ತಾ ಕುಮು "ಈ ಖುಷಿ ಏತಕ್ಕೋ ಸರಿಯಾಗಿ ತಿಳಿಯಲಾರೆ. ಅದಕ್ಕೇ ನನಗೆ ಭಯವಾಗುತ್ತೆ. ಏನು ಮಾಡಬೇಕು ಅನ್ನುವುದೇ ತೋಚುವುದಿಲ್ಲ." ಎಂದಳು.

ಮೋತಿಯಮ್ಮನು ಕುಮುವಿನ ಗಲ್ಲವನ್ನು ಹಿಡಿದು "ನೀನು ಏನೂ ಮಾಡಬೇಕಾಗಿಲ್ಲ, ಸುಮ್ಮನಿರು. ಇಷ್ಟು ಮಾತ್ರ ನಿನಗೆ ಗೊತ್ತಾಗುವುದಿಲ್ಲವೇ ? ಅವರು ಇದುವರೆಗೂ ಬರೀ ವ್ಯಾಪಾರವೇ

ಮಾಡಿಕೊಂಡು ಬಂದಿದ್ದಾರೆ. ನಿನ್ನಂತಹ ಹೆಣ್ಣನ್ನು ಅವರು ಯಾವತ್ತೂ ನೋಡಿಲ್ಲ. ಸ್ವಲ್ಪ ಸ್ವಲ್ಪವಾಗಿ ನಿನ್ನ ಬೆಲೆಯನ್ನು ತಿಳಿದುಕೊಂಡ ಹಾಗೆಲ್ಲ ನಿನ್ನ ಮೇಲಿನ ಗೌರವವೂ ಹೆಚ್ಚಾಗುತ್ತ." ಎಂದಳು.

"ಹೆಚ್ಚು ನೋಡಿದ ಹಾಗೆಲ್ಲಾ ಹೆಚ್ಚು ತಿಳಿದು ಕೊಳ್ಳುವಂತಹ ಬೆಲೆ ಯಾವುದೂ ನನ್ನಲ್ಲಿಲ್ಲ ವಲ್ಲ? ನನ್ನ ಒಳಗಡೆ ಬರೀ ಶೂನ್ಯವೆಂದು ನನಗೇ ಕಾಣುತ್ತೆ. ಆ ಟೊಳ್ಳೇ ಬರ ಬರುತಾ ಚೆನ್ನಾಗಿ ಕಾಣಿಸುತಾ ಇದೆ. ಅದಕ್ಕೋಸ್ಕರವೇ ಅವರು ಖುಷಿಯಾಗಿರುವುದನ್ನ ಹಠಾತ್ತಾಗಿ ನೋಡಿ ದಾಗಲೆಲ್ಲ ಅಯ್ಯೋ, ಮೋಸಹೋಗಿದಾರೆ ಅಂತ ಅನ್ನಿಸುತ್ತೆ. ಹಾಗಂತ ಅವರಿಗೇ ತಿಳಿದು ಬಿಟ್ಟರೆ ತಕ್ಷಣ ಅವರ ಕೋಪ ಹೆಚ್ಚಾಗುತ್ತೆ. ಆದರೆ ಆ ಕೋಪವೇ ಸತ್ಯ ಎಂದುಕೊಂಡರೆ ನನಗೆ ಅದ ರಿಂದೇನು ಅಷ್ಟು ಭಯವಾಗುವುದಿಲ್ಲ."

"ನಿನ್ನ ಬೆಲೆ ನಿನಗೆ ಹೇಗೇ ಗೊತ್ತಾಗಬೇಕು, ಕುಮು? ಯಾವತ್ತಿನ ದಿನ ನೀನು ಈ ಮನೆಗೆ ಬಂದೆಯೋ ಅವತ್ತೇ ನಿನ್ನ ಕಡೆಯಿಂದ ಏನೇನು ಕೊಡಲ್ಪಟ್ಟಿತೋ ಅದನ್ನು ಇವರೆಲ್ಲ ಒಟ್ಟಿಗೆ ಸೇರಿದರೂ ತೀರಿಸಲಾರರು, ಗೊತ್ತೇ? ನಮ್ಮ ಯಜಮಾನರಂತೂ ಪೂರ್ತಿಯಾಗಿ ಸೋಲೊಪ್ಪಿಕೊಂಡು ಬಿಟ್ಟಿದಾರೆ. ನಿನಗೋಸ್ಕರವಾಗಿ ಸಮುದ್ರ ಹಾರದೆ ಹೋದರೆ ಅವರು ನೆಮ್ಮದಿ ಯಾಗಿರುವುದು ಸಾಧ್ಯವಿಲ್ಲ. ನನಗೇ ನಿನ್ನ ಮೇಲೆ ಅಷ್ಟೊಂದು ಇಷ್ಟ ವಿಲ್ಲದೇ ಹೋಗಿದ್ದಿದ್ದರೆ. ಈ ವಿಷಯದಲ್ಲಿ ಅವರನ್ನೇನು ಸುಮ್ಮನೆ ಬಿಡುತಾಯಿರಲಿಲ್ಲ ನಾನು."

ಕುಮು ನಕ್ಕಳು" ಎಂಥ ಅದೃಷ್ಟ, ಇಂತಹ ಮೈದುನನಾದರೂ ಸಿಕ್ಕಿದಾರಲ್ಲ!" ಎಂದಳು.

"ನಿನ್ನ ಓರಗಿತ್ತಿ ವಿಷಯದಲ್ಲಿ ಮಾತ್ರ ನಿನ್ನ ಅದೃಷ್ಟದಲ್ಲಿ ರಾಹು ಇದ್ದಾನೇನೋ, ಅಥವಾ ಕೇತುವೋ?"

"ನಿಮ್ಮಲ್ಲಿ ಒಬ್ಬರ ಹೆಸರು ಹೇಳಿದರೆ ಸಾಕು, ಬೇರೊಬ್ಬರ ಹೆಸರು ಹೇಳ ಬೇಕಾಗಿರು ವುದಿಲ್ಲ."

ಮೋತಿಯಮ್ಮನು ಬಲಗೈಯಿಂದ ಕುಮುವಿನ ಕಂಠವನ್ನಾಲಂಗಿಸಿಕೊಂಡು "ನಿನ್ನ ಹತ್ತಿರ ನನ್ನದೊಂದು ಬೇಡಿಕೆ ಇದೆ" ಎಂದಳು.

"ಏನು ಹೇಳು."

"ನನ್ನನ್ನ ನಿನ್ನ ಮನಸ್ಸಿನ ಸ್ನೇಹಿತಳನ್ನಾಗಿ ಇಟ್ಟುಕೋ."

"ಅಗತ್ಯವಾಗಿ ಆಗಲಮ್ಮ—ಅದಕ್ಕೇನು? ಮೊದಲಿಂದಲೂ ನನ್ನದೂ ನಿನ್ನದೂ ಮನಸ್ಸು ಕಲೆತಿಲ್ಲವೇ?"

"ಹಾಗಾದರೆ ನನ್ನ ಹತ್ತಿರ ಯಾವುದೂ ಮುಚ್ಚಿಡ ಬೇಡ. ಇವತ್ತು ನೀನು ಯಾಕೆ ಹೀ ಮುಖ ಮಾಡಿಕೊಂಡಿದೀಯಾ ಅಂತ ನನಗೆ ಸ್ವಲ್ಪವೂ ಗೊತ್ತಾಗುವುದಿಲ್ಲ."

ಸ್ವಲ್ಪ ಹೊತ್ತು, ಮೋತಿಯಮ್ಮನ ಮುಖದಕಡೆ ನೋಡುತ್ತಿದ್ದು ಕುಮು "ನಿಜವಾದ ಮಾತ ಹೇಳಲೇ? ನನ್ನ ಮೇಲೆಯೇ ನನಗೆ ಭಯವಾಗಿದೆ ಇವತ್ತು." ಎಂದಳು.

"ಏನು ಮಾತು ಆಡುತ್ತಿ? ನಿನ್ನ ಮೇಲೇ ನಿನಗೆಂತಹ ಭಯ?"

"ನಾನು ಇಷ್ಟು ದಿನ ನನ್ನನ್ನ ಏನು ಅಂತ ಮನಸ್ಸಿನಲ್ಲಿ ತಿಳಿದು ಕೊಂಡಿದ್ದೆನೋ ಇವತ್ತ ನೋಡಿದರೆ ಹಾಗಲ್ಲ ಅಂತ ಅನ್ನಿಸಿತು. ಮನಸ್ಸಿನೊಳಗೆ ಎಲ್ಲವನ್ನೂ ಸಿದ್ಧಮಾಡಿಕೊಂ

ನಿಶ್ಚಿಂತಳಾಗಿ ಬಂದಿದ್ದೆ. ಅಣ್ಣನಿಗೇ ಎರಡು ಮನಸ್ಸಾಗಿದ್ದಾಗ ನಾನು ಧೈರ್ಯದಿಂದ ಹೊಸ ದಾರಿಯಲ್ಲಿ ಕಾಲಿಟ್ಟು ಮುಂದೆ ಬಂದೆ. ಆದರೆ ಅವತ್ತು ಅಷ್ಟು ಧೈರ್ಯವಾಗಿ ಭರವಸೆಯಿಟ್ಟು ಕೊಂಡು ಬಂದ ಹೆಂಗಸಲ್ಲ ಇವತ್ತು ನಾನು."

"ನೀನು ಪ್ರೀತಿಸಲಾರೆಯಾ? ಹೋಗಲಿ, ನನ್ನ ಹತ್ತಿರ ಮುಚ್ಚಿಡಬೇಡ. ಸತ್ಯವಾಗಿ ಹೇಳು, ಯಾರನ್ನಾದರೂ ಪ್ರೀತಿಸಿದ್ದೀಯಾ? ಪ್ರೀತಿಸುವುದು ಅಂದರೆ ಏನು, ಅದಾದರೂ ಗೊತ್ತಿದೆಯಾ ನಿನಗೆ?"

"ಗೊತ್ತಿದೆ ಅಂತ ಹೇಳಿದರೆ ನೀನು ನಕ್ಕು ಬಿಡುತ್ತಿ. ಸೂರ್ಯ ಹುಟ್ಟುವುದಕ್ಕೆ ಮುಂಚೆಯೇ ಹೇಗೆ ಬೆಳಕು ಬರುತ್ತದೋ ನನ್ನ ಸಮಸ್ತ ಆಕಾಶದ ತುಂಬ ಪ್ರೀತಿ ಅದೇ ತರಹೆ ಹುಟ್ಟಿ ಕೊಂಡಿತ್ತು. ಸೂರ್ಯ ಹುಟ್ಟಿದಾನೆಂದು ಕೇವಲ ಮನಸ್ಸಿನಲ್ಲಿ ಅನ್ನಿಸಿತ್ತು. ಅದೇ ಸೂರ್ಯೋ ದಯದ ಕಲ್ಪನೆಯನ್ನೇ ಮನಸ್ಸಿನಲ್ಲಿಟ್ಟುಕೊಂಡು ತೀರ್ಥಕ್ಕೆ ನೀರು, ಪೂಜೆಗೆ ಹೂವು, ಎಲ್ಲಾ ಅಣಿ ಮಾಡಿಕೊಂಡು ಹೊರಟು ಬಂದೆ. ಯಾವ ದೇವರನ್ನು ಇಷ್ಟು ದಿನ ಸಂಪೂರ್ಣ ಮನಸ್ಸಿನಿಂದ ಅಂಗೀಕರಿಸಿದ್ದೆನೋ ಆತನ ಅನುಗ್ರಹವನ್ನು ಪಡೆದೆನೆಂದು ಅಂದುಕೊಂಡೆ. ಅಭಿಸಾರಕ್ಕೆ ಹೇಗೆ ಹೊರಡುತ್ತಾರೋ ಹಾಗೆಯೇ ಹೊರಟು ಬಂದೆ. ಅಂಧಕಾರದ ರಾತ್ರಿಯನ್ನು ಅಂಧಕಾರವೆಂದು ಮನಸ್ಸಿನಲ್ಲಿ ಅಂದುಕೊಳ್ಳಲಿಲ್ಲ....ಆದರೆ ಇವತ್ತು....? ಬೆಳಕಿನಲ್ಲಿ ಕಣ್ಣು ತೆಗೆದರೂ ಕೂಡ ಒಳಗೆ ಕಾಣುತ್ತಿರುವುದೇನು? ಹೊರಗೆ ಕಾಣುತ್ತಿರುವುದೇನು?....ಇನ್ನು ವರ್ಷವಾದ ಮೇಲೆ ವರ್ಷ, ಮುಹೂರ್ತವಾದ ಮೇಲೆ ಮುಹೂರ್ತ ಹೇಗೆ ಕಳೆಯಲಿ, ನೀನೇ ಹೇಳು."

"ನೀನು ಹಾಗಾದರೆ ಯಜಮಾನರನ್ನು ಪ್ರೀತಿಸುವುದಕ್ಕೆ ಸಾಧ್ಯವಿಲ್ಲ ಅಂತೀಯೇನು?"

"ಸಾಧ್ಯವಿತ್ತು. ಪ್ರೀತಿಸಬಹುದಾಗಿತ್ತು. ಮನಸ್ಸಿನಲ್ಲಿ ಬೇಕಾದುದೆಲ್ಲವನ್ನೂ ನನಗೆ ರುಚಿಸುವಂತೆ ಮಾಡಿಕೊಳ್ಳಲು ಒಂದು ವಸ್ತುವನ್ನು ತಂದಿದ್ದೆ. ನಿಮ್ಮ ಭಾವಂದಿರು ಅದನ್ನು ಬುಡದಿಂದಲೇ ಕಿತ್ತು ಚೂರುಚೂರಾಗಿ ಮಾಡಿ ಬಿಟ್ಟರು. ಇವತ್ತು ನನಗೆ ಎಲ್ಲ ಪದಾರ್ಥಗಳೂ ಕಹಿಯಾಗಿ ಬಿಟ್ಟಿವೆ, ನನ್ನ ಮೈ ಮೇಲಿನ ಸೂಕ್ಷ್ಮ ಚರ್ಮವನ್ನೇ ಯಾರೋ ಸುಲಿದು ಹಾಕಿ ಬಿಟ್ಟಿರುವ ಹಾಗೆ ಅಗಿದೆ. ಅದಕ್ಕೇ ನಾಲ್ಕು ದಿಕ್ಕೂ ನನಗೆ ಎಲ್ಲೂ ತಗುಲಿ ನೋಯಿಸುತ್ತೆ. ಸುಮ್ಮನೆ ನೋಯಿಸುತ್ತೆ. ಯಾವುದನ್ನ ಮುಟ್ಟಿದರೂ ಬೆಚ್ಚಿ ಬೀಳುವ ಹಾಗಾಗಿದೆ. ಇನ್ನು ಮೇಲೆ, ಕ್ರಮೇಣ ಜಡ್ಡು ಕಟ್ಟಿಹೋದರೆ, ಯಾವತ್ತೋ ಒಂದು ದಿನ, ಆಗ ಸಹಿಸುವುದಕ್ಕೆ ಸಾಧ್ಯವಾಗುತ್ತೆ. .ಆದರೆ ಬದುಕಿನಲ್ಲಿ ಯಾವತ್ತಾದರೂ ಆನಂದವನ್ನ ಪಡೆಯುತ್ತೇನೋ ಇಲ್ಲವೋ?...."

"ಹಾಗೆ ಹೇಳುವುದಕ್ಕಾಗುವುದಿಲ್ಲಮ್ಮಾ!"

"ಚೆನ್ನಾಗಿ ಹೇಳಬಹುದು ಇವತ್ತು. ನನ್ನ ಮನಸ್ಸಿನಲ್ಲಿ ಸ್ವಲ್ಪ ಕೂಡ ಮೋಹವಿಲ್ಲ. ನನ್ನ ಜೀವನವು ಈಗ ಒಂದೇ ಬಾರಿಗೆ ನಿರ್ಲಜ್ಜವಾದಂತೆ ಎಲ್ಲಾ ಬಿಚ್ಚಿಹೋಗಿ ಸ್ಪಷ್ಟವಾಗಿ ಬಿಟ್ಟಿದೆ. ನನ್ನನ್ನೇ ಸ್ವಲ್ಪವಾದರೂ ಮರೆಮಾಡಿಕೊಳ್ಳೋಣವೆಂದರೆ ಮರೆಯಾದ ಜಾಗ ಎಲ್ಲೂ ಒಂದಿಷ್ಟೂ ಉಳಿದಿಲ್ಲ. ಸಾವನ್ನು ಬಿಟ್ಟರೆ ಹೆಂಗಸರಿಗೆ ಏಕಾಂತವಾಗಿ ಒಂದಿಷ್ಟು ಹಾಯಾಗಿರುವುದಕ್ಕೆ ಬೇರೆ ಯಾವ ಸ್ಥಳವೂ ಇಲ್ಲವೆ? ಅವರ ಪ್ರಪಂಚವನ್ನೇಕೆ ಬ್ರಹ್ಮ ಇಷ್ಟು ಇಕ್ಕಟ್ಟಾಗಿರುವಂತೆ ಮಾಡಿದಾನೆ?"

ಇಷ್ಟು ಹೊತ್ತು ಒಂದೇ ಸಮನಾಗಿ ಹೀಗೆ ಆಶಾಹೀನತೆಯ ಮಾತುಗಳನ್ನು ಕುಮುವಿನ

ಬಾಯಿಂದ ಮೋತಿಯಮ್ಮನು ಎಂದೂ ಕೇಳಿರಲಿಲ್ಲ. ಇಷ್ಟು ಪ್ರಯತ್ನಮಾಡಿ ದೊಡ್ಡ ಯಜಮಾನರನ್ನು ಕುಮುವಿನ ಬಗ್ಗೆ ಇಂದು ಪ್ರಸನ್ನರಾಗುವಂತೆ ಮಾಡಿಯೂ ಕೂಡ ಅದೇ ದಿನವೇ ಕುಮುವಿನ ಈ ಅತ್ಯಂತ ಅಧೈರ್ಯಸ್ಥಿತಿಯನ್ನುನೋಡಿ ಮೋತಿಯಮ್ಮನು ಕಂಗೆಟ್ಟಳು ಬಳ್ಳಿಗೆಲ್ಲೋ ಬುಡದಲ್ಲೇ ಭಾರಿ ಪೆಟ್ಟಾಗಿದೆ. ತೋಟಗಾರನು ಮೇಲಿಂದ ಎಷ್ಟು ಅನುಗ್ರಹದ ನೀರು ಸುರಿದರೂ ಅದು ಪುನಃ ಚಿಗುರಲು ಸಾಧ್ಯವಿಲ್ಲ ಎಂದು ತಿಳಿದುಕೊಂಡು ಬಿಟ್ಟಳು.

ಸ್ವಲ್ಪ ಹೊತ್ತಾದಮೇಲೆ ಕುಮು "ಗೊತ್ತು ಗಂಡನಿಗೆ ಶ್ರದ್ಧಾಭಕ್ತಿಗಳಿಂದ ಆತ್ಮ ಸಮರ್ಪಣೆ ಮಾಡಲಾರದಿರುವುದು ಮಹಾಪಾಪ. ಆದರೆ ಭಕ್ತಿಯಿಲ್ಲದೆ ಆತ್ಮಸಮರ್ಪಣೆ ಮಾಡುವುದರ ಗ್ಲಾನಿಯನ್ನು ನೆನೆದರೆ ಈ ಪಾಪದ ವಿಷಯ ನನಗೆ ಅಷ್ಟು ಭಯವಾಗುವುದಿಲ್ಲ." ಎಂದಳು.

ಮೋತಿಯಮ್ಮನು ಯಾವ ಉತ್ತರ ಹೇಳುವುದಕ್ಕೂ ತೋಚದೆ ಹತಬುದ್ಧಿಯವಳಾಗಿ ಸುಮ್ಮನೆ ಕೂತಿದ್ದಳು. ಸ್ವಲ್ಪಹೊತ್ತಾದಮೇಲೆ ಕುಮು ಮತ್ತೆ "ನೀನು ಎಷ್ಟು ಪುಣ್ಯವಂತಳೇ ಅಕ್ಕ, ಎಷ್ಟು ಪುಣ್ಯಮಾಡಿದ್ದೆಯೋ? ನವೀನಣ್ಣನಂತಹವನನ್ನು ಇಷ್ಟು ಮನಃಪೂರ್ವಕವಾಗಿ ಪ್ರೀತಿಸಲು ಪಡೆದಿದ್ದೀಯ. ನಾನು ಮೊದಲು ಅಂದುಕೊಂಡಿದ್ದೆ ಪ್ರೀತಿಸುವುದು ಸಹಜ ಎಂದು. ಎಲ್ಲಾ ಹೆಂಗಸರು ತಮ್ಮ ಯಜಮಾನರನ್ನು ಪ್ರೀತಿಸುತ್ತಾರೆಂದು ತಿಳಿದಿದ್ದೆ. ಆದರೆ ಈಗ, ಪ್ರೀತಿಸಲು ಶಕ್ತರಾಗುವುದು ಕೂಡ ಬಹಳ ಕಷ್ಟ, ಜನ್ಮ ಜನ್ಮಾಂತರಗಳ ಸಾಧನೆಯಿಂದಲೇ ಆ ಶಕ್ತಿ ಬರಬೇಕಾದರೆ, ಎಂದು ತಿಳಿದುಬಂದಿದೆ. ಒಳ್ಳೇದಕ್ಕ - ಸತ್ಯವಾಗಿ ಹೇಳು, ಎಲ್ಲ ಹೆಂಗಸರೂ ತಮ್ಮ ಗಂಡಂದಿರನ್ನು ಪ್ರೀತಿಸುತ್ತಾರೋ?" ಎಂದಳು.

ಮೋತಿಯಮ್ಮ ಸ್ವಲ್ಪ ನಕ್ಕು "ಪ್ರೀತಿಸದೆ ಹೋದರೂ ಕೂಡ ಒಳ್ಳೆಯ ಹೆಂಡತಿಯಾಗಿರಲು ಸಾಧ್ಯ. ಇಲ್ಲವಿದ್ದರೆ ಸಂಸಾರ ನಡೆಯುವುದು ಹೇಗೆ ಹೇಳು." ಎಂದಳು

"ನನಗೂ ಅದೇ ವಿಶ್ವಾಸವುಂಟಾಗುವಂತೆ ಮಾಡು ಮತ್ತೆ. ಬೇರೆ ಏನಿಲ್ಲದಿದ್ದರೂ ಒಳ್ಳೆಯ ಹೆಂಡತಿಯಾಗಿದ್ದರೆ ಸಾಕು, ಅದರಿಂದಲೇ ಪುಣ್ಯ ಹೆಚ್ಚು. ಅದೇ ಕಠಿಣವಾದ ಸಾಧನೆ."

"ಹೊರಗಿನಿಂದ ಅದಕ್ಕೂ ಆತಂಕ ಬರುತ್ತದೆ."

"ಒಳಗಿನಿಂದ ಆ ಆತಂಕವನ್ನು ಕತ್ತರಿಸಿ ಹಾಕಿ ಬಿಡಬಹುದು. ನಾನು ಮಾಡಬಲ್ಲೆ. ನಾನು ಸೋಲೊಪ್ಪಿಕೊಳ್ಳುವುದಿಲ್ಲ."

"ನೀನು ಮಾಡಲಾರದೆ ಹೋದರೆ ಇನ್ನು ಯಾರು ಮಾಡಬಲ್ಲರು?"

ಮಳೆ ಜೋರಾಗಿ ಹೊಡೆಯಿತು. ಗಾಳಿಯಲ್ಲಿ ಲ್ಯಾಂಪಿನ ಜ್ವಾಲೆ ಆಗಾಗ ಕಂಪಿಸಿ ಕಂಪಿಸಿ ಏಳುತ್ತಿತ್ತು. ರಭಸದಿಂದ ಬೀಸುತ್ತಿದ್ದ ಗಾಳಿ, ಮಳೆಯಲ್ಲಿ ನೆನೆದ ನಿಶಾಚರಿಯಾದ ಪಕ್ಷಿಯು ರೆಕ್ಕೆಗಳನ್ನು ಬಡಿಯುತ್ತಾ ಕೋಣೆಯ ಮಧ್ಯೆ ಹಾರಿಕೊಂಡು ಬರುವಂತೆ ಬೀಸಿತು. ಕುಮುವಿನ ಮೈ, ಮನಸ್ಸು ಥರ ಥರ ನಡುಗಿದುವು. ಅವಳು "ನನ್ನ ದೇವರ ನಾಮದಿಂದ ನನಗಿನ್ನು ಶಕ್ತಿ ಬರುವಂತಿಲ್ಲ. ಮಂತ್ರವೇನೋ ಹಾಸುತ್ತೇನೆ. ಮನಸ್ಸು ವಿಮುಖವಾಗಿರುತ್ತದೆ. ಏನು ಮಾಡಿದರೂ ಒಪ್ಪುವುದಿಲ್ಲ. ಅದಕ್ಕೇ ನನಗೆ ಎಲ್ಲಕ್ಕಿಂತಲೂ ಭಯವಾಗಿರುವುದು." ಎಂದಳು.

ಕೃತಕವಾದ ಏನೋ ಒಂದು ಸಮಜಾಯಿಷಿ ಮಾತಾಡಿ ಸುಳ್ಳು ಭರವಸೆ ಕೊಡುವುದಕ್ಕೆ ಮೋತಿಯಮ್ಮನಿಗೆ ಇಷ್ಟವಾಗಲಿಲ್ಲ. ಯಾವ ಮಾತನ್ನೂ ಆಡದೆ ಅವಳು ಕುಮುವನ್ನು ಎದೆಗೆ ಅಪ್ಪಿಕೊಂಡು ಅವಳ ತಲೆಯನ್ನು ತಡವಿದಳು. ಈ ಸಮಯದಲ್ಲಿ ಹೊರಗಡೆಯಿಂದ "ಅತ್ತಿಗೇ!"

ಎಂದು ಯಾರೋ ಕೂಗಿದರು. ಕುಮು ಸಂತೋಷದಿಂದ "ಬಾ....ಬಾ....ನವೀನಣ್ಣಾ!" ಎಂದಳು.

"ಸಾಯಂಕಾಲದ ಹೊತ್ತು ಮನೆಯ ಬೆಳಕನ್ನು ಮನೆಯಲ್ಲಿ ಕಾಣದೆ ಹುಡುಕಿಕೊಂಡು ಅಲೆಯುತ್ತಿದ್ದೇನೆ."

ಮೋತಿಯಮ್ಮನು "ಛೆ ಛೆ, ಪಾಪ, ಮಣಿಯನ್ನು ಕಳೆದ.ಕೊಂಡ ಫಣಿ ಅನ್ನುತ್ತಾರಲ್ಲಾ ಹಾಗೆ ಅಲ್ಲವೇ ?" ಎಂದಳು.

"ಮಣಿ ಯಾರು, ಮತ್ತು ಫಣಿ ಯಾರು ಅನ್ನುವುದನ್ನ ಚಕ್ರನಾಡಿ ನೋಡದೆ ತಿಳಿಯುವುದು ಸಾಧ್ಯವಿಲ್ಲ....ಅಲ್ಲವೇ ಅತ್ತಿಗಮ್ಮನವರೇ ?"

"ನನ್ನನ್ನ ಸಾಕ್ಷಿಯಾಗಿ ಕರೆಯಬೇಡ, ನವೀನಣ್ಣಾ."

"ಗೊತ್ತು, ಹಾಗಾದರೆ ನಾನು ಮೋಸ ಹೋದ ಹಾಗೇ."

"ಅದ್ಯಾಕೆ....ನಿನ್ನ ಕಳೆದು ಹೋದ ಸಂಪತ್ತನ್ನು ವಾಪಸು ತೆಗೆದುಕೊಂಡು ಹೋಗು. ನಾನೇನು ತಡೆಯುವುದಿಲ್ಲ."

"ಆಹಾ....ಕಳೆದುಹೋದ ಸಂಪತ್ತಿಗೋಸ್ಕರ ಅವರಿಗೇನೂ ಅಂತಹ ಕಾತರವಿಲ್ಲಕ್ಕಾ....ಆ ನೆಪ ಮಾಡಿಕೊಂಡು ಅತ್ತಿಗೆಯ ಚರಣದರ್ಶನ ಮಾಡಿಕೊಂಡು ಹೋಗುವುದಕ್ಕೆ ಬಂದಿದಾರೆ."

"ನೆಪಮಾಡಿಕೊಳ್ಳುವುದಕ್ಕೆ ಆವಶ್ಯಕವೇನಾದರೂ ಇದೆಯೇ? ಚರಣ ತನಗೆ ತಾನೇ ಲಭಿಸಿರುವಾಗ? ಎಲ್ಲಕ್ಕಿಂತಲೂ ಅಸಾಧ್ಯವಾದದ್ದನ್ನ ಯಾರಾದರೂ ಸಾಧನೆ ಮಾಡಲು ಹೋಗುತ್ತಾರೆಯೇ, ಅದು ಬರಬೇಕೆಂದಿದ್ದರೆ ತಾನಾಗಿಯೇ ಬರುತ್ತೆ. ಪ್ರಪಂಚದಲ್ಲಿ ಸಾವಿರಾರು ಜನ ಇದಾರ, ನನಗಿಂತಲೂ ಯೋಗ್ಯರಾದವರು...ಆದರೆ ಇಂತಹ ಸುಂದರಚರಣಯುಗಳವನ್ನು ಮುಟ್ಟಲು ನನಗೇ ಲಭಿಸಿದೆ, ಬೇರೆ ಯಾರಿಗೂ ಸಿಕ್ಕಿಲ್ಲ. ನವೀನನ ಜನ್ಮ ಯಾವ ವೆಚ್ಚವೂ ಇಲ್ಲದೆ ಸಾರ್ಥಕವಾಗಿಹೋಯಿತು."

"ಆಹಾ....ಸಾಕು....ಸಾಕು....ನವೀನಣ್ಣ. ಇನ್ನು ಸಾಕು ಕವಿತ್ವ...ನಿನ್ನ ವಿಶ್ವಕೋಶದಿಂದ ಇಷ್ಟ್ಯಾನೂ ಬಹುಶಃ...."

"ಹಾಗೆಲ್ಲಾ ಹೇಳುವುದಕ್ಕಾಗದು. ಅತ್ತಿಗೇ-ಚರಣವೆಂದರೆ ಅರ್ಥವೇನೆನ್ನುವುದು ಅವರಿಗೆ ಹೇಗೆ ಗೊತ್ತಾಗುತ್ತೆ? ಆಡಿನ ಮರಿಯ ಗೊರಸಿನಂತೆ ತೆಳ್ಳನೆಯ ಹಿಮ್ಮಡಿಯಿರುವ ಚಡಾವುಗಳಲ್ಲಿ ಅವರ ಗೃಹಿಣಿಯರ ಪಾದಗಳನ್ನು ಮುಚ್ಚಿ ಜನಾನಾಗಳ ಮಧ್ಯೆ ಅವುಗಳನ್ನು ಬಂಧಿಸಿಟ್ಟಿರುತ್ತಾರೆ. ವಿಶ್ವಕೋಶ ಬರೆಯುವವರಿಗೆ ಪಾದಗಳ ಮಹಿಮೆ ತಿಳಿದುಕೊಳ್ಳುವುದು ಸಾಧ್ಯವೇನು ? ಲಕ್ಷ್ಮಣನು ಹದಿನಾಲ್ಕು ವರುಷಗಳು ಕೇವಲ ಸೀತೆಯ ಪಾದಗಳ ಕಡೆ ನೋಡುತ್ತಲೇ ವನವಾಸವೆಲ್ಲಾ ಕಳೆದುಬಿಟ್ಟ. ಅದರ ಅರ್ಥವನ್ನು ನಮ್ಮ ದೇಶದ ವೈದುಂದಿರು ಮಾತ್ರ ಅರ್ಥಮಾಡಿಕೊಳ್ಳಬಲ್ಲರು. ಆ ಪಾದಗಳ ಮೇಲೆ ಸೀರೆಯ ನಿರಿ ಮುಚ್ಚಿಕೊಂಡಿದ್ದರೇನಾಯಿತು? ಅದಕ್ಕೆ ಹೆದರಬೇಕಾಗಿಯೇ ಇಲ್ಲ. ಕಮಲ ಸಾಯಂಕಾಲದ ಹೊತ್ತು ದಳಗಳನ್ನ ಮುಚ್ಚಿಕೊಂಡಿದ್ದರೂ ಯಾವಾಗಲೂ ಹಾಗಿರುತ್ತದೆಯೇ ? ಮತ್ತೆ ಅದರ ದಳಗಳು ತೆರೆಯುವುದೇ ಇಲ್ಲವೇ ?"

"ಹೀಗೆ ಸ್ತೋತ್ರ ಮಾಡಿ ಮಾಡಿಯೇ ನಿನ್ನನ್ನ ವಶಮಾಡಿಕೊಂಡಿದ್ದಾನೆ ನವೀನಣ್ಣಾ, ಅಲ್ಲವೇನೇ ಅಕ್ಕಾ ?"

"ಎಂದಿಗೂ ಇಲ್ಲ. ನವಿ ಮಾತುಗಳನ್ನು ವೃಥಾ ಖರ್ಚುಮಾಡುವ ಮನುಷ್ಯರೇ

ಅಲ್ಲ ಅವರು."

"ಅಂದರೆ....ಸ್ತೋತ್ರ ಮಾಡುವ ಆವಶ್ಯಕತೆಯೇ ಇಲ್ಲ ಅಂತ ಕಾಣುತ್ತೆ."

"ಅತ್ತಿಗೆ, ಸ್ತೋತ್ರದ ಹಸಿವು ನಮ್ಮ ದೇವಿಯರಿಗೆ ಯಾವುದರಿಂದಲೂ ಹಿಂಗದು. ಬೇಕಾದಷ್ಟು ಆವಶ್ಯಕವಿದೆ. ಆದರೆ ಶಿವನ ಹಾಗೆ ನಾನೇನು ಪಂಚಮುಖನಲ್ಲ. ಈ ಒಂದೇ ಒಂದು ಮುಖದಿಂದ ಸ್ತೋತ್ರ ಪೂರೈಸಿ ಹೋಗಿದೆ. ಇದರಿಂದ ಅವಳಿಗೇನೂ ರಸ ಸಿಕ್ಕುತ್ತಿಲ್ಲ."

ಈ ಸಮಯದಲ್ಲಿ ಮುರಳಿಯು ಬಂದು "ಯಜಮಾನರು ಹೊರಗಡೆಯ ಆಫೀಸು ರೂಮಿನಲ್ಲಿ ಕೂತು ತಮ್ಮನ್ನು ಬರ ಹೇಳಿದರು" ಎಂದು ಹೇಳಿದ.

ಕೇಳಿ ನವೀನನ ಮನಸ್ಸು ಕೆಟ್ಟು ಹೋಯಿತು. ಮಧುಸೂದನ ಇಂದು ಆಫೀಸಿನಿಂದ ಬಂದು ನೆಟ್ಟಗೆ ಮಲಗುವ ಮನೆಗೆ ಹೋಗುವನೆಂದು ಕೊಂಡಿದ್ದ. ನೌಕೆಯು ಪುನಃ ದಡದಲ್ಲಿಯೇ ಹೂತುಕೊಂಡು ಬಿಟ್ಟಿತು.

ನವೀನನು ಹೊರಟು ಹೋದ ಮೇಲೆ ಮೋತಿಯಮ್ಮನು ನಿದಾನವಾಗಿ "ನಿನ್ನ ಯಜಮಾನರು ನಿನ್ನನ್ನ ಪ್ರೀತಿಸುತ್ತಾರೆ. ಅದನ್ನು ಮಾತ್ರ ಮನಸ್ಸಿನಲ್ಲಿಡು." ಎಂದಳು.

ಕುಮು "ಅದೇ ನನಗೆ ಆಶ್ಚರ್ಯ!" ಎಂದಳು.

"ಏನು ಹಾಗಂದರೆ? ನಿನ್ನನ್ನ ಪ್ರೀತಿಸುವುದೇ ಆಶ್ಚರ್ಯವೇ? ಯಾಕೆ? ಅವರೇನು ಕಲ್ಲಿಂದ ಮಾಡಿದವರೇ?"

"ನಾನು ಅವರಿಗೆ ಯೋಗ್ಯಳಲ್ಲ"

"ನೀನು ಯಾರಿಗೆ ಯೋಗ್ಯಳಲ್ಲವೋ ಅಂತಹ ಪುರುಷನೂ ಇರುವನೇ?"

"ಅವರಿಗೆ ಎಷ್ಟು ದೊಡ್ಡ ಶಕ್ತಿ, ಎಷ್ಟು ಗೌರವ, ಎಷ್ಟು ಪಕ್ವವಾದ ಬುದ್ಧಿ. ಅವರು ಎಷ್ಟು ದೊಡ್ಡ ವ್ಯಕ್ತಿ! ನನ್ನಿಂದ ಅವರಿಗೆ ಏನುತಾನೇ ಸಿಕ್ಕುತ್ತೆ? ನಾನೆಂಥ ಅನುಭವವಿಲ್ಲದ ಹಳ್ಳಿಯವಳು ಎನ್ನುವುದನ್ನು ಇಲ್ಲಿಗೆ ಬಂದ ಎರಡು ದಿನಗಳಿಗ್ಗೇ ತಿಳಿದುಕೊಂಡು ಬಿಟ್ಟೆ, ಅದಕ್ಕೋಸ್ಕರವೇ ಅವರು ಪ್ರೀತಿ ತೋರಿಸಿದಾಗ ನನಗೆ ಎಲ್ಲಕ್ಕಿಂತಲೂ ಹೆಚ್ಚು ಹೆದರಿಕೆ. ನಾನು ನನ್ನೊಳಗೆ ಅಂತಹುದೇನೂ ಕಂಡು ಕೊಂಡಿಲ್ಲ. ಇಂತಹ ಶೂನ್ಯತೆಯನ್ನಿಟ್ಟುಕೊಂಡು ನಾನು ಅವರ ಸೇವೆಯನ್ನು ಹೇಗೆ ಮಾಡಲಿ? ನಿನ್ನೆ ರಾತ್ರಿ ಇದ್ದಕ್ಕಿದ್ದ ಹಾಗೆ—ನಾನೊಂದು ಸ್ಟಾಂಪು ಹಚ್ಚದ ಲಕೋಟೆಯಂತೆ; ದುಡ್ಡು ಕೊಟ್ಟು ನನ್ನನ್ನು ತೆಗೆದುಕೊಂಡಾಯಿತು; ಆದರೆ ತೆಗೆದು ನೋಡಿದರೆ ಒಳಗೆ ಕಾಗದವೇ ಇಲ್ಲದ ಹಾಗೆ—ಎನ್ನಿಸಿತು."

"ಕುಮು, ನನಗೆ ನಗುಬರುತ್ತದೆ ಸುಮ್ಮನಿರು. ನಿನ್ನ ಯಜಮಾನರ ವ್ಯಾಪಾರದಲ್ಲಿ ಅವರ ಬುದ್ಧಿಗೆ ಸಮಾನರಾರೂ ಇಲ್ಲವೆಂದು ಎಲ್ಲರಿಗೂ ಗೊತ್ತು. ಆದರೆ ನೀನೇನಾದರೂ ಅವರ ವ್ಯಾಪಾರದ ಮ್ಯಾನೇಜರಾಗಿ ಕೆಲಸ ಮಾಡಲು ಬಂದಿದ್ದೀಯೆಂದು ಕೊಂಡೆಯೇನು, ಯೋಗ್ಯತೆಯಿಲ್ಲವೆಂದು ಹೆದರುವುದಕ್ಕೆ? ಯಜಮಾನರು ತಮ್ಮ ಮನಸ್ಸಿನಲ್ಲಿರುವುದನ್ನೇ ಬಿಚ್ಚಿ ಹೇಳುವುದಾದರೆ ಆಗ ತಾವೂ ಕೂಡ ನಿನಗೆ ತಕ್ಕವರಲ್ಲವೆಂದು ಖಂಡಿತ ಹೇಳುವರು."

"ಆ ಮಾತನ್ನು ಅವರು ನನ್ನ ಹತ್ತಿರ ಹೇಳಿಯೇ ಇದ್ದಾರೆ."

ನೀನು ನಂಬಲಿಲ್ಲವೇ?"

"ಇಲ್ಲ. ಅದಕ್ಕೆ ಬದುಲು ನನಗೆ ಭಯವಾಗಿ ಹೋಯಿತು. ನನ್ನ ವಿಷಯದಲ್ಲಿ ತಪ್ಪು

ತಿಳಿದುಕೊಂಡಿದ್ದರು. ಈಗ ಆ ತಪ್ಪು ಗೊತ್ತಾಗಿ ಹೋಗುತ್ತೇನೋ ಎಂದುಕೊಂಡೆ."

"ಏಕೆ ನಿನ್ನ ಮನಸ್ಸಿನಲ್ಲಿ ಹಾಗಾಯಿತು ಹೇಳು ನೋಡೋಣ."

"ಹೇಳಲೇ ? ಏನೆಂದರೆ, ನನಗೆ ಇದ್ದಕ್ಕಿದ್ದ ಹಾಗೆ ಮದುವೆಯಾಗಿ ಹೋಯಿತು. ಆದರೆ ಇದರಲ್ಲಿ ನಾನೇ ಎಲ್ಲ ನಿಷ್ಕರ್ಷೆಮಾಡಲು ಮುಂದುವರಿದಿದ್ದು; ಆದರೆ ಅದೆಂತಹ ಅದ್ಭುತ ಮೋಹ ದಿಂದ, ಎಷ್ಟು ಹುಡುಗುತನದ ಹುಚ್ಚು ಹುರುಪಿನಿಂದ ಗೊತ್ತೇ ? ಆದರೆ ಅಂದು ನನ್ನನ್ನು ಮೈ ಮರೆಯಿಸಿದ್ದ ಉತ್ಸಾಹದ ಬಹುಭಾಗವೆಲ್ಲಾ ಶೂನ್ಯ. ಆದರೂ ಎಂತಹ ದೃಢ ವಿಶ್ವಾಸ, ಎಂತಹ ಕೆಟ್ಟ ಹಟ: ಅವತ್ತು ಯಾವುದರಿಂದಲೂ ನನ್ನ ಮನಸ್ಸನ್ನು ಬದಲಾಯಿಸುವುದಕ್ಕೆ ಆಗುತ್ತಿರಲಿಲ್ಲ. ಅಣ್ಣನಿಗೆ ಚೆನ್ನಾಗಿ ಗೊತ್ತಿತ್ತಾದುದರಿಂದ ನನಗೆ ವೃಥಾ ಅಡ್ಡಿ ಮಾಡಲಿಲ್ಲ. ಆದರೆ ತನ್ನಲ್ಲಿ ತಾನೇ ಎಷ್ಟು ಹೆದರಿದ್ದನೋ, ಎಷ್ಟು ಉದ್ವಿಗ್ನನಾಗಿದ್ದನೋ, ಅದು ನನಗೆ ಗೊತ್ತಾಗದೆ ಇರಲಿಲ್ಲ. ಗೊತ್ತಾಗಿದ್ದರೇನು, ನನ್ನ ಹುಮ್ಮಸ್ಸನ್ನು ಅಡಗಿಸಿಟ್ಟುಕೊಳ್ಳಲು ಸ್ವಲ್ಪವೂ ಪ್ರಯತ್ನ ಪಡಲಿಲ್ಲ. ಅಷ್ಟು ಮೂರ್ಖಳು ನಾನು. ಇಂದಿನಿಂದ ಕಡೆಯವರೆಗೂ ನಾನು ಕಷ್ಟಪಡಬೇಕು, ಇತರರಿಗೆ ಕಷ್ಟ ಕೊಡಬೇಕು....ಮತ್ತು ಪ್ರತಿನಿತ್ಯ ಮನಸ್ಸಿನಲ್ಲಿ ಇವೆಲ್ಲಾ ನನ್ನ ಸೃಷ್ಟಿಯೇ ಎಂದು ಹೇಳಿ ಕೊಳ್ಳುತ್ತೇನೆ."

ಮೋತಿಯಮ್ಮನು ಯೋಚಿಸಿ ಏನು ಹೇಳಬೇಕೆಂದು ತೋರದೆ ಸುಮ್ಮನಿದ್ದಳು. ಸ್ವಲ್ಪ ಹೊತ್ತಾದ ಮೇಲೆ "ಹೋಗಲಿ, ಕುಮು, ನೀನು ಮದುವೆ ಮಾಡಿಕೊಳ್ಳಬೇಕೆಂದು ನಿರ್ಧರಿಸಿದೆ ಯಲ್ಲಾ, ಏನೆಂದು ಯೋಚಿಸಿ ಹಾಗೆ ನಿರ್ಧರಿಸಿದೆ ?" ಎಂದಳು.

"ಆಗ ಗಂಡನು ಒಳ್ಳೆಯವನಾಗಲೀ, ಕೆಟ್ಟವನಾಗಲೀ, ಹೆಂಡತಿಯ ಸತೀತ್ವ ಗೌರವದ ಪ್ರಮಾಣಕ್ಕೆ ಒಂದು ಉಪಲಕ್ಷ್ಯ ಮಾತ್ರವೆಂದು ದೃಢವಾಗಿ ನಂಬಿದ್ದೆ. ಬ್ರಹ್ಮ ಯಾರನ್ನು ನನ್ನ ಗಂಡನೆಂದು ನಿಷ್ಕರ್ಷೆ ಮಾಡಿದ್ದಾನೋ ಆತನನ್ನೇ ಪ್ರೀತಿಸುತ್ತೇನೆಂಬುದರಲ್ಲಿ ಸಂದೇಹವೇ ಇರ ಲಿಲ್ಲ. ಚಿಕ್ಕ ವಯಸ್ಸಿನಿಂದಲೂ ಕೇವಲ ನಮ್ಮ ತಾಯಿಯನ್ನು ನೋಡಿದ್ದೆ. ಪುರಾಣ ಓದಿದ್ದೆ, ಹರಿಕಥೆ, ಉಪನ್ಯಾಸಗಳನ್ನ ಕೇಳಿದ್ದೆ. ಶಾಸ್ತ್ರದಲ್ಲಿ ಹೇಳಿದ್ದಂತೆಯೇ ಮನಸ್ಸಿಟ್ಟು ನಡೆದು ಕೊಳ್ಳುವುದು ಅಷ್ಟು ಸಹಜವೆಂದು ತಿಳಿದುಕೊಂಡು ಬಿಟ್ಟಿದ್ದೆ."

"ಕುಮು, ಹತ್ತೊಂಬತ್ತು ವರುಷದ ಕುಮಾರಿಗೋಸ್ಕರ ಶಾಸ್ತ್ರ ಬರೆದಿದ್ದರೇ ?"

"ಸಂಸಾರದಲ್ಲಿ ಪ್ರೀತಿಯೆನ್ನುವುದೊಂದು ಮೇಲು ಸಂಪಾದನೆಯಂತೆ ಎಂದು ಈಗ ಅರಿವಾ ಯಿತು. ಅದನ್ನು ಒತ್ತಟ್ಟಿಗಿಟ್ಟು ಧರ್ಮದ ಆಧಾರದ ಮೇಲೆಯೇ ಸಂಸಾರ ಸಾಗರವನ್ನು ಪಾರಾಗ ಬೇಕೆನ್ನುವುದೂ ಗೊತ್ತಾಯಿತು. ಧರ್ಮವು ಒಂದು ಪಕ್ಷ ರಸ ತುಂಬಿ ಹೂ ಬಿಡದಿದ್ದರೂ, ಹಣ್ಣು ಬಿಡದಿದ್ದರೂ, ಸರಿ; ಒಣಗಿದ ಮರವಾಗಿಯೇ ತೇಲಿಸಿಯಾದರೂ ಪಾರುಮಾಡುವುದು."

ಮೋತಿಯಮ್ಮನು ತಾನು ಹೆಚ್ಚಾಗಿ ಏನೂ ಹೇಳದೆ ಕುಮುವಿನ ಮಾತನ್ನು ಮಾತ್ರ ಸುಮ್ಮನೆ ಕೇಳುತ್ತಿದ್ದಳು.

## ನಲವತ್ತೈದನೆಯ ಅಧ್ಯಾಯ

ಮಧುಸೂದನನು ಆಫೀಸಿಗೆ ಹೋಗಿ ಅಲ್ಲಿ ಪರಿಸ್ಥಿತಿ ನೆಟ್ಟಗಿಲ್ಲವೆಂದು ತಿಳಿದ. ಮದರಾಸಿನ

ದೊಡ್ಡ ಬ್ಯಾಂಕೊಂದು ದಿವಾಳಿಯಾಗಿ ಹೋಗಿತ್ತು. ಅದರ ಜೊತೆಯಲ್ಲಿ ಘೋಷಾಲ ಕಂಪೆನಿಯ ಲೇವಾದೇವಿಯಿತ್ತು. ಇದೊಂದೇ ಸಾಲದೆ, ಯಾರೋ ಡೈರೆಕ್ಟರ ಪಕ್ಷವೆಂದು ಒಬ್ಬರಿಬ್ಬರು ಆಫೀಸಿನ ಕೆಲಸಗಾರರು ಮಧುಸೂದನನಿಗೆ ತಿಳಿಯದೆ ಖಾತೆ ಪತ್ರಗಳನ್ನು ತನಿಖೆಮಾಡುತ್ತಿರುವ ರೆಂದು ಅವನ ಕಿವಿಗೆ ಬಿತ್ತು.

ಇದುವರೆಗೆ ಮಧುಸೂದನನ ಮೇಲೆ ಸಂದೇಹ ಪಡುವಂತಹ ಧೈರ್ಯಸ್ಥರಾರೂ ಇರಲಿಲ್ಲ. ಈಗ ಅವನು ಹಿಡಿದಿಟ್ಟುಕೊಂಡಿದ್ದ ಮಂತ್ರಶಕ್ತಿಯೇ ಮಾಯವಾದಂತಾಯಿತು. ದೊಡ್ಡ ದೊಡ್ಡ ಕೆಲಸಗಳಲ್ಲಿ ಸಣ್ಣ ಪುಟ್ಟ ತಪ್ಪುಗಳನ್ನು ಕಂಡು ಹಿಡಿಯುವುದು ಸುಲಭ. ಪ್ರಧಾನ, ದಕ್ಷ ಸೇನಾ ಪತಿಯಾದವನು ಒಳಗೆ ಸಣ್ಣ ತಪ್ಪುಗಳಿಂದ ಎಷ್ಟೇ ಸೋತರೂ ಒಟ್ಟಿನಲ್ಲಿ ದೊಡ್ಡ ಜಯವನ್ನೇ ಪಡೆಯುವನು. ಮಧುಸೂದನನೂ ಮೊದಲಿಂದಲೂ ಹಾಗೆಯೇ ಗೆಲ್ಲುತ್ತಾ ಬಂದಿದ್ದನು; ಆದ್ದ ರಿಂದ ಒಳಗಿನ ಸಣ್ಣ, ಪುಟ್ಟ ತಪ್ಪುಗಳು ಯಾರ ಕಣ್ಣಿಗೂ ಬಿದ್ದಿರಲಿಲ್ಲ. ಆದರೆ ಅದೇ ಕೆಲಸ ವಾಗಿ ಹುಡುಕಿ, ಆರಿಸಿ, ಈ ಸಣ್ಣ ಸೋಲುಗಳ ಪಟ್ಟಿಯನ್ನೇ ತಯಾರು ಮಾಡಿ ಸಾಮಾನ್ಯ ಜನರ ಮುಂದೆ ಹಿಡಿದರೆ ಅವರುಗಳು ಅವನ್ನೇ ದೊಡ್ಡದಾಗಿ ಮಾಡಿ, ತಾವೆಂದೂ ಅಂತಹ ತಪ್ಪುಗಳನ್ನು ಮಾಡುತ್ತಲೇ ಇರಲಿಲ್ಲವೆಂದು ತಮ್ಮ ಬೆನ್ನನ್ನೇ ತಟ್ಟಿಕೊಂಡು ತೃಪ್ತರಾಗುವರು. ಆದರೆ ಈ ವಿಷಯವನ್ನು ಅವರಿಗೆ ಹೇಳುವವರಾರು? ಏನೆಂದರೆ, ಒಡಕು ದೋಣಿಯಿಂದಲೇ ಮಧುಸೂದನನು ಹೊಳೆ ದಾಟಿಸಿರುತ್ತಾನೆ. ಇಲ್ಲದಿದ್ದರೆ ಹೊಳೆ ದಾಟುವುದಕ್ಕೇ ಆಗುತ್ತಿರಲಿಲ್ಲ. ಅಂತೂ ಹೇಗಾದರೂ ಆಗಲಿ, ಹೊಳೆ ದಾಟಿ ದಡ ಸೇರಿಸಿದ್ದಾನಲ್ಲ, ಅದಲ್ಲವೇ ಮುಖ್ಯ?....ಈಗ ದೋಣಿಯನ್ನು ದಿಣ್ಣೆಯ ಮೇಲೆಳೆದು ಅದರ ಬಿರುಕುಗಳನ್ನು ಪರೀಕ್ಷೆಮಾಡುತ್ತಾ, ಯಾವ ಆಪತ್ತೂ ಇಲ್ಲದೆ ಹಾಯಾಗಿ ದಡ ಸೇರಿರುವವರು ಎದೆಯಮೇಲೆ ಕೈಯಿಟ್ಟುಕೊಂಡು "ಅಬ್ಬ!" ಎಂದು ರೋಮಾಂಚ ಹೊಂದುವರು. ಈ ವಿಧವಾಗಿ ಸಣ್ಣ ವಿಚಾರಗಳನ್ನು ವಿಮರ್ಶೆಮಾಡುವುದು ಕ್ಷುದ್ರ ಮನಸ್ಸುಳ್ಳ ವರಿಗೆ ಸಹಜವಾಗಿ ಬರುವ ಉದ್ಯೋಗ. ಇಂತಹ ಜನರಿಗೆ ಬೇಕಾದುದು ಲಾಭ, ಆಲೋಚನೆ ಯಲ್ಲ. ದೈವವಶದಿಂದ ಅಕಸ್ಮಾತ್ ಆಲೋಚನೆ ಮಾಡಿದರೆಂದರೆ ಮಹಾ ಅಪಾಯವನ್ನುಂಟು ಮಾಡುವರು. ಇಂತಹ ಮೂರ್ಖರೆಲ್ಲರ ಮೇಲೂ ಮಧುಸೂದನನಿಗೆ ವಿಪರೀತವಾಗಿ ತಿರಸ್ಕಾ ರವೂ ಕ್ರೋಧವೂ ಉಂಟಾಯಿತು. ಆದರೆ ಮೂರ್ಖರಿಗೇ ಪ್ರಾಧಾನ್ಯವಿರುವ ಕಡೆ ಅವರೊಂದಿಗೆ ಹೇಗೋ ಏಗದೆ ವಿಧಿಯಿಲ್ಲ. ಜೀರ್ಣವಾದ ನಿಚ್ಚಣಿಕೆ ಲಟಪಟ ಶಬ್ದಮಾಡುತ್ತದೆ, ಅಲ್ಲಾಡು ತ್ತದೆ, ಮುರಿದುಹೋಗುವ ಹಾಗೆ ಭಯವುಂಟು ಮಾಡುತ್ತದೆ. ಮೇಲೆ ಹತ್ತಿ ಹೋಗಿರುವ ಮನುಷ್ಯ ಈ ಕಾಲಿನಡಿಯ ಆಧಾರದ ಮೇಲೆಯೇ ಕುದಿಮುಟ್ಟಿ ಬೇಕಾಗಿರುತ್ತದೆ. ಕೋಪದಿಂದ ಒಡೆಯ ಬೇಕೆಂದು ಮನಸ್ಸಾದರೆ ಅದರಿಂದ ಕಷ್ಟ ಇನ್ನೂ ಹೆಚ್ಚುವುದೇ ಹೊರತು ಸಹಾಯ ವೇನೂ ಆಗುವುದಿಲ್ಲ.

ಮರಿಗಳಿಗೆ ಆಪತ್ತು ಬರುವ ಸಂಭವವನ್ನು ನೋಡಿದಾಗ ಸಿಂಹಿಣಿಯು ತನ್ನ ಸ್ವಂತ ಆಹಾರ ದಾಸೆಯನ್ನು ಮರೆತುಹೋಗುವುದು. ತನ್ನ ಉದ್ಯೋಗದ ವಿಷಯದಲ್ಲಿಯೂ ಮಧುಸೂದನನ ಮನ ಸ್ಸಿನ ಅವಸ್ಥೆ ಹಾಗೆಯೇ ಆಗಿತ್ತು. ಈ ಉದ್ಯಮ ಅವನ ಸ್ವಂತ ಸೃಷ್ಟಿ, ಅವನ ಗೈಮೆಯ ಫಲ. ಇದರ ಮೇಲೆ ಅವನಿಗಿರುವ ಅಭಿಮಾನ ಹಣದಾಸೆಯ ಅಭಿಮಾನವಲ್ಲ. ರಚನಾತ್ಮಕ ಶಕ್ತಿಯಿರು ವವರು ತಮ್ಮೊಳಗಿರುವ ಎಲ್ಲ ಸಾಧನಗಳನ್ನೂ ನಿಬಿಡವಾಗಿ ಉಪಯೋಗಿಸಿಕೊಳ್ಳಬಲ್ಲರು.

ಇಂತಹ ಶಕ್ತಿಗೇ ಧಕ್ಕೆ ಬಂದರೆ ಆಗ ತಮ್ಮ ಬದುಕಿನ ಉಳಿದೆಲ್ಲ ಸುಖ ದುಃಖಗಳೂ ಆಸೆ ಭರವಸೆಗಳೂ ಅತಿ ತುಚ್ಛವಾಗಿ ಬಿಡುವುವು. ಕೆಲವು ದಿವಸಗಳಿಂದ ಕುಮು ಮಧುಸೂದನನನ್ನು ಪ್ರಬಲವಾಗಿ ಆಕರ್ಷಿಸಿದ್ದಳು. ಅದು ಈಗ ಆಕಸ್ಮಾತ್ ಸಡಿಲವಾಗಿ ಬಿಟ್ಟಿದೆ. ಜೀವನದಲ್ಲಿ ವ್ಯಾಮೋಹದ ಪ್ರಯೋಜನವನ್ನು ಮಧುಸೂದನನು ಪ್ರೌಢ ವಯಸ್ಸಿನಲ್ಲಿ ಒಫಳ ಬಲವಾಗಿಯೆ ಅನುಭವಿಸಿದ್ದ. ಈ ಬೇನೆ ಅಕಾಲದಲ್ಲಿ ಕಂಡು ಬಂದಾಗ ಬಹಳ ಪ್ರಚಂಡವಾಗಿಯೇ ಹೊಡೆಯುವುದು. ಮಧುಸೂದನನಿಗೆ ಇದರ ಏಟು ಜೋರಾಗಿಯೇ ಬಿದ್ದಿತ್ತು....ಆದರೆ ಇಂದು ಅವನ ವೇದನೆಯಲ್ಲಿ ಹೋಯಿತು?

ನವೀನನು ಕೋಣೆಯೊಳಗೆ ಬಂದೊಡನೆ ಮಧುಸೂದನನು "ನನ್ನ ಖಾಸಗಿ ಜಮಾ ಖರ್ಚಿನ ಲೆಕ್ಕದ ಪುಸ್ತಕಗಳು ಯಾರೋ ಹೊರಗಿನವರ ಕೈಗೆ ಬಿದ್ದಿವೆ, ಗೊತ್ತೇ?" ಎಂದ.

ನವೀನನು ಆಶ್ಚರ್ಯದಿಂದ "ಏನು ಹಾಗೆಂದರೆ?" ಎಂದನು.

"ಖಾತೆ ನೋಡುವ ಗುಮಾಸ್ತೆಯ ಕೋಣೆಯಲ್ಲಿ ಹೊರಗಿನವರು ಯಾರಾದರೂ ಬಂದು ಹೋಗುತ್ತಿದ್ದಾರೆಯೇ ಅನ್ನುವುದನ್ನು ನೀನು ಕಂಡು ಹಿಡಿಯಬೇಕು."

"ನಮ್ಮ ರತೀಕಾಂತನು ನಂಬಿಕಸ್ಥನೇ. ಅಂಥಹವನು ಎಂದಾದರೂ...."

"ಅವನಿಗೆ ತಿಳಿಯದೆ ಗುಮಾಸ್ತೆಯರ ಸಂಗಡ ಯಾರೋ ಮಾತು ಕಥೆ ನಡೆಸಿದ್ದಾರೆ ಎನ್ನುವ ಸಂದೇಹಕ್ಕೆ ಆಸ್ಪದವಿದೆ. ಇದನ್ನು ಬಹಳ ಹುಷಾರಿನಿಂದ ಕಂಡುಹಿಡಿಯಬೇಕು....ಇದರ ಹಿಂದುಗಡೆ ಯಾರಿದ್ದಾರೆ ಅಂತ."

ಚಾಕರನು ಬಂದು ಊಟ ತಣ್ಣಗಾಗುತ್ತಿದೆಯೆಂದು ತಿಳಿಸಿದ. ಮಧುಸೂದನನು ಆ ಮಾತಿಗೆ ಕಿವಿಗೊಡದೆ ನವೀನನನ್ನು ಕುರಿತು "ಬೇಗ ನನ್ನ ಗಾಡಿಯನ್ನು ತಯಾರು ಮಾಡು ಅಂತ ಹೇಳು." ಎಂದ.

ನವೀನನು "ಊಟ ಮಾಡಿ ಹೋಗುವುದಿಲ್ಲವೇ ? ರಾತ್ರಿ ಎಷ್ಟು ಹೊತ್ತಾಗಿ ಹೋಗಿದೆ?" ಎಂದ.

"ಹೊರಗಡೆಯೇ ಊಟ ಮಾಡುತ್ತೇನೆ, ಕೆಲಸವಿದೆ."

ನವೀನ ತಲೆ ತಗ್ಗಿಸಿಕೊಂಡು ಸುಮ್ಮನೆ ಯೋಚನೆ ಮಾಡುತ್ತಾ ಹೊರಗೆ ಬಂದನು. ಅವನು ಹೂಡಿದ್ದ ತಂತ್ರವೆಲ್ಲಾ ವ್ಯರ್ಥವಾಗಿ ಹೋಯಿತೇನೋ ಎಂದುಕೊಂಡ.

ಹಠಾತ್ತಾಗಿ ಮಧುಸೂದನ ನವೀನನನ್ನು ಹಿಂದಕ್ಕೆ ಕರೆದು "ಈ ಕಾಗದವನ್ನು ನಿಮ್ಮತ್ತಿಗೆಗೆ ಕೊಟ್ಟು ಬಿಟ್ಟು ಬಾ" ಎಂದ

ನವೀನ ನೋಡಿದರೆ ಅದು ವಿಪ್ರದಾಸನ ಕಾಗದ. ಈ ಕಾಗದ ಬೆಳಿಗ್ಗೆಯೇ ಬಂದಿದೆಯೆಂದು ತಿಳಿದ. ಸಂಜೆಯವೇಳೆ ಮಧುಸೂದನ ತಾನೇ ಕುಮುವಿನ ಕೈಯಲ್ಲಿ ಅದನ್ನು ಕೊಡಬೇಕೆಂದು ಕೊಂಡಿದ್ದ. ಹೀಗೆ ಪ್ರತಿಯೊಂದು ಸಲ ಭೇಟಿಯಾಗುವಾಗ ಏನಾದರೂ ಒಂದು ಉಪಾಹಾರವನ್ನು ಕೈಯಲ್ಲಿ ತೆಗೆದುಕೊಂಡುಹೋಗಬೇಕೆಂದು ಅವನ ಇಚ್ಛೆ. ಇಂದು ಆಫೀಸಿನ ಕೆಲಸದಲ್ಲಿ ಈ ಸುಂಟರಗಾಳಿ ಹಠಾತ್ತಾಗಿ ಬೀಸಿ ಅವನ ಈ ಉಪಚಾರದ ವ್ಯವಸ್ಥೆ ಹಾಳಾಯಿತು.

ಮದ್ರಾಸಿನಲ್ಲಿ ದಿವಾಳಿಯಾದ ಬ್ಯಾಂಕಿನ ಮೇಲೆ ಸಾಧಾರಣ ಜನರಿಗೆ ನಂಬಿಕೆಯಿತ್ತು. ಅದರೊಡನೆ ಘೋಷಾಲ್ ಕಂಪೆನಿಯವರ ವ್ಯವಹಾರವಿರುವ ವಿಷಯದಲ್ಲಿ ಅಧ್ಯಕ್ಷರಿಗಾಗಲೀ ಭಾಗ

ಸ್ಥರಲ್ಲಾಗಲೀ ಸ್ವಲ್ಪವೂ ಸಂದೇಹವಿರಲಿಲ್ಲ. ಆದರೆ ಯಂತ್ರ ಯಾವಾಗ ಕೆಟ್ಟು ಹೋಯಿತೋ ಆ ಕ್ಷಣ ಅವರಲ್ಲಿ ಅನೇಕರು "ನಾವು ಮೊದಲೇ ಹೀಗಾಗುವುದೆಂದು ಹೆದರಿದ್ದೆವು" ಎಂದು ಹೇಳ ತೊಡಗಿದರು.

ಒದಗಿ ಬಂದಿರುವ ವಿಪತ್ತಿನಿಂದ ಸಂಸ್ಥೆಯನ್ನು ಎಲ್ಲರೂ ಸೇರಿ ಪಾರು ಮಾಡಲು ಪ್ರಯತ್ನ ಮಾಡುವುದು ಆವಶ್ಯಕವಾಗಿದ್ದರೂ ಅದೇ ಸಮಯದಲ್ಲಿ ಪರಾಜಯದ ಸಂಬಂಧವಾಗಿ ದೋಷಾ ರೋಪಣೆ ಪ್ರಬಲವಾಗಿ ಏಳುವುದೂ ಮತ್ತು ಅದರೊಂದಿಗೇ ಯಾರ ಮೇಲೆ ಬೇರೆ ಯಾರಿಗಾದರೂ ಅಸೂಯೆಯಿರುತ್ತದೋ ಅವರನ್ನು ಮಟ್ಟ ಹಾಕುವ ಪ್ರಯತ್ನದಲ್ಲಿ ಸಂಸ್ಥೆಯನ್ನೂ ಹಾಳುಮಾಡಲು ಹಿಂಜರಿಯುವುದಿಲ್ಲ. ಇದೇ ರೀತಿಯ ಪ್ರಯತ್ನ ನಡೆಯಬಹುದೆಂದು ಮಧುಸೂದನ ಹೆದರಿದ. ಮದ್ರಾಸಿನ ಬ್ಯಾಂಕು ದಿವಾಳಿಯಲ್ಲಿ ಘೋಷಾಲ್ ಕಂಪೆನಿಯವರಿಗೆ ಎಷ್ಟು ನಷ್ಟವಾಗಿದೆಯೆಂಬ. ದನ್ನು ಕಂಡುಹಿಡಿಯುವ ಸಮಯವಿನ್ನೂ ಆಗಿಲ್ಲ. ಆದರೆ ಮಧುಸೂದನನ ಮರ್ಯಾದೆಯನ್ನು ನಷ್ಟ ಮಾಡುವ ಪ್ರಯತ್ನದಲ್ಲಿ ಇದೂ ಒಂದು ಸಲಕರಣೆಯಾಗುವುದರಲ್ಲಿ ಸಂದೇಹವಿಲ್ಲ. ಏನಾ ದರೂ ಆಗಲಿ ಸಮಯ ಕೆಟ್ಟಿದೆ, ಈಗ ಬೇರೆ ಎಲ್ಲ ವಿಷಯಗಳನ್ನೂ ಮರೆತು ಇದನ್ನು ಎದುರಿಸು ವುದಕ್ಕೆ ಮಧುಸೂದನ ಟೊಂಕ ಕಟ್ಟಿ ನಿಲ್ಲಬೇಕು.

ರಾತ್ರಿ ಮಧುಸೂದನನ ಜೊತೆಯಲ್ಲಿ ಮಾತು ಕಥೆಯಾದಮೇಲೆ ನವೀನ ಕುಮುವಿನ ಕೋಣೆಗೆ ಬಂದು ನೋಡಿದಾಗ ಕುಮುವೂ ಮೋತಿಯಮ್ಮನೂ ಇನ್ನೂ ಮಾತಿನಲ್ಲಿ ಮುಳುಗಿದ್ದರು. ನವೀನ "ಅತ್ತಿಗೇ, ನಿಮ್ಮಣ್ಣನ ಕಾಗದ ಬಂದಿದೆ" ಎಂದ. ಕುಮು ಬೆಚ್ಚಿ ಎದ್ದು ಕಾಗದವನ್ನು ತೆಗೆದುಕೊಂಡಳು. ತೆಗೆದು ನೋಡುವಾಗ ಕೈಗಳು ನಡುಗಲಾರಂಭಿಸಿದುವು. ಏನಾದರೂ ಅಪ್ರಿಯವಾದ ಸಮಾಚಾರವಿದೆಯೇನೋ ಎಂದು ಹೆದರಿಕೆಯಾಯಿತು. ಹಾಗಿದ್ದರೆ ಈಗ ಅವನು ಬರುವುದೇ ಸಾಧ್ಯವಿಲ್ಲ. ನಿಧಾನವಾಗಿ ಕಳವಳವನ್ನಡಗಿಸಿಕೊಂಡು ಲಕೋಟೆಯನ್ನೊಡೆದು ನೋಡಿ ದಳು. ಓದಿ ಸ್ವಲ್ಪಹೊತ್ತು ಸುಮ್ಮನಿದ್ದುಬಿಟ್ಟಳು. ಅವಳ ಮುಖ ನೋಡಿದರೆ ಅವಳಿಗೆಲ್ಲೋ ವ್ಯಥೆಯಾಗಿದೆಯೆಂದು ತೋರುತ್ತಿತ್ತು. ನವೀನನಿಗೆ "ಅಣ್ಣ ಇವತ್ತು ಮಧ್ಯಾಹ್ನ ಮೂರು ಘಂಟೆಗೆ ಕಲಿಕತ್ತೆಗೆ ಬಂದಿದ್ದಾರೆ." ಎಂದಳು.

"ಇವತ್ತೇ ಬಂದರೇ ? ಅವರಿಗೆ ಹಾಗಿದ್ದರೆ—"

"ಎರಡು ಮೂರು ದಿನಗಳಾದಮೇಲೆ ಬರುವ ಮಾತಿತ್ತು. ಆದರೆ ವಿಶೇಷ ಕಾರಣಕ್ಕಾಗಿ ಮೊದಲೇ ಬರಬೇಕಾಯಿತು ಎಂದು ಬರೆದಿದ್ದಾರೆ."

ಕುಮು ಬೇರೆ ಏನೂ ಹೇಳಲಿಲ್ಲ. ಕಾಗದದ ಕೊನೆಯಲ್ಲಿ, ವಾಸಿಯಾದಮೇಲೆ ವಿಪ್ರದಾಸನೇ ಕುಮುವನ್ನು ನೋಡಲು ಬರುವುದಾಗಿಯೂ ಅದಕ್ಕೋಸ್ಕರ ಕುಮು ಕಳವಳಪಡಕೂಡದೆಂದೂ ಬರೆದಿತ್ತು. ಈ ಮಾತು ಹಿಂದಿನ ಕಾಗದದಲ್ಲೂ ಇತ್ತು. ಯಾಕೆ, ಏನಾಗಿದೆ? ಕುಮು ಯಾವ ಅಪ ರಾಧ ಮಾಡಿದ್ದಾಳೆ? 'ನೀನು ನಮ್ಮ ಮನೆಗೆ ಬರಬೇಡ'ವೆಂದು ಒಂದು ವಿಧವಾಗಿ ಸ್ಪಷ್ಟವಾಗಿ ಹೇಳಿ ದಂತಾಯಿತು. ನೆಲದ ಮೇಲೆ ಬಿದ್ದು ಹೊರಳಾಡಿ ಸ್ವಲ್ಪಹೊತ್ತು ಅತ್ತುಬಿಡೋಣವೆನ್ನಿಸಿತು. ಅಳು ತಡೆದುಕೊಂಡು ಕಲ್ಲಿನಂತೆ ಬಿಗಿಹಿಕೊಂಡು ಕೂತಿದ್ದಳು.

ನವೀನ ಕಾಗದದಲ್ಲಿ ಕಠಿಣವಾದ ಪೆಟ್ಟೇನೋ ಅಡಗಿದೆಯೆಂದು ತಿಳಿದುಕೊಂಡು ಕುಮುವಿನ ಮುಖ ನೋಡಿ ಕರುಣೆಯಿಂದ ಮನಸ್ಸು ಕಲಕಿ "ಅತ್ತಿಗೆ, ನೀವು ಅವರ ಬಳಿಗೆ ನಾಳೆಯೇ

ಹೋಗುವುದೊಳ್ಳೆಯದು" ಎಂದ.

"ಇಲ್ಲ, ನಾನು ಹೋಗುವುದಿಲ್ಲ." ಎಂದು ಯಾವ ರೀತಿ ಹೇಳಿದಳೋ ಹಾಗೆಯೇ ಇರಲು ಸಾಧ್ಯವಾಗದೆ, ಎರಡು ಕೈಗಳಿಂದಲೂ ಮುಖ ಮುಚ್ಚಿಕೊಂಡು ಅಳುವುದಕ್ಕೆ ಆರಂಭಿಸಿದಳು. ಮೋತಿಯಮ್ಮನು ಯಾವ ಪ್ರಯತ್ನವನ್ನೂ ಮಾಡದೆ ಕುಮುವನ್ನು ತನ್ನ ಎದೆಯಮೇಲೆಎಳೆದು ಕೊಂಡು ಬೆನ್ನಮೇಲೆ ಕೈಯಿಂದ ನೇವರಿಸಿದಳು. ಕುಮು ಬಿಗಿದ ಕಂಠದಿಂದ "ಅಣ್ಣ ನನ್ನನ್ನ ಬರ ಬೇಡವೆಂದು ಹೇಳಿದ್ದಾನೆ" ಎಂದಳು.

ನವೀನ "ಇಲ್ಲ, ಅತ್ತಿಗೆ, ಇಲ್ಲ. ನೀನು ಖಂಡಿತವಾಗಿ ತಪ್ಪು ತಿಳಿದುಕೊಂಡಿದ್ದೀಯ." ಎಂದ.

ಕುಮು ಜೋರಾಗಿ ಕತ್ತನ್ನಲ್ಲಾಡಿಸಿ ತಾನೆಂದಿಗೂ ತಪ್ಪು ತಿಳಿದುಕೊಂಡಿಲ್ಲವೆಂದು ತಿಳಿಸಿ ದಳು.

ನವೀನ "ನೀನು ಎಲ್ಲಿ ತಪ್ಪುತಿಳಿದುಕೊಂಡಿದ್ದೀಯೋ ಹೇಳಲೇ? ನಮ್ಮಣ್ಣ ನಿನ್ನನ್ನು ನಿಮ್ಮ ಣ್ಣನ ಮನೆಗೆ ಹೋಗಲು ಬಿಡುವುದಿಲ್ಲ, ನೀನು ಹೋಗಲು ಯತ್ನಿಸಿದರೆ ಆಗ ನಿನ್ನನ್ನು ತಡೆಯು ತ್ತಾರೆ, ಅವಮಾನ ಮಾಡುತ್ತಾರೆ, ಅದರಿಂದ ನಿನಗೆ ಸಂಕಟವಾಗುತ್ತೆ, ನಿನ್ನನ್ನು ಅದರಿಂದ ತಪ್ಪಿಸು ವುದಕ್ಕೋಸ್ಕರ ವಿಪ್ರದಾಸ ಬಾಬುಗಳು ತಾವೇ ಸ್ವತಃ ನಿನ್ನ ದಾರಿಯನ್ನು ಸುಗಮವಾಗಿ ಮಾಡೋಣವೆಂದು ಹೀಗೆ ಬರೆದಿದ್ದಾರೆ ಗೊತ್ತೇ?" ಎಂದ.

ಕುಮು ಈ ಮಾತು ಕೇಳಿ ಒಂದುಕ್ಷಣದಲ್ಲಿ ಗಾಢವಾದ ನೆಮ್ಮದಿಯನ್ನು ತಂದುಕೊಂಡಳು. ತನ್ನ ಒದ್ದೆಯಾದ ಕಣ್ಣುಗಳ ಗುಡ್ಡೆಗಳನ್ನು ನವೀನನ ಮುಖದ ಕಡೆ ತಿರುಗಿಸಿ ಸ್ನಿಗ್ಧ ದೃಷ್ಟಿಯಿಂದ ಸುಮ್ಮನೆ ನೋಡುತ್ತಾ ಇದ್ದಳು. ನವೀನನು ಹೇಳಿದ ಮಾತು ಸಂಪೂರ್ಣವಾಗಿ ನಿಜವೆಂಬುದರಲ್ಲಿ ಸಂದೇಹವಿರಲಿಲ್ಲ. ಅಣ್ಣನ ಪ್ರೀತಿಯನ್ನು ಕ್ಷಣಕಾಲ ಕೂಡ ತಪ್ಪು ತಿಳಿದುಕೊಂಡುಬಿಟ್ಟೆನಲ್ಲಾ ಎಂದು ತನ್ನನ್ನೇ ದೂಷಿಸಿಕೊಂಡಳು. ಮನಸ್ಸಿನಲ್ಲಿ ಒಂದು ಬಗೆಯಾದ ಉತ್ಸಾಹವನ್ನು ಪಡೆದಳು. ಈಗಲೇ ಅಣ್ಣನ ಹತ್ತಿರ ಓಡಿಹೋಗದೆ ಅಣ್ಣನೇ ಇಲ್ಲಿಗೆ ಬರುವುದನ್ನು ನಿರೀಕ್ಷೆಮಾಡುತ್ತೇನೆ. ಅದೇ ಒಳ್ಳೆಯದು - ಎಂದುಕೊಂಡಳು.

ಮೋತಿಯಮ್ಮನು ಅವಳ ಗಲ್ಲವನ್ನು ಹಿಡಿದು ಕುಮುವಿನ ಮುಖವನ್ನೆತ್ತಿಹಿಡಿದು "ಆಹಾ.... ಚೆನ್ನಾಯಿತು ಬಿಡು, ಅಣ್ಣನ ಮಾತಿನಲ್ಲಿ ಸ್ವಲ್ಪ ಅಡ್ಡಗಾಳಿ ಬೀಸಿದ ತಕ್ಷಣ ಒಂದೇ ಏಟಿಗೆ ನಿನ್ನ ಅಭಿಮಾನದ ಸಮುದ್ರ ಉಕ್ಕಿ ಬಿಟ್ಟಿತಲ್ಲಾ ಏನು ಹೇಳೋಣ?" ಎಂದಳು.

ನವೀನ "ಅತ್ತಿಗೆ ನಾಳೆ ಹಾಗಾದರೆ ನೀನು ಹೋಗುವ ಏರ್ಪಾಡನ್ನ ಮಾಡಲೇ?" ಎಂದ.

"ಬೇಡ, ಆವಶ್ಯಕವಿಲ್ಲ."

"ಆವಶ್ಯಕವಿಲ್ಲದೆ ಏನು? ನಿನಗೆ ಆವಶ್ಯಕವಿಲ್ಲದಿದ್ದರೂ ನನಗೆ ಆವಶ್ಯಕವಿಲ್ಲದೆ ಇರು ತ್ತದೆಯೇ?"

"ನಿನಗೆಂತಹ ಆವಶ್ಯಕ?"

"ಭೇಷ್, ನಮ್ಮಣ್ಣನ ವಿಷಯದಲ್ಲಿ ನಿಮ್ಮಣ್ಣ ಏನು ನಿರ್ಣಯ ಮಾಡಿದರೂ ನಾನು ಅದನ್ನ ಸ್ವೀರಿಸಿಕೊಂಡೇ ಇರಬೇಕೇನು? ನಮ್ಮಣ್ಣನ ಪಕ್ಷವಾಗಿ ನಾನೇ ಹೋರಾಡುತ್ತೇನೆ, ನಿನ್ನ ಹತ್ತಿರ ಸೋಲೊಪ್ಪಿಕೊಳ್ಳಲಾರೆ, ನಾಳೆ ನೀನು ನಿಮ್ಮಣ್ಣನ ಮನೆಗೆ ಹೋಗಲೇಬೇಕು."

ಕುಮು ನಗಲಾರಂಭಿಸಿದಳು.

"ಅತ್ತಿಗೆ, ಇದು ಹಾಸ್ಯದ ಮಾತಲ್ಲ, ನಮ್ಮ ಮನೆಯ ಅಪವಾದದಿಂದ ನಿನಗೆ ಅಗೌರವ ಈಗ ಹೋಗಿ ಕಣ್ಣು, ಮುಖ ತೊಳೆದುಕೊಂಡು ಬಾ. ಊಟಕ್ಕೆ ಹೋಗೋಣ. ಮ್ಯಾನೇಜರ್ ಸಾಹೇಬರ ಮನೆಯಲ್ಲಿ ಅಣ್ಣನಿಗೆ ಇವತ್ತು ಔತಣ. ಅವರು ಇವತ್ತು ಒಳಗಡೆ ಮಲಗುವುದಕ್ಕೆ ಕೂಡ ಬರುವುದಿಲ್ಲ ಅಂತ ನನ್ನ ಊಹೆ. ಹೊರಗಡೆಯ ರೂಮಿನಲ್ಲಿ ಅವರ ಹಾಸಿಗೆ ತಯಾ ರಾಗಿರುವುದನ್ನು ನೋಡಿದೆ."

ಈ ಸುದ್ದಿಯನ್ನು ಕೇಳಿ ಕುಮು ಮನಸ್ಸಿನಲ್ಲಿಯೇ ನೆಮ್ಮದಿ ಹೊಂದಿದಳು. ಆ ಕೂಡಲ ಇಷ್ಟು ನೆಮ್ಮದಿ ಹೊಂದಿದೆನಲ್ಲಾ ಎಂದು ನಾಚುಗೆಯೂ ಆಯಿತು.

ರಾತ್ರಿ ಮಲಗುವ ಮನೆಯಲ್ಲಿ ಮೋತಿಯಮ್ಮನ ಸಂಗಡ ನವೀನ ಇದೇ ಮಾತನ್ನೇ ಪ್ರಸ್ತಾಪ ಮಾಡಿದ. ಮೋತಿಯಮ್ಮನು "ನೀವೇನೋ ಕುಮುವಿಗೆ ಈ ಸಲಹೆ ಕೊಟ್ಟು ಬಿಟ್ಟಿರಲ್ಲ. ಆ ಮೇಲೇನು?" ಎಂದಳು.

"ಆ ಮೇಲೆ ಬೇರೆ ಏನಿದೆ? ನವೀನನ ಮಾತು ಹೇಗೆಯೋ ಕೆಲಸವೂ ಹಾಗೆಯೇ. ಅತ್ತಿಗೆ ಹೋಗಲೇ ಬೇಕು. ಅದರ ಮೇಲೆ ಏನಾಗುತ್ತದೋ ಆಗಲಿ."

ಹೊಸದಾಗಿ ತಯಾರಾದ ರಾಜರುಗಳಿಗೆ ಕುಟುಂಬ ಮರ್ಯಾದೆಯ ಚಿಂತೆ ಬಹಳ ಉಗ್ರ. ತಮ್ಮ ಮನೆಗೆ ವಿವಾಹವಾಗಿ ಬಂದ ಹೊಸ ಸೊಸೆ ತನ್ನ ಹಿಂದಿನ ಅಂತಸ್ತಿಗಿಂತ ಎಷ್ಟೋ ಮೇಲೆ ಏರಿರುತ್ತಾಳೆಂದು ಅವರುಗಳ ಭಾವನೆ. ಆದ ಕಾರಣ ಆ ಸೊಸೆಯರಿಗೊಂದು ತೌರು ಮನೆಯೆನ್ನು ವುದು ಇದೆಯನ್ನುವ ವಿಷಯವನ್ನೇ ಮರೆತು ಬಿಡುವುದೂ ಸಂಭವ. ಇಂತಹ ಅವಸ್ಥೆಯಲ್ಲಿ ಎರಡು ಕಡೆಗಳನ್ನೂ ಕಾಪಾಡುವುದು ಅಸಾಧ್ಯವಾದಾಗ ಒಂದು ಪಕ್ಷವನ್ನಾದರೂ ರಕ್ಷಿಸಬೇಕು. ಆ ಪಕ್ಷವ ಯಾವುದು ಎಂಬುದನ್ನು ನವೀನ ಮನಸ್ಸಿನಲ್ಲಿಯೇ ನಿರ್ಧರಿಸಿಕೊಂಡು ಬಿಟ್ಟಿದ್ದ. ಎಲ್ಲಿ ಅಣ್ಣನ ಅಧಿಕಾರವು ಬಲವಾಗಿತ್ತೋ ಅಲ್ಲಿಯೇ ಎಂದಾದರೂ ಒಂದು ದಿನ ಅಣ್ಣನ ಸಂಗಡ ಹೋರಾಡುವ ಸಾಹಸವುಂಟಾಗುತ್ತದೆಂದು ನವೀನನು ಕೆಲವು ದಿನಗಳ ಮುಂಚೆ ಕನಸಿನಲ್ಲಿಯೂ ಎಣಿಸಿರಲಿಲ್ಲ.

ಗಂಡ ಹೆಂಡಿರಿಬ್ಬರೂ ಪರ್ಯಾಲೋಚಿಸಿ ಮರುದಿನ ಬೆಳಿಗ್ಗೆಯೇ ಕುಮು ಒಂದು ಸಲ ಮಾತ್ರ ವಿಪ್ರದಾಸನನ್ನು ಸ್ವಲ್ಪ ಹೊತ್ತಾದರೂ ನೋಡಿ ಮಾತಾಡಿಕೊಂಡು ಬರಲಿ ಎಂದು ಮಧು ಸೂದನನಿಗೆ ಹೇಳುವುದೆಂದೂ, ಆತನು ಒಪ್ಪಿ ಕುಮುವನ್ನು ಅಲ್ಲಿಗೆ ಕಳುಹಿಸಿಕೊಟ್ಟರೆ ಆ ಮೇಲೆ ಕುಮು ಅಲ್ಲಿಂದ ನಾಲ್ಕೈದು ದಿನಗಳವರೆಗಾದರೂ ವಾಪಸ್ಸು ಬರದೆ ಇರುವುದಕ್ಕೆ ಸಾಕಷ್ಟು ಕಾರಣ ವನ್ನು ಹೇಗಾದರೂ ಮಾಡಿ ಕಲ್ಪಿಸಬೇಕೆಂದೂ ತೀರ್ಮಾನ ಮಾಡಿದರು.

ಮಧುಸೂದನ ರಾತ್ರಿ ಬಹಳ ಹೊತ್ತಾದ ಮೇಲೆ ಮನೆಗೆ ಬಂದ. ಜೊತೆಯಲ್ಲಿ ಕಾಗದ ಪತ್ರಗಳ ಒಂದು ಹೊರೆಯೇ ಬಂದಿತ್ತು. ನವೀನನು ನೋಡಿದಾಗ ಮಧುಸೂದನ ಮಲಗಲು ಹೋಗದೆ ಕಣ್ಣಿಗೆ ಕನ್ನಡಕ ತಗುಲಿಸಿಕೊಂಡು ನೀಲಿ ಬಣ್ಣದ ಪೆನ್ಸಿಲನ್ನು ಹಿಡಿದು ಆಫೀಸ ರೂಮಿನ ಡೆಸ್ಕಿನ ಪಕ್ಕದಲ್ಲಿ ಕೂತು ಯಾವುದೋ ಪತ್ರದ ಮೇಲೆ ಗುರುತು ಮಾಡುತ್ತಿದ್ದ ನೋಟ್ ಪುಸ್ತಕವೊಂದರಲ್ಲಿ ಏನೋ ಆಗಾಗ ಬರೆದು ಕೊಳ್ಳುತ್ತಿದ್ದ. ನವೀನನು ಧೈರ್ಯ ವಹಿಸಿ ಕೋಣೆಯೊಳಕ್ಕೆ ಬಂದು "ಅಣ್ಣ, ನಾನೇನಾದರೂ ನಿನಗೆ ಕೆಲಸ ಮಾಡಿಕೊಡಲೇ?" ಎಂದ. ಮಧುಸೂದನ ಸಂಕ್ಷೇಪವಾಗಿ "ಬೇಡ" ಎಂದ....ತನ್ನ ಉದ್ಯಮಕ್ಕೆ ಈಗ ಬಂದಿರು

ಂಪತ್ತಿನ ಪರಿಸ್ಥಿತಿಯನ್ನು ತಾನೇ ಎಷ್ಟಾದರೂ ಹೊರಲು ಹಿಂಜರಿಯುತ್ತಿರಲಿಲ್ಲ. ಎಲ್ಲ ತನ್ನ ಕಣ್ಣ ಮುಂದೆಯೇ ಪ್ರತ್ಯಕ್ಷವಾಗುವುದು ಆವಶ್ಯಕ, ಈ ಕೆಲಸದಲ್ಲಿ ಮತ್ತೊಬ್ಬರ ಸಹಾಯವನ್ನ ಪೇಕ್ಷಿಸುವುದು ದುರ್ಬಲತೆಯ ಲಕ್ಷಣ, ಎಂದು ಕೊಂಡಿದ್ದ.

ನವೀನ ಯಾವ ಮಾತನಾಡುವುದಕ್ಕೂ ನೆಪ ಸಿಕ್ಕದೆ ಹೊರಗೆ ಹೋದ. ಶೀಘ್ರದಲ್ಲಿಯೇ ಅಂತಹ ಸುಯೋಗ ಸಿಕ್ಕುವುದೆಂಬುದಕ್ಕೆ ಯಾವ ಸೂಚನೆಯೂ ಕಂಡುಬರಲಿಲ್ಲ. ಅತ್ತಿಗೆಯನ್ನು ಹೇಗಾದರೂ ಮಾಡಿ ನಾಳೆ ಬೆಳಿಗ್ಗೆ ಕಳುಹಿಸಲೇ ಬೇಕು. ಇವತ್ತು ರಾತ್ರಿಯೇ ಅದಕ್ಕೆ ಅಣ್ಣನ ಒಪ್ಪಿಗೆಯನ್ನು ಪಡೆಯಬೇಕೆಂದು ನವೀನ ಹಠ ತೊಟ್ಟಿದ್ದ.

ಸ್ವಲ್ಪಹೊತ್ತು ಆದಮೇಲೆ ನವೀನ ಒಂದು ಲಾಂದ್ರವನ್ನು ಕೈಯಲ್ಲಿ ಹಿಡಿದುಕೊಂಡು ಅಣ್ಣನ ಡೆಸ್ಕಿನ ಮೇಲೆ ಇಟ್ಟು "ನಿನಗೆ ಬೆಳಕು ಸಾಲದಣ್ಣ" ಎಂದ.

ಮಧುಸೂದನ ಈ ಎರಡನೆಯ ಲ್ಯಾಂಪಿನಿಂದ ತನಗೆ ಸಾಕಷ್ಟು ಬೆಳಕಾಯಿತೆಂದು ಅಂದು ಕೊಂಡ. ಎಷ್ಟೋ ಅನುಕೂಲವಾಗಿತ್ತು, ಆದರೆ ಈ ನೆಪದಿಂದಲೂ ಯಾವ ಮಾತನ್ನೂ ಆಡು ವುದಕ್ಕೆ ಅವಕಾಶವಾಗಲಿಲ್ಲ. ಮತ್ತೆ ನವೀನ ಹೊರಗೆ ಬರಬೇಕಾಯಿತು.

ಸ್ವಲ್ಪ ಹೊತ್ತಾದ ಮೇಲೆ ಮಧುಸೂದನನು ವಾಡಿಕೆಯಾಗಿ ಸೇವಿಸುತ್ತಿದ್ದ ಗುಡುಗುಡಿಯಲ್ಲಿ ಹೊಗೇಸೊಪ್ಪು ಹಾಕಿ ಸಜ್ಜು ಮಾಡಿ ಅವನ ಕುರ್ಚಿಯ ಎಡಪಾರ್ಶ್ವದಲ್ಲಿ ಇಟ್ಟು ಅದರ ಕೊಳವೆ ಯನ್ನು ಡೆಸ್ಕಿನ ಮೇಲೆ ಮೆಲ್ಲಗೆ ಎತ್ತಿಟ್ಟ. ಇದೂ ತನಗೆ ಆವಶ್ಯಕವಿತ್ತೆಂದು ಮಧುಸೂದನ ಅಂದುಕೊಂಡ. ಕ್ಷಣಕಾಲ ಪೆನ್ಸಿಲನ್ನು ಮೇಜಿನಮೇಲಿಟ್ಟು ಹೊಗೆಯುಳಿಯುತ್ತಾ ಕೂತ.

ಇದೇ ಅವಕಾಶ ಮಾಡಿಕೊಂಡು ನವೀನನು ಮಾತಿಗಾರಂಭಿಸಿದ. "ಅಣ್ಣ, ಮಲಗುವು ದಕ್ಕೆ ಹೋಗುವುದಿಲ್ಲ? ರಾತ್ರಿ ಬಹಳ ಹೊತ್ತಾಗಿ ಹೋಗಿದೆ. ಅತ್ತಿಗೆ ಬಹುಶಃ ನಿನಗೋಸ್ಕರ ಕಾದುಕೊಂಡು ಕೂತಿದಾಳೆ ಅಂತ ಕಾಣುತ್ತೆ" ಎಂದ.

"ಕಾದುಕೊಂಡು ಕೂತಿವಾಳೆ" ಎಂಬ ಮಾತು ಒಂದು ಮುಹೂರ್ತದಲ್ಲಿ ಮಧುಸೂದನನ ಅಂತರಾಳಕ್ಕೆ ಹೋಗಿ ಮುಟ್ಟಿತು. ಅಲೆಗಳ ಮೇಲೆ ತೇಲುತ್ತಾ ಜಹಜು ಆಕಡೆ ಈಕಡೆ ವಾಲಾ ಡುತ್ತಾ ಮುಂದೆ ಹೋಗುತ್ತಿರುವಾಗ ದಡದ ಕಡೆಯಿಂದ ಸಣ್ಣದೊಂದು ಹಕ್ಕಿ ಹಾರಿಬಂದು ಧ್ವಜ ಸ್ತಂಭದ ಮೇಲೆ ಕೂತಂತಾಯಿತು. ಕ್ಷುಬ್ಧ ಸಮುದ್ರದ ಮಧ್ಯೆ ಕ್ಷಣ ಕಾಲ ಮಾತ್ರ ಹಸಿರು ತುಂಬಿದ ದ್ವೀಪದ ನಿಬಿಡವಾದ ವನ ಛಾಯೆಯ ಚಿತ್ರವೊಂದು ಮನಸ್ಸಿನಲ್ಲಿ ಸುಳಿದುಹೋಯಿತು. ಆದರೆ ಆ ವಿಷಯಕ್ಕೆ ಮನಸ್ಸು ತಿರುಗಿಸಲು ಈಗ ಸಮಯವಲ್ಲ, ಜಹಜನ್ನು ಮುಂದಕ್ಕೆ ನಡೆಸ ಬೇಕಾಗಿದೆ.

ಮಧುಸೂದನ ತನ್ನ ಮನಸ್ಸಿನ ಈ ಅಲ್ಪ ಚಂಚಲತೆಯನ್ನು ಕಂಡು ಹೆದರಿದ. ಕೂಡಲೇ ಅದನ್ನು ತುಳಿದುಕೊಂಡು "ನಿಮ್ಮತ್ತಿಗೆಗೆ ಮಲಗುವಂತೆ ಹೇಳು ಹೋಗು. ನಾನಿವತ್ತು ಹೊರ ಗಡೆಯೇ ಮಲಗುತ್ತೇನೆ." ಎಂದ.

"ಬೇಕಾದರೆ ಅವರನ್ನೇ ಇಲ್ಲಿಗೆ ಕಳುಹಿಸಲೇ?" ಎಂದು ಹೇಳಿ ನವೀನ ಗುಡುಗುಡಿಯ ಬೆಂಕಿಯನ್ನು 'ಉಫ್' ಎಂದು ಊದಲು ತೊಡಗಿದ, ಮಧುಸೂದನ ಹಠಾತ್ತಾಗಿ ಮೈಯೊದರಿ ಎದ್ದು "ಛೇ, ಬೇಡ, ಬೇಡ" ಎಂದ.

ನವೀನ ಅದರಿಂದಲೇ ಸುಮ್ಮನಾಗದೆ "ಆಕೆ ನಿನ್ನ ಜೊತೆಯಲ್ಲಿ ಏನೋ ಪ್ರಸ್ತಾಪ ಮಾಡ

ಬೇಕೆಂದು ಕಾದಿದ್ದಾರೆ" ಎಂದ.

ಮಧುಸೂದನ ಗದರಿಕೆಯ ಧ್ವನಿಯಲ್ಲಿ "ಪ್ರಸ್ತಾಪ ಮಾಡುವುದಕ್ಕೆ ಇದೇ ಸಮಯವೇನು?" ಎಂದ.

"ನಿನಗೆ ಸಮಯವಲ್ಲದಿರಬಹುದು ಅಣ್ಣ. ಆಕೆಗೆ ಬೇರೆ ಸಮಯವೆಲ್ಲಿರುತ್ತೆ?"

"ಏಕೆ, ಏನಾಗಿದೆ?"

"ವಿಪ್ರದಾಸ ಬಾಬುಗಳು ಇಂದು ಕಲಿಕತ್ತೆಗೆ ಬಂದಿದಾರೆಂದು ಸಮಾಚಾರ ಬಂದಿದೆ. ಅದಕ್ಕೆ ಅತ್ತಿಗೆ ನಾಳೆ ಬೆಳಿಗ್ಗೆ...."

"ಬೆಳಿಗ್ಗೆಯೇ ಹೋಗಬೇಕೆಂದು ಇದ್ದಾಳೋ?"

"ಬಹಳ ಹೊತ್ತೇನಲ್ಲ. ಏನೋ ಒಂದುಸಲ ಹಾಗೇ ಹೋಗಿ ನೋಡಿಕೊಂಡು...."

ಮಧುಸೂದನನು ಕೈಯನ್ನು ಜೋರಾಗಿ ಒದರಿ "ಹಾಗಾದರೆ ಹೋಗಲೇಳು....ಹೋಗಲಿ... ಸಾಕಿನ್ನು... ನೀನು ಹೋಗಿನ್ನು" ಎಂದ.

ಕುಮುದಿಗಾಗಿ ಈ ಲಾಭ ಪಡೆದು ನವೀನ ಒಂದೇ ದೌಡಿಗೆ ಓಡಿದ. ಹೊರಗೆ ಬಂದೊಡನೆ ಮಧುಸೂದನ ಕೂಗಿದುದು ಕೇಳಿಸಿತು—"ನವೀನ!" ಅಣ್ಣ ಪುನಃ ತನ್ನ ಒಪ್ಪಿಗೆಯನ್ನು ವಾಪಸ್ಸು ತೆಗೆದುಕೊಳ್ಳುವನೇನೋ ಎಂದು ಭಯವಾಯಿತು. ಕೋಣೆಯೊಳಗೆ ಬಂದು ನಿಂತೊಡನೆ ಮಧುಸೂದನನು "ನಿಮ್ಮತ್ತಿಗೆ ಈಗ ಕೆಲವುದಿನಗಳು ಅವರಣ್ಣನ ಮನೆಗೆ ಹೋಗಿ ಇರುತ್ತಾಳೆ. ನೀನು ಅದಕ್ಕೆಲ್ಲಾ ಏನು ಬೇಕೋ ಏರ್ಪಾಡು ಮಾಡಿಬಿಡು" ಎಂದ. ಅಣ್ಣನ ಈ ಮಾತು ಕೇಳಿ ತನ್ನಲ್ಲಿ ಆದ ಸಂತೋಷದ ಚಿಹ್ನೆಯೇನಾದರೂ ಮುಖದಲ್ಲಿ ಕಂಡುಬಂದಿತೇನೋ ಎಂದು ನವೀನನು ಭಯಪಟ್ಟ. ಏನೋ ಒಂದು ಅನಾನುಕೂಲವಾದ ಸುದ್ದಿ ಕೇಳಿದಂತೆ ಮುಖಭಂಗಿ ಮಾಡಿಕೊಂಡು ತಲೆ ಕೆರೆದುಕೊಳ್ಳುತ್ತಾ "ಅತ್ತಿಗೆ ಅಷ್ಟುದಿನ ಹೊರಟುಹೋದರೆ ಮನೆಯೆಲ್ಲಾ ಬೆಕೋ ಅನ್ನಿಸುತ್ತೆ ಅಣ್ಣ!" ಎಂದ.

ಮಧುಸೂದನ ಅದಕ್ಕೆ ಉತ್ತರವೇನೂ ಕೊಡದೆ ಗುಡುಗುಡಿಯ ಕೊಳವೆಯನ್ನು ಕೆಳಗಿಟ್ಟು ತನ್ನ ಕೆಲಸದಲ್ಲಿ ತೊಡಗಿದ. ಮನಸ್ಸನ್ನು ಮೋಹಗೊಳಿಸುವುದಕ್ಕೆ ದಾರಿಯಿನ್ನೂ ತೆರೆದಿದೆ ಎಂದು ತಿಳಿದು,—ಆದರೆ ಈಗ ಬೇಡ. ಕೂಡದು, ಎಂದುಕೊಂಡ.

ನವೀನ ಸಂತೋಷದಿಂದ ಹೊರಟುಹೋದ. ಮಧುಸೂದನನ ಕೆಲಸವು ಮುಂದುವರಿಯಿತು. ಆದರೆ ಈ ಕೆಲಸದ ಧಾಟಿಯಲ್ಲಿಯೇ ಪಕ್ಕದಲ್ಲಿ ಮತ್ತೊಂದು ವಿರುದ್ಧವಾದ ಮನೋಧಾರೆ ಯಾವ ವೇಳೆಯಲ್ಲಿ ಹರಿಯತೊಡಗಿತ್ತೋ ಅವನ ಮನಸ್ಸಿಗೇ ಗೋತ್ತಾಗಲಿಲ್ಲ. ಒಂದು ಸಲ ನೀಲಿಯ ಪೆನ್ಸಿಲಿನ ಕೆಲಸ ಪೂರ್ತಿಯಾಗುವುದಕ್ಕೆ ಮುಂಚೆಯೇ ಅದನ್ನು ಕೆಳಗಿಟ್ಟು ಗುಡುಗುಡಿಯ ಕೊಳವೆಯನ್ನು ಕೈಗೆತ್ತಿಕೊಂಡನು. ಹಗಲು ಹೊತ್ತಿನಲ್ಲಿ ಮಧುಸೂದನನ ಮನಸ್ಸು ಕುಮುದಿನಿ ವಿಷಯದ ಯೋಚನೆಗಳಿಂದ ಬಿಡುಗಡೆ ಹೊಂದಿರುತ್ತಿತ್ತು. ಆಗವನು ಹಿಂದಿನಂತೆಯೇ ತನ್ನ ಮೇಲೆ ತಾನು ಏಕಾಧಿಪತ್ಯವನ್ನು ಮತ್ತೆ ಪಡೆದು ಆನಂದದಲ್ಲಿ ಮುಳುಗಿ ಹೋಗಿದ್ದ. ಆದರೆ ರಾತ್ರಿ ಹೆಚ್ಚಾದ ಹಾಗೆಲ್ಲ ಶತ್ರು ಇನ್ನೂ ದುರ್ಗವನ್ನು ಬಿಟ್ಟು ಹೋಗಿಲ್ಲವೆಂಬ ಶಂಕೆಯು ಹೆಚ್ಚಾಗುತ್ತಿತ್ತು. ಶತ್ರು ಸುರಂಗದ ಕೋಣೆಯಲ್ಲಿ ಮೈ ಮರೆಯಿಸಿಕೊಂಡು ಅಡಗಿ ಕೊಂಡಿರುವಂತೆ ಎನ್ನಿಸುತ್ತಿತ್ತು.

ಮಳೆ ನಿಂತು ಹೋಗಿತ್ತು. ಕೃಷ್ಣ ಪಕ್ಷದ ಚಂದ್ರನು ತೋಟದ ಒಂದು ಮೂಲೆಯಲ್ಲಿ ಹಳೆಯ ತೇಗದ ಮರದ ಮೇಲಿನ ಆಕಾಶದಲ್ಲಿ ಉದಯಿಸಿ, ಮಳೆಯಲ್ಲಿ ತೊಯ್ದ ಪೃಥಿವಿಯನ್ನು ವಿಹ್ವಲ ದೃಷ್ಟಿಯಿಂದ ನೋಡುತ್ತಿರುವಂತೆ ಕಾಣುತ್ತಿತ್ತು. ಗಾಳಿ ಬಹಳ ತಣ್ಣಗಿತ್ತು. ಮಧುಸೂದನನ ದೇಹವು ಹಾಸುಗೆಯ ಮೇಲೆ ಬೆಚ್ಚನೆಯದೊಂದು ಕೋಮಲ ಸ್ಪರ್ಶಕ್ಕಾಗಿ ಹಾತೊರೆಯುತ್ತಿತ್ತು. ನೀಲಿ ಪೆನ್ಸಿಲನ್ನು ಮತ್ತೆ ಅದುಮಿ ಹಿಡಿದು ಕೊಂಡು ಖಾತೆ ಪತ್ರಗಳ ಮೇಲೆ ಕತ್ತನ್ನು ಬಗ್ಗಿಸಿದ. ಆದರೆ ಮನಸ್ಸಿನ ಗಾಢವಾದ ಆಕಾಶದಲ್ಲಿ "ಅತ್ತಿಗೆ ಬಹುಶಃ ಇನ್ನೂ ಎಚ್ಚತ್ತು ಕಾದಿದ್ದಾಳೆ" ಎಂಬ ಮಾತೊಂದು ಕ್ಷೀಣವಾದ ಆದರೆ ಸ್ಪಷ್ಟವಾದ ಧ್ವನಿಯಿಂದ ಬಾಜಿಸುತ್ತಿದೆ.

ಮಧುಸೂದನ ಆ ರಾತ್ರಿಯೇ ಒಂದು ಮುಖ್ಯವಾದ ಕೆಲಸವನ್ನು ಮುಗಿಸಿಬಿಡಬೇಕೆಂದು ಹಠತೊಟ್ಟಿದ್ದ. ಅದನ್ನು ಮಾರನೆಯ ದಿನ ಬೆಳಿಗ್ಗೆ ಮುಗಿಸವಂತಾದರೂಅಂತಹದೇನೂ ಅನಾನುಕೂಲವಾಗುತ್ತಿರಲಿಲ್ಲ. ಆದರೆ ಹಠ ಮಾಡಿದಂತೆ ನಡೆದುಕೊಳ್ಳುವುದು ಅವನ ವ್ಯವಹಾರದ ಒಂದು ಕಟ್ಟಳೆ. ಅದರಿಂದ ಯಾವ ಕಾರಣದಿಂದಾದರೂ ತಪ್ಪಿ ಹೋದರೆ ತನ್ನನ್ನು ತಾನೇ ಕ್ಷಮಿಸುತ್ತಿರಲಿಲ್ಲ. ಇಷ್ಟು ದಿನಗಳೂ ಧರ್ಮವನ್ನು ಅತ್ಯಂತ ಕಠಿಣವಾಗಿಯೇ ಕಾಪಾಡಿಕೊಂಡು ಬಂದಿದ್ದ. ಅದರಿಂದ ಬೇಕಾದಷ್ಟು ಫಲವನ್ನೂ ಪಡೆದಿದ್ದ. ಆದರೆ ಈಚೆಗೆ ಹಗಲು ವೇಳೆಯ ಮಧುಸೂದನನ ಸಂಗಡ ರಾತ್ರಿಯ ವೇಳೆಯ ಮಧುಸೂದನನ ಸ್ವರವು ಸ್ವಲ್ಪ ಸ್ವಲ್ಪ ವ್ಯತ್ಯಾಸ ತೋರಿಸುತ್ತಿದೆ—ಒಂದೇ ವೀಣೆಯ ಎರಡುತಂತಿಗಳಂತೆ, ಯಾವ ನಿಶ್ಚಲ ಹಠದಿಂದ ಡೆಸ್ಕಿನ ಮುಂದೆ ನಡು ಬಗ್ಗಿಸಿ ಕೂತಿದ್ದನೋ, ರಾತ್ರಿಗಾಢವಾದಂತೆಲ್ಲ, ಆ ಹಠದ ಯಾವುದೋ ಒಂದು ಬಿರುಕಿನಿಂದ "ಅತ್ತಿಗೆ ನಿನಗೋಸ್ಕರ ಎಚ್ಚರವಾಗಿ ಕಾದು ಕುಳಿತಿದ್ದಾಳೆ" ಎಂಬ ಮಾತು ದುಂಬಿಯಂತೆ ಝೇಂಕಾರ ಮಾಡುತ್ತ ತಿರುಗುತ್ತಿತ್ತು.

ಆಗವನು ಎದ್ದು ನಿಂತ. ದೀಪವನ್ನಾರಿಸದೆ, ಖಾತೆ ಪತ್ರಗಳು ಹೇಗಿದ್ದುವೋ ಹಾಗೆಯೇ ಇಟ್ಟು, ಮಲಗುವ ಮನೆಯ ಕಡೆಹೊರಟನು. ಅಂತಃಪುರದ ಅಂಗಳವನ್ನು ಸುತ್ತಿಹಾಕಿದ. ಯಾವ ವರಾಂಡದ ದ್ವಾರಾ ಮೂರನೆಯ ಅಂತಸ್ತಿನ ಮಲಗುವ ಮನೆಗೆ ಹೋಗುವ ದಾರಿಯಿದೆಯೋ ಅದೇ ವರಾಂಡದ ಕಟಕಟೆಯ ಪಕ್ಕದಲ್ಲಿ ಶ್ಯಾಮಾಸುಂದರಿ ನೆಲದ ಮೇಲೆ ಕೂತಿದ್ದಳು. ಚಂದ್ರನಾಗ ನೆತ್ತಿಯ ಮೇಲಿದ್ದ ಆ ಚಂದ್ರನ ಬೆಳಕು ಬಂದು ಅವಳನ್ನು ಸುತ್ತಿಹಾಕಿತ್ತು. ಆಗ ಅವಳು ನೋಡುವುಕೆ ಯಾವುದೋ ಕಥೆಯ ಪುಸ್ತಕದ ಚಿತ್ರದಂತೆ ಕಾಣುತ್ತಿದ್ದಳು. ಅಂದರೆ ಅವಳು ನಿತ್ಯ ನೋಡುವ ಹೆಂಗುಸಂತೆ ಕಾಣಲಿಲ್ಲ. ಅತಿ ಹತ್ತಿರದ, ಅತಿ ಪರಿಚಯದ, ಕಠೋರವಾದ ಆವರಣದಿಂದ ಯಾವುದೋ ಒಂದು ದೂರ ಪ್ರದೇಶದ ಮಧ್ಯೆ ಬಂದು ಬಿಟ್ಟಿದಾಳೆ ಎನ್ನುವ ಹಾಗಿತ್ತು. ಮಧುಸೂದನನು ಇದೇ ದಾರಿಯಲ್ಲೇ ಮಲಗುವ ಮನೆಗೆ ಹೋಗುವನೆಂದು ಅವಳಿಗೆ ಗೊತ್ತು. ಆ ಹೋಗುವ ದೃಶ್ಯವೇ ಅವಳಿಗೆ ಅತ್ಯಂತ ನೋವನ್ನುಂಟುಮಾಡುತ್ತಿತ್ತು. ಅದಕ್ಕೋಸ್ಕರವೇ ಅವಳ ಆಕರ್ಷಣವೂ ಅಷ್ಟು ಪ್ರಬಲವಾಗಿತ್ತು. ಆದರೆ ಸುಮ್ಮನೆ ಹೃದಯವನ್ನು ವ್ಯರ್ಥವಾದ ವೇದನೆಯಿಂದ ಕಲಕಿಸುವ ಹುಚ್ಚೊಂದೇ ಅಲ್ಲದೆ ಈ ಪ್ರತೀಕ್ಷೆಯಲ್ಲಿ ಬೇರೊಂದು ಆಸೆಯೂ ಇತ್ತು. ಒಂದು ಪಕ್ಷ ಕ್ಷಣ ಕಾಲದಲ್ಲಿ ಏನಾದರೊಂದು ನಡೆದು ಹೋಗಬಹುದು. ಅಸಂಭವವಾದುದು ಯಾವುದೋ ಒಂದು ಸಂಭವವಾಗಬಹುದೆಂಬ ಆಸೆಯಿಂದಲೇ ದಾರಿಯ ನಡುವೆ ಎಚ್ಚರವಾಗಿ

ಕೂತು ಕಾಯುತ್ತಿದ್ದುದು.

ಮಧುಸೂದನನು ಅವಳ ಕಡೆ ಒಂದು ಸಲ ಕಟಾಕ್ಷವೆಸೆದು ಮೇಲಕ್ಕೆ ಹತ್ತಿ ಹೋದನು. ಶ್ಯಾಮಾಸುಂದರಿ ತನ್ನ ಅದೃಷ್ಟವನ್ನೇ ಹಳಿದುಕೊಂಡು ಕಟಕಟೆಯ ಕಂಬಿಗಳನ್ನು ಬಲವಾಗಿ ಹಿಡಿದುಕೊಂಡು ಅದರ ಮೇಲೆ ತಲೆಚಚ್ಚಿಕೊಳ್ಳಲು ತೊಡಗಿದಳು.

ಮಲಗುವ ಮನೆಗೆ ಹೋಗಿ ಮಧುಸೂದನನು ನೋಡಿದರೆ, ಕುಮು ಎಚ್ಚರವಾಗಿ ಕೂತಿರಲಿಲ್ಲ. ಕೋಣೆಯಲ್ಲಿ ಕತ್ತಲು ತುಂಬಿತ್ತು. ಸ್ನಾನದ ಮನೆಯ ಬಾಗಿಲು ತೆಗೆದಿತ್ತು. ಅಲ್ಲಿಂದ ಸ್ವಲ್ಪ ಬೆಳಕು ಬರುತ್ತಿತ್ತು. ಮಧುಸೂದನ ವಾಪಸ್ಸು ಹೊರಟು ಹೋಗಲೇ ಎಂದುಕೊಂಡ. ಆದರೆ ಮನಸ್ಸು ಬರಲಿಲ್ಲ. ಗ್ಯಾಸಿನ ದೀಪವನ್ನು ಹೊತ್ತಿಸಿದ. ಕುಮು ಹಾಸುಗೆಯ ಮಧ್ಯೆ ಕೈ, ಕಾಲುಗಳನ್ನು ಮಡಿಸಿಕೊಂಡು ಮಲಗಿದ್ದಳು. ದೀಪ ಹೊತ್ತಿಸಿದರೂ ಎಚ್ಚರವಾಗಲಿಲ್ಲ. ಅವಳ ಈ ಗಾಢವಾದ ನಿದ್ರೆಯನ್ನು ನೋಡಿ ಅವನಿಗೆ ಕೋಪ ಬಂದಿತು....ಬೇಸರದಿಂದ ಸೊಳ್ಳೆಪರದೆಯನ್ನು ಒಂದು ಕಡೆ ಸರಿಸಿ ಧಪ್ಪೆಂದು ಹಾಸುಗೆಯ ಮೇಲೆ ಕೂತುಕೊಂಡ. ಮಂಚವು ಶಬ್ದ ಮಾಡುತ್ತಾ ಅದುರಿತು.

ಕುಮು ಬೆಚ್ಚಿ ಎದ್ದು ಕೂತಳು. ಇಂದು ಮಧುಸೂದನನು ಬರುವುದಿಲ್ಲವೆಂದೇ ತಿಳಿದಿದ್ದಳು. ಹಠಾತ್ತಾಗಿ ಅವನನ್ನು ನೋಡಿದೊಡನೆ ಮುಖದಲ್ಲಿ ಏನೋ ಒಂದು ಬಗೆಯಾದ ಭಾವನೆ ತೋರಿಬಂತು. ಅದನ್ನು ನೋಡಿದ ತಕ್ಷಣ ಮಧುಸೂದನನ ಎದೆಯಲ್ಲಿ ಈಟಿಯಿರಿದಂತಾಯಿತು. ತಲೆಗೆ ರಕ್ತವೇರಿ ಕೋಪದಿಂದ "ಏನು ಮಾಡಿದರೂ ನನ್ನನ್ನು ಸಹಿಸುವುದಕ್ಕೆ ಆಗುವುದಿಲ್ಲ ನಿನಗೆ ಅಲ್ಲವೇ ?" ಎಂದ.

ಇಂತಹ ಪ್ರಶ್ನೆಗೆ ಏನೆಂದು ಉತ್ತರ ಕೊಡುವುದೋ ಕುಮುವಿಗೆ ಹೊಳೆಯಲಿಲ್ಲ. ನಿಜವಾಗಿ ಹಠಾತ್ತಾಗಿ ಮಧುಸೂದನನನ್ನು ನೋಡಿ ಅವಳ ಎದೆಯೇಕೋ ಇದ್ದಕ್ಕಿದ್ದ ಹಾಗೆ ನಡುಗುವುದಕ್ಕೆ ಶುರುವಾಯಿತು, ಆಗ ಅವಳ ಮನಸ್ಸು ಹಿಡಿತದಲ್ಲಿರಲಿಲ್ಲ. ಯಾವ ಭಾವವನ್ನು ಅವಳು ತನ್ನಿಂದಲೇ ಸದಾ ಮುಚ್ಚಿಡಲು ಆಶಿಸಿದ್ದಳೋ, ಯಾವುದರ ಪ್ರಾಬಲ್ಯವನ್ನು ಸರಿಯಾಗಿ ತಿಳಿಯದೆ ಇದ್ದಳೋ, ಅದು ತಾನಾಗಿಯೇ ಕಾಣಿಸಿಕೊಂಡಿತ್ತು. ಮಧುಸೂದನನು ಮಾತನ್ನು ನುಂಗುತ್ತಾ ನುಂಗುತ್ತಾ "ನಿಮ್ಮಣ್ಣನನ್ನ...ಆ...ನೋಡುವುದಕ್ಕೆ ಹೋಗುವ ಪ್ರಸ್ತಾಪ ...ಮಾಡಬೇಕೋ...." ಎಂದನು. ಕುಮು ಈ ಮುಹೂರ್ತದಲ್ಲಿ ಅವನ ಕಾಲಮೇಲೆ ಬೀಳುವುದಕ್ಕೆ ತಯಾರಾಗಿದ್ದಳು, ಆದರೆ ಅವನ ಬಾಯಲ್ಲಿ ತನ್ನಣ್ಣನ ಹೆಸರನ್ನು ಕೇಳಿ ಮೈಯೆಲ್ಲಾ ಬಿಗಿಸಿಕೊಂಡಳು. "ಇಲ್ಲ" ಎಂದು ಹೇಳಿದಳು.

"ನಿನಗೆ ಹೋಗುವುದಕ್ಕೆ ಇಷ್ಟವಿಲ್ಲವೇ ?"

"ಇಲ್ಲ. ನನಗೆ ಇಷ್ಟವಿಲ್ಲ."

"ನವೀನನನ್ನು ನನ್ನ ಹತ್ತಿರ ಶಿಫಾರಸು ಮಾಡಲು ಕಳುಹಿಸಿರಲಿಲ್ಲವೇ ?"

"ಇಲ್ಲ. ಕಳುಹಿಸಲಿಲ್ಲ."

"ಅಣ್ಣನ ಹತ್ತಿರ ಹೋಗಬೇಕೆಂಬ ನಿನ್ನ ಆಸೆಯನ್ನು ಅವನಿಗೆ ಹೇಳಲಿಲ್ಲ ?"

"ಇಲ್ಲ. ನಾನು ಅಣ್ಣನನ್ನು ನೋಡುವುದಕ್ಕೆ ಹೋಗುವುದಿಲ್ಲೆಂದು ಅವರಿಗೆ ಹೇಳಿದ್ದೆ."

"ಯಾಕೆ ?"

"ಅದು—ನಾನು ಹೇಳಲಾರೆ."

"ಹೇಳಲಾರೆಯಾ? ಮತ್ತೆ ನಿನ್ನ ಆ ಹಾಳು ನೂರ್‌ನಗರದ ಚಾಳಿ ?"

"ನಾನು ಆ ನೂರ್ ನಗರದ ಹೆಣ್ಣು ತಾನೆ ?"

"ಹೋಗು....ಅವನ ಹತ್ತಿರವೇ ಹೋಗು.. .ಯೋಗ್ಯಳಲ್ಲ ನೀನು ಈ ಮನೆಗೆ....ನಾನೇನೋ ಹೋಗಲಿ ಎಂದು ಅನುಗ್ರಹ ತೋರಿಸಿದ್ದಕ್ಕೆ...,ನೀನು ಮರ್ಯಾದೆ ತಿಳಿದುಕೊಳ್ಳಲಿಲ್ಲ ...ನನ್ನದೇ ಮುಠ್ಠಾಳತನ....ನಾನೇ ಅನುತಾಪ ಪಟ್ಟುಕೋ ಬೇಕು. ಅಷ್ಟೆ."

ಕುಮು ಕಟ್ಟಿಗೆಯಂತೆ ಆಗಿಹೋದಳು. ಯಾವ ಜವಾಬೂ ಅವಳ ಬಾಯಿಂದ ಬರಲಿಲ್ಲ. ಕುಮುವಿನ ಕೈಯನ್ನು ಹಿಡಿದು ಬಹಳ ಒರಟಾಗಿ, ಕ್ರೂರವಾಗಿ ಎಳೆದು ಮಧುಸೂದನ "ಕ್ಷಮೆ ಕೇಳಿಕೊಳ್ಳುವುದಕ್ಕೂ ಮನಸ್ಸು ಬರುವುದಿಲ್ಲ ಅಲ್ಲವೇ ?" ಎಂದ.

"ಯಾತಕ್ಕೋಸ್ಕರ ?"

"ನೀನು ಈ ನನ್ನ ಹಾಸುಗೆಯ ಮೇಲೆ ಮಲಗುವುದಕ್ಕೆ ಸಾಧ್ಯವಾಯಿತಲ್ಲ, ಅದಕ್ಕೆ ?"

ಕುಮು ತಕ್ಷಣ ಹಾಸುಗೆಯನ್ನು ಬಿಟ್ಟೆದ್ದು ಪಕ್ಕದ ಕೋಣೆಗೆ ಹೊರಟು ಹೋದಳು.

ಮಧುಸೂದನ ಹೊರಗಿನ ಮನೆಗೆ ಹೋಗುವ ದಾರಿಯಲ್ಲಿ ಶ್ಯಾಮಾಸುಂದರಿ ಅದೇ ವರಾಂಡದಲ್ಲಿ ಅದೇ ಸ್ಥಳದಲ್ಲಿಯೇ ಮೈ ಬೋರಲಾಗಿ ಬಿದ್ದುಕೊಂಡಿದ್ದುದನ್ನು ನೋಡಿದ. ಹತ್ತಿರ ಬಂದು ಕೆಳಗೆ ಬಗ್ಗಿ ಅವಳ ಕೈಯನ್ನು ಹಿಡಿದು ಎಳೆದು ಎತ್ತಲು ಪ್ರಯತ್ನಿಸುತ್ತಾ "ಏನು ಮಾಡುತ್ತಿದ್ದೀಯಾ ಶ್ಯಾಮಾ ?" ಎಂದ. ಶ್ಯಾಮಾ ಹಾಗೆಯೇ ಎದ್ದು ಕೂತು ಮಧುಸೂದನನ ಎರಡು ಕಾಲುಗಳನ್ನೂ ಬಿಗಿಯಾಗಿ ಹಿಡಿದುಕೊಂಡು ಗದ್ಗದ ಕಂಠದಿಂದ "ನನ್ನನ್ನ ಕೊಂದು ಹಾಕಿಬಿಡಿ ನೀವು" ಎಂದಳು.

ಮಧುಸೂದನ ಅವಳನ್ನು ಕೈಯಿಂದೆತ್ತಿ ನಿಲ್ಲಿಸಿದನು. "ಛೇ, ನಿನ್ನ ಮೈಯೇಕೆ ಇಷ್ಟು ತಣ್ಣಗಾಗಿ ಹೋಗಿದೆ. ನಡಿ ನಿನ್ನನ್ನ ಮಲಗಿಸಿ ಬಿಟ್ಟುಬರುತ್ತೇನೆ...." ಎಂದು ಅವಳನ್ನು ತಾನು ಹೊದ್ದಿದ್ದ ಶಾಲಿನೊಳಗೆ, ಮುಚ್ಚಿ ಹೊದಿಸಿ, ಬಲಗೈಯಿಂದ ಅವಳ ಮೈಯನ್ನು ಬಲವಾಗಿ ಹಿಡಿದುಕೊಂಡು ಮಲಗುವ ಮನೆಗೆ ಕರೆದುಕೊಂಡು ಹೋದ. ಶ್ಯಾಮಾ ಮೃದುವಾಗಿ "ಸ್ವಲ್ಪ ಕೂಡಬಾರದೆ ?" ಎಂದಳು. ಮಧುಸೂದನ "ಕೆಲಸವಿದೆ" ಎಂದ.

ರಾತ್ರಿಯ ಹೊತ್ತು ಎಲ್ಲಿಂದಲೋ ಭೂತವೊಂದು ಮುತ್ತಿ ಬಂದು ಇಷ್ಟು ಹೊತ್ತೂ ಮಧುಸೂದನನ ಕೆಲಸವನ್ನು ನಷ್ಟ ಮಾಡಿಬಿಡಬೇಕೆಂದು ಹವಣಿಸುತ್ತಿತ್ತು. ಆದರೆ ಇನ್ನು ಅದು ಸಾಗದು. ಕುಮುವಿನ ಹತ್ತಿರ ಉಪೇಕ್ಷೆ ಹೊಂದಿದ ಅವನ ವ್ಯಾಮೋಹದ ಕ್ಷತಿಯನ್ನು ಪೂರ್ಣಮಾಡುವ ಭಂಡಾರವು ಬೇರೊಂದು ಕಡೆ ಹೇರಳವಾಗಿ ಶೇಖರಿಸಲ್ಪಟ್ಟಿದೆ ಎಂಬುದನ್ನು ಅವನು ಅರಿತುಕೊಂಡ. ಮನುಷ್ಯ ವ್ಯಾಮೋಹದ ಕ್ಷೇತ್ರದೊಳಗಿಂದ ಯಾವ ಅತಿ ಅಮೌಲ್ಯವಾದ ತೃಪ್ತಿಯನ್ನು ಪಡೆಯಬಹುದೋ ಅದನ್ನು ಅನುಭವಿಸುವ ಅವಶ್ಯಕತೆಯು ಮಧುಸೂದನನಿಗೆ ಆ ರಾತ್ರಿ ಬಹಳವಾಗಿ ಇತ್ತು. ಶ್ಯಾಮಾಸುಂದರಿ ತನ್ನ ಆತ್ಮ ಮನಗಳನ್ನರ್ಪಿಸಿ ಅವನಿಗೋಸ್ಕರ ಕಾದುಕೊಂಡಿದ್ದಾಳೆ. ಆ ಆಶ್ವಾಸನವನ್ನೇ ಪಡೆದು ಮಧುಸೂದನ ಅಂದು ರಾತ್ರಿ ತನ್ನ ಕೆಲಸಕ್ಕೆ ಬೇಕಾದಷ್ಟು ಶಕ್ತಿಯನ್ನು ಪಡೆದ. ಯಾವ ಅಗೌರವದ ಮುಳ್ಳು ಅವನ ಮನಸ್ಸಿನಲ್ಲಿ ಚುಚ್ಚಿಕೊಂಡಿತ್ತೋ ಅದರ ಘಾಸಿಯು ಬಹಳ ಮಟ್ಟಿಗೆ ಕಡಿಮೆಯಾಯಿತು.

ಈಕಡೆ ರಾತ್ರಿ ಕುಮು ಪಡೆದ ನೋವಿನ ಮಧ್ಯೆ ಒಂದು ಸಮಾಧಾನವೂ ಇತ್ತು. ಮಧು ಸೂದನ ಅವಳಮೇಲೆ ಪ್ರೀತಿ ತೋರಿದಾಗಲೆಲ್ಲಾ ಅವಳ ಮನಸ್ಸಿನಲ್ಲೇನೋ ಕಳವಳವಾಗು ತ್ತಿತ್ತು, ಪ್ರೀತಿಸುವುದರಿಂದಲೇ ಇದರ ಪ್ರತಿಕ್ರಿಯೆಯಾಗಬೇಕಾಗಿತ್ತು. ಈ ಕರ್ತವ್ಯದ ಅರಿವು ಅವಳನ್ನು ಅತ್ಯಂತ ತಲ್ಲಣಗೊಳಿಸಿತು. ಈ ತುಮುಲದಲ್ಲಿ ಕುಮು ಗೆಲ್ಲುವ ಆಸೆಯೇ ಇರಲಿಲ್ಲ. ಆದರೆ ಪರಾಭವವು ಬಹಳ ಅಮಂಗಳ. ಅದರಿಂದಲೇ ಸರ್ವನಾಶದ ದಾರಿ. ಆದ್ದರಿಂದಲೇ ಅದನ್ನು ಅಡಗಿಸಿಡುವುದಕ್ಕೆ ಕುಮು ಇಷ್ಟು ದಿನಗಳೂ ಸರ್ವಪ್ರಯತ್ನಗಳನ್ನೂ ಮಾಡುತ್ತಿದ್ದಳು. ಹಾಗೆ ಅಡಗಿಸಿಟ್ಟಿದ್ದ ಪರಾಭವವೇ ಅಂದು ರಾತ್ರಿ ಒಂದು ಮುಹೂರ್ತದಲ್ಲಿ ಹೊರಗೆ ಕಾಣಿಸಿ ಕೊಂಡುಬಿಟ್ಟಿತು. ಕುಮು ತನ್ನ ಮೇಲೆ ಪ್ರಜ್ಞೆಯಿಲ್ಲದಿರುವ ಅವಸ್ಥೆಯಲ್ಲಿ ಅವಳ ಸಮಸ್ತ ಪ್ರಕೃತಿಯೂ ಅವನ ಪ್ರಕೃತಿಗೆ ಎಲ್ಲ ವಿಧದಲ್ಲೂ ವಿರುದ್ಧವೆಂದು ಮಧುಸೂದನ ಸ್ಪಷ್ಟವಾಗಿ ತಿಳಿದುಕೊಂಡುಬಿಟ್ಟ. ಇದು ನಿಶ್ಚಯವಾಗಿ ತಿಳಿದು ಬಂದದ್ದೇ ಒಳ್ಳೆಯದಾಯಿತು. ಇದಾದ ಮೇಲೆ ಅವರಿಬ್ಬರ ಪರಸ್ಪರ ವ್ಯವಹಾರವು ನಿಷ್ಕಪಟ ಭಾವದಲ್ಲಿ ನಡೆಯಲು ಸಹಾಯವಾಗುವುದು. ಮಧುಸೂದನ ಅವಳನ್ನ ಬಯಸುತ್ತಾನೆ - ಎನ್ನುವುದೇ ಸಮಸ್ಯೆ. ಕೋಪದಿಂದ ಅವಳನ್ನು ತೊರೆಯಲು ಆಶಿಸುವನು ಎನ್ನುವುದು ಸತ್ಯ. ಸತ್ಯವಾಗಿ ಮಧುಸೂದನನ ಹಾಸುಗೆಯಲ್ಲಿ ಮಲ ಗುವ ಅಧಿಕಾರ ಅವಳಿಗಿಲ್ಲ. ಮಲಗಿ ಅವಳು ನಿಜವಾಗಿ ಮೋಸಮಾಡಿರುವಳು. ಈ ಮನೆಯಲ್ಲಿ ಅವಳಿಗಿರುವ ಪದವಿ ಬರಿಯ ವಿಡಂಬನೆ.

ಇಂದು ರಾತ್ರಿ ಇದೊಂದು ಪ್ರಶ್ನೆ ಅವಳ ಮನಸ್ಸಿನಲ್ಲಿ ಬಾರಿ ಬಾರಿಗೂ ಏಳುತ್ತಿತ್ತು. ಕುಮು ವಿನ ವಿಷಯದಲ್ಲಿ ಮಧುಸೂದನನು ಇಷ್ಟು ನಿರ್ಬಂಧವೇಕೆ ಮಾಡುತ್ತಿದ್ದಾನೆ? ಅವನು ಮಾತು ಮಾತಿಗೂ ನೂರ್ ನಗರದ ಚಾಳಿಯ ವಿಷಯವೆತ್ತಿ ಅವಳ ಮನಸ್ಸನ್ನ ಚುಚ್ಚುವುದೇಕೆ? ಅದರ ಅರ್ಥ, ಕುಮು ಅವರುಗಳಿಂದ ಸ್ವಭಾವದಲ್ಲಿ ವ್ಯತ್ಯಾಸ, ಜಾತಿಯಲ್ಲಿ ವ್ಯತ್ಯಾಸ ಎಂದೇ ಅಲ್ಲವೇ? ಹಾಗಾದರೆ ಮಧುಸೂದನನೇಕೆ ಅವಳ ಮೇಲೆ ಹಾಗೆ ಪ್ರೀತಿ ತೋರಿಸಲು ಯತ್ನಿಸುವುದು? ಅದು ಎಂದಾದರೂ ನಿಜವಾದ ಪ್ರೀತಿಯಾದೀತೇ! ಕುಮುವಿಗೆ ಈಗ ಖಂಡಿತವಾಗಿ ಹೋಯಿತು, ಇಂದು ಮಧುಸೂದನನು ಮನಸ್ಸಿನಲ್ಲಿ ಏನಾದರೂ ತಿಳಿದುಕೊಂಡಿರಲಿ, ಕುಮುವಿನಿಂದ ಅವನ ಮನೋ ಭೀಷ್ಟವೆಂದಿಗೂ ಆಗದು. ಎಷ್ಟು ಬೇಗ ಮಧುಸೂದನನು ಇದನ್ನು ತಿಳಿದುಕೊಳ್ಳುವನೋ ಅಷ್ಟ ಕಷ್ಟು ಎಲ್ಲರಿಗೂ ಇದು ಕ್ಷೇಮ.

ನವೀನನು ಹಿಂದಿನ ದಿನ ರಾತ್ರಿ ಅಣ್ಣನಿಂದ ಸಮ್ಮತಿ ಪಡೆದು ಎಷ್ಟು ಆನಂದದಿಂದ ಮಲ ಗಲು ಹೋದನೋ ಇಂದು ಬೆಳಿಗ್ಗೆ ಅದರಲ್ಲಿ ಅಷ್ಟಾಗಿ ಏನೂ ಉಳಿದಿರಲಿಲ್ಲ. ನಿನ್ನೆಯ ರಾತ್ರಿ ಆಗ ಒಂದೂವರೆ ಘಂಟೆ. ಮಧುಸೂದನ ಕೆಲಸ ಮುಗಿಸಿಕೊಂಡು ಕೂಡಲೇ ನವೀನನಿಗೆ ಹೇಳಿ ಕಳುಹಿಸಿದ. ಅವನ ಅಪ್ಪಣೆಯಿಷ್ಟೆ—ಕುಮುದಿನಿಯನ್ನು ವಿಪ್ರದಾಸನ ಬಳಿಗೆ ಕಳುಹಿ ಕೊಡಬೇಕು. ಎಷ್ಟು ದಿನ ಮಧುಸೂದನ ತಾನಾಗಿ ಹೇಳಿ ಕಳುಹಿಸುವುದಿಲ್ಲವೋ ಅಷ್ಟು ದಿ ಅವಳು ಹಿಂದಿರುಗುವ ಅವಶ್ಯಕತೆಯಿಲ್ಲ ...ಇದು ಗಡೀಪಾರಿನ ಶಿಕ್ಷೆಯೆಂದು ನವೀನನು ಅರಿತ.

ಅಂಗಳವನ್ನು ಸುತ್ತುವರೆದಿದ್ದ ಯಾವ ವರಾಂಡದ ಜಾಗದಲ್ಲಿ ಹಿಂದಿನ ರಾತ್ರಿ ಮಧುಸೂ ದನ ಸಂಗಡ ಶ್ಯಾಮಾಳ ಭೇಟಿಯಾಗಿತ್ತೋ ಸರಿಯಾಗಿ ಅದರ ಎದುರು ದಿಕ್ಕಿನ ವರಾಂಡ ಸೇರಿದಂತೆಯೇ ನವೀನನ ಮಲಗುವ ಕೋಣೆ. ಆಗ ಅವರಿಬ್ಬರು ಗಂಡ ಹೆಂಡಿರು ಕುಮುದಿನಿ

ವಿಚಾರವಾಗಿ ಮಾತು, ಕಥೆ ಆಡಿಕೊಳ್ಳುತ್ತಿದ್ದರು. ಆ ಸಮಯದಲ್ಲಿ ಯಾರದೋ ಕಂಠಧ್ವನಿ ಕೇಳಿ ಮೋತಿಯಮ್ಮನು ಕೋಣೆಯ ಬಾಗಿಲನ್ನು ತೆಗೆದು ಬೆಳದಿಂಗಳಿನಲ್ಲಿ ಮಧುಸೂದನ—ಶ್ಯಾಮಾರ ಮಿಲನದ ಚಿತ್ರವನ್ನು ಕಂಡಳು, ಕುಮುವಿನ ಭಾಗ್ಯದ ಬಲೆಯಲ್ಲಿ ಈ ರಾತ್ರಿಯೇ ನಿಶ್ಶಬ್ದವಾಗಿ ಇನ್ನೊಂದು ಬಲವಾದ ತೊಡಕು ಉಂಟಾಗಿದೆಯೆಂದು ತಿಳಿದಳು.

ನವೀನನನ್ನು ಕುರಿತು ಮೋತಿಯಮ್ಮನು "ಸರಿಯಾಗಿ ಇದೇ ಸಮಯದಲ್ಲೇ ಕುಮು ಹೊರಟು ಹೋಗುವುದು ಒಳ್ಳೆಯದೇ ?" ಎಂದು ಕೇಳಿದಳು.

"ಇಷ್ಟು ದಿನವೇನು ಅತ್ತಿಗೆಯಿರಲಿಲ್ಲ. ವ್ಯವಹಾರ ಇಷ್ಟರ ಮಟ್ಟಿಗೆ ಎಂದೂ ಬಂದಿರಲಿಲ್ಲ. ಅತ್ತಿಗೆ ಇರುವುದರಿಂದಲೇ ಹೀಗೆ ನಡೆದಿದೆ."

"ಏನು ಹೇಳುತ್ತೀರಿ ನೀವು ?"

"ಅತ್ತಿಗೆ ನಿದ್ದೆ ಮಾಡುತ್ತಿದ್ದ ಹಸಿವನ್ನು ಎಚ್ಚರಗೊಳಿಸಿದಳು. ಆದರೆ ಅನ್ನ ಕೊಡಲಾರದೆ ಹೋದಳು, ಅದರಿಂದಲೇ ಅದು ಇಷ್ಟು ಅನರ್ಥಕ್ಕೆ ತೊಡಗಿದೆ. ಈ ಸಮಯದಲ್ಲಿ ಅವಳು ದೂರ ವಿರುವುದೇ ಒಳ್ಳೆಯದೆಂದು ನನ್ನ ಅಭಿಪ್ರಾಯ, ಅದರಿಂದ ಬೇರೆ ಏನೂ ಆಗದೆ ಹೋದರೂ ಕಡೆಗೆ ಅವಳಾದರೂ ಶಾಂತಿಯಿಂದ ಇರಬಹುದು."

"ಹಾಗಾದರೆ ಇದು ಹೀಗೆಯೇ ನಡೆಯುತ್ತಿರಬೇಕೇನು ?"

"ಬೆಂಕಿಯನ್ನು ಆರಿಸುವುದಕ್ಕೆ ಯಾವ ದಾರಿಯೂ ಇಲ್ಲದಿರುವಾಗ ಅದು ತಾನೇ ಉರಿದು ಬೂದಿಯಾಗುವವರೆಗೂ ನೋಡುತ್ತ ಸುಮ್ಮನಿರಬೇಕು !"

ಮರುದಿನ ಬೆಳಿಗ್ಗೆ ಹಾಬಲೂ ಸದಾ ಕುಮುವಿನ ಹಿಂದೆ ಹಿಂದೆಯೇ ಓಡಾಡುತ್ತಿದ್ದ, ಪಾಠ ಹೇಳಿ ಕೊಡುತ್ತಿದ್ದ ಮಾಸ್ಟರು ಅವನಿಗೆ ಹೇಳಿ ಕಳುಹಿಸಿದಾಗ ಅವನು ಕುಮುವಿನ ಮುಖದ ಕಡೆ ಸುಮ್ಮನೆ ನೋಡತೊಡಗಿದ. ಕುಮು ಹೋಗೆಂದು ಹೇಳಿದ್ದರೆ ಅವನು ಹೋಗುತ್ತಿದ್ದ. ಆದರೆ ಕುಮು ಆಳಿನ ಸಂಗಡ ಹಾಬಲೂವಿಗೆ ಇಂದು ರಜ ಎಂದು ಹೇಳಿ ಬಿಟ್ಟಳು.

ಸೊಸೆ ಕೆಲವು ದಿನಗಳ ಮಟ್ಟಿಗೆ ತೌರುಮನೆಗೆ ಹೋಗುತ್ತಿದ್ದಾಳೆ ಎನ್ನುವ ಮಾತು ಕುಮುವಿನ ಪ್ರಯಾಣದ ಸಮಯದಲ್ಲಿ ಹೊಂದಲಿಲ್ಲ. ಈ ಮನೆ ಇಂದು ಅವಳನ್ನು ಪೂರ್ತಿಯಾಗಿ ಕಳೆದುಕೊಳ್ಳಲಿದೆ, ಎನ್ನುವ ಹಾಗೆಯೇ ಇತ್ತು. ಯಾವ ಪಕ್ಷಿಯನ್ನು ಪಂಜರದಲ್ಲಿ ಸೆರೆಯಾಗಿ ಇಟ್ಟಿದ್ದರೋ ಅದು ಇಂದು ಪಂಜರದ ಬಾಗಿಲು ಸ್ವಲ್ಪ ತೆರೆದೊಡನೆ ಹಾರಿಹೋಯಿತು, ಮತ್ತೆ ಎಂದಿಗೂ ಈ ಪಂಜರದೊಳಕ್ಕೆ ಬಾರದು."

ನವೀನನು :"ಅತ್ತಿಗೆ, ವಾಪಸ್ಸು ಬರುವುದಕ್ಕೆ ನಿದಾನ ಮಾಡಬೇಡ ಎಂದು ಮನಃಪೂರ್ವಕವಾಗಿ ಹೇಳುವುದಕ್ಕೆ ಆಗುವ ಹಾಗಿದ್ದರೆ ಹಾಯಾಗಿರುತ್ತಿದ್ದೆ. ಆದರೆ ಆ ಮಾತು ಬಾಯಿಂದ ಬಾ ಎಂದರು ಬಾರದು. ಯಾರ ಹತ್ತಿರ ನಿನಗೆ ತಕ್ಕ ವಿಶ್ವಾಸ, ಗೌರವ ಸಿಕ್ಕುತ್ತೇ ಅವರ ಹತ್ತಿರವೆ ಇದ್ದುಕೊಂಡಿರು. ಯಾವಾಗಲಾದರೂ ಅಕಸ್ಮಾತ್ ನವೀನನಿಂದ ಏನಾದರೂ ಉಪಯೋಗವಾಗುವ ಹಾಗಿದ್ದರೆ ಆಗ ಸ್ಮರಣೆ ಮಾಡಿಕೋ." ಎಂದ.

ಮೋತಿಯಮ್ಮನು ತನ್ನ ಕೈಯಿಂದಲೇ ತಯಾರಾದ ಮಾವಿನಕಾಯಿಯ ಮುರಬ್ಬ, ಮತ್ತು ಉಪ್ಪಿನಕಾಯಿ ಮುಂತಾದುವುಗಳನ್ನು ಒಂದು ಜಾಡಿಯಲ್ಲಿ ಭದ್ರವಾಗಿ ಸಿದ್ಧಮಾಡಿ, ಮೇನೆಯಲ್ಲಿಟ್ಟಳು, ಹೆಚ್ಚು ಮಾತೇನೂ ಆಡಲಿಲ್ಲ. ಆದರೆ ಅವಳ ಮನಸ್ಸಿನಲ್ಲಿ ಕುಮುವಿನ ಮೇಲೆ ಬೇಕಾ

ದಷ್ಟು ಆಕ್ಷೇಪಣೆಯಿತ್ತು. ಎಂದಿನವರೆಗೆ ಬಾಧೆಯು ಸ್ಥೂಲವಾಗಿತ್ತೋ, ಎಷ್ಟು ದಿನಗಳವರೆಗೆ ಮಧುಸೂದನ ಕುಮುವನ್ನು ಬಹಿರಂಗವಾಗಿ ಅವಮಾನ ಮಾಡುತ್ತಿದ್ದನೋ ಆವರೆಗೆ ಮೋತಿಯಮ್ಮನ ಸಹಾನುಭೂತಿಯಲ್ಲ ಕುಮುವಿನ ಮೇಲೆಯೇ ಇತ್ತು. ಆದರೆ ಯಾವ ಬಾಧೆ ಸೂಕ್ಷ್ಮವಾಗಿತ್ತೋ, ಮರ್ಮಾಂತಿಕವೋ, ವಿಶ್ಲೇಷಣ ಮಾಡಿದರೂ ಯಾವುದರ ರೀತಿಯನ್ನು ನಿರ್ಣಯಿಸಲು ಅಸಾಧ್ಯವೋ ಆ ಭಾಧೆಯ ಶಕ್ತಿಯೇ ಅತ್ಯಂತ ಪ್ರಚಂಡವಾದುದೆಂಬ ವಿಷಯವನ್ನು ಮೋತಿಯಮ್ಮ ತಿಳಿಯುವುದು ಕಷ್ಟವಾಗಿತ್ತು. ಗಂಡ ಯಾವ ಕ್ಷಣದಲ್ಲಿ ಪ್ರಸನ್ನನಾಗುವನೋ ಅದೇ ಕ್ಷಣದಲ್ಲಿ ವಿಳಂಬಮಾಡದೆ ಹೆಂಡತಿ ಅದನ್ನೇ ತನ್ನ ಸೌಭಾಗ್ಯವೆಂದು ಗಣಿಸಬೇಕು—ಇದೇ ಸ್ವಾಭಾವಿಕವೆಂದು ಮೋತಿಯಮ್ಮನ ಅಭಿಪ್ರಾಯ. ಇದಕ್ಕೆ ವಿರೋಧವಾದುದನ್ನು ಅಧಿಕ ಪ್ರಸಂಗವೆನ್ನುವಳು. ಅಷ್ಟೇ ಅಲ್ಲ—ಈ ವಿಷಯದಲ್ಲಿ ನವೀನನು ಕುಮುವಿನ ಪರವಾಗಿ ಅನುತಾಪ ಪಟ್ಟರೆ ಅವಳಿಗೆ ಕೋಪ ಬರುತ್ತಿತ್ತು. ಕುಮುವಿನ ಪ್ರಕೃತಿಗತವಾದ ವಿತೃಷ್ಣೆಯು ಸಂಪೂರ್ಣವಾಗಿ ನಿಷ್ಕಪಟವಾದುದು, ಇದು ಅಹಂಕಾರವಲ್ಲವೇ ಅಲ್ಲ, ಅಲ್ಲದೆ ಇದರ ಸಂಬಂಧವಾಗಿಯೇ ಕುಮು ತನ್ನಲ್ಲಿ ತಾನೇ ಹೋರಾಡಿ ಗೆಲ್ಲಲು ಅಸಾಧ್ಯವಾಗಿದೆ ಎನ್ನುವುದನ್ನು ಸಾಧಾರಣ ಹೆಂಗಸರು ನಂಬುವುದಿಲ್ಲ.

ಸಂಪ್ರದಾಯಕ್ಕೆ ಬಾಗಿದ ಯಾವ ಚೀಣಾ ಹೆಂಗಸೂ ತನ್ನ ಪಾದವನ್ನು ವಿಕೃತಿಗೊಳಿಸಲು ಅಡ್ಡಿ ಮಾಡುವುದಿಲ್ಲ. ಆಕೆಯು ಪ್ರಪಂಚದಲ್ಲಿ ತಮ್ಮ ಕಾಲನ್ನು ಸಣ್ಣದಾಗಿ ಮಾಡುವ ಪ್ರಯತ್ನಕ್ಕೆ ಒಪ್ಪುವುದೇ ಅವಮಾನಕರವೆನ್ನುವ ಹೆಂಗಸರೂ ಇರುವರೆಂದರೆ ಆ ಆಕ್ಷೇಪಣೆಯನ್ನು ತಾತ್ಸಾರ ಮಾಡಿ ನಕ್ಕು ಬಿಡುವಳು, ಎಂತಹ ಮೂರ್ಖತನ ಎಂದು ನಿಶ್ಚಯವಾಗಿ ಹೇಳುವಳು. ಯಾವುದು ನಿಷ್ಕಪಟವಾಗಿ ಸ್ವಾಭಾವಿಕವಾಗಿದೆಯೋ ಅದನ್ನೇ ಅಸ್ವಾಭಾವಿಕವೆನ್ನುವಳು. ಮೋತಿಯಮ್ಮನು ಒಂದು ಕಾಲದಲ್ಲಿ ಕುಮುವಿನ ದುಃಖ ನೋಡಿ ಎಲ್ಲರಿಗಿಂತಲೂ ಹೆಚ್ಚಾಗಿ ದುಃಖ ಪಟ್ಟಿದ್ದಳು. ಬಹುಶಃ ಅದಕ್ಕೋಸ್ಕರವಾಗಿಯೇ ಇಂದು ಅವಳ ಮನಸ್ಸು ಇಷ್ಟು ಕಠಿಣವಾಗಲು ತೊಡಗಿದೆ.

ಪ್ರತಿಕೂಲವಾಗಿದ್ದ ಅದೃಷ್ಟವು ಪ್ರಸನ್ನವಾಗಿ ವರ ಕೊಡುವುದಕ್ಕೆ ಬಂದಾಗ ಆಗ ಅದರ ಕಾಲಿಗೆ ಬಿದ್ದು ಯಾವ ಹೆಂಗಸು ತಾನೇ ನಿದಾನ ಮಾಡದೆ ಆ ವರವನ್ನು ಸ್ವೀಕರಿಸದೆ ಇರುತ್ತಾಳೆ? ಅಂತಹ ಹೆಂಗಸಿನ ಮೇಲೆ ಕೃಪೆ ತೋರಿಸುವುದು—ಅಷ್ಟೇಕೆ, ಕ್ಷಮಿಸುವುದು ಕೂಡ ಮೋತಿಯಮ್ಮನಿಗೆ ಅಸಾಧ್ಯ.

## ನಲವತ್ತಾರನೆಯ ಅಧ್ಯಾಯ

ಮನೆಯ ಎದುರಿಗೆ ಬಂದಕೂಡಲೇ ಮೇನೆಯ ಬಾಗಿಲನ್ನು ಸ್ವಲ್ಪ ತಳ್ಳಿ ಕುಮು ಮೇಲಕ್ಕೆ ನೋಡತೊಡಗಿದಳು. ನಿತ್ಯವೂ ಈ ವೇಳೆಯಲ್ಲಿ ವಿಪ್ರದಾಸನು ರಸ್ತೆಯ ಪಕ್ಕದ ವರಾಂಡದಲ್ಲಿ ಕೂತು ವಾರ್ತಾ ಪತ್ರಿಕೆಯನ್ನು ಓದುತ್ತಿದ್ದ. ಇವತ್ತು ನೋಡಿದರೆ ಅಲ್ಲಿ ಯಾರೂ ಇರಲಿಲ್ಲ.

ಇಂದು ಕುಮು ಇವರ ಮನೆಗೆ ಬರುವಳೆಂದು ವಿಪ್ರದಾಸನಿಗೆ ತಿಳಿಸಿರಲಿಲ್ಲ. ಮೇನೆಯ ಸಂಗಡ ಮಹಾರಾಜರ ಬಿಲ್ಲೆ, ದವಾಲಿ ಧರಿಸಿದ್ದ ಆಳನ್ನು ನೋಡಿ ಮನೆಯ ಬಾಗಿಲು ಕಾಯುವವನು ಗಾಬರಿಯಿಂದೆದ್ದು ಸಣ್ಣ ಅಮ್ಮಾವರು ಬಂದಿದಾರೆಂದು ತಿಳಿದುಕೊಂಡ. ಹೊರಮನೆಯ

ಅಂಗಳವನ್ನು ದಾಟಿ ಮೇನೆಯು ಅಂತಃಪುರದ ಕಡೆ ಹೋಗುತ್ತಿತ್ತು. ಕುಮು ಅದನ್ನು ಅಲ್ಲಿಯೇ ನಿಲ್ಲಿಸಿ ಕೆಳಗಿಳಿದು ಬೇಗ ಬೇಗ ಮೆಟ್ಟಲು ಹತ್ತಿ ಮಹಡಿಯ ಮೇಲೆ ಹೋದಳು. ಬೇರೆ ಯಾರೂ ನೋಡುವುದಕ್ಕೆ ಮುಂಚೆಯೇ, ಎಲ್ಲರಿಗೂ ಮೊದಲು, ಅಣ್ಣನನ್ನು ನೋಡಬೇಕೆಂದು ಅವಳ ಆಸೆ. ಹೊರಗಿನ ವಿಶ್ರಾಂತಿಯ ಕೊಠಡಿಯಲ್ಲೇ ರೋಗಿಯಾದ ಅಣ್ಣನು ಇರುವುದಕ್ಕೆ ವ್ಯವಸ್ಥೆಯಾಗಿರುತ್ತೆಂದು ಅವಳು ಖಂಡಿತ ತಿಳಿದಿದ್ದಳು. ಅಲ್ಲಿ ಕಿಟಕಿಯ ಕಡೆಯಿಂದ ಹೊರಗಡೆ ತೋಟದಲ್ಲಿನ ಸಂಪಿಗೆ, ಪಾದರಿ ಮತ್ತು ಅಶ್ವತ್ಥ ಮರಗಳ ಕುಂಭ ಸಭೆಯನ್ನು ನೋಡಬಹುದಾಗಿತ್ತು. ಬೆಳಗಿನ ಬಿಸಿಲು ಮರಗಳ ರೆಂಬೆ, ಎಲೆಗಳ ಮೂಲಕ ಈ ಕೊಠಡಿಯಲ್ಲೇ ಮೊದಲು ಕಾಣಿಸಿಕೊಳ್ಳುವುದು. ಈ ಕೋಣೆಯೇ ವಿಪ್ರದಾಸನಿಗೆ ಬಹಳ ಇಷ್ಟವಾಗಿರುವುದು. ಕುಮು ಮೆಟ್ಟಲು ಹತ್ತಿ ಮೇಲೆ ಬಂದೊಡನೆ ಎಲ್ಲಕ್ಕೂ ಮುಂಚೆ ಟಾಮ್ ಎಂಬ ವಿಪ್ರದಾಸನ ನಾಯಿ ಓಡಿಕೊಂಡು ಬಂದು ಅವಳ ಮೈಮೇಲೆ ಹಾರಿ ಹಾರಿ ಬೀಳುತ್ತಾ ಬಾಲವನ್ನಾಡಿಸುತ್ತ ಬೊಗಳುತ್ತ ಅವಳಿಗೆ ಬೇಸರ ಮಾಡಿಬಿಟ್ಟಿತು. ಕುಮುವಿನ ಜೊತೆಯಲ್ಲಿಯೇ ಬೊಗಳುತ್ತಾ ಬೊಗಳುತ್ತಾ ನೆಗೆಯುತ್ತಾ ಟಾಮ್ ಹೊರಟಿತು.

ವಿಪ್ರದಾಸನು ಒಂದು ಎತ್ತರವಾದ ಬೆನ್ನುಳ್ಳ ಸೋಫಾದ ಮೇಲೆ ಒರಗಿಕೊಂಡು ಅರ್ಧ ಮಲಗಿರುವ ಅವಸ್ಥೆಯಲ್ಲಿದ್ದ. ಚಾಚಿದ್ದ ಕಾಲುಗಳ ಮೇಲೆ ಚೀಟಿಯ ರಜಾಯಿ ಹೊದ್ದುಕೊಂಡಿದ್ದ. ಪುಸ್ತಕವೊಂದನ್ನು ಹಿಡಿದಿದ್ದ ಬಲಗೈ ಹಾಸುಗೆಯ ಮೇಲೆ ನೀಡಿಕೊಂಡಿತ್ತು. ದಣಿವಾಗಿ ಆಗತಾನೇ ಓದುವುದನ್ನು ನಿಲ್ಲಿಸಿದಂತಿತ್ತು. ಚಾ ಕಪ್ಪು ಮತ್ತು ತಿಂದು ಮಿಕ್ಕಿದ್ದ ರೊಟ್ಟಿಯ ತುಣುಕುಗಳ ಸಮೇತ ಒಂದು ತಟ್ಟೆ ಪಕ್ಕದದಲ್ಲಿ ನೆಲದ ಮೇಲೆ ಇತ್ತು, ತಲೆಯ ಕಡೆ ಗೋಡೆಯಲ್ಲಿನ ಅಲಮಾರಿನ ಷೆಲ್ಫುಗಳಲ್ಲಿ ಅನೇಕ ಪುಸ್ತಕಗಳು ತಲೆಕೆಳಕಾಗಿ, ಅಸ್ತವ್ಯಸ್ತವಾಗಿ ಬಿದ್ದಿದ್ದುವು. ರಾತ್ರಿ ಹೊತ್ತಿಸಿ ಉರಿಯುತ್ತಿದ್ದ ದೀಪ ಹೊಗೆಯ ಕರೆಗಳಿಂದ ಕೂಡಿ ಕೋಣೆಯ ಮೂಲೆಯಲ್ಲೊಂದು ಕಡೆ ಬಿದ್ದಿತ್ತು.

ಕುಮು ವಿಪ್ರದಾಸನ ಮುಖದ ಕಡೆ ನೋಡಿ ಬೆಚ್ಚು ಬಿದ್ದಳು. ಅವನ ಮುಖ ಇಷ್ಟು ಕೃಶವಾಗಿ, ಇಷ್ಟು ಬಿಳಿಚಿಕೊಂಡಿದ್ದುದನ್ನು ಅವಳೆಂದೂ ನೋಡಿರಲಿಲ್ಲ. ಅಂದಿನ ವಿಪ್ರದಾಸನಿಗೂ ಇಂದಿನ ವಿಪ್ರದಾಸನಿಗೂ ಎಷ್ಟೋ ಯುಗಗಳ ವ್ಯತ್ಯಾಸವಿದ್ದಂತಿತ್ತು ಅಣ್ಣನ ಕಾಲ ಬಳಿ ತಲೆಯಿಟ್ಟು ಕುಮು ಅಳುವುದಕ್ಕೆ ತೊಡಗಿದಳು.

"ಕುಮು, ಬಂದೆಯಾ....ಬಾ.... ಈ ಕಡೆ ಬಾ" ಎಂದು ವಿಪ್ರದಾಸನು ಅವಳನ್ನು ಪಕ್ಕದಲ್ಲಿ ಎಳೆದು ಕೂಡಿಸಿಕೊಂಡ. ತನ್ನ ಕಾಗದದಲ್ಲಿ ಅವಳನ್ನು ಬರಬೇಕಾಗಿಲ್ಲವೆಂದು ಒಂದು ಬಗೆಯಾಗಿ ಹೇಳಿದ್ದರೂ ಅವಳು ಬಂದೇ ಬರುತ್ತಾಳೆಂದು ಮನಸ್ಸಿನಲ್ಲಿ ಆಸೆಯಿಟ್ಟುಕೊಂಡಿದ್ದ.

ಅವಳು ಬರಲು ಸಾಧ್ಯವಾದುದನ್ನು ಕಂಡು ಹಾಗಾದರೆ ಅವಳಿಗೇನೂ ಆತಂಕಗಳಿದ್ದ ಹಾಗೆ ಕಾಣುವುದಿಲ್ಲ, ಕುಮುವಿಗೆ ಅವಳ ಸಂಸಾರ ಸಹಜವಾಗಿ ಹೋಗಿರುವ ಹಾಗಿದೆ. ಪರವಾಯಿಲ್ಲ" ಎಂದು ಸಮಾಧಾನ ಪಟ್ಟ. ರೂಢಿಯಂತೆ ಇವರ ಕಡೆಯಿಂದಲೇ ಕುಮುವನ್ನು ಬರಹೇಳಬೇಕಾಗಿತ್ತು. ಮೇನೆಯನ್ನು ಆಳುಗಳನ್ನು, ಇವರೇ ಕಳುಹಿಸಬೇಕಾಗಿತ್ತು. ಆದರೆ ಹಾಗೆ ಮಾಡದೆ ಹೋದರೂ ಕೂಡ ಕುಮು ತಾನಾಗಿಯೇ ಬಂದದ್ದನ್ನು ನೋಡಿ,ಕುಮುವಿಗೆ ಆ ಮನೆಯಲ್ಲಿದ್ದ ಸ್ವಾತಂತ್ರ್ಯವೆಷ್ಟಿರಬಹುದೆಂದು ಊಹಿಸಿಕೊಂಡ. ಮಧುಸೂದನನ ಮನೆಯಲ್ಲಿ ಅಂತಹ ಸಂಭವ

ವನ್ನು ವಿಪ್ರದಾಸನು ನಿರೀಕ್ಷಿಸಿಯೇ ಇರಲಿಲ್ಲ.

ಕುಮು ಅವಳ ಎರಡು ಕೈಗಳಿಂದಲೂ ವಿಪ್ರದಾಸನ ಕೆದರಿದ ಗುಂಗುರು ಕೂದಲನ್ನು ಸರಿ ಮಾಡುತ್ತಾ "ಅಣ್ಣ, ನಿನ್ನ ಮುಖವೇಕೆ ಹೀಗಾಗಿದೆ?" ಎಂದಳು.

"ನನ್ನ ಮುಖ ಚೆನ್ನಾಗಿ ಆಗುವಂತಹದು ಏನೂ ಈ ನಡುವೆ ಸಂಭವಿಸಿಲ್ಲ. ಆದರೆ ನಿನ್ನ ಮುಖವೇನು ಹೀಗೆ ಆಗಿದೆ? ಬಿಳಿಚಿಕೊಂಡು ಬಿಟ್ಟಿದ್ದೀಯಲ್ಲೇ?"

ಈ ಮಧ್ಯೆ ಸಮಾಚಾರ ತಿಳಿದು ಕ್ಷೇಮಾ ಅತ್ತೆ ಬಂದು ನಿಂತಳು. ಅವಳ ಹಿಂದೆಯೇ ಬಾಗಿಲ ಬಳಿ, ಮನೆಯ ಬಳಿ, ಮನೆಯ ದಾಸ, ದಾಸಿಯರು ಗುಂಪು ಸೇರಿ ನಿಂತರು. ಕ್ಷೇಮಾ ಅತ್ತೆಗೆ ಪ್ರಣಾಮ ಮಾಡುತ್ತಲೂ ಆಕೆ ಅವಳನ್ನು ಎದೆಗಪ್ಪಿಕೊಂಡು ಹಣೆಯನ್ನು ಚುಂಬಿಸಿದಳು. ದಾಸ ದಾಸಿಯರು ಬಂದು ಪ್ರಣಾಮ ಮಾಡಿದರು. ಎಲ್ಲರೊಡನೆಯೂ ಕುಶಲ ಪ್ರಶ್ನೆಗಳಾದ ಮೇಲೆ ಕುಮು "ಅತ್ತೆ, ಅಣ್ಣನ ಮುಖ ಯಾಕೋ ಬಹಳ ಕೆಟ್ಟಿದೆಯಲ್ಲಾ?" ಎಂದಳು.

"ಕೆಟ್ಟಿರುವುದಕ್ಕೆ ಸಾಧ್ಯ, ಏನು ಮಾಡೋಣ ಹೇಳು. ನಿನ್ನ ಕೈಯಿಂದ ಸೇವೆ ಪಡೆವ ಹೊರತು ಅವನ ಮೈ ಬೇರೆ ಏತರಿಂದಲೂ ಚೆನ್ನಾಗಿ ಆಗಲು ಇಷ್ಟಪಡುವುದಿಲ್ಲ. ಎಷ್ಟು ದಿನಗಳ ಅಭ್ಯಾಸ ಅದು."

ವಿಪ್ರದಾಸನು "ಅತ್ತೇ, ಕುಮುವನ್ನು ಊಟ ಮಾಡು ಅಂತ ಹೇಳುವುದಿಲ್ಲವೆ?" ಎಂದ.

"ಊಟ ಮಾಡದೆ ಇರುತಾಳೆಯೇ? ಅದನ್ನೂ ಹೇಳಬೇಕೆ ಅವಳಿಗೆ? ಅವರ ಮನೆಯ ಆಳುಗಳಿಗೆ, ಮೇನೆ ಹೊರುವ ಬೋಯಿಗಳಿಗೆ ಎಲ್ಲರಿಗೂ ಊಟಕ್ಕೆ ಕೂಡಿಸಿದ್ದೇನೆ. ಅವರಿಗೆ ಮೊದಲು ಬಡಿಸಿ ಬರುತ್ತೇನೆ, ನೀವಿಬ್ಬರೂ ಮಾತಾಡುತಾ ಇರಿ. ನಾನು ಬರುತ್ತೇನೆ."

ವಿಪ್ರದಾಸನು ಕ್ಷೇಮಾ ಅತ್ತೆಯನ್ನು ಸನ್ನೆ ಮಾಡಿ ಹತ್ತಿರ ಕರೆದು ಕಿವಿಯಲ್ಲಿ ಏನೋ ಹೇಳಿದನು. ಕುಮುವಿನ ಮನೆಯ ಪರಿವಾರದವರನ್ನು ಹೇಗೆ ಉಪಚರಿಸಿ ಕಳುಹಿಸಬೇಕೆಂದೇನೋ ಸಲಹೆ ಕೊಡುತ್ತಿದ್ದಾನೆಂದು ಅವಳಿಗೆ ಗೊತ್ತಾಯಿತು. ಈ ಪರಾಮರ್ಶದ ಮಧ್ಯೆ ಕುಮು ಈಗ ಎದುರು ಪಕ್ಷದವಳಾಗಿ ಬಿಟ್ಟಿದಾಳೆ. ಅವಳ ಅಭಿಪ್ರಾಯವೇ ಈಗ ಅಗತ್ಯವಿಲ್ಲ. ಇದು ಅವಳಿಗೆ ಸ್ವಲ್ಪವೂ ಮನಸ್ಸಿಗೆ ಹಿತವಾಗಿರಲಿಲ್ಲ. ಅವಳೂ ಅದಕ್ಕೆ ತಕ್ಕ ಮುಯ್ಯಿ ತೀರಿಸಿಕೊಳ್ಳಲು ಯೋಚಿಸಿದಳು. ಈ ಮನೆಯಲ್ಲಿ ಅವಳ ಚಿರಕಾಲವಿದ್ದ ಸ್ಥಾನವನ್ನು ಹಿಂದೆ ಪಡೆಯುವ ಸನ್ನಾಹದಲ್ಲಿ ತೊಡಗಿದಳು.

ಮೊಟ್ಟಮೊದಲು ಅಣ್ಣನ ಪರಿಚಾರಕನಾದ ಗೋಕುಲನಿಗೆ ಪಿಸುಮಾತಿನಲ್ಲಿ ಏನೋ ಅಪ್ಪಣೆಮಾಡಿದಳು. ಅದಾದ ಮೇಲೆ ತನ್ನ ಮನಸ್ಸಿಗೆ ಒಪ್ಪುವಂತೆ ಕೋಣೆಯನ್ನು ಸಜ್ಜುಗೊಳಿಸಲು ತೊಡಗಿದಳು. ಕೋಣೆಯಲ್ಲಿ ಬಿದ್ದಿದ್ದ ತಟ್ಟೆ, ಕಪ್ಪು, ಲ್ಯಾಂಪು, ಖಾಲಿ ಸೋಡಾಸೀಸಾಯಿ, ಒಂದು ಬೆತ್ತ ಕಿತ್ತುಹೋಗಿದ್ದ ಕುರ್ಚಿ, ಕೆಲವು ಕೊಳೆಯಾದ ಟವಲುಗಳು ಮತ್ತು ಜುಬ್ಬಗಳು.... ಇವುಗಳನ್ನೆಲ್ಲಾ ಹೊರಗಿನ ವರಾಂಡಕ್ಕೆ ಸಾಗಿಸಿದ್ದಳು. ಅಲಮಾರಿನಲ್ಲಿದ್ದ ಪುಸ್ತಕಗಳನ್ನೆಲ್ಲಾ ಸರಿಯಾಗಿ ಜೋಡಿಸಿಟ್ಟಳು. ಅಣ್ಣನ ಕೈಗೆ ಎಟುಕುವಂತೆ ಟೀಪಾಯ್ ಒಂದನ್ನು ಚೊಕ್ಕಟ ಮಾಡಿ ತಂದಿಟ್ಟು ಅದರ ಮೇಲೆ ಅವನು ಓದುವ ಪುಸ್ತಕ,ಮಸಿಯ ಕುಡಿಕೆ, ಲೇಖನಿಯ ಸ್ಟ್ಯಾಂಡು, ಬ್ಲಾಟಿಂಗ್ ಪ್ಯಾಡ್, ಕುಡಿಯಲು ತಣ್ಣೀರಿನ ಹೂಜಾ ಮತ್ತು ಒಂದು ಗ್ಲಾಸು, ಚಿಕ್ಕದೊಂದು ಕನ್ನಡಿ ಮತ್ತು ತಲೆ ಸರಿಮಾಡಿಕೊಳ್ಳುವ ಬ್ರಷ್. ಮುಂತಾದುವನ್ನು ಅಣಿ ಮಾಡಿ ಇಟ್ಟಳು.

ಈ ಮಧ್ಯೆ ಗೋಕುಲನು ಒಂದು ಹಿತ್ತಾಳೆಯ ಪಾತ್ರೆಯಲ್ಲಿ ಬಿಸಿನೀರನ್ನೂ ಮತ್ತೊಂದು ಹಿತ್ತಾಳೆಯ ಡಬರಿ, ಮತ್ತು ಚೊಕ್ಕಟವಾದ ಟವಲುಗಳು ಇವುಗಳನ್ನೂ ತಂದು ಬೆತ್ತದ ಕುರ್ಚಿಯ ಮೇಲಿಟ್ಟನು. ವಿಪ್ರದಾಸನನ್ನು ಕೇಳದೆಯೇ ಕುಮು ಬಿಸಿನೀರಿನಲ್ಲಿ ಟವಲನ್ನು ನೆನೆಸಿ ಅವನ ಮುಖ, ಕೈಗಳನ್ನು ಚೆನ್ನಾಗಿ ಒರಸಿ ಅವನ ಕೂದಲನ್ನು ಬಾಚಿದಳು. ವಿಪ್ರದಾಸನು ಮಗುವಿನಂತೆ ಸುಮ್ಮನೆ ಸೈರಿಸಿಕೊಂಡು ಕೂತಿದ್ದನು. ಯಾವಾಗ ಯಾವ ಔಷಧವನ್ನು ಕುಡಿಸ ಬೇಕು ಮತ್ತು ಪಥ್ಯದ ನಿಯಮವೇನು ಇತ್ಯಾದಿ ಎಲ್ಲವನ್ನೂ ಕೇಳಿ ತಿಳಿದುಕೊಂಡು ತನ್ನ ಜೀವನದಲ್ಲಿ ಬೇರೆಲ್ಲೂ ತನಗೆ ಬಾಧ್ಯತೆಯೇ ಇಲ್ಲವೆನ್ನುವಂತೆ ಏರ್ಪಡಿಸಿಕೊಂಡು ಕೂತಳು. ವಿಪ್ರದಾಸನು ಇವೆಲ್ಲದರ ಅರ್ಥವೇನು ಎಂದು ಆಶ್ಚರ್ಯದಿಂದ ಯೋಚಿಸತೊಡಗಿದ. ನೋಡಿಕೊಂಡು ಹೋಗುವುದಕ್ಕೆ ಬಂದಿದಾಳೆ ಎಂದುಕೊಂಡ. ಆದರೆ ಇವಳ ನಡೆವಳಿಕೆ ಮಾತ್ರ ಹಾಗಿಲ್ಲ, ಮಾದನ ಮನೆಯಲ್ಲಿ ಕುಮುವಿನ ಸ್ಥಿತಿ ಯಾವ ರೀತಿಯಲ್ಲಿದೆ ಎಂದು ತಿಳಿಯಲು ತವಕಪಟ್ಟನು, ಆದರೆ ಸ್ಪಷ್ಟವಾಗಿ ಅವಳನ್ನೇ ಕೇಳಲು ಸಂಕೋಚವಾಯಿತು. ಕುಮುವಿನ ಬಾಯಿಂದಲೇ ಆ ವಿಷಯವನ್ನು ಕೇಳಬೇಕೆಂದು ಆಸೆಯಿಂದಿದ್ದ. ಒಂದು ಸಲ ಬಹಳ ನಿದಾನವಾಗಿ "ನೀನು ಇವತ್ತು ಎಷ್ಟು ಹೊತ್ತಿಗೆ ಹೋಗ ಬೇಕು ?" ಎಂದು ಕೇಳಿದ.

ಕುಮು "ಇವತ್ತು ಹೋಗಬೇಕಾಗಿಲ್ಲ" ಎಂದಳು.

ವಿಪ್ರದಾಸನು ವಿಸ್ಮಿತನಾಗಿ "ಇದರಿಂದ ನಿಮ್ಮತ್ತೆಯ ಮನೆಯಲ್ಲಿ ಯಾವ ಆಕ್ಷೇಪಣೆಯೂ ಇಲ್ಲವಲ್ಲ?" ಎಂದ.

"ಇಲ್ಲ. ನಮ್ಮ ಯಜಮಾನರ ಒಪ್ಪಿಗೆಯಿದೆ."

ವಿಪ್ರದಾಸನು ಸುಮ್ಮನಾದ. ಕುಮು ಕೋಣೆಯ ಮೂಲೆಯಲ್ಲಿದ್ದ ಟೇಬಲೊಂದರ ಮೇಲೆ ಒಂದು ಚೌಕವನ್ನು ಹಾಸಿ ಅದರ ಮೇಲೆ ಔಷಧಿಯ ಸೀಸೆ ಮುಂತಾದುವನ್ನು ಜೋಡಿಸಿಡುವುದರಲ್ಲಿ ಮಗ್ನಳಾದಳು. ಸ್ವಲ್ಪ ಹೊತ್ತಾದ ಮೇಲೆ ವಿಪ್ರದಾಸನು ಹಾಗಾದರೆ ನೀನು ನಾಳೆ ಹೋಗ ಬೇಕೇನು ?" ಎಂದ.

"ಇಲ್ಲಣ್ಣ. ಈಗ ನಾನು ಕೆಲವು ದಿವಸ ನಿನ್ನ ಹತ್ತಿರವೇ ಇರುತ್ತೇನೆ."

ನಾಯಿ ಟಾಮಿ ಸೋಫಾದ ಕೆಳಗಡೆ ಶಾಂತವಾಗಿ ನಿದ್ರೆ ಮಾಡಲುದ್ಯುಕ್ತವಾಗಿತ್ತು. ಕುಮು ಆದರ ಪೂರ್ವಕವಾಗಿ ಅದನ್ನು ತಡವಿ ಅದರ ವಿಶ್ವಾಸದ ಹುಮ್ಮಸ್ಸನ್ನು ಕೆರಳಿಸಿದಳು. ಅದು ಅವಳ ಬಳಿಗೆ ನೆಗೆದು ಬಂದು ಅವಳ ತೊಡೆಯ ಮೇಲೆ ತನ್ನ ಮುಂಗಾಲುಗಳನ್ನು ಇಟ್ಟು ನಾಯಿಗಳ ಭಾಷೆಯಲ್ಲಿಯೇ ದೊಡ್ಡ ಸ್ವರದಲ್ಲಿ ಮಾತಾಡಲು ಆರಂಭ ಮಾಡಿಬಿಟ್ಟಿತು. ಕುಮು ಬೇಕೆಂದೇ ಈ ಗಲಾಟೆಯನ್ನೆಬ್ಬಿಸಿ ಅದರ ಹಿಂದೆ ತನ್ನನ್ನೇ ಮರೆ ಮಾಡಿಕೊಳ್ಳಬೇಕೆಂದಿದ್ದಾಳೆಂದು ವಿಪ್ರದಾಸನಿಗೆ ಗೊತ್ತಾಗಿಹೋಯಿತು.

ಸ್ವಲ್ಪ ಹೊತ್ತಾದ ಮೇಲೆ ನಾಯಿಯ ಸಂಗಡ ಆಡುವುದನ್ನು ನಿಲ್ಲಿಸಿ ಕುಮು ಮುಖವೆತ್ತಿ "ಅಣ್ಣ, ನೀನು ಬಾರ್ಲಿ ಗಂಜಿ ಕುಡಿಯುವ ಸಮಯವಾಯಿತು. ತಂದು ಕೊಡಲೇ ?" ಎಂದಳು.

"ಇಲ್ಲ. ಇನ್ನೂ ಸಮಯವಾಗಿಲ್ಲ" ಎಂದು ಕುಮುವಿಗೆ ಸನ್ನೆಮಾಡಿ ಕರೆದು ಹಾಸುಗೆಯ ಪಕ್ಕದ ಕುರ್ಚಿಯಮೇಲೆ ಕೂಡಿಸಿಕೊಂಡ. ತನ್ನ ಕೈಯಲ್ಲಿ ಅವಳ ಕೈಯನ್ನು ಎತ್ತಿ ಹಿಡಿದುಕೊಂಡು "ಕುಮೂ, ನನ್ನ ಹತ್ತಿರ ಎಲ್ಲಾ ಬಿಚ್ಚಿ ಹೇಳು. ಹೇಗಿದೆ ಅಲ್ಲಿ ನಿನ್ನ ಸ್ಥಿತಿ ?" ಎಂದ.

ಆ ಕ್ಷಣದಲ್ಲಿ ಕುಮು ಏನೂ ಹೇಳಲಾರದೆ ಹೋದಳು. ತಲೆ ತಗ್ಗಿಸಿಕೊಂಡು ಕೂತೇ ಇದ್ದಳು. ನೋಡ ನೋಡುತ್ತ ಮುಖ ಕೆಂಪಗಾಗಿಹೋಯಿತು. ಬಾಲ್ಯದಲ್ಲಿದ್ದಂತೆ ವಿಪ್ರದಾಸನ ವಿಶಾಲವಾದ ವಕ್ಷದ ಮೇಲೆ ತಲೆಯಿಟ್ಟುಕೊಂಡು ಅಳತೊಡಗಿದಳು.

"ಅಣ್ಣ, ನಾನು ಎಲ್ಲ ತಪ್ಪು ತಿಳಿದು ಕೊಂಡುಬಿಟ್ಟಿದ್ದೆ. ನನಗೇನೂ ಗೊತ್ತಿರಲಿಲ್ಲ." ಎಂದಳು.

ವಿಪ್ರದಾಸನು ಮೃದುವಾಗಿ ಅವಳ ತಲೆಯ ಮೇಲೆ ಕೈಯಾಡಿಸುತ್ತ ಸ್ವಲ್ಪ ಹೊತ್ತಾದ ಮೇಲೆ "ನಾನು ಸರಿಯಾದ ರೀತಿಯಲ್ಲಿ ನಿನಗೆ ಕಲಿಸಬೇಕಾದ್ದೆಲ್ಲ ಕಲಿಸಲಾಗಲಿಲ್ಲಮ್ಮ. ಅಮ್ಮ ಇದ್ದಿದ್ದರೆ ನೀನು ಅತ್ತೆಯ ಮನೆಯಲ್ಲಿ ಸಂಸಾರ ಮಾಡಲು ತಕ್ಕಂತೆ ತಯಾರು ಮಾಡುತ್ತಿದ್ದಳು" ಎಂದ.

ಕುಮು "ನಾನು ನಿಮ್ಮನ್ನು ಮಾತ್ರ ಸರಿಯಾಗಿ ಸಂಪೂರ್ಣವಾಗಿ ತಿಳಿದಿದ್ದೆ. ಇಲ್ಲಿಂದ ಬಿಟ್ಟು ಬೇರೆ ಜಾಗಕ್ಕೆ ಹೋದರೆ ಇಷ್ಟು ಮಟ್ಟಿಗೆ ವ್ಯತ್ಯಾಸವಿರುತ್ತೆಂದು ನಾನು ಯೋಚಿಸಿಯೇ ಇರಲಿಲ್ಲ. ಚಿಕ್ಕ ವಯಸ್ಸಿನಿಂದ ನಾನು ಏನೇನು ಕನಸು ಕಾಣುತ್ತಿದ್ದೆನೋ, ಏನೇನು ಊಹೆ ಮಾಡಿಕೊಂಡಿದ್ದೆನೋ ಅವೆಲ್ಲ ನಿನ್ನ ಬಾಳಿನ ಪಡಿಯಚ್ಚಿನದೇ. ಅದಕ್ಕಾಗಿಯೇ ಮನಸ್ಸಿನಲ್ಲೇನೂ ಭಯವಾಗಲಿಲ್ಲ. ಅಪ್ಪ ಅಮ್ಮನಿಗೆ ಎಷ್ಟೋ ಸಲ ಬಹಳ ಕಷ್ಟ ಕೊಟ್ಟಿದ್ದುದನ್ನು ನೋಡಿದ್ದೆ. ಆದರೆ ಅದೊಂದು ಕೆಟ್ಟ ಹಠದಿಂದ. ಅದರ ಪೆಟ್ಟು ಹೊರಗಡೆ ಮಾತ್ರ. ಒಳಗಡೆಯಿಲ್ಲ. ಇಲ್ಲಿಯಾದರೆ ಎಲ್ಲ ಒಳಗೊಳಗೇ ನನಗೆ ಅಪಮಾನ ಮಾಡುವಂತಿದೆ" ಎಂದಳು.

ವಿಪ್ರದಾಸನು ಯಾವ ಮಾತನ್ನೂ ಆಡದೆ ದೀರ್ಘ ನಿಶ್ವಾಸ ಬಿಟ್ಟು ಸುಮ್ಮನೆ ಕೂತು ಯೋಚಿಸಲು ತೊಡಗಿದ. ಮಧುಸೂದನನು ತಮ್ಮಿಂದ ಸಂಪೂರ್ಣವಾಗಿ ಭಿನ್ನವಾದ ಬೇರೊಂದು ಜಗತ್ತಿನ ಮನುಷ್ಯನೆಂಬುದನ್ನು ಅಂದು ಲಗ್ನದ ಮುಹೂರ್ತದಾರಭ್ಯ ತಿಳಿದುಕೊಂಡುಬಿಟ್ಟಿದ್ದ. ಅಂದಿನ ವಿಷಮ ಉದ್ವೇಗದಿಂದಲೇ ಅವನ ದೇಹಸ್ಥಿತಿ ಅಷ್ಟು ಕೆಟ್ಟು ಹೋಗಿ ಇನ್ನು ಯಾವ ರೀತಿಯಲ್ಲೂ ಸ್ವಸ್ಥವಾಗದಂತಿರುವುದು. ಈ ಹೆಬ್ಬಾವಿನ ಬಾಯಿಂದ ಕುಮುವನ್ನು ಉದ್ಧಾರ ಮಾಡುವುದಕ್ಕೆ ಯಾವ ದಾರಿಯೂ ತೋರಲಿಲ್ಲ. ಎಲ್ಲಕ್ಕಿಂತಲೂ ದೊಡ್ಡ ಕಷ್ಟವೇನೆಂದರೆ, ಈ ಮನುಷ್ಯನ ಹತ್ತಿರದ ಸಾಲಕ್ಕೆ ತನ್ನ ಸಂಪತ್ತೆಲ್ಲಾ ಆಧಾರವಾಗಿದ್ದುದು. ಈ ಅವಮಾನಕರವಾದ ಸಂಬಂಧದ ಶಿಖಿತ ಕುಮುವಿಗೂ ತಗಲುತ್ತದೆ. ಇಷ್ಟು ದಿನವೂ ರೋಗದ ಹಾಸಿಗೆಯಲ್ಲಿ ಮಲಗಿ ವಿಪ್ರದಾಸನು ಸುಮ್ಮನೆ ಯೋಚಿಸಿದ್ದುದು ಇದೊಂದೇ—ಯಾವ ರೀತಿಯಾಗಿ ಈ ಹಾಳು ಸಾಲದಿಂದ ಬಿಡುಗಡೆ ಹೊಂದುವುದು ಎಂದು; ಕುಮುವಿನ ಅತ್ತೆಯ ಮನೆಯವರೊಂದಿಗೆ ಅವನ ಈ ಸಾಲದ ಸಂಬಂಧವಾದ ವ್ಯವಹಾರಕ್ಕೆ ಬಾಂಧವ್ಯದ ಅಡ್ಡಿ ಬಂದಿತೇನೋ ಎಂತೆ; ಅವನು ಕಲಿಕತ್ತೆಗೆ ಬರಲು ಹಿಂಜರಿಯುತ್ತಿದ್ದುದು. ಕುಮುವಿನ ಮೇಲೆ ಅವನಿಗಿದ್ದ ಸ್ವಾಭಾವಿಕ ಸ್ನೇಹದ ಅಧಿಕಾರವು ಅಡಿಗಡಿಗೂ ಅವಮಾನಿತವಾಗಬಹುದೆಂದು ಹೆದರಿ ಅವನು ನೂರ ನಗರದಲ್ಲಿಯೇ ವಾಸಮಾಡತೊಡಗಿದ್ದ. ಬೇರೆ ಯಾರಾದರೊಬ್ಬ ಸಾಹುಕಾರನ ಹತ್ತಿರ ಸಾಲ ತೆಗೆದುಕೊಳ್ಳುವ ಏರ್ಪಾಡಿಗೋಸುಗವೇ ಅವನು ಕಲಿಕತ್ತೆಗೆ ಬರಬೇಕಾಯಿತು. ಇದು ಅತ್ಯಂತ ದುಸ್ಸಾಧ್ಯವೆಂದು ಗೊತ್ತು. ಅದಕ್ಕಾಗಿಯೇ ಇದರ ದುಶ್ಚಿಂತೆಯ ಹೊರೆ ಅವನ ಎದೆಯ ಮೇಲೆ ಭಾರವಾಗಿ ಕುಳಿತಿತ್ತು.

ಸ್ವಲ್ಪ ಹೊತ್ತಾದ ಮೇಲೆ ಕುಮು ವಿಪ್ರದಾಸನಿಂದ ಬೇರೊಂದು ದಿಕ್ಕಿಗೆ ತಿರುಗಿಕೊಂಡು "ಒಳ್ಳೆಯದಣ್ಣ, ಗಂಡನ ಕಡೆ ನನ್ನ ಮನಸ್ಸನ್ನು ಯಾವ ರೀತಿಯಲ್ಲೂ ಒಲಿಸಲಾರದೆ ಹೋದೆನಲ್ಲ "ಇದು ಪಾಪವೇನು ?" ಎಂದು ಕೇಳಿದಳು.

"ಕುಮು, ನಿನಗೆ ಇದು ಗೊತ್ತಿಲ್ಲವೇ....ಪಾಪ ಪುಣ್ಯಗಳ ವಿಷಯದಲ್ಲಿ ನನ್ನ ಅಭಿಪ್ರಾಯ. ಶಾಸ್ತ್ರಗಳೊಂದಿಗೆ ಹೊಂದುವುದಿಲ್ಲ ಅಂತ."

ಕುಮು ಅನ್ಯಮನಸ್ಕ ಭಾವದಲ್ಲಿ ಚಿತ್ರಗಳಿರುವ ಒಂದು ಇಂಗ್ಲೀಷು ಮಾಸ ಪತ್ರಿಕೆಯ ಹಾಳೆಗಳನ್ನು ತಿರುವಿ ಹಾಕಲು ತೊಡಗಿದಳು. ವಿಪ್ರದಾಸ "ಬೇರೆ ಬೇರೆ ವ್ಯಕ್ತಿಗಳ ಜೀವನವು ಅವರವರ ಘಟನೆಗಳಲ್ಲಿಯೂ, ಅವಸ್ಥೆಗಳಲ್ಲಿಯೂ ಎಷ್ಟೇ ಭಿನ್ನವಾಗಿದ್ದರೂ, ಸರಿ ತಪ್ಪುಗಳ ಸಾಧಾರಣ ನಿಯಮವನ್ನು ಅತ್ಯಂತ ದೃಢವಾಗಿ ನಿರ್ಣಯಿಸಿ ಬಿಟ್ಟರೆ ಎಷ್ಟೋ ಸಲ ಅದು ಬರಿಯ ನಿಯಮವಾಗಿ ಉಳಿಯುವುದೇ ಹೊರತು ಧರ್ಮವಾಗುವುದಿಲ್ಲ, ಎಂದನು. ಕುಮು ಮಾಸ ಪತ್ರಿಕೆಯ ಕಡೆ ತಲೆ ತಗ್ಗಿಸಿಕೊಂಡು "ಮೀರಾ ಬಾಯಿಯ ಜೀವನವಿಲ್ಲವೇ, ಹಾಗೆ ತಾನೇ ?" ಎಂದಳು.

ತನ್ನ ಮನಸ್ಸಿನಲ್ಲಿ ಯಾವುದು ಕರ್ತವ್ಯ, ಯಾವುದು ಕರ್ತವ್ಯವಲ್ಲ ಎಂಬ ದ್ವಂದ್ವ ಕಠಿಣ ವಾಗಿ ಹೋದಾಗ ಕುಮುವು ಆಗಲೇ ಮೀರಾಬಾಯಿಯ ಕಥೆಯನ್ನು ನೆನೆಸಿಕೊಳ್ಳುತ್ತಿದ್ದಳು. ಯಾರಾದರೂ ತನಗೆ ಮೀರಾಬಾಯಿಯ ಆದರ್ಶವನ್ನು ಚೆನ್ನಾಗಿ ಮಂದಟ್ಟಾಗುವಂತೆ ವಿವರಿಸ ಬಾರದೇ ಎಂದು ಸುಮ್ಮನೆ ಆಸೆ ಪಡುತ್ತಿದ್ದಳು.

ಕುಮು ಪ್ರಯತ್ನ ಪಟ್ಟು ಸಂಕೋಚವನ್ನು ಕಳೆದುಕೊಂಡು "ಮೀರಾಬಾಯಿಯು ತನ್ನ ಯಥಾರ್ಥ ಸ್ವಾಮಿಯನ್ನು ಅಂತರ್ಯದಲ್ಲಿ ಪಡೆದಿದ್ದುದರಿಂದ ಸಮಾಜದೆದುರು ಕೈಹಿಡಿದ ಗಂಡನನ್ನು ಮನಸ್ಸಿನಿಂದ ದೂರ ಮಾಡಲು ಶಕ್ತಳಾಗಿದ್ದಳು. ಆದರೆ ಹಾಗೆ ಸಂಸಾರವನ್ನು ಬಿಡುವಷ್ಟು ದೊಡ್ಡ ಅಧಿಕಾರ ನನಗಿದೆಯೇ ?" ಎಂದಳು.

ವಿಪ್ರದಾಸ "ಕುಮು, ನಿನ್ನ ದೇವತೆಯನ್ನಂತೂ ನೀನು ಮನಃ ಪೂರ್ವಕವಾಗಿಯೇ ಪಡೆದೆ ಯಲ್ಲ ?" ಎಂದ.

"ಒಂದು ಸಮಯದಲ್ಲಿ ಹಾಗೆಯೇ ಮನಸ್ಸಿನಲ್ಲಿ ಎಣಿಸಿದೆ. ಆದರೆ ಸಂಕಟವಲ್ಲಿ ಬಿದ್ದಾಗ ನೋಡಿದರೆ, ನನ್ನ ಪ್ರಾಣ ಎಷ್ಟರ ಮಟ್ಟಿಗೆ ಒಣಗಿ ಹೋಗಿತ್ತೆಂದು ಕಂಡೆ, ಎಷ್ಟೇ ಪ್ರಯತ್ನ ಮಾಡಿದರೂ ಆತನನ್ನು ನನ್ನ ಬಳಿ ಸಹಜವಾಗಿ ಕರೆದುಕೊಳ್ಳಲು ಶಕ್ತಳಾಗಿಲ್ಲ. ನನಗೆಲ್ಲಕ್ಕಿಂತಲೂ ಇದೇ ಹೆಚ್ಚು ದುಃಖ."

"ಕುಮೂ, ಮನಸ್ಸಿನಲ್ಲಿ ಉಬ್ಬರ ಇಳಿತಗಳಾಗುವುದು ಸಹಜ. ಆದರೆ ಭಯಪಡಬೇಡ. ರಾತ್ರಿ ಮಧ್ಯೆ ಮಧ್ಯೆ ಬರುತ್ತದೆ. ಹಾಗೆಂದು ಹೆದರಿ ಹಗಲೇನು ಸಾಯುವುದಿಲ್ಲ. ಯಾವುದನ್ನ ಪಡದಿದ್ದೀಯೋ ಅದು ನಿನ್ನ ಪ್ರಾಣದೊಡನೆ ಒಂದಾಗಿ ಹೋಗಿದೆ."

"ಅದೇ ಆಶೀರ್ವಾದ ಮಾಡಣ್ಣ. ಅವರನ್ನು ನಾನು ಕಳೆದುಕೊಳ್ಳದಿರುವಂತೆ ಮಾಡು, ನಿರ್ದಯನಾದ ಆತನು ದುಃಖ ಪಡಿಸಿದಾಗ, ತನಗೇ ದುಃಖಪಡಿಸಿಕೊಂಡನೆಂದು ಕೊಳ್ಳುತ್ತೇನೆ. ಅಣ್ಣ, ನನ್ನ ವಿಷಯದ ಚಿಂತೆಯನ್ನು ನಿನಗೂ ಹಚ್ಚಿ ವೃಥಾ ನಿನ್ನನ್ನ ಆಯಾಸ ಗೊಳಿಸಿದೆ."

"ಕುಮು, ನಿನ್ನ ಬಾಲ್ಯದಿಂದಲೂ ನಿನ್ನ ವಿಷಯವನ್ನೇ ಆಲೋಚಿಸುವುದು ನನಗೆ ಅಭ್ಯಾಸ

ವಾಗಿ ಹೋಗಿದೆ. ಈಗ ನಿನ್ನ ವಿಷಯವನ್ನೇನಾದರೂ ಯೋಚಿಸದೆ ಹೋದರೆ, ಯೋಚಿಸಲು ಏನೂ ತೋಚದೆ ಹೋದರೆ, ಆಗ ಎಲ್ಲಾ ಶೂನ್ಯವಾದಂತೆ ಆಗುತ್ತದೆ, ಆಶೂನ್ಯದಲ್ಲಿ ತಡಕಾಡುತ್ತಾ ಹೋಗಿ ಮನಸ್ಸು ಈ ರೀತಿ ಕ್ಲಾಂತವಾಗಿ ಹೋಗಿದೆ."

ಕುಮು ವಿಪ್ರದಾಸನ ಕಾಲ ಮೇಲೆ ಕೈಯಾಡಿಸುತ್ತ ಅಡಿಸುತ್ತ "ನನ್ನ ವಿಷಯವಾಗಿ ನೀನೇನೂ ಚಿಂತಿಸಬೇಡ, ಅಣ್ಣ,... ನನ್ನ ಅಂತರ್ಯದೊಳಗಿರುವವನೇ ನನ್ನನ್ನ ಕಾಪಾಡುತ್ತಾನೆ. ನನಗೆ ಯಾವ ವಿಪತ್ತೂ ಇಲ್ಲ," ಎಂದಳು.

"ಒಳ್ಳೇದು. ಹಾಗಿದ್ದರೆ, ಇರಲಿ ಬಿಡು ಆ ಮಾತೆಲ್ಲಾ ಇನ್ನು. ನಿನಗೆ ಹಿಂದೆ ಹಾಡು ಹೇಳಿಕೊಡುತ್ತಿದ್ದೆನಲ್ಲಾ, ಇವತ್ತೂ ಹಾಗೆಯೇ ನಿನಗೊಂದು ಹಾಡು ಕಲಿಸಿಕೊಡುತೇನೆ."

"ನೀವು ಕಲಿಸಿಕೊಟ್ಟಿದ್ದು ನನ್ನ ಅದೃಷ್ಟ. ಅದರಿಂದಲೇ ನಾನು ಬದುಕಿದೆ, ಅಣ್ಣ, ಆದರೆ ಇವತ್ತು ಬೇಡ. ಮೊದಲು ನಿನಗೆ ಶಕ್ತಿ ಬರಲಿ. ಇವತ್ತು ನಾನೇ ನಿನಗೊಂದು ಹಾಡು ಹೇಳುತ್ತೇನೆ." ಎಂದು ಅಣ್ಣನ ತಲೆಯ ಬಳಿ ಕೂತು ಕುಮು ಮೆಲ್ಲ ಮೆಲ್ಲನೆ ಹಾಡಿದಳು.

"ಪಿಯಾ ಘರ್ ಆಯೇ ಸೋಹೀ
ಪೀತಮ್ ಪಿಯಾ ಪಾಯೇರೇ,
ಮೀರಾಕೇ ಪ್ರಭೂ ಗಿರಿಧರ್ ನಾಗರ
ಚರಣ ಕಮಲ ಬಲಿಹಾರ ರೇ...."

ವಿಪ್ರದಾಸನು ಕಣ್ಣು ಮುಚ್ಚಿಕೊಂಡು ಕೇಳತೊಡಗಿದ. ಹಾಡುತ್ತಾ ಹಾಡುತ್ತಾ ಕುಮುವಿನ ಕಣ್ಣುಗಳು ಎರಡೂ ಯಾವುದೋ ಒಂದು ಅಪೂರ್ವ ದರ್ಶನದಿಂದ ತುಂಬಿ ಹೊಳೆಯ ತೊಡಗಿದುವು. ಒಳಗಿನ ಆಕಾಶ ಬೆಳಕಿನಿಂದ ತುಂಬಿತು.

ಪ್ರಿಯತಮನು ಮನೆಗೆ ಬಂದಿದ್ದಾನೆ. ಚರಣ ಕಮಲದ ಸ್ಪರ್ಶ ಎದೆಯ ಮಧ್ಯೆ ಅನುಭವವಾಗುತ್ತಿದೆ. ಮಿಲನ ಸಂಭವಿಸುವ ಅಂತರಾಳದ ಲೋಕವು ಅತ್ಯಂತ ಸತ್ಯವಾಗಿ ಗೋಚರಿಸುತ್ತಿದೆ. ಹಾಡುತ್ತಾ ಹಾಡುತ್ತಾ ಅವಳು ಅದೇ ಸ್ಥಳಕ್ಕೆ ಬಂದು ಸೇರಿದ್ದಾಳೆ, "ಚರಣ ಕಮಲ ಬಲಿಹಾರ ರೇ" ಸಮಸ್ತ ಜೀವನವನ್ನೂ ತುಂಬಿ ಬಿಟ್ಟಿದೆ ಆ ಚರಣಕಮಲ, ಅದಕ್ಕೆ ಅಂತ್ಯವೇ ಇಲ್ಲ. ಸಂಸಾರದಲ್ಲಿನ ದುಃಖ, ಅವಮಾನಗಳ ಸ್ಥಳ ಎಲ್ಲಿ ಉಳಿಯಿತು ? "ಪಿಯಾ ಘರ್ ಆಯೇ" ಅದಕ್ಕಿಂತಲೂ ಹೆಚ್ಚಾಗಿ ಬೇಕಾದುದಿನ್ನೇನು? ಈ ಹಾಡೂ ಎಂದೂ ಮುಗಿಯದೆಯೇ ಇರುವುದಾದರೆ ಕುಮು ಚಿರಕಾಲವೂ ರಕ್ಷಣೆ ಪಡೆಯುತ್ತಾಳೆ.

ಸ್ವಲ್ಪ ಟೋಸ್ಟ್, ಮಾಡಿದ ರೊಟ್ಟಿಯನ್ನೂ ಒಂದು ಬಟ್ಟಲು ಬಾರ್ಲಿಯನ್ನೂ ತಂದು ಗೋಕುಲ ಟೀಪಾಯಿಯ ಮೇಲಿಟ್ಟು ಹೋದ. ಕುಮು ಹಾಡು ನಿಲ್ಲಿಸಿ "ಅಣ್ಣ, ಕೆಲವು ದಿನಗಳ ಹಿಂದೆ ಗುರುವೊಬ್ಬ ಬೇಕೆಂದು ಹುಡುಕುತ್ತಿದ್ದೆ. ಈಗೇನು ಅದರ ಅಗತ್ಯವಿಲ್ಲ. ನೀನು ಹಾಡಿನ ಮೂಲಕ ನನಗೆ ಉಪದೇಶ ಕೊಟ್ಟುಬಿಟ್ಟಿದ್ದೀಯೆ."

"ಕುಮು, ನನ್ನನ್ನ ನಾಚಿಕೆ ಪಡಿಸಬೇಡ. ನನ್ನಂತಹ ಗುರುಗಳು ಬೀದಿ ಬೀದಿಯಲ್ಲೂ ಸಿಕ್ಕುತ್ತಾರೆ. ಅವರು ಇತರರಿಗೆ ಉಪದೇಶ ಮಾಡುತ್ತಾರೆ. ತಾವೇ ಅದರರ್ಥ ತಿಳಿದುಕೊಳ್ಳಲಾರರು. ಕುಮು, ಎಷ್ಟು ದಿನ ನೀನು ಇಲ್ಲಿರಬಲ್ಲೆ. ಸರಿಯಾಗಿ ಯೋಚನೆ ಮಾಡಿ ಹೇಳು ನೋಡೋಣ."

"ಎಂದಿನವರೆಗೆ ಕರೆ ಬರುವುದಿಲ್ಲವೋ ಅಂದಿನವರೆಗೆ".

"ನೀನು ಇಲ್ಲಿಗೆ ಬರಬೇಕೆಂದು ಕೇಳಿದೆಯೇನು ?"

"ಇಲ್ಲ ನಾನು ಕೇಳಲಿಲ್ಲ."

"ಇದರ ಅರ್ಥವೇನು ಮತ್ತೆ ?"

"ಇದರ ಅರ್ಥದ ವಿಷಯ ಯೋಚಿಸುವುದರಿಂದ ಲಾಭವಿಲ್ಲ, ಅಣ್ಣ; ಪ್ರಯತ್ನ ಪಟ್ಟರೂ ತಿಳಿದುಕೊಳ್ಳಲಾರೆ. ನಿನ್ನ ಹತ್ತಿರ ಬರಲು ಸಾಧ್ಯವಾಯಿತಲ್ಲ. ಅದೇ ಯಥೇಷ್ಟ. ಎಷ್ಟು ದಿನ ಇರಲು ಸಾಧ್ಯವೋ ಅಷ್ಟೇ ಸಾಕು, ಅಣ್ಣ; ನೀನು ಏನೂ ತಿನ್ನುತ್ತಿಲ್ಲ. ತಿಂದುಬಿಡು."

ಆಗ ಆಳು ಬಂದು ಮುಖರ್ಜಿ ಮಹಾಶಯರು ಬಂದಿದ್ದಾರೆಂದು ತಿಳಿಸಿದ. ವಿಪ್ರದಾಸ ನೆಟ್ಟಗೆ ಎದ್ದು ಕೂತು "ಬರಹೇಳು" ಎಂದ.

## ನಲವತ್ತೇಳನೆಯ ಅಧ್ಯಾಯ

ಕಾಳು ಕೋಣೆಯನ್ನು ಪ್ರವೇಶಿಸಿದೊಡನೆ ಕುಮು ಅವನಿಗೆ ಪ್ರಣಾಮ ಮಾಡಿದಳು. ಕಾಳು "ಏನು ಮಗು ಬಂದುಬಿಟ್ಟೆ! ಸರಿ, ಬಿಡು, ಇನ್ನು ಅಣ್ಣನಿಗೆ ವಾಸಿಯಾಗುವುದು ನಿದಾನವಿಲ್ಲ." ಎಂದ. ಕುಮುವಿನ ಕಣ್ಣುಗಳಲ್ಲಿ ನೀರು ತುಂಬಿದುವು. ಕಣ್ಣೀರನ್ನು ಒರಸಿಕೊಂಡು "ಅಣ್ಣ, ನಿನ್ನ ಬಾರ್ಲಿಯಲ್ಲಿ ನಿಂಬೆಯ ರಸ ಹಿಂಡಲೇ?" ಎಂದಳು. ವಿಪ್ರದಾಸ ಉದಾಸೀನ ಭಾವದಲ್ಲಿ ಕೈ ಅಲ್ಲಾಡಿಸಿದ. ಅದರ ಅರ್ಥ, ಇಲ್ಲದೆ ಹೋದರೆ ಏನು ನಷ್ಟ ಎಂದು. ವಿಪ್ರದಾಸನಿಗೆ ಬಾರ್ಲಿ ಕುಡಿಯುವುದಕ್ಕೆ ಇಷ್ಟವಿಲ್ಲವೆಂದು ಕುಮುವಿಗೆ ಗೊತ್ತು. ಅದಕ್ಕೇ ಅವಳು ಅಣ್ಣನಿಗೆ ಬಾರ್ಲಿ ಕೊಡುವಾಗಲೆಲ್ಲ ಅದರಲ್ಲಿ ನಿಂಬೆಯ ರಸ, ಮತ್ತು ಸ್ವಲ್ಪ ಪನ್ನೀರು, ಮತ್ತು ಐಸ್ ಹಾಕಿ ಶರಬತ್ತಿನಂತೆ ಮಾಡಿ ಕುಡಿಸುತ್ತಿದ್ದಳು. ಆ ಏರ್ಪಾಡು ಈಗ ಇಲ್ಲ. ಆದರೂ ವಿಪ್ರದಾಸನು ತನ್ನ ಅಭಿರುಚಿಯನ್ನು ಯಾರಿಗೂ ತಿಳಿಸಿರಲಿಲ್ಲ! ಯಾವುದನ್ನ ಕೊಟ್ಟರೂ ಅದನ್ನೇ ಮಾತಾಡದೆ ಕುಡಿದುಬಿಡುತ್ತಿದ್ದ.

ಬಾರ್ಲಿ ಗಂಜಿಯನ್ನು ಸರಿಯಾದ ರೀತಿಯಲ್ಲಿ ಮಾಡಿಕೊಂಡು ಬರಲು ಕುಮು ಹೊರಟು ಹೋದಳು.

ವಿಪ್ರದಾಸನು ಉದ್ವಿಗ್ನ ಮುಖದಿಂದ "ಕಾಳಣ್ಣ, ಸಮಾಚಾರವೇನು ಹೇಳು" ಎಂದ.

"ನಿನ್ನೊಬ್ಬನ ಸಹಿಯ ಮೇಲೆಯೇ ಸಾಲ ಕೊಡಲು ಯಾರಿಗೂ ರಾಜಿಯಿಲ್ಲ. ಸುಬೋಧನ ಸಹಿಯೂ ಆಗಬೇಕು. ಮಾರವಾಡೀ ಸಾಹುಕಾರರು ಯಾರಾದರೂ ಕೊಡಬಲ್ಲರು. ಆದರೆ ಅದಂತೂ ಜೂಜಾಟದ ಹಾಗೆ. ವಿಪರೀತ ಬಡ್ಡಿ ಕೇಳುತ್ತಾರೆ. ನಮ್ಮಿಂದ ಸಾಧ್ಯವಿಲ್ಲ."

"ಕಾಳಣ್ಣ, ಸುಬೋಧನಿಗೆ ಹೊರಟು ಬಾ ಅಂತ ಹೇಳಿ ತಂತಿ ಕೊಡು. ಇನ್ನು ಸಾವಕಾಶ ಮಾಡಿದರೆ ನಡೆಯುವ ಹಾಗಿಲ್ಲ."

"ನನಗೂ ಸರಿ ಅಂತ ಅನ್ನಿಸುತ್ತಿಲ್ಲ. ಆ ಸಲ ನಿನ್ನ ಆ ಉಂಗುರ ಮಾರಿ ಬಂದ ದುಡ್ಡಿನಿಂದ ಮೂಲಧನದ ಒಂದು ಅಂಶ ತೀರಿಸುವುದಕ್ಕೆ ಹೋದಾಗ ಮಧುಸೂದನನು ಅದನ್ನು ತೆಗೆದುಕೊಳ್ಳಲು ಒಪ್ಪಲಿಲ್ಲ. ಆಗಲೇ ಇದೇನೋ ಸರಿಯಿಲ್ಲ ಅಂತ ಅಂದುಕೊಂಡೆ. ತನ್ನ ಇಷ್ಟ ಬಂದಾಗ ಇದ್ದಕ್ಕಿದ್ದ ಹಾಗೆ ಯಾವಾಗಲೋ ಬಂದು ಉರುಲು ಹಾಕಿ ಎಳೆಯುತ್ತಾನೆ."

ವಿಪ್ರದಾಸನು ಸುಮ್ಮನೆ ಯೋಚಿಸತೊಡಗಿದನು. ಕಾಳು "ಅಣ್ಣಾ, ನಮ್ಮ ಕುಮು ಇದ್ದಕ್ಕಿದ್ದ ಹಾಗೆ ಇವತ್ತು ಬೆಳಿಗ್ಗೆ ಹೊರಟು ಬಂದಳಲ್ಲಾ, ಜಗಳಗಿಗಳ ಆಡಿಕೊಂಡು ಬರಲಿಲ್ಲ. ತಾನೆ? ಮಧುಸೂದನನನ್ನು ರೇಗಿಸುವಂತಹ ಅವಸ್ಥೆ ನಮಗಿಲ್ಲ ನೋಡು....ಇದನ್ನ ಮನಸ್ಸನಲ್ಲಿಡುವುದು ಒಳ್ಳೆಯದು."

"ಕುಮು ತನ್ನ ಗಂಡನ ಒಪ್ಪಿಗೆ ತೆಗೆದುಕೊಂಡೇ ಬಂದೆ ಅಂತ ಹೇಳುತ್ತಾಳೆ."

"ಒಪ್ಪಿಗೆಯು ಯಾವ ತರಹೆಯದು ಅನ್ನುವುದು ತಿಳಿದ ಹೊರತು ಮನಸ್ಸಿಗೆ ನಿಶ್ಚಿಂತೆಯಿಲ್ಲ. ಎಷ್ಟು ಸಾವಧಾನವಾಗಿ ಅವನೊಂದಿಗೆ ವ್ಯವಹಾರ ನಡೆಸುತ್ತಿದ್ದೇನೆ, ಏನು ಕಥೆ....? ನಿನಗೆ ಏನು ಹೇಳಲಿ, ಅಣ್ಣ, ಒಂದೊಂದು ಸಲ ಕೋಪದಲ್ಲಿ ಮೈಯೆಲ್ಲಾ ಬೆಂಕಿಯಾಗುತ್ತಾ ಇರುತ್ತೆ. ಆದರೂ ತಣ್ಣಗೆ ಮಾಡಿಕೊಂಡು ಎಲ್ಲಾ ಸಹಿಸುತ್ತೇನೆ, ಗೌರೀಶಂಕರದ ಶಿಖರದಂತೆ, ಮಟಮಟ ಮಧ್ಯಾಹ್ನದ ಉರಿಬಿಸಿಲಿಗೂ ಅವನ ಮಂಜುಗಡ್ಡೆ ಕರಗುವುದಿಲ್ಲ ಈ ಕಡೆ ಸಾಲ ಕೊಟ್ಟ ಸಾಹುಕಾರ, ಆ ಕಡೆ ತಂಗಿಯ ಗಂಡ ...ಇಂತಹವನನ್ನು ಸುದಾರಿಸಿಕೊಂಡು ನಡೆಯುವುದೆಂದರೆ ಸಾಮಾನ್ಯವೇನು?"

ವಿಪ್ರದಾಸ ಯಾವ ಮಾತೂ ಆಡದೆ ಸುಮ್ಮನೆಯೇ ಕೂತಿದ್ದ. ಕುಮು ಬಾರ್ಲಿ ಗಂಜಿ ತಂದಳು. ವಿಪ್ರದಾಸನ ಮುಖದ ಹತ್ತಿರ ಬಟ್ಟಲನ್ನು ಹಿಡಿದು "ಅಣ್ಣ, ಇದನ್ನು ಕುಡಿದುಬಿಡು" ಎಂದಳು.

ವಿಪ್ರದಾಸ ತನ್ನ ಚಿಂತೆಯ ಮಧ್ಯೆಯಿಂದ ಬೆಚ್ಚಿ ಎದ್ದು ಕೂತ. ಕುಮು ಅಣ್ಣ ಯಾವುದೋ ಒಂದು ಗಾಢವಾದ ಉದ್ವೇಗದ ಮಧ್ಯೆ ಇದುವರೆಗೆ ಮುಳುಗಿದ್ದನೆಂದು ತಿಳಿದಳು.

ಕಾಳೂ ಕೊಠಡಿಯಿಂದ ಹೊರಗೆ ಹೋದ ತಕ್ಷಣ ಕುಮು ಅವನ ಹಿಂದೆ ಹಿಂದೆ ಹೋಗಿ ವರಾಂಡದಲ್ಲಿ ಅವನನ್ನು ಹಿಡಿದು "ಕಾಳಣ್ಣ, ನನಗೆ ವಿಷಯ ಏನಾಗಿದೆ ಎಲ್ಲಾ ಹೇಳಬೇಕು" ಎಂದಳು.

"ಯಾವ ವಿಷಯವನಮ್ಮಾ ಹೇಳಬೇಕು, ನಿನಗೆ?"

"ನೀವು ಯಾವ ವಿಷಯದಲ್ಲಿ ಚಿಂತೆಯಲ್ಲಿ ಮುಳುಗಿದ್ದೀರೋ ಅದನ್ನ."

"ಏನು ಮಗು, ವಿಷಯ ಇರುವಾಗ ಚಿಂತೆಯಿಲ್ಲದೆ ಇರುತ್ತದೆಯೇ? ಪ್ರಪಂಚದಲ್ಲಿ ಅಂತಹುದೂ ಉಂಟೆ? ಇದೊಂದು ಮುಳ್ಳಗಿಡದ ಹಣ್ಣು. ಹಸಿವಿನ ತೀಟೆ ತೀರಿಸಬೇಕಾದರೆ ತಿನ್ನಲೇ ಬೇಕು. ಕೀಳಲು ಹೋದರೆ ಮೈಯೆಲ್ಲಾ ಚುಚ್ಚಿಸಿಕೊಳ್ಳಲೇ ಬೇಕು."

"ಆ ಮಾತೆಲ್ಲಾ ಆಮೇಲಾಗಲಿ. ಏನಾಗಿದೆ ಅನ್ನುವುದನ್ನು ನನಗೆ ಹೇಳಲೇ ಬೇಕು."

"ಆಸ್ತಿ ಪಾಸ್ತಿಯ ವಿಚಾರ ಹೆಂಗಸರ ಮುಂದೆ ಎತ್ತಕೂಡದು."

"ನನಗೆಲ್ಲಾ ಗೊತ್ತು - ನೀವು ಯಾವ - ವಿಚಾರ ಮಾತಾಡಿಕೊಳ್ಳುತ್ತಿದ್ದೀರಿ ಅನ್ನುವುದು ಹೇಳಲೇ?"

"ಒಳ್ಳೇದು ಹೇಳು ಮತ್ತೆ."

"ನಮ್ಮ ಯಜಮಾನರ ಹತ್ತಿರ ಅಣ್ಣನಿಗೆ ಸಾಲವಿದೆ, ಅದರ ವಿಚಾರವಾಗಿ."

ಯಾವ ಜವಾಬನ್ನೂ ಹೇಳದೆ ಕಾಳೂ ತನ್ನ ದೊಡ್ಡ ದೊಡ್ಡ ಕಣ್ಣುಗಳನ್ನು, ಕೌತುಕ ವಿಸ್ಮಯ ಹಾಸ್ಯದಿಂದ ವಿಸ್ತಾರವಾಗಿ ತೆರೆದು ಕುಮುವಿನ ಮುಖದ ಕಡೆ ಸುಮ್ಮನೆ ನೋಡುತ್ತಾ

ನಿಂತ. "ನಿಜ ಹೇಳಿದೆನೋ ಇಲ್ಲವೋ....ನನಗೆ ಈಗ ಎಲ್ಲಾ ಹೇಳಲೇ ಬೇಕು" ಎಂದಳು ಕುಮು.

"ಆ ಅಣ್ಣನ ತಂಗಿಯಲ್ಲವೇ ? ಮಾತು ಆಡುವುದಕ್ಕೇ ಇಲ್ಲ, ಮಾತೇನು ಅನ್ನುವುದು ತಿಳಿದುಕೊಂಡು ಬಿಡುತ್ತೀಯ."

ಮದುವೆಯಾದ ಮೇಲೆ ಮೊದಲನೆ ದಿನವೇ, ಎಂದು ಮಧುಸೂದನನು ತನ್ನ ಅಣ್ಣನ ಸಾಹುಕಾರ ಎಂದು ಬಡಾಯಿ ಕೊಚ್ಚಿಕೊಂಡನೋ ಅಂದಿನಿಂದಲೇ ಅಣ್ಣನ ಸಂಗಡ ಯಜಮಾನರ ಲೇವಾದೇವಿ ನಡೆಯುತ್ತಿದೆಯೆಂದೂ ಅದರ ಸಲುವಾಗಿಯೇ ಗಂಡನಿಗೆ ಅಣ್ಣನನ್ನು ಕಂಡರೆ ಅಷ್ಟು ಅಗೌರವವೆಂದೂ ತಿಳಿದಿದ್ದಳು. ಇದು ಹೇಗಾದರೂ ಬೇಗ ತೊಡೆದು ಹೋಗಲಿ ಎಂದು ಪ್ರತಿ ದಿನವೂ ಪ್ರಾರ್ಥಿಸುತ್ತಿದ್ದಳು. ವಿಪ್ರದಾಸನ ಮನಸ್ಸಿನಲ್ಲಿ ಈ ಅಗೌರವವು ಈಟಿಯಂತೆ ಇರಿಯುತ್ತಿರುವುದೆಂಬುದರಲ್ಲಿ ಅವಳಿಗೆ ಸಂದೇಹವೇ ಇರಲಿಲ್ಲ. ಆ ದಿನ ನವೀನನು ವಿಪ್ರದಾಸನ ಕಾಗದದ ವಿಷಯವಾಗಿ ವ್ಯಾಖ್ಯಾನ ಮಾಡಿದಾಗಲೇ ಕುಮುವಿನ ಮನಸ್ಸಿನಲ್ಲಿ ಇವೆಲ್ಲದರ ಬುಡವಲ್ಲಿಯೂ ಈ ಲೇವಾದೇವಿಯ ಸಂಬಂಧವಿದೆ ಎನ್ನಿಸಿತ್ತು ಅಣ್ಣನ ದೇಹಸ್ಥಿತಿ ಇಷ್ಟು ಕೆಟ್ಟಿರುವುದೇಕೆ, ಯಾವ ಕೆಲಸದ ವಿಶೇಷ ತಗಾದೆಗಾಗಿ ಅಣ್ಣ ಕಲಿಕತ್ತೆಗೆ ಬಂದಿದಾನೆ, ಕುಮು ಎಲ್ಲವನ್ನೂ ತಿಳಿದುಕೊಂಡುಬಿಟ್ಟಿದ್ದಳು.

"ಕಾಳಣ್ಣ, ನನ್ನ ಹತ್ತಿರ ಮುಚ್ಚಿಡಬೇಡ. ಅಣ್ಣ ಹಣ ಸಾಲಮಾಡುವುದಕ್ಕೆ ಬಂದಿದಾನೆ ಹೌದೋ ಅಲ್ಲವೋ ?"

"ಅಲ್ಲದೆ ? ಸಾಲ ಮಾಡಿ ತಾನೇ ಸಾಲ ತೀರಿಸಬೇಕಾದರೆ ? ದುಡ್ಡೇನೂ ಆಕಾಶದಿಂದ ಬೀಳುವುದಿಲ್ಲವಲ್ಲ ? ಅದೂ ಬೀಗರ ಹತ್ತಿರ ಸಾಲಗಾರನಾಗಿರುವುದು ಚೆನ್ನಾಗಿರುತ್ತದೆಯೇ ?"

"ಅದು ಸರಿಯಾದ ಮಾತೇ, ಹಾಗಾದರೆ ಹಣ ಏರ್ಪಾಡು ಮಾಡಿ ಆಯಿತೇ ?"

"ಅದಕ್ಕೋಸ್ಕರವೇ ಅಲೆದಾಡುತಿದ್ದೇನೆ, ಆಗುತ್ತೆ. ಅದಕ್ಕೆ ಭಯವೇನೂ ಇಲ್ಲ."

"ಸುಳ್ಳು. ನನಗೆ ಗೊತ್ತು. ಅದೇನೂ ಸುಲಭವಾಗಿಲ್ಲ."

"ನೋಡು ಮಗು, ನಿನಗೆ ಎಲ್ಲಾ ಗೊತ್ತಿರುವಾಗ ನನ್ನನ್ನೇಕಮ್ಮಾ ಕೇಳುವುದು ತಿರುಗಿ? ಪುಟ್ಟ ಹುಡುಗಿಯಾಗಿದ್ದೆ, ನೋಡು, ಆಗೊಂದು ದಿನ ನನ್ನ ಮೀಸೆ ಎಳೆದು ಕೇಳಿದ್ದೆ, ಮೀಸೆ ಹೇಗೆ ಬೆಳೆಯುತ್ತೆ ಅಂತ. ನಾನೇನು ಹೇಳಿದ್ದೆ, ಸಮಯ ನೋಡಿಕೊಂಡು ಮೀಸೆಯ ಬೀಜ ನೆಟ್ಟಿದ್ದರಿಂದ ಬೆಳೆಯಿತು ಎಂದೆ, ಹೌದಾ? ಅದರಿಂದ ಆ ಪ್ರಶ್ನೆ ಅಲ್ಲಿಗೇ ನಿಂತಿತ್ತು. ಈಗಾಗಿದ್ದರೆ ಜವಾಬು ಕೊಡುವುದಕ್ಕೋಸ್ಕರ ಡಾಕ್ಟರನ್ನು ಕರೆಸಬೇಕಾಗಿತ್ತು, ಎಲ್ಲ ವಿಷಯಗಳನ್ನೂ ಸ್ಪಷ್ಟವಾಗಿ ವಿವರಿಸಿ ನಿನಗೆ ಹೇಳಬೇಕೆಂದು ಪ್ರಪಂಚದಲ್ಲಿ ಯಾವ ಕಟ್ಟಳೆಯೂ ಇಲ್ಲ. ಗೊತ್ತೇ ?"

"ಇಲ್ಲ, ಕಾಳಣ್ಣ....ನಾನು ಈಗಲೇ ಹೇಳಿದ್ದೇನೆ. ಅಣ್ಣನ ಸಂಗಡ ಯಾವ ಯಾವ ಮಾತುಕಥೆಯಾಗುತ್ತೋ ಎಲ್ಲಾ ನನಗೆ ಹೇಳಲೇಬೇಕು."

"ಅಣ್ಣನ ಮೀಸೆ ಹೇಗೆ ಬೆಳೆಯಿತು ಅನ್ನುವುದು ಕೂಡ ?"

"ನೋಡು, ಹಾಗೆಲ್ಲ ಮಾತು ಮರೆಯಿಸುವುದಕ್ಕೆ ಹೋಗಬೇಡ. ನಾನು ಅಣ್ಣನ ಮುಖ ನೋಡಿಯೇ ತಿಳಿದುಕೊಂಡೆ. ಹಣ ಕೂಡಿಸುವುದಕ್ಕೆ ಆಗಲಿಲ್ಲ ಅಂತ. ಕೂಡಿಸುವುದಕ್ಕೆ ಸಾಧ್ಯವಾಗಲಿಲ್ಲ ಅಂತ ಇಟ್ಟುಕೊ, ಅದನ್ನು ತಿಳಿದು ನಿನಗೆ ಏನು ಲಾಭ ಹೇಳು."

"ಅದು ನಾನು ಹೇಳಲಿಕ್ಕಾಗದು. ಆದರೆ ನನಗೂ ಅದು ತಿಳಿಯ ಬೇಕು. ..ಹಣ ಸಾಲ ಸಿಕ್ಕಲಿಲ್ಲವೇ ನಿನಗೆ ?"

"ಇಲ್ಲ, ಸಿಕ್ಕಲಿಲ್ಲ."

"ಸುಲಭವಾಗಿ ಸಿಕ್ಕುವುದಿಲ್ಲವೇ ?"

"ಸಿಕ್ಕುತ್ತೆ—ಸಿಕ್ಕದೇ ಏನು ?....ಆದರೆ ಸುಲಭವಾಗಿ ಸಿಕ್ಕುತ್ತೆ ಅಂತ ಹೇಳುವ ಹಾಗಿಲ್ಲ. ಆದರೆ ನೋಡಮ್ಮ, ನಿನ್ನ ಮಾತುಗಳಿಗೆ ಸರಿಯಾದ ಜವಾಬು ಕೊಡುವ ಪ್ರಯತ್ನ ಬಿಟ್ಟು ಹಣ ಪಡೆಯುವ ಪ್ರಯತ್ನಕ್ಕೋಸ್ಕರ ಹೊರಗೆ ಹೊರಟರೆ ಏನಾದರೂ ಆದೀತು. ಇನ್ನು ನಾನು ಹೊರಟೆ."

ಸ್ವಲ್ಪ ಹೊತ್ತಾದ ಮೇಲೆ ಮತ್ತೆ ಕಾಳು ಬಂದು "ನೋಡು ಮಗು, ಇಲ್ಲಿಗೆ ಇವತ್ತು ಹೊರಟು ಬಂದು ಬಿಟ್ಟೆಯಲ್ಲ, ಅದರಲ್ಲಿ ಏನೂ ವ್ಯತ್ಯಾಸವಿಲ್ಲವಲ್ಲವೆ? ಏನೂ ಗಲಾಟೆ ಮಾಡಿ ಕೊಂಡು ಬಂದಿಲ್ಲ ತಾನೇ ? ಸತ್ಯವಾಗಿ ಹೇಳು."

"ಇದೆಯೋ ಇಲ್ಲವೋ ನನಗದು ಸ್ಪಷ್ಟವಾಗಿನ್ನೂ ಗೊತ್ತಿಲ್ಲಪ್ಪ."

"ಯಜಮಾನರನ್ನು ಕೇಳಿಕೊಂಡು ತಾನೇ ಬಂದೆ ?"

"ನಾನು ಕೇಳದೆಯೇ ಅವರು ಹೋಗಿ ಬಾ ಅಂದರು."

"ಕೋಪ ಮಾರಿಕೊಂಡಿದ್ದರೆ ?"

"ಅದೂ ಸರಿಯಾಗಿ ಗೊತ್ತಿಲ್ಲ. ತಾವೇ ಬರಹೇಳುವವರೆಗೂ ನಾನು ವಾಪಸ್ಸು ಹೋಗುವ ಅಗತ್ಯವಿಲ್ಲ ಅಂತ ಹೇಳಿದರು."

"ಅದೇನು ಕೆಲಸಕ್ಕೆ ಬರುವ ಮಾತಲ್ಲ. ಅದಕ್ಕೆ ಮುಂಚೆಯೇ ನೀನು ಹೋಗು, ನೀನಾಗಿ ನೀನೇ ಹೋಗು."

"ಹೋದರೆ ಅವರ ಅಪ್ಪಣೆ ಮೀರಿದಹಾಗೆ ಆಗುತ್ತೆ."

"ಆಗಲಿ....ಪರವಾಯಿಲ್ಲ. ಅದನ್ನ ನಾನು ನೋಡಿಕೋತೇನೆ."

ಅಣ್ಣ ಇಂದು ಎಂತಹ ಕೆಟ್ಟ ಸಂಕಟದಲ್ಲಿ ಬಿದ್ದಿದ್ದಾನೆಂದರೆ ಅದರ ದೋಷವೆಲ್ಲಾ ತನ್ನದೇ ಎಂದು ಕುಮು ಹೇಳಿಕೊಳ್ಳದೇ ಇರಲು ಸಾಧ್ಯವಾಗಲಿಲ್ಲ. ತನ್ನನ್ನ ತಾನೇ ಬಲವಾಗಿ ಹೊಡೆದು ಕೊಳ್ಳೋಣವೆನ್ನಿಸಿತು. ಸನ್ಯಾಸಿಗಳು ಕೆಲವರು ಮುಳ್ಳಿನ ಹಾಸುಗೆಯಲ್ಲಿ ಮಲಗಿರುತ್ತಾರಂತೆ. ಅವಳೂ ಅಂತಹ ಮುಳ್ಳಿನ ಹಾಸುಗೆಯ ಮೇಲೆ ಮಲಗಲು ತಯಾರಾಗಿದ್ದಳು, ಅದರಿಂದ ಏನಾ ದರೂ ಫಲವಿರುವ ಹಾಗಿದ್ದರೆ, ಯಾವನಾದರೂ ಯೋಗಿಯೋ, ಸಿದ್ಧಪುರುಷನೋ ಅವಳಿಗೊಂದು ದಾರಿ ತೋರಿಸಿ ಕೊಟ್ಟಿದ್ದೇ ಆದರೆ, ಸಾಯುವವರೆಗೂ ಅವನ ಸೇವೆಯಲ್ಲಿಯೇ ಇರಲು ಸಿದ್ಧವಾ ದ್ದಳು. ಖಂಡಿತವಾಗಿ ಅಂತಹವರು ಇದ್ದೇ ಇರುತ್ತಾರೆ. ಆದರೆ ಅವರನ್ನು ಎಲ್ಲಿ ಹೋಗಿ ಹುಡುಕುವುದು ? ಹೆಣ್ಣಾಗಿ ಹುಟ್ಟಿರದಿದ್ದರೆ ಯಾವುದಾದರೊಂದು ಉಪಾಯವನ್ನು ಮಾಡು ದ್ದಳು. ಆದರೆ ಈ ಸುಬೋಧಣ್ಣ ಏನುಮಾಡುತ್ತಿದ್ದಾನೆ? ಎಲ್ಲ ಭಾರವನ್ನೂ ಅಣ್ಣನೊಬ್ಬ ತಲೆಯ ಮೇಲೆ ಹೇರಿ ಬಿಟ್ಟು ಯಾವ ಮನಸ್ಸಿನಿಂದ ತಾನೇ ಇಂಗ್ಲೆಂಡಿನಲ್ಲಿ ಹೋಗಿ ಕೂತಿದ್ದಾನೆ

ಕುಮು ಕೋಣೆಯಲ್ಲಿ ಹೋಗಿ ನೋಡಿದಾಗ ವಿಪ್ರದಾಸನು ಮೇಲೆ ತಾರಸಿಯ ದೂಲಗ ಕಡೆ ನೋಡುತ್ತಾ ಸುಮ್ಮನೆ ಸೋಫಾದ ಮೇಲೆ ಮಲಗಿದ್ದ. ಹೀಗೆ ಮಾಡಿದರೆ ಬಾಯಿಲೆ ವಾ

ಮಾಗುವುದು ಹೇಗೆ? ವಿರುದ್ಧವಾದ ಭಾಗ್ಯದ ದ್ವಾರದಲ್ಲಿ ತಲೆಯನ್ನು ಕುಟ್ಟಿಕೊಂಡು ಸಾಯಲು ಇಷ್ಟಪಡುವ ಹಾಗೆ—

ಅಣ್ಣನ ತಲೆಯ ಬಳಿ ಕೂತು ತಲೆಯ ಮೇಲೆ ಕೈಯಾಡಿಸುತ್ತ ಕುಮು "ಸುಬೋಧಣ್ಣ ಯಾವಾಗ ಬರುತ್ತಾನೆ?" ಎಂದಳು.

"ಅದು ಹೇಗೆ ಹೇಳುವುದಮ್ಮಾ?"

"ಬರ ಹೇಳಿ ಬರೆಯುವುದು ತಾನೇ?"

"ಯಾಕೆ ಹೇಳು?"

"ಸಂಸಾರದ ಅಷ್ಟು ಬಾಧ್ಯತೆಯನ್ನೂ ನೀನೊಬ್ಬನೇ ಹೊತ್ತು ಕೊಂಡಿದ್ದೀಯಲ್ಲಾ, ಅದನ್ನು ನೀನು ಹೇಗೆ ನಿರ್ವಹಿಸುತ್ತೀಯೆ?"

"ಕೆಲವರಿಗೆ ಹಕ್ಕು ಇರುತ್ತದೆ, ಕೆಲವರಿಗೆ ಹೊಣೆ ಇರುತ್ತದೆ. ಇವೆರಡೂ ಸೇರಿ ತಾನೇ ಸಂಸಾರ? ಹೊಣೆಯನ್ನು ನಾನೇ ನನ್ನದಾಗಿ ಮಾಡಿಕೊಂಡಿದ್ದೇನೆ. ನಾನೇಕೆ ಅದನ್ನ ಇತರರಿಗೆ ಕೊಡಲಿ ಹೇಳು?"

"ನಾನೇ ಗಂಡಸಾಗಿದ್ದಿದ್ದರೆ ಬಲವಂತದಿಂದ ಕಿತ್ತುಕೊಳ್ಳುತ್ತಿದ್ದೆ."

"ಹಾಗಾದರೆ ಹೊಣೆಹೊರುವುದರಲ್ಲೂ ಒಂದು ಬಗೆಯ ಲೋಭವಿದೆಯೆನ್ನುವುದು ಅರ್ಥವಾಗಿದೆಯಲ್ಲಾ? ನೀನೇ ಸ್ವತಃ ಅದನ್ನ ತೆಗೆದು ಕೊಳ್ಳುವುದಕ್ಕೆ ಆಗುವುದಿಲ್ಲವಲ್ಲ ಅಂದುಬಿಟ್ಟು, ಸುಭೋದಣ್ಣನಿಗೆ ಅದನ್ನ ಕೊಡಿಸಿ ನಿನ್ನ ಚಪಲ ತೀರಿಸಿಕೊಳ್ಳ ಬೇಕೆಂದಿದ್ದೀಯೇನು? ಯಾಕೆ, ನಾನೇನು ತಪ್ಪು ಮಾಡಿದೆ?"

"ಅಣ್ಣ, ನೀನು ಹಣ ಸಾಲವೆತ್ತುವುದಕ್ಕೆ ಬಂದಿದ್ದೀಯಾ?"

"ಯಾರು ಹೇಳಿದರು ನಿನಗೆ?"

"ನಿನ್ನ ಮುಖ ನೋಡಿಯೇ ತಿಳಿದುಕೊಂಡೆ, ಒಳ್ಳೇದು. ನಾನೇನೂ ಮಾಡಲು ಸಾಧ್ಯವಿಲ್ಲವೆ?"

"ಏನು ಮಾಡುವುದಕ್ಕೆ?"

"ಅದೇ, ಯಾವುದಾದರೂ ಪತ್ರಕ್ಕೆ ಸಹಿ ಮಾಡುವುದಕ್ಕೆ; ನನ್ನ ಸಹಿಗೇನೂ ಬೆಲೆಯಿಲ್ಲವೆ?"

"ಬೆಲೆಯೇನು, ಬೇಕಾದಷ್ಟಿದೆ, ಅದು ನಮ್ಮ ಹತ್ತಿರ. ಸಾಹುಕಾರರ ಹತ್ತಿರವಲ್ಲ."

"ನಿನ್ನ ಕಾಲಿಗೆ ಬೀಳುತೇನಣ್ಣ, ನಾನು ಏನು ಮಾಡಬೇಕು ಅನ್ನುವುದನ್ನು ಹೇಳು."

"ಲಕ್ಷ್ಮಿಯ ಹಾಗೆ ಶಾಂತವಾಗಿರು, ಧೈರ್ಯವಹಿಸಿಕೊಂಡು ಸುಮ್ಮನಿರು. ಇದು ಮನಸ್ಸಿನಲ್ಲಿಟ್ಟುಕೋ. ಸಂಸಾರದಲ್ಲಿ ಅದೂ ಒಂದು ದೊಡ್ಡ ಕೆಲಸವೇ. ಸುಂಟರ ಗಾಳಿಯಲ್ಲಿ ನಾಕೆಯನ್ನು ನೆಟ್ಟಗೆ ನಿಲ್ಲಿಸುವುದು ಎಷ್ಟು ಕಷ್ಟವಾದ ಕೆಲಸವೋ, ಸಂಕಟ ಕಾಲದಲ್ಲಿ ತಲೆಯನ್ನು ನೆಟ್ಟಗೆ ಇಟ್ಟುಕೊಳ್ಳುವುದೂ ಅಷ್ಟೇ ಕಷ್ಟವಾದ ಕೆಲಸ. ನನ್ನ ಏಸ್‌ರಾಜನ್ನು ತೆಗೆದುಕೊಂಡು ಬಾ, ಸ್ವಲ್ಪ ಏನಾದರೂ ಬಾರಿಸುವೆಯಂತೆ."

"ಅಣ್ಣ, ಏನಾದರೊಂದು ಮಾಡೋಣವೆಂದು ಬಹಳ ಆಸೆಯಾಗುತ್ತದೆ."

"ಏಸ್ ರಾಜನ್ನು ಬಾರಿಸುವುದು ಏನೂ ಅಲ್ಲವೇನು?"

"ಅದಲ್ಲ. ಯಾವುದಾದರೂ ಬಹಳ ಕಷ್ಟವಾದ ಕೆಲಸವನ್ನು ಮಾಡಬೇಕೆಂದಿದೆ."

"ಪತ್ರವನ್ನು ಸಹಿ ಮಾಡುವುದಕ್ಕಿಂತಲೂ ಏಸ್‌ರಾಜನ್ನು ಬಾರಿಸುವುದೇ ಬಹಳ ಕಷ್ಟ ವಾದ ಕೆಲಸ. ತಗೊಂಡು ಬಾ ವಾದ್ಯವನ್ನು."

# ನಲವತ್ತೆಂಟನೆಯ ಅಧ್ಯಾಯ

ಒಂದು ಕಾಲದಲ್ಲಿ ಮಧುಸೂದನನನ್ನು ಕಂಡರೆ ಎಲ್ಲರೂ ಹೇಗೆ ಹೆದರುತ್ತಿದ್ದರೊ ಶ್ಯಾಮಾ ಸುಂದರಿಯೂ ಹಾಗೆಯೇ ಹೆದರುತ್ತಿದ್ದಳು. ಒಳಗೊಳಗೇ ಮಧುಸೂದನನು ತನ್ನ ಕಡೆಗೆ ಹೇಗೆ ಎಳೆಯಲ್ಪಡುತ್ತಿದ್ದನೆಂಬುದನ್ನು ಶ್ಯಾಮಾಸುಂದರಿ ತಿಳಿದಿದ್ದಳು. ಆದರೆ ಯಾವ ದಿಕ್ಕಿನಲ್ಲಿ ಬೇಲಿ ಯನ್ನು ಹಾರಿ ಅವಳು ಅವನ ಹತ್ತಿರ ಹೋಗಬೇಕೆನ್ನುವುದನ್ನು ಊಹಿಸಲಾರದವಳಾಗಿದ್ದಳು. ತಡವಿ ತಡವಿಕೊಂಡು ಆಗಾಗ ಪ್ರಯತ್ನ ಮಾಡಿದಳು. ಪ್ರತಿಯೊಂದು ಸಲವೂ ತಲೆ ತಾಕಿ ಹಿಂದಕ್ಕೆ ಬಂದಿದ್ದಳು. ಮಧುಸೂದನನು ಏಕನಿಷ್ಠೆಯಿಂದ ತನ್ನ ವ್ಯಾಪಾರದಲ್ಲಿ ಮಗ್ನನಾಗಿದ್ದ; ಕಾಂಚನದ ಸಾಧನೆಯಲ್ಲಿ ನಿರತನಾಗಿ ಅವನು ಕಾಮಿನಿಯನ್ನು ಅತಿ ತುಚ್ಛವಾಗಿ ಪರಿಗಣಿಸುತ್ತಿದ್ದ. ಆದ್ದರಿಂದಲೇ ಹೆಂಗಸರು ಅವನನ್ನು ಕಂಡರೆ ಹೆದರುತ್ತಿದ್ದರು. ಆದರೆ ಈ ಹೆದರಿಕೆಯಲ್ಲೂ ಒಂದು ಆಕರ್ಷಣವಿದೆ. ನಡುಗುವ ಎದೆಯಿಂದ ಮತ್ತು ಸಂಕುಚಿತ ವ್ಯವಹಾರದ ಆವರಣದ ಮರೆ ಯಲ್ಲಿಯೇ ಶ್ಯಾಮಾಸುಂದರಿಯು ಮುಗ್ಧ ಮನಸ್ಸಿನಿಂದ ಮಧುಸೂದನನ ಹತ್ತಿರ ಹತ್ತಿರ ಓಡಾಡ ತೊಡಗಿದ್ದಳು. ಒಂದೊಂದು ಸಲ ವ್ಯಮರೆತ ವೇಳೆಯಲ್ಲಿ ಮಧುಸೂದನ ಅವಳಿಗೆ ಅಲ್ಪಸ್ವಲ್ಪ ಸಲಿಗೆಯನ್ನು ಕೊಟ್ಟಿದ್ದ. ಆ ಸಮಯದಲ್ಲಿಯೇ ನಿಜವಾದ ಭಯಕ್ಕೆ ಕಾರಣ ಸಂಭವಿಸಿತ್ತು. ಅದಾದ ಸ್ವಲ್ಪ ಹೊತ್ತಿಗೇ ಅದಕ್ಕೆ ವಿರುದ್ಧವಾದ ಕಡೆಯಿಂದ ತನ್ನ ಜೀವನದಲ್ಲಿ ಹೆಂಗಸರು ಸಂಪೂರ್ಣವಾಗಿ ಹೇಯವಾದ ವಸ್ತುಗಳು ಎಂದು ಪ್ರಮಾಣ ಮಾಡಿಕೊಳ್ಳಲು ಪ್ರಯತ್ನ ಪಟ್ಟಿದ್ದ. ಅದಕ್ಕಾಗಿಯೇ ಇಷ್ಟು ಕಾಲ ಶ್ಯಾಮಾಸುಂದರಿಯು ತನ್ನನ್ನು ತಾನೇ ಸಂಯಮದಲ್ಲಿಟ್ಟುಕೊಂಡಿ ದ್ದಳು.

ಮಧುಸೂದನನ ಮದುವೆಯಾದ ಮೇಲೆ ಅವಳಿಗಿನ್ನು ತಡೆಯಲು ಸಾಧ್ಯವಾಗಲಿಲ್ಲ. ಕುಮು ವನ್ನು ಮಧುಸೂದನನು ಇತರ ಹೆಂಗಸರಂತೆಯೇ ನಿಕೃಷ್ಟವಾಗಿ ಕಂಡಿದ್ದಿದ್ದರೆ ಅದೊಂದು ಬಗೆ ಯಾಗಿ ಸಹಿಸಬಹುದಾಗಿತ್ತು. ಆದರೆ ಕಡಿವಾಣ ಕಿತ್ತು ಮಧುಸೂದನನು ಯಾವದೋ ಹೆಂಗಸಿ ಗಾಗಿ ಅಂಥವೇಗದಲ್ಲಿ ಹೋಗಬಲ್ಲನೆಂಬುದನ್ನು ಕಂಡಾಗ ಶ್ಯಾಮಸುಂದರಿಗೆ ಇನ್ನು ಸಂಯಮ ದಿಂದಿರುವುದು ಸಾಧ್ಯವಾಗಲಿಲ್ಲ. ಈಚೆಗೆ ಕೆಲವು ದಿನಗಳಿಂದ ಸಾಹಸದಿಂದ ಅವಕಾಶಮಾಡಿ ಕೊಂಡು ಅಲ್ಪ ಸ್ವಲ್ಪ ಮುಂದೆ ಬಂದಿದ್ದಳು, ಹಾಗೆ ಮುಂದೆ ಬರುವುದು ಸುಲಭವಲ್ಲವೆಂದು ಕಂಡುಕೊಂಡಿದ್ದಳು. ಆಗಾಗ ಅಲ್ಪ ಸ್ವಲ್ಪ ಅಡ್ಡಿಯೂ ಬಂದಿತ್ತು. ಆದರೆ ಅದನ್ನೂ ನಿವಾರಿ ಬಹುದೆಂದು ಗೊತ್ತಾಗಿತ್ತು - ಮಧುಸೂದನನ ದೌರ್ಬಲ್ಯವು ಬಹಿರಂಗವಾಗಿ ಬಿಟ್ಟಿದೆ, ಅದಕ್ಕೋ ಸ್ಕರವೇ ಶ್ಯಾಮಾ ಕೂಡ ಇನ್ನು ಧೈರ್ಯಗೆಡದಿರುವುದು ಸಾಧ್ಯವಿಲ್ಲದಾಗಿದೆ. ಕುಮು ಹೊರಟು ಹೋಗುವ ಹಿಂದಿನ ರಾತ್ರಿ ಮಧುಸೂದನನು ಶ್ಯಾಮಾಳನ್ನು ಹೇಗ ಹತ್ತಿರ ಸೆಳೆದುಕೊಂಡಿದ್ದನೊ ಹಾಗೆ ಹಿಂದೆಂದೂ ಸೆಳೆದಿರಲಿಲ್ಲ. ಅದಾದಮೇಲೆ ಅದಕ್ಕೆ ಪ್ರತಿಯಾದ ಪೆಟ್ಟಿನಲ್ಲಿ ಬಿದ್ದು ಬಿಡುತ್ತೊ ಎಂದು ಭಯ ಕೂಡ ಪಟ್ಟಿದ್ದಳು. ಆದರೆ ಹೆದರದೆ ನಿಂತಿದ್ದರೆ ಭಯದ ಕಾರಣವು ತಾನಾಗಿಯೆ

ಕಡಿದುಹೋಗುವುದೆನ್ನುವಷ್ಟು ಕೂಡ ಅವಳಿಗೆ ತಿಳಿದಿತ್ತು.

ಬೆಳಿಗ್ಗೆಯೇ ಮಧುಸೂದನನು ಹೊರಗೆ ಹೊರಟಿದ್ದ. ಮಧ್ಯಾಹ್ನ ಒಂದು ಘಂಟೆಯಾದ ಮೇಲೆ ಮನೆಗೆ ಬಂದ. ಇದಕ್ಕೆ ಮುಂಚೆ ಬಹುಕಾಲದಿಂದ ಅವನ ಸ್ನಾನಾಹಾರಗಳ ನಿಯಮದಲ್ಲಿ ಇಂತಹ ವ್ಯತಿಕ್ರಮ ಉಂಟಾಗಿರಲಿಲ್ಲ. ಇಂದು ಬಹಳವಾಗಿ ದಣಿದು ಬೇಸರಗೊಂಡು ಮನೆಗೆ ಬಂದಾಗ ಕುಮು ಅಣ್ಣನ ಮನೆಗೆ ಹೊರಟುಹೋಗಿರುವಳೆಂದೂ, ಸಂತೋಷದಿಂದಲೇ ಹೋಗಿರುವ ಳೆಂದೂ ನೆನೆದ. ಇಷ್ಟು ದಿನಗಳು ಮಧುಸೂದನನು ತನ್ನ ಆಧಾರದ ಮೇಲೆಯೇ ದೃಢವಾಗಿ ನಿಂತಿದ್ದ. ಆದರೆ ಯಾವುದೋ ಒಂದು ಸಮಯದಲ್ಲಿ ಸ್ವಲ್ಪ ಅಲುಗಿದಾಗ, ತನು ಮನಗಳ ಆತುರ ತೆಯ ವೇಳೆಯಲ್ಲಿ ಯಾವುದೋ ಒಬ್ಬ ಹೆಂಗಸಿನ ಪ್ರೀತಿಯ ಆಶ್ರಯ ಪಡೆಯುವ ಸುಪ್ತವಾದ ಆಸೆಯು ಅವನ ಮನಸ್ಸಿನಲ್ಲಿ ಎಚ್ಚೆತ್ತು ಎದ್ದು ನಿಂತಿತ್ತು. ಅದಕ್ಕೋಸ್ಕರವೇ ಹೀಗೆ ಅನಾಯಾಸ ವಾಗಿ ಕುಮು ಹೊರಟು ಹೋದುದರಿಂದ ಅವನಲ್ಲಿ ಒಂದು ಬಗೆಯಾದ ಧಿಕ್ಕಾರವುಂಟಾಯಿತು.

ಇಂದು ಅವನ ಊಟದ ಸಮಯದಲ್ಲಿ ಶ್ಯಾಮಾಸುಂದರಿಯು ಬೇಕೆಂತಲೇ ಹತ್ತಿರ ಬಂದು ಕೂಡಲಿಲ್ಲ. ಯಾರಿಗೆ ಗೊತ್ತು, ಹಿಂದಿನ ರಾತ್ರಿ ಅವಳನ್ನು ಹಾಗೆ ಹಿಡಿದೆತ್ತಿಕೊಂಡು ಹೋದ ಮೇಲೆ ಮಧುಸೂದನನು ತನ್ನ ಮೇಲೆಯೇ ವಿರಕ್ತಿಗೊಂಡಿದ್ದರೂ ಇರಬಹುದು ಎಂದು ಹೆದರಿ ದ್ದಳು. ಊಟವಾದ ಮೇಲೆ ಮಧುಸೂದನನು ಶೂನ್ಯವಾದ ಮಲಗುವ ಮನೆಗೆ ಬಂದು ಸ್ವಲ್ಪ ಹೊತ್ತು ಸುಮ್ಮನೆಯೇ ಇದ್ದ, ಆಮೇಲೆ ತಾನೇ ಶ್ಯಾಮಾಳಿಗೆ ಹೇಳಿ ಕಳುಹಿಸಿದ. ಶ್ಯಾಮಾ ಕೆಂಪಂಚಿನ ವಿಲಾಯತಿ ಶಾಲೊಂದನ್ನು ಮೈಮೇಲೆ ಹೊದ್ದುಕೊಂಡು ಸ್ವಲ್ಪ ಸಂಕುಚಿತ ಭಾವ ದಿಂದ ಪ್ರವೇಶಿಸಿ ಒಂದು ಪಕ್ಕದಲ್ಲಿ ತಲೆತಗ್ಗಿಸಿಕೊಂಡು ಕೆಳಗೆ ನೋಡುತ್ತಾ ನಿಂತಿದ್ದಳು. ಮಧುಸೂದನ "ಬಾ, ಈ ಕಡೆ ಬಾ, ಕೂಡು" ಎಂದು ಕರೆದ.

ಶ್ಯಾಮಾ ಅವನ ತಲೆಯಬಳಿ ಬಂದು ಕೂತು "ಇವತ್ತೇನೋ ನಿಮ್ಮ ಮುಖ ಬಡವಾದ ಹಾಗೆ ಕಾಣುತ್ತಿದೆ," ಎಂದಳು. ಹೀಗೆ ಹೇಳಿ ಸ್ವಲ್ಪ ಬಾಗಿ ಅವನ ತಲೆಯ ಮೇಲೆ ಕೈಯಾಡಿಸಲು ತೊಡಗಿದಳು.

ಮಧುಸೂದನ "ಆಹಾ ನಿನ್ನ ಕೈ ಎಷ್ಟು ತಣ್ಣಗಿದೆ." ಎಂದ.

ರಾತ್ರಿ ಮಧುಸೂದನ ಮಲಗಲು ಹೋದಾಗ ಶ್ಯಾಮಸುಂದರಿಯು ಕರೆಸಿಕೊಳ್ಳದೆಯೇ ಕೋಣೆಗೆ ಬಂದು "ಏನದು, ಪಾಪ, ಒಂಟಿಯಾಗಿದ್ದೀರಲ್ಲ ?" ಎಂದಳು.

ಶ್ಯಾಮಾಸುಂದರಿಯು ಯಾವುದೋ ಒಂದು ಛಲದ ಮೇಲೆ ಯಾವ ಬಗೆಯ ಮುಚ್ಚು ಮರೆಯೂ ಇಲ್ಲದೇ ಮುಂದೆ ಹೋದಳು.

ಯಾವ ಸಂಕೋಚವೂ ಇಲ್ಲದೆ ಎಲ್ಲರೆದುರಿಗೂ ತನ್ನ ಅಧಿಕಾರವನ್ನು ಸ್ಥಾಪಿಸಿ ಚಲಾಯಿ ಸಲು ಇಷ್ಟವುಳ್ಳವಳಂತೆ ಕಂಡಿತು, ಇನ್ನು ಹೆಚ್ಚುಕಾಲ ಅವಕಾಶವಿಲ್ಲ. ಕುಮು ಪುನಃ ಯಾವಾಗ ಬಂದು ಬಿಡುವಳೋ, ಅಷ್ಟರಲ್ಲಿಯೇ ತನ್ನ ಆಟ ಪೂರ್ತಿಯಾಗಿ ಆಡಿ ಬಿಡಬೇಕು. ಆಟ ಬಹಿರಂಗ ವಾಗಿದ್ದರೇನೇ ಅದಕ್ಕೆ ಶಕ್ತಿ....ಯಾವ ವಿಷಯದಲ್ಲೂ ನಾಚುಗೆಗೆ ಅವಕಾಶ ಕೊಟ್ಟರೆ ನಡೆಯು ವುದಿಲ್ಲ. ಪರಿಸ್ಥಿತಿಯನ್ನು ನೋಡುತ್ತ ನೋಡುತ್ತ ಮನೆಯ ದಾಸ, ದಾಸಿಯರಿಗೂ ಎಲ್ಲ ಗೊತ್ತಾಗಿ ಹೋಯಿತು. ಮಧುಸೂದನನ ಮನಸ್ಸಿನಲ್ಲಿ ಬಹುಕಾಲದ ಪ್ರವೃತ್ತಿಯ ಅಗ್ನಿಯು ಎಷ್ಟು ಬಲವಾಗಿ ಅಡಗಿಸಿಡಲ್ಪಟ್ಟಿತ್ತೋ ಅಷ್ಟೇ ಬಲವಾಗಿ ಅದು ಹೊರಗೆ ಬಂದುಬಿಟ್ಟಿತ್ತು.

ಯಾರಿಗೂ ಲಕ್ಷ್ಯಮಾಡಲಿಲ್ಲ. ಸ್ವೇಚ್ಛಾಚಾರವು ಅತ್ಯಂತ ಸ್ಥೂಲ ಭಾವದಲ್ಲಿಯೇ ಸಂಸಾರದಲ್ಲಿ ಪ್ರಕಾಶವಾಗಿ ಹೋಯಿತು.

ನವೀನನೂ ಮತ್ತು ಮೋತಿಯಮ್ಮನೂ ನೋಡಿ ಈ ಹುಚ್ಚು ಹೊಳೆಯನ್ನ ತಡೆಯಲು ಸಾಧ್ಯ ವಿಲ್ಲವೆಂದು ಕೊಂಡರು.

"ಕುಮುವಿಗೆ ಹೇಳಿ ಕಳುಹಿಸುವುದಕ್ಕೆ ಆಗುವುದಿಲ್ಲೇನು? ಇನ್ನೂ ತಡ ಮಾಡುವುದು ಒಳ್ಳೆಯದೇನು.?"

"ಅದೇ ವಿಷಯವನ್ನೇ ಯೋಚಿಸುತ್ತಿದ್ದೇನೆ. ಅಣ್ಣನ ಅಪ್ಪಣೆಯಿಲ್ಲದೆ ದಾರಿಯಿಲ್ಲ. ಪ್ರಯತ್ನ ಮಾಡಿ ನೋಡೋಣ ಅಂತೂನೂ."

ಒಂದು ದಿನ ಬೆಳಿಗ್ಗೆ ಜಾಣತನದಿಂದ ಅಣ್ಣನ ಹತ್ತಿರ ಈ ಪ್ರಸ್ತಾಪ ಎತ್ತಬೇಕೆಂದು ನವೀನ ಬಂದಾಗ ಮಧುಸೂದನ ಹೊರಗೆ ಎಲ್ಲೋ ಹೋಗಲು ತಯಾರಾಗಿದ್ದುದನ್ನು ನೋಡಿದ. ಬಾಗಿಲಲ್ಲಿ ಕುದುರೆಯ ಗಾಡಿ ಸಿದ್ಧವಾಗಿತ್ತು.

ನವೀನನು "ಎಲ್ಲಾದರೂ ಹೋಗುತ್ತೀಯೇನು?" ಎಂದು ಕೇಳಿದ. ಮಧುಸೂದನ ಸ್ವಲ್ಪ ಸಂಕೋಚವನ್ನು ತೋರಿದು "ಅದೇ ಜೋಯಿಸ ವೆಂಕಟಸ್ವಾಮಿಯ ಹತ್ತಿರ" ಎಂದ.

ನವೀನನ ಮುಂದೆ ಮಧುಸೂದನನು ತನ್ನ ದುರ್ಬಲತೆಯನ್ನು ಮುಚ್ಚಿಡಲು ಬಯಸುತ್ತಿದ್ದ. ಆದರೆ ಹಠಾತ್ತಾಗಿ ಅವನಿಗೆ ನವೀನನನ್ನು ಸಂಗಡ ಕೊಂಡುಹೋದರೆ ಒಳ್ಳೆಯದೆಂದು ತೋರಿತು.

"ನಡೆಯೋ ಹೋಗೋಣ" ಎಂದ.

ನವೀನನು "ಇನ್ನು ಹಾಳಾಯಿತು" ಎಂದುಕೊಂಡವನು "ಅವನು ಊರಲ್ಲಿದಾನೋ ಇಲ್ಲವೋ ನಾನು ಹೋಗಿ ನೋಡಿಕೊಂಡು ಬರುತ್ತೇನೆ ಅವನು ತಮ್ಮೂರಿಗೆ ಹೊರಟು ಹೋಗಿದಾನೇನೋ ಅಂತ ಅನ್ನಿಸುತ್ತಿದೆ. ಹಾಗಂತಲೇ ಸಮಾಚಾರ ಕೂಡ ಕೇಳಿದ್ದೆ" ಎಂದ.

ಮಧುಸೂದನ "ಒಳ್ಳೆಯದೇ ಆಯಿತು. ನಡಿ, ನೋಡಿಕೊಂಡೇ ಬರೋಣ." ಎಂದ.

ನವೀನು ನಿರುಪಾಯನಾಗಿ ಜೊತೆಯಲ್ಲಿ ಹೊರಟ. ಆದರೆ ಮನಸ್ಸಿನಲ್ಲಿಯೇ "ಏನೋ ಕಷ್ಟಕ್ಕೇ ಬಂತು" ಎಂದು ಕೊಂಡ.

ಜೋಯಿಸನ ಮನೆಯ ಎದುರಿಗೇ ಗಾಡಿ ನಿಂತ ಮೇಲೆ ನವೀನ ಬೇಗ ಇಳಿದು ಹೋಗಿ ಸ್ವಲ್ಪ ಹಣಿಕಿನೋಡಿ "ಯಾರೂ ಮನೆಯಲ್ಲಿದ್ದ ಹಾಗೆ ಕಾಣುವುದಿಲ್ಲ" ಎಂದ.

ಅವನು ಹಾಗೆಂದನೋ ಇಲ್ಲವೋ ಅದೇ ಕ್ಷಣದಲ್ಲಿ ಸ್ವಯಂ ವೆಂಕಟ ಶಾಸ್ತ್ರಿಯೇ ಹಲ್ಲುಜ್ಜುತ್ತಾ ಉಜ್ಜುತ್ತಾ ಬಾಗಿಲು ತೆಗೆದು ಹೊರಗೆ ಬಂದ. ನವೀನ ಅವರ ಕಾಲಿಗೆ ಅಡ್ಡ ಬಿದ್ದು ಏಳುತ್ತ ಕಿವಿಯಲ್ಲಿ "ಸ್ವಲ್ಪ ಜಾಗರೂಕತೆಯಿಂದ ಮಾತಾಡಿ" ಎಂದುಸುರಿದ.

ಅದೇ ಜೌಗು ಜಾಗಾಗಿದ್ದ ಮನೆಯಲ್ಲಿ ಮೂವರೂ ನವಾರಿನ ಮಂಚದ ಮೇಲೆ ಕೂತುಕೊಂಡರು. ನವೀನ ಮಧುಸೂದನನ ಹಿಂದುಗಡೆ ಕೂತ, ಮಧುಸೂದನ ಏನೋ ಹೇಳುವುದಕ್ಕೆ ಮುಂಚೆಯೇ ನವೀನ ಗಟ್ಟಿಯಾಗಿ "ಮಹಾರಾಜರ ಸಮಯ ಬಹಳ ಕೆಟ್ಟು ಹೋಗಿದೆ ಯಾವಾಗ ಗ್ರಹಗಳು ಶಾಂತಿಯಾಗುತ್ತವೆ ಸ್ವಲ್ಪ ನೋಡಿ ತಿಳಿಸಿ, ಶಾಸ್ತ್ರಿಗಳೇ?" ಎಂದ. ಮಧುಸೂದನ ನವೀನನು ವಿಷಯವನ್ನು ಮುಂಚೆಯೇ ತಿಳಿಸಿ ಬಿಟ್ಟಾನೇನೋ ಎಂದು ಹೆದರಿ ಬೆರಳಿನಿಂದ ನವೀನನ ತೊಡೆಯನ್ನು ಚುಚ್ಚಿದ.

ವೆಂಕಟ ಶಾಸ್ತ್ರಿಯು ರಾಶಿ ಚಕ್ರವನ್ನು ಬರೆದು ಮಧುಸೂದನನ ಧನ ಸ್ಥಾನದಲ್ಲಿ ಶನಿ ಗ್ರಹದ ದೃಷ್ಟಿ ಬಿದ್ದಿದೆಯೆಂದು ಒಂದೇ ಸಲ ಸ್ಪಷ್ಟವಾಗಿ ಹೇಳಿಬಿಟ್ಟ.

ಗ್ರಹದ ಹೆಸರು ತಿಳಿದು ಮಧುಸೂದನನಿಗೆ ಲಾಭವೇನೂ ಇಲ್ಲ. ಅದರ ಸಂಗಡ ಹೋರಾಡುವುದಾಗಲೀ, ಸಂಧಿ ಮಾಡಿಕೊಳ್ಳುವುದಾಗಲಿ ಸಾಧ್ಯವಿಲ್ಲದ ಮಾತು. ಆದರೆ ಯಾವ ಯಾವ ಮನುಷ್ಯರು ಅವನ ಮೇಲೆ ಶತ್ರುತ್ವ ಸಾಧಿಸುತ್ತಿರುವರೋ ಅವರುಗಳ ಪರಿಚಯ ಬೇಕು. ವರ್ಣಮಾಲೆಯಲ್ಲಿ ಯಾವ ವರ್ಗದಲ್ಲಾದರೂ ಇರಲಿ, ಅವರ ಹೆಸರನ್ನು ಹೊರಗೆ ತರಲೇ ಬೇಕು. ನವೀನನಿಗೆ ಒಂದು ಕಷ್ಟವಿತ್ತು. ಮಧುಸೂದನನ ಆಫೀಸಿನ ವಿಷಯ ಅವನಿಗೇನೂ ಗೊತ್ತಿರಲಿಲ್ಲ. ಆದ್ದರಿಂದ ಸನ್ನೆಮಾಡುವುದರಿಂದಲೂ ಸಹಾಯವಾಗಲು ಸಾಧ್ಯವಿಲ್ಲ. ವೆಂಕಟಶಾಸ್ತ್ರಿಯು ಮುಗ್ಧ ಬೋಧದ ಸೂತ್ರಗಳನ್ನು ಪಠಿಸುತ್ತಾ ಮಧುಸೂದನನ ಕಡೆ ಓರೆಗಣ್ಣಿನಿಂದ ನೋಡುತ್ತಿದ್ದ. ಇಂದಿನ ದಿನ ಹೆಸರಿನ ಪ್ರಸ್ತಾಪ ಬಂದಾಗ ಭೃಗುಮುನಿ ಸಂಪೂರ್ಣ ಮೌನಧರಿಸಿದ್ದ. ಇದ್ದಕ್ಕಿದ್ದ ಹಾಗೆ ಶಾಸ್ತ್ರಿಯು 'ಹೆಂಗಸೊಬ್ಬಳಿಂದ ಶತ್ರುತ್ವ ನಡೆಯುತ್ತಿದೆ' ಎಂದು ಬಿಟ್ಟ.

ನವೀನ ನಿಟ್ಟುಸಿರು ಬಿಟ್ಟು 'ಸದ್ಯ' ಎಂದುಕೊಂಡ. ಆ ಹೆಂಗಸು ಶ್ಯಾಮಸುಂದರಿಯೆ ಎಂದು ಹೇಗಾದರೂ ಸ್ಥಿರಮಾಡಿಸಿ ಬಿಟ್ಟರೆ ಯೋಚನೆಯೇ ಇಲ್ಲ. ಮಧುಸೂದನನಿಗೆ ಹೆಸರು ಬೇಕಾಗಿತ್ತು. ಶಾಸ್ತ್ರಿಯು ಆಗ ವರ್ಣಮಾಲೆಯ ವರ್ಗವನ್ನು ಶುರು ಮಾಡಿದ. 'ಕ' ವರ್ಗಶಬ್ದವನ್ನು ಹೇಳಿ ಅದೃಶ್ಯನಾದ ಭೃಗು ಮುನಿಯ ಕಡೆ ಕಿವಿಗೊಟ್ಟು ಕೇಳುತ್ತಿದ್ದಂತೆ ಇದ್ದ. ಮತ್ತು ಕಡೆಗಣ್ಣಿನಿಂದ ಮಧುಸೂದನನ ಕಡೆ ನೋಡುತ್ತಲೂ ಇದ್ದ. 'ಕ' ವರ್ಗ ಎನ್ನುತ್ತಲೂ ಮಧುಸೂದನನ ಮುಖದ ಮೇಲೆ ಸ್ವಲ್ಪ ಬೆಚ್ಚಿದ ಚಿಹ್ನೆ ಕಂಡು ಬಂತು. ಈ ಕಡೆ ಹಿಂದಿನಿಂದ "ಅಲ್ಲ" ಎಂಬ ಸಂಕೇತವನ್ನು ಸೂಚಿಸಲು ನವೀನನು ಬಲದಿಂದ ಎಡಕ್ಕೆ ಭುಜವನ್ನಲ್ಲಾಡಿಸಿದ. ಈ ಸಂಕೇತಕ್ಕೆ ಮದ್ರಾಸಿನ ಕಡೆ ವಿರುದ್ಧವಾದ ಅರ್ಥವಿದೆಯೆಂದು ನವೀನನಿಗೆ ಗೊತ್ತಿಲ್ಲ. ವೆಂಕಟಸ್ವಾಮಿ ಇನ್ನು ಸಂದೇಹ ಪಡದೆ ಗಟ್ಟಿಯಾಗಿ 'ಕ' ವರ್ಗ ಎಂದು ಬಿಟ್ಟ. ಅಲ್ಲದೆ ಮಧುಸೂದನನ ಮುಖವನ್ನು ನೋಡಿ 'ಕ' ವರ್ಗದ ಮೊದಲನೆ ವರ್ಣವೇ ಎಂದು ಸರಿಯಾಗಿ ಊಹಿಸಿಬಿಟ್ಟಿದ್ದ, ಆದ್ದರಿಂದ ಮಾತನ್ನು ಇನ್ನೂ ಸ್ವಲ್ಪ ವಿವರವಾಗಿ ಹೇಳುತ್ತಾ ಶಾಸ್ತ್ರಿಯು ಈ 'ಕ' ಮಧ್ಯೆಯೇ ಮಧುಸೂದನನ ಸಮಸ್ತ 'ಕು' ಸೇರಿರುವುದು ಎಂದು ಬಿಟ್ಟ.

ಇದಾದ ಮೇಲೆ ಪೂರ್ತಿ ಹೆಸರು ತಿಳಿಯಲು ಒತ್ತಾಯ ಮಾಡದೆ ಮಧುಸೂದನನು ವ್ಯಗ್ರನಾಗಿ "ಇದಕ್ಕೆ ಪ್ರತೀಕಾರವೇನು ?" ಎಂದು ಕೇಳಿದ.

ವೆಂಕಟಶಾಸ್ತ್ರಿ ಗಂಭೀರ ಭಾವದಲ್ಲಿ "ಕಂಟಕೇನೈವ ಕಂಟಕಂ !....(ಮುಳ್ಳಿನಿಂದಲೇ ಮುಳ್ಳು)ಅರ್ಥಾತ್ ಬೇರೊಬ್ಬ ಹೆಂಗಸು ಉದ್ಧಾರ ಮಾಡುವಳು, ಎಂದ.

ಮಧುಸೂದನ ಚಕಿತನಾಗಿ ಬಿಟ್ಟ. ವೆಂಕಟಶಾಸ್ತ್ರಿ ಮಾನವ ಚರಿತ್ರೆಯ ವಿದ್ಯೆಯ ಚರ್ಚೆ ಮಾಡಿದ್ದ.

ನವೀನ ಅಸ್ಥಿರನಾಗಿ "ಸ್ವಾಮಿ, ಮಧುರೆಯ ಜೂಜಿನಲ್ಲಿ ಮಹಾರಾಜರ ಕುದುರೆ ಗೆಲ್ಲುತ್ತೇನು?" ಎಂದು ಕೇಳಿದ. ಬಹಳ ಕುದುರೆಗಳು ಸೋಲುತ್ತವೆಂದು ವೆಂಕಟಶಾಸ್ತ್ರಿಗೆ ಗೊತ್ತು. ಸ್ವಲ್ಪ ಏನೋ ಗುಣಿಸಿ "ನಷ್ಟವಾಗುವ ಹಾಗೆ ಕಾಣುತ್ತಿದೆ" ಎಂದ. ಕೆಲವು ದಿನಗಳ ಹಿಂದೆಯೇ ಮಧುಸೂದನನ ಕುದುರೆಗೆ ದೊಡ್ಡ ಜಯವಾಗಿತ್ತು. ಮಧುಸೂದನನಿಗೆ ಯಾವ ಮಾತನ್ನೂ ಆಡಲು ಅವಕಾಶ

ಕೊಡದೆ ಮುಖವನ್ನು ಅತ್ಯಂತ ಖಿನ್ನವಾಗಿ ಮಾಡಿಕೊಂಡು "ಶಾಸ್ತ್ರಿಗಳೇ, ನನ್ನ ಕನ್ಯೆಯ ಗತಿ ಏನಾಗುತ್ತೆ ?" ಎಂದು ಕೇಳಿದ. ನವೀನನಿಗೆ ಮಗಳಿಲ್ಲವೆಂದು ಹೇಳ ಬೇಕಾಗಿಲ್ಲ.

ಮಗಳಿಗೆ ವರ ಹುಡುಕುತ್ತಿದ್ದಾನೆಂದು ವೆಂಕಟಶಾಸ್ತ್ರಿ ಖಂಡಿತವಾಗಿ ಊಹಿಸಿಕೊಂಡ. ನವೀನನ ಚಹರೆ ನೋಡಿ ತಿಳಿದು ಕೊಂಡ, ಹುಡುಗಿಯೇನೂ ಅಪ್ಸರೆಯಲ್ಲ ಎಂದು. ಆ ಮೇಲೆ "ಬೇಗ ಪಾತ್ರ ಸಿಕ್ಕುವುದು ಕಷ್ಟ. ಬಹಳ ದುಡ್ಡು ಖರ್ಚು ಮಾಡಬೇಕಾಗಿದೆ" ಎಂದ.

ಮಧುಸೂದನನಿಗೆ ಸ್ವಲ್ಪವೂ ಅವಕಾಶ ಕೊಡದೆ ಒಂದಾದ ಮೇಲೊಂದು ಹತ್ತು ಹನ್ನೆರಡು ಅಸಂಗತವಾದ ಪ್ರಶ್ನೆಗಳನ್ನು ಹಾಕಿ ಅದ್ಭುತವಾದ ಉತ್ತರಗಳನ್ನು ಹೊರಡಿಸಿ ನವೀನ "ಅಣ್ಣಾ, ಇನ್ನೇಕೆ, ನಡಿ ಹೋಗೋಣ" ಎಂದ.

ಗಾಡಿಯನ್ನು ಹತ್ತಿ ನವೀನ "ಅಣ್ಣ, ಅವನದೆಲ್ಲ ಶುದ್ಧ ಮೋಸ....ಕಳ್ಳ ಎಲ್ಲೋ." ಎಂದ.

"ಆದರೆ ಅವತ್ತು....?"

"ಅವತ್ತು ಮುಂಚೆಯೇ ಸಮಾಚಾರ ತಿಳಿದುಕೊಂಡುಬಿಟ್ಟಿದ್ದ."

"ನಾನು ಅಲ್ಲಿಗೆ ಬರುತ್ತೇನೆಂದು ಹೇಗೆ ತಿಳಿದುಕೊಂಡ ?"

"ನನ್ನದೇ ಮುಠ್ಠಾಳತನ. ಮೊದಲೇ ಗೊತ್ತುಮಾಡಿ ಅವನ ಹತ್ತಿರ ನಿನ್ನನ್ನ ಕರೆದು ಕೊಂಡು ಹೋದೆ."

ಜೋಯಿಸನ ಮೋಸವಿದ್ಯೆಗೆ ಎಷ್ಟೇ ರುಜುವಾತು ಸಿಕ್ಕಿದರೂ 'ಕ' ವರ್ಗದ 'ಕು' ಎಂಬುದು ಮಧುಸೂದನನ ಮನಸ್ಸಿನಲ್ಲಿ ಚುಚ್ಚುತ್ತಲೇ ಇತ್ತು. ನಕ್ಷತ್ರಗಳಲ್ಲಿ ಅಪನಂಬಿಕೆ ತೋರಿಸಿ ಅರ್ಥವಿಲ್ಲದ ಪ್ರಶ್ನೆಗಳನ್ನು ಕೇಳಿದರೆ ಯಾವುದೋ ಒಂದು ಉತ್ತರ ಸಿಕ್ಕುತ್ತೆ, ಆದರೆ ಸಹಜವಾದ ಪ್ರಶ್ನೆಗೆ ಬರುವ ಉತ್ತರ ತಪ್ಪಾಗಲಾರದು. ಎಂದು ಯೋಚಿಸತೊಡಗಿದ. ಮಧುಸೂದನ ಯಾವುದರ ವಿಷಯವಾಗಿ ಎಂದೂ ನಿರೀಕ್ಷಿಸಿರಲಿಲ್ಲವೋ ಅಂತಹ ಕೆಟ್ಟ ಕಾಲವು ಮದುವೆಯ ಜೊತೆಯಲ್ಲಿಯೇ ಬಂದಿತ್ತು. ಇದಕ್ಕಿಂತಲೂ ಸ್ಪಷ್ಟವಾದ ಪ್ರಮಾಣ ಬೇಕೇ ?"

ನವೀನ ಮೆಲ್ಲಮೆಲ್ಲಗೆ "ಎರಡು ವಾರಗಳಂತೂ ತೀರಿಹೋಯಿತು, ಈಸಲ ಹೋಗಿ ಅತ್ತಿಗೆಯನ್ನು ಕರೆದುಕೊಂಡು ಬರುತ್ತೇನೆ." ಎಂದ.

"ಯಾಕೆ, ಅವಸರವೇನು ? ಇಲ್ಲಿ ನೋಡು ನವೀನ, ಈಗಲೇ ಹೇಳಿದ್ದೇನೆ. ಇನ್ನು ಮುಂದೆ ಎಂದಿಗೂ ಈಮಾತೆಲ್ಲ ನನ್ನ ಹತ್ತಿರ ಎತ್ತಬೇಡ. ಯಾವತ್ತು ನನಗೆ ಇಷ್ಟವೋ ಆಗ ನಾನೇ ಕರೆದುಕೊಂಡು ಬರುತ್ತೇನೆ."

ನವೀನನಿಗೆ ಅಣ್ಣ ಎಂತಹವನು ಎಂದು ಗೊತ್ತು. ಇನ್ನು ಈ ಮಾತು ಇಲ್ಲಿಗೇ ಮುಗಿದ ಹಾಗೆ ಎಂದು ತಿಳಿದ.

ಆದರೂ ಸಾಹಸಮಾಡಿ "ನನ್ನ ಹೆಂಡತಿ ಅತ್ತಿಗೆಯನ್ನು ನೋಡುವುದಕ್ಕೆ ಹೋದರೆ ತಪ್ಪೇನೂ ಇಲ್ಲವಲ್ಲ ?" ಎಂದ.

ಮಧುಸೂಗನ ಅಲಕ್ಷ್ಯ ತೋರುತ್ತಾ ಸಂಕ್ಷೇಪವಾಗಿ "ಹೋದರೆ ಹೋಗಲಿ" ಎಂದ.

# ನಲವತ್ತೊಂಬತ್ತನೆಯ ಅಧ್ಯಾಯ

ಅತ್ಯಂತ ವ್ಯಸ್ತನಾಗಿಹೋಗಿ ಒಂದು ಆರಾಮ ಕುರ್ಚಿಯನ್ನು ತೋರಿಸುತ್ತಾ ವಿಪ್ರದಾಸ "ಬನ್ನಿ, ನವೀನ ಬಾಬು, ಇಲ್ಲಿ ಕೂಡಿ" ಎಂದ.

ನವೀನ "ನನ್ನ ಪರಿಚಯವಿನ್ನೂ ನಿಮಗೆ ಆಗಿಲ್ಲವೆಂದು ಕಾಣುತ್ತದೆ. ನಾನೊಬ್ಬ ರಾಜರ ಮನೆಯ ಆದರದ ಮಗನೆಂದು ತಿಳಿದಿರುವ ಹಾಗಿದೆ. ನಿಮ್ಮ ತಂಗಿಯಿದ್ದಾಳಲ್ಲ, ಆಕೆಯ ಅಧಮ ಸೇವಕ ನಾನು, ನನ್ನನ್ನ ಸುಮ್ಮನೆ ಮರ್ಯಾದೆ ಮಾಡಿ ನನಗೆ ನಿಮ್ಮ ಆಶೀರ್ವಾದ ಸಿಗದೇ ಇರುವ ಹಾಗೆ ಮಾಡಬೇಡಿ. ಆದರೆ ಯಾಕೆ ಹೀಗಿದ್ದೀರಿ ನೀವು ? ಎಂತಹ ಶರೀರ ನಿಮ್ಮದು, ಈಗ ಅದರ ನೆರಳು ಮಾತ್ರ ಬಾಕಿ ಇಟ್ಟಿದ್ದೀರಲ್ಲ ?" ಎಂದ.

"ಶರೀರ ಸತ್ಯವಲ್ಲಪ್ಪ, ಛಾಯೆ. ಆಗಾಗ ಈ ವಿಷಯವನ್ನು ನೆನಪು ಮಾಡಿಕೊಳ್ಳುವುದು ಒಳ್ಳೆಯದು. ಅದರಿಂದ ಕಟ್ಟಕಡೆಯ ಪಾಠ ಚೆನ್ನಾಗಿ ಮಂದಟ್ಟಾಗುವುದು."

ಕುಮು ಕೋಣೆಯೊಳಗೆ ಬಂದು "ನವೀನಣ್ಣ, ನಡೆಯಿರಿ, ಸ್ವಲ್ಪ ಏನಾದರೂ ಫಲಹಾರ ಮಾಡುವಿರಂತೆ " ಎಂದಳು.

"ಆಗಲಿ, ಮಾಡೋಣಂತೆ, ಆದರೆ ಒಂದು ಶರತ್ತಿನ ಮೇಲೆ. ಅದು ಎಷ್ಟು ಹೊತ್ತು ಸಫಲ ವಾಗುವುದಿಲ್ಲವೋ ಅಷ್ಟು ಹೊತ್ತು ಈ ಬ್ರಾಹ್ಮಣ ಅತಿಥಿ ಉಪವಾಸದಿಂದಲೇ ನಿನ್ನ ಬಾಗಿಲು ಕಾಯುತ್ತ ಬಿದ್ದಿರುತಾನೆ."

"ಶರತ್ತೇನು ಹೇಳಿ ನೋಡೋಣ."

"ನಮ್ಮ ಮನೆಯಲ್ಲಿದ್ದಾಗಲೇ ಕೇಳಿಕೊಂಡಿದ್ದೆ. ಆದರೆ ಅದು ಸಫಲವಾಗಲಿಲ್ಲ. ಭಕ್ತನಿಗೊಂದು ತಸಬೀರು ನಿನ್ನದು ಕೊಡಬೇಕು. ಅವತ್ತು ಇಲ್ಲವೆಂದು ಹೇಳಿಬಿಟ್ಟಿದ್ದೆ. ಇವತ್ತು ಹಾಗೆ ಹೇಳುವುದಕ್ಕೆ ಆಸ್ಪದವಿಲ್ಲ. ನಿಮ್ಮಣ್ಣನ ಕೋಣೆಯ"ಗೋಡೆಯಮೇಲೆ ಅಗೋ, ಎದುರಿಗೇ ತಗುಲಿಸಿದೆ."

ಉತ್ಕೃಷ್ಟವಾದ ತಸಬೀರು ದೈವಯೋಗದಿಂದ ಆಗುತ್ತದೆ. ಕುಮುವಿನ ಆ ಚಿತ್ರವೂ ಆ ದೈವಯೋಗದಿಂದಲೇ ಆದದ್ದು. ಹಣೆಯಮೇಲೆ ಯಾವ ಬೆಳಕು ಬಿದ್ದರೆ ಕುಮುವಿನ ಮನಸ್ಸಿನ ಚಹರೆಯು ಮುಖದಮೇಲೆ ಮುದ್ರಿತವಾಗುವುದೋ ಅದೇ ಬೆಳಕು ಬಿದ್ದಿತ್ತು. ಲಲಾಟದ ಮೇಲೆ ನಿರ್ಮಲವಾದ ಬುದ್ಧಿಯ ದೀಪ್ತಿ, ಕಣ್ಣುಗಳಲ್ಲಿ ಗಾಢವಾದ ಸರಳತೆಯ ಸೌಮ್ಯ ಕಾಂತಿ, ಮತ್ತು ಕರುಣೆಯ ಛಾಯೆ ನಿಂತಿದ್ದಂತೆ ತೆಗೆದ ಚಿತ್ರ. ಕುಮುವಿನ ಸುಂದರವಾದ ಬಲಗೈ ಒಂದು ಖಾಲಿ ಕುರ್ಚಿಯ ಕೈಮೇಲೆ ಇತ್ತು. ಎದುರಿಗೆ ತನ್ನದೇ ಯಾವುದೋ ಬಹುದೂರದ ಛಾಯೆಯನ್ನು ನೋಡಿ ಹಠಾತ್ತಾಗಿ ಚಕಿತಳಾಗಿ ನಿಂತಿರುವಂತೆ ಮನಸ್ಸಿಗೆ ಭಾಸವಾಗುತ್ತಿತ್ತು.

ತನ್ನ ಈ ತಸಬೀರೇ ಕುಮುವಿನ ಕಣ್ಣಿಗೆ ಬಿದ್ದಿರಲಿಲ್ಲ. ಕಲಿಕತ್ತೆಯಿಂದ ಫೋಟೋಗ್ರಾಫರನೊಬ್ಬನನ್ನು ಕರೆಸಿ ಅವಳಣ್ಣ ಮದುವೆಗೆ ಕೆಲವು ದಿನಗಳ ಮುಂಚೆ ಇದನ್ನು ತೆಗೆಸಿದ್ದನು. ಅದಾದ ನಂತರ ಆ ತಸಬೀರನ್ನು ತನ್ನ ಕೋಣೆಯಲ್ಲಿಯೇ ತಗುಲಿಸಿಕೊಂಡಿದ್ದನು. ಅದನ್ನು ನೋಡಿ ಕುಮುವಿನ ಕಣ್ಣುಗಳು ನೀರಿನಿಂದ ತುಂಬಿಮವು. ಫೋಟೋಗ್ರಾಫರನ ಬಳಿ ಇದರ

ನಕಲುಗಳು ಇನ್ನೂ ಎಷ್ಟೋ ಇವೆ, ಖಂಡಿತ. ಅದನ್ನು ಮನಸ್ಸಿನಲ್ಲಿ ತಂದುಕೊಂಡು ಅಣ್ಣನ ಮುಖದ ಕಡೆ ನೋಡಿದಳು. ನವೀನನು "ಅರ್ಥವಾಯಿತು, ವಿಪ್ರದಾಸಬಾಬು, ಅತ್ತಿಗೆಗೆ ನನ್ನ ಮೇಲೆ ಅನುಗ್ರಹವಾಯಿತು. ನೋಡಿ ಬೇಕಾದರೆ ಅವರ ಕಣ್ಣುಗಳನ್ನ. ಅಯೋಗ್ಯ ಮೈದುನನ ಮೇಲೆ ಆಕೆಯ ಕರುಣೆ ಅಷ್ಟಿಷ್ಟಲ್ಲ" ಎಂದ.

ವಿಪ್ರದಾಸ ನಗುತ್ತಾ "ಕುಮು, ನನ್ನ ಆಕ್ಷ್ಯಚರ್ಮದ ಪೆಟ್ಟಿಗೆಯಲ್ಲಿ ಇನ್ನೂ ಕೆಲವು ನಕಲುಗಳಿವೆ. ನಿನ್ನ ಭಕ್ತನಿಗೆ ವರ ಕೊಡಬೇಕೆಂದಿದ್ದರೆ ಅಭಾವವೇನಿಲ್ಲ." ಎಂದ.

ಕುಮು ನವೀನನಿಗೆ ಫಲಹಾರ ಮಾಡಿಸಲು ಹೊರಟಮೇಲೆ ಕಾಳೂ ಕೋಣೆಯೊಳಗೆ ಬಂದ. "ನಾನು ಸುಬೋಧಣ್ಣನಿಗೆ ಕೂಡಲೆ ಬರಹೇಳಿ ತಂತಿ ಕೊಟ್ಟಿದ್ದೇನೆ." ಎಂದ.

"ನನ್ನ ಹೆಸರಿನಲ್ಲಿ ತಾನೇ ?"

"ಹಾಂ, ನಿನ್ನ ಹೆಸರಿನಲ್ಲೇ, ನನಗೆ ಗೊತ್ತು, ನೀನು ಕಡೆಯವರೆಗೂ ಹೂಂ—ಊಹೂಂ ಅನ್ನುತ್ತಲೇ ಇರುತ್ತೀಯ. ಈ ಕಡೆ ಕಾಲ ವಿಪರೀತ ಕೆಡುತ್ತಿದೆ. ಡಾಕ್ಟರು ಕೂಡ ನಿನಗೆ ಈ ತಾಪತ್ರಯಗಳನ್ನು ಹೆಚ್ಚಿಗೆ ಹೊರಿಸಿದರೆ ಬಹಳ ಅಪಾಯ ಅಂತ ಹೇಳಿಬಿಟ್ಟಿದಾರೆ."

ಇದು ನಿಜ. ಹೃದಯದಲ್ಲಿ ವಿಕಾರದ ಚಿಹ್ನೆ ಕಂಡುಬಂದಿದೆ, ದೇಹಕ್ಕೂ ಮನಸ್ಸಿಗೂ ಆರಾಮ ಕೊಡುವುದು ಅಗತ್ಯ ಎಂದು ಡಾಕ್ಟರು ಹೇಳಿದ್ದರು. ಒಂದು ಕಾಲದಲ್ಲಿ ವಿಪ್ರದಾಸನಿಗೆ ವಿಪರೀತವಾಗಿ ಅಂಗಸಾಧನೆಯ ಹುಚ್ಚಿತ್ತು. ಅದರ ಫಲವೇ ಇದು. ಅದರ ಜೊತೆಯಲ್ಲಿಯೇ ಈಚಿನ ಮನಸ್ಸಿನ ಉದ್ವೇಗವೂ ಕೂಡಿಬಂದಿತ್ತು.

ಸುಭೋಧನನ್ನು ಹೀಗೆ ಬಲವಂತ ಮಾಡಿ ಕರೆಯಿಸಿಕೊಳ್ಳುವುದರಿಂದ ಒಳ್ಳೆಯದಾಗುತ್ತೋ ಇಲ್ಲವೋ ವಿಪ್ರದಾಸನಿಗೆ ಗೊತ್ತಿಲ್ಲ, ಸುಮ್ಮನೆ ಕೂತು ಆಲೋಚಿಸುತ್ತಿದ್ದನು. ಕಾಳೂ "ಅಣ್ಣ, ವ್ಯರ್ಥವಾಗಿ ಯೋಚನೆ ಮಾಡಬೇಡಿ. ಆಸ್ತಿಪಾಸ್ತಿಯ ವಿಷಯವಾಗಿ ಯಾವುದೊಂದೂ ಈಗಲೇ ಇತ್ಯರ್ಥ ಮಾಡಲೇಬೇಕು. ಇದಕ್ಕೆ ಸುಭೋಧನಿಲ್ಲದೆ ಹೋದರೆ ಆಗುವುದೇ ಇಲ್ಲ. ಶೇಕಡ ಹನ್ನೆರಡರ ಪ್ರಕಾರ ಬಡ್ಡಿ ಕೊಟ್ಟು ಈ ಮಾರ್ವಾಡಿಗಳ ಹತ್ತಿರ ನಾವು ಉಳಿಯುವ ಹಾಗೆಯೇ ಇಲ್ಲ. ಅವರೋ, ಎರಡು ಲಕ್ಷ ರೂಪಾಯಿ ಬಡ್ಡಿಯನ್ನು ಅಡ್ವಾನ್ಸಾಗಿಯೇ ಹಿಡಿದುಕೊಂಡುಬಿಡುತ್ತಾರೆ. ಇದರಮೇಲೆ ದಳ್ಳಾಳಿಗಳ ಕಮೀಷನ್ ಬೇರೆ."

ವಿಪ್ರದಾಸ "ಒಳ್ಳೇದು ಬರಲಿ ಬಿಡು ಸುಬೋಧ. ಆದರೆ ಅವನು ಬರಬೇಕಲ್ಲ" ಎಂದ.

"ಅವನು ಎಷ್ಟೇ ದೊಡ್ಡ ಸಾಹೇಬನಾಗಿಬಿಟ್ಟಿರಲಿ, ನಿನ್ನ ಟೆಲಿಗ್ರಾಂ ಮುಟ್ಟಿದ ತಕ್ಷಣ ಬರದೇ ಇರುವುದಕ್ಕೆ ಸಾಧ್ಯವೇ ಇಲ್ಲ. ಆ ವಿಷಯದಲ್ಲಿ ನೀನು ನಿಶ್ಚಿಂತನಾಗಿರು, ಆದರೆ ಅಣ್ಣ, ಇನ್ನು ನಿಧಾನ ಮಾಡುವದು ಸರಿಯಲ್ಲ. ನಮ್ಮ ಕುಮುವನ್ನು ಅತ್ತೆಮನೆಗೆ ಆದಷ್ಟು ಬೇಗ ಕಳುಹಿಸಿಬಿಡುವುದು ಒಳ್ಳೆಯದು."

ವಿಪ್ರದಾಸನು ಸ್ವಲ್ಪ ಸುಮ್ಮನಿದ್ದು "ಮಧುಸೂದನನೇ ಕರೆಯ ಕಳುಹಿಸುವವರೆಗೂ ಹೋಗುವುದಕ್ಕೆ ಅಡ್ಡಿಯಿದೆಯಲ್ಲ" ಎಂದ.

"ಯಾಕೆ ಅಂತೀನಿ ? ಕುಮು ಏನು ಮಧುಸೂದನನ ಸೆಣಬಿನ ಮಂಡಿಯ ಆಳೇ ? ತನ್ನ ಮನೆಗೆ ಹೋಗುತಾಳೆ, ಇದಕ್ಕೆ ಅಪ್ಪಣೆ ಎಂಥಾದ್ದು ಇನ್ನ ?"

ಆಹಾರ ಮುಗಿಸಿಕೊಂಡು ನವೀನನು ಒಂಟಿಯಾಗಿ ವಿಪ್ರದಾಸನ ಕೊಠಡಿಗೆ ಬಂದ. ವಿಪ್ರ

ದಾಸನು "ಕುಮುವಿಗೆ ನಿನ್ನ ಮೇಲೆ ವಿಪರೀತ ಆದರ, ಅಲ್ಲ ?" ಎಂದ.

"ಓಹೋ....ಆದರವೇ ! ಬಹುಶಃ ನನಗೆ ಯೋಗ್ಯತೆಯಿಲ್ಲವೆಂತಲೇ ಅಷ್ಟೊಂದು ವಿಶ್ವಾಸ."

"ಅವಳ ವಿಷಯವಾಗಿ ನೀನೇನಾದರೂ ನನಗೆ ಹೇಳಬೇಕೆಂದಿದ್ದೀಯಾ ? ನೀನು ಯಾವುದನ್ನೂ ಮುಚ್ಚಿಡಬೇಕಾಗಿಲ್ಲ."

"ನಿಮ್ಮ ಹತ್ತಿರ ಹೇಳದೇ ಇರುವಂತಹ ವಿಷಯ ಯಾವುದೂ ಇಲ್ಲ."

"ಕುಮು ಇಲ್ಲಿಗೆ ಬಂದಿದ್ದಾಳಲ್ಲ, ನನ್ನ ಮನಸ್ಸಿಗೆ ಹೇಗೋ ಅನ್ನಿಸುತ್ತೆ, ಇದರ ಹಿಂದೆ ಏನೋ ಎಡವಟ್ಟಿದ್ದ ಹಾಗೆ ಕಾಣುತ್ತೆ."

"ನೀವು ತಿಳಿದುಕೊಂಡಿರುವುದು ಸರಿ. ಯಾರಿಗೆ ಅಪಚಾರ ಮಾಡುವುದು ಕಲ್ಪನೆಯಲ್ಲೂ ಸಾಧ್ಯವಿಲ್ಲವೋ ಅಂತಹವರಿಗೂ ಅಪಚಾರವಾಗಿದೆ, ಇದರಲ್ಲಿ ಮುಚ್ಚಿಡುವುದು ಏನೂ ಇಲ್ಲ."

"ಅಪಚಾರವಾಗಿದೆಯೇ ಹಾಗಾದರೆ ?"

"ಹೇಳಿಕೊಳ್ಳುವುದಕ್ಕೆ ನಾಚುಗೆಯಾಗುತ್ತೆ. ಆ ನಾಚುಗೆಯಿಂದಲೇ ನಾನು ಇಲ್ಲಿಗೆ ಬಂದಿದ್ದೇನೆ. ನನ್ನ ಕೈಯಲ್ಲಿ ಏನು ಮಾಡುವುದಕ್ಕೂ ಸಾಧ್ಯವಿಲ್ಲದೆ ಹೋದರೂ ನಿಮ್ಮ ಕಾಲಿಗೆ ಬಿದ್ದು ಕ್ಷಮೆಯಾದರೂ ಕೇಳೋಣವೆಂದು ಬಂದೆ."

"ಕುಮು ಒಂದು ಪಕ್ಷ ತಾನಾಗಿಯೇ ಮನೆಗೆ ವಾಪಸ್ಸು ಹೋದರೆ ಅದರಿಂದೇನಾದರೂ ಕೆಡುಕಿದೆಯೇ ?"

"ಸತ್ಯವಾಗಿ ಹೇಳು ಅಂದರೆ, ಹೋಗಲಿ ಎಂದು ಹೇಳುವುದಕ್ಕೆ ನನಗೆ ಧೈರ್ಯವಿಲ್ಲ."

ಆದರೆ ನಡೆದಿರುವುದಾದರೂ ಏನು ಎಂಬ ವಿಷಯವಾಗಿ ವಿಪ್ರದಾಸನು ನವೀನನನ್ನು ಕೇಳಲು ಆಗಲಿಲ್ಲ, "ಹಾಗೆ ಕೇಳುವುದು ಅನ್ಯಾಯವಾಗುತ್ತೆ" ಎಂದು ಕೊಂಡ.

ಕುಮುವನ್ನು ಕೂಡ ಪ್ರಶ್ನೆಮಾಡಿ ಯಾವುದಾದರೂ ವಿಷಯವನ್ನು ಹೊರಗೆಡವಲು ಅವನಿಗೆ ಇಷ್ಟವಾಗಲಿಲ್ಲ. ಮನಸ್ಸಿನಲ್ಲಿ ಮಾತ್ರ ಕಳವಳ ಹೆಚ್ಚಾಯಿತು. ಕಾಳೂವನ್ನ ಕರೆದು ನೀನಾದರೂ ಅವರ ಮನೆಗೆ ಹೋಗಿ ಬರುವುದು ಉಂಟಲ್ಲ, ಮಧುಸೂದನನ ಸಂಬಂಧವಾಗಿ ನಿನಗೇನಾದರೂ ಹೆಚ್ಚು ವಿಷಯ ತಿಳಿದಿದೆಯೇ ?" ಎಂದು ಕೇಳಿದ.

"ಸ್ವಲ್ಪ ಸೂಚನೆಯೇನೋ ಸಿಕ್ಕಿದೆ, ಆದರೆ ಪೂರ್ತಿಯಾಗಿ ತಿಳಿದು ಕೊಳ್ಳದೆ ನಿನ್ನ ಹತ್ತಿರ ಏನೂ ಹೇಳಲು ಇಷ್ಟವಿಲ್ಲ, ಇನ್ನೆರಡು ದಿನ ಸ್ವಲ್ಪ ತಡೆದು ಕೊಂಡಿರು. ಎಲ್ಲಾ ಸಮಾಚಾರವನ್ನೂ ತಿಳಿದು ಬಂದು ಹೇಳುತ್ತೇನೆ."

ವಿಧ ವಿಧವಾದ ಅನುಮಾನಗಳಿಂದ ವಿಪ್ರದಾಸನ ಮನಸ್ಸು ಬಹಳ ವ್ಯಥೆಪಟ್ಟಿತು. ಅವಕ್ಕೆ ಪ್ರತಿಕ್ರಿಯೆಯನ್ನಾವುದನ್ನೂ ಮಾಡಲು ಮಾರ್ಗವಿಲ್ಲವೆಂಬ ದುಶ್ಚಿಂತೆಯು ಅವನ ಹೃತ್ಪಿಂಡವನ್ನು ಕ್ಷಣಕ್ಷಣಕ್ಕೂ ಪೀಡಿಸುತ್ತಿತ್ತು.

## ಐವತ್ತನೆಯ ಅಧ್ಯಾಯ

ಕುಮು ಬಹಳ ದಿನಗಳಿಂದ ಆಸೆಯಿಟ್ಟುಕೊಂಡಿದ್ದುದು ಇಂದು ಪೂರ್ಣವಾಯಿತು. ಅದೇ ತನ್ನ ಚಿರಪರಿಚಿತವಾಗಿದ್ದ ಮನೆಯಲ್ಲಿ ಅದೇ ಅಣ್ಣನ ಸ್ನೇಹದ ಆವರಣದಲ್ಲಿ ಬಂದು ಸೇರಿ

ದ್ದಳು. ಆದರೂ ಇದು ಅಂದಿನ ಸಹಜವಾದ, ತನಗೆ ಹೊಂದಿಕೊಂಡು ಹೋಗಿದ್ದ ಸ್ಥಳವಲ್ಲ ವೆಂದು ಕೊಂಡಳು. ಒಂದೊಂದು ಸಲ ಅಭಿಮಾನದಿಂದ ಹಿಂದಕ್ಕೆ ಹೊರಟು ಹೋಗೋಣವೇ ಅನ್ನಿಸುತ್ತಿತ್ತು. ಏಕೆಂದರೆ ಎಲ್ಲರೂ ಪ್ರತಿದಿನವೂ "ಇವಳೇಕೆ ವಾಪಸು ಹೋಗುವುದಿಲ್ಲ. ಏನಾಗಿದೆ ಇವಳಿಗೆ?" ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತಿದ್ದಾರೆಂದು ಹೇಗೋ ತಿಳಿದು ಕೊಂಡಳು. ಅಣ್ಣನ ಗಾಢವಾದ ಸ್ನೇಹದಲ್ಲೂ ಆ ಚಿಂತೆಯಿತ್ತು. ಅದರ ವಿಷಯವಾಗಿ ಅವರ ಮಧ್ಯೆ ಸ್ಪಷ್ಟವಾದ ಆಲೋಚನೆಗಳು ನಡೆಯುತ್ತಿರಲಿಲ್ಲ. ಅವರು ಮಾತಾಡಿ ಕೊಳ್ಳುತ್ತಿದ್ದುದು ಅವಳ ವಿಷಯವೇ. ಆದರೆ ಅವಳ ಮುಂದೆ ಮಾತ್ರ ಮರೆಮಾಚುತ್ತಿದ್ದರು.

ಮಧ್ಯಾಹ್ನವಾಗುತ್ತ ಬಂದಿತ್ತು. ಬಿಸಿಲು ಚೆನ್ನಾಗಿ ಬಿದ್ದಿತ್ತು. ಮಲಗುವ ಮನೆಯ ಕಿಟ ಕಿಯ ಬಳಿ ಕುಮು ಕೂತಿದ್ದಳು. ಕಾಗೆಗಳು ಕೂಗಾಡಿಕೊಳ್ಳುತ್ತಿದ್ದುವು. ಹೊರಗಿನ ಬೀದಿ ಯಲ್ಲಿ ಗಾಡಿಯ ಶಬ್ದ, ಮತ್ತು ಓಡಾಡುವ ಜನಗಳ ನಾನಾ ವಿಧವಾದ ಕಲರವ. ಹೊಸ ವಸಂತದ ತಂಗಾಳಿಗೆ ಷಹರಿನ ಇಟ್ಟಿಗೆ, ತಾರಸಿ ಕಟ್ಟಡದ ಮೇಲೆ ತನ್ನ ಪ್ರಭಾವವನ್ನು ಹರಡಲಾಗಲಿಲ್ಲ. ಎದುರುಗಡೆಯ ಮನೆಯನ್ನು ಬಹಳ ಮಟ್ಟಿಗೆ ಮರೆಮಾಡಿದ್ದ ಬಾದಾಮಿ ಮರವೊಂದರ ನಿಬಿಡ ವಾದ ಹಸುರೆಲೆಗಳನ್ನು ಅಸ್ಥಿರವಾದ ಗಾಳಿಯು ಉಯ್ಯಾಲೆಯಾಡಿಸಿ ಅಪರಾಹ್ಣದ ಬೆಳಕನ್ನು ಛಿದ್ರ ಛಿದ್ರ ಮಾಡಿ ಎಸೆಯಲು ತೊಡಗಿತ್ತು. ಇಂತಹ ಸಮಯದಲ್ಲಿಯೇ ಸಾಕುಜಿಂಕೆ ತನ್ನ ಗುರುತಿಲ್ಲದ ವನದಕಡೆ ಓಡಿ ಹೋಗಲು ಎಣಿಸುವುದು. ಯಾವ ದಿನ ವಾಯುವಿಗೆ ವಸಂತದ ಸ್ಪರ್ಶ ತಗಲುವುದೋ ಅಂದು ಪೃಥ್ವಿ ಉತ್ಸುಕತೆಯಿಂದ ದೂರದ ನೀಲಾಕಾಶದ ಕಡೆಗೆ ದೃಷ್ಟಿ ಯಿಟ್ಟು ನೋಡುತ್ತಿರುವಂತೆ ತೋರುವುದು. ನಾಲ್ಕು ದಿಕ್ಕುಗಳಲ್ಲೂ ಪಸರಿಸಿರುವುದೆಲ್ಲಾ ಮಿಥ್ಯೆಯೆಂದು ಮನಸ್ಸಿಗೆ ಅನ್ನಿಸುವುದು. ಮತ್ತು ಯಾರ ನಿವಾಸವು ಸಿಕ್ಕುವುದಿಲ್ಲವೋ ಯಾರನ್ನು ಚಿತ್ರದಲ್ಲಿ ರೂಪಿಸ ಹೋದರೆ ಅವರ ವರ್ಣವು ಆಕಾಶದಲ್ಲಿ ಸೇರಿಹೋಗುವುದೋ ಯಾವ ಮೂರ್ತಿಯು ಇಣಿಕಿನೋಡಿ ಓಡಿ ಹೋಗಿ ಜಲ, ಸ್ಥಳಗಳ ನಾನಾ ಸಂಕೇತಗಳ ಮಧ್ಯೆ ಹೋಗಿ ಸೇರಿಕೊಳ್ಳುವುದೋ ಅದನ್ನೇ ಎಲ್ಲಕ್ಕಿಂತಲೂ ಸತ್ಯವೆಂದು ಮನಸ್ಸು ಎಣಿಸುತ್ತಿತ್ತು.

ಕುಮುವಿನ ಮನಸ್ಸು ವಿಪರೀತ ಉದ್ವಿಗ್ನಗೊಂಡು ಇಂದು ಎಲ್ಲದರಿಂದಲೂ ಓಡಿ ಹೋಗೋಣವೆಂದು, ತನ್ನಿಂದಲೇ ಓಡಿ ಹೋಗೋಣವೆಂದೂ ಅನ್ನುತ್ತಿತ್ತು.

ಆದರೆ ಇದೆಂತಹ ಆವರಣ! ಇಂದು ಈ ಮನೆಯಲ್ಲಿಯೂ ಅವಳಿಗೆ ಮುಕ್ತಿಯಿಲ್ಲ, ಕಲ್ಪ ಯಲ್ಲಿ ಮೃತ್ಯುವು ಕೂಡ ಮಧುರವಾಗಿರುವಂತೆ ತೋರುತ್ತಿತ್ತು, ಮನಸ್ಸಿನಲ್ಲಿಯೇ ಹೀಗೆಂದ ಹೇಳಿಕೊಳ್ಳಲು ತೊಡಗಿದಳು.

"ಶ್ಯಾಮಲವಾದ ಯಮುನೆಯ ಆಚೆ ಶ್ಯಾಮನಿದ್ದಾನೆ. ಅವನ ಅಭಿಸಾರಕ್ಕಾಗಿಯೆ ಹೊರಟಿದ್ದೇನೆ. ದಿನವಾದ ಮೇಲೆ ದಿನ ಕಳೆಯುತ್ತದೆ. ಎಷ್ಟು ದೀರ್ಘವಾದ ಪಥ, ಎಷ್ಟು ದುಃಖಕರವಾದ ಪಥ!"

ಅಣ್ಣನಿಗೆ ಕಾಯಿಲೆ ಹೆಚ್ಚಾಗಿಹೋಗಿದೆ. ಶುಶ್ರೂಷೆ ಮಾಡುವುದಕ್ಕೆ ಬಂದು ತಾನ ರೋಗವನ್ನು ಹೆಚ್ಚಿಸಿದ್ದಾಳೆ, ಈಗ ಅವಳು ಏನನ್ನು ಮಾಡ ಹೋದರೂ ಅದಕ್ಕೆ ವಿಪರೀತವಾ ಫಲವೇ ಆಗಿ ಹೋಗುತ್ತಿದೆ!

ಎರಡು ಕೈಗಳಿಂದಲೂ ಮುಖ ಮುಚ್ಚಿಕೊಂಡು ಸ್ವಲ್ಪ ಚೆನ್ನಾಗಿ ಅತ್ತಳು. ಅಳುವಿನ

ಇಳಿಯಲು ಮನೆಗೆ ಹಿಂದಿರುಗಿ ಹೋಗಿ ಬಿಡುತ್ತೇನೆ. ಏನಾಗುತ್ತದೋ ಆಗಲಿ, ಎಲ್ಲ ಸಹಿಸುತ್ತೇನೆ. ಕಡೆಯಲ್ಲಿ ಅಂತೂ ಇದ್ದೇ ಇದೆ ಮುಕ್ತಿ; ಶೀತಲವಾದ, ಗಾಢ ಮಧುರವಾದ ಮುಕ್ತಿ." ಎಂದು ಸ್ಥಿರಮಾಡಿಕೊಂಡಳು. ಅದೇ ಮೃತ್ಯುವಿನ ಕಲ್ಪನೆಯನ್ನು ಮನಸ್ಸಿನ ಮಧ್ಯೆ ಎಷ್ಟೇ ಸ್ಪಷ್ಟವಾಗಿ ಹಿಡಿದಿಟ್ಟುಕೊಂಡರೂ, ಜೀವನದ ಭಾರ ಅಷ್ಟೇನೂ ಹೊರಲಾರದ ಹಾಗೆ ಇಲ್ಲವೆಂದೂ ಅನ್ನಿಸುತ್ತಿತ್ತು....ಮನಸ್ಸಿನಲ್ಲಿಯೇ ಹಾಡಿಕೊಳ್ಳಲು ತೊಡಗಿದಳು.

"ಪಥ ಪರ್ ರಯನಿ ಆಂಧೇರೀ,
ಕುಂಜ ಪರ್ ದೀಪ ಉಜಿಯಾರಾ"

(ಮಾರ್ಗದಲ್ಲಿ ರಾತ್ರಿಯ ಕತ್ತಲು, ಕುಂಜ ವನದಲ್ಲಿ ಮಾತ್ರ ದೀಪದ ಬೆಳಕು)

ಮಧ್ಯಾಹ್ನ ಅಣ್ಣನನ್ನು ನಿದ್ರೆ ಮಾಡಿಸಿ ಹೊರಟು ಬಂದಿದ್ದಳು. ಇಷ್ಟರಲ್ಲಿಯೇ ಔಷಧಿ ಮತ್ತು ಪಥ್ಯವನ್ನು ಕೊಡುವ ಸಮಯವಾಗಿತ್ತು. ಕೋಣೆಗೆ ಬಂದು ನೋಡಿದಾಗ ವಿಪ್ರದಾಸನು ಎದ್ದು ಕೂತು ಕಾಗದದ ಪ್ಯಾಡೊಂದರ ಮೇಲೆ ಸುಬೋಧನಿಗೆ ದೀರ್ಘವಾದೊಂದು ಪತ್ರವನ್ನು ಇಂಗ್ಲೀಷಿನಲ್ಲಿ ಬರೆಯಲು ತೊಡಗಿದ್ದ. ದೂರುವ ದನಿಯಲ್ಲಿ ಕುಮು "ಇದೇನಣ್ಣ, ಇವತ್ತು ಸರಿಯಾಗಿ ನಿದ್ದೆಯೇ ಹೋಗಲಿಲ್ಲವಲ್ಲ." ಎಂದಳು.

ವಿಪ್ರದಾಸನು "ನೀನು ಅಂದು ಕೊಂಡಿರುವುದು ನಿದ್ದೆ ಹೋದರೇನೆ ವಿಶ್ರಾಂತಿ ಅಂತ. ಆದರೆ ಮನಸ್ಸಿಗೆ ಕಾಗದ ಬರೆಯಬೇಕು ಅಂತ ಅನ್ನಿಸಿದಾಗ ಕಾಗದ ಬರೆದರೇನೇ ವಿಶ್ರಾಂತಿ." ಎಂದ.

ತನ್ನ ಕಾರಣದಿಂದಲೇ ಈ ಅಗತ್ಯವೆಂದು ಕುಮು ಅರಿತಳು. ತನ್ನಿಂದಾದ ಈ ಕಷ್ಟವು ಸಮುದ್ರದ ಈ ಪಾರ್ಶ್ವದಲ್ಲಿ ಒಬ್ಬ ಅಣ್ಣನನ್ನ ವ್ಯಾಕುಲ ಪಡಿಸಿದೆ. ಸಮುದ್ರದ ಆ ಪಾರ್ಶ್ವದಲ್ಲಿ ಇನ್ನೊಬ್ಬ ಅಣ್ಣನನ್ನು ಕಳವಳದಲ್ಲಿ ಮುಳುಗಿಸಲಿದೆ. ಇಂತಹ ಅದೃಷ್ಟವಿಟ್ಟುಕೊಂಡು ಇಂತಹ ತಂಗಿಯಾಗಿ ತಾನು ಹುಟ್ಟಿವಾಳೆ? ಅಣ್ಣನಿಗೆ ಚಹಾ ಕುಡಿಸಿಯಾದ ಮೇಲೆ ಕುಮು ಹತ್ತಿರ ಬಂದು ಮೆಲ್ಲ ಮೆಲ್ಲಗೆ "ಬಂದು ಎಷ್ಟೋ ದಿನಗಳಾಯಿತು. ಈ ಸಲ ಮನೆಗೆ ಹೋಗಬೇಕೆಂದು ಮನಸ್ಸು ಮಾಡಿದ್ದೇನೆ." ಎಂದಳು.

ವಿಪ್ರದಾಸನು ಕುಮುವಿನ ಮುಖದ ಕಡೆ ನೋಡಿ ಅವಳ ಮಾತಿನ ಅರ್ಥವೇನೆಂದು ತಿಳಿದುಕೊಳ್ಳಲು ಪ್ರಯತ್ನಿಸಿದ. ಇಷ್ಟು ದಿನಗಳವರೆಗೂ ಅಣ್ಣ ತಂಗಿಯರಲ್ಲಿದ್ದ ನಿಷ್ಕಪಟ ಮತ್ತು ಸ್ಪಷ್ಟವಾದ ನಡೆವಳಿಕೆ ಈಗೆಲ್ಲಿ ಹೋಯಿತೋ? ಈಗ ಮನಸ್ಸಿನ ಯಥಾರ್ಥವಾದ ಮಾತನ್ನು ತಿಳಿಯುವುದಕ್ಕೋಸ್ಕರ ತಡವರಿಸುತ್ತಾ ತಿರುಗಾಡ ಬೇಕಾಗಿದೆ. ವಿಪ್ರದಾಸ ಬರೆಯುವುದನ್ನು ನಿಲ್ಲಿಸಿದ. ಕುಮುವನ್ನು ಹತ್ತಿರ ಕೂಡಿಸಿಕೊಂಡು ಏನೂ ಹೇಳದೆ ಮೆಲ್ಲಗೆ ಅವಳ ಕೈಯನ್ನು ಸವರುತ್ತಿದ್ದ. ಕುಮು ಅವರ ಭಾವವೇನೆಂದು ಊಹಿಸಿದಳು. ಸಂಸಾರದ ಬಂಧನಗಳು ಗಂಟು ಗಂಟಾಗಿ ಹೋಗಿವೆ. ಆದರೆ ವಿಶ್ವಾಸಕ್ಕೆ ಅಭಾವವಾಗಿಲ್ಲ. ಕಣ್ಣಿನಿಂದ ನೀರು ಉಕ್ಕಲು ಆಶಿಸಿತು. ಆದರೆ ಬಲವಂತವಾಗಿ ತಡೆದುಕೊಂಡಳು. ಈ ಪ್ರೀತಿಯ ಮೇಲೆ ತಾನಿನ್ನು ಭಾರವಾಗಿರಲು ಆಗದೆಂದು ಮನಸ್ಸಿನಲ್ಲಿಯೇ ನಿರ್ಧರಿಸಿದಳು. ಮತ್ತೊಂದು ಸಲ "ಅಣ್ಣ, ನಾನು ಹೋಗಬೇಕೆಂದು ಮನಸ್ಸು ಮಾಡಿದ್ದೇನೆ." ಎಂದಳು.

ವಿಪ್ರದಾಸನು ಯಾವ ಉತ್ತರ ಕೊಡಬೇಕೆಂದು ಯೋಚಿಸಿದರೂ ಹೊಳೆಯಲಿಲ್ಲ. ಏಕೆಂ

ದರೆ ಅವನ ಮನಸ್ಸಿನಲ್ಲೂ ಕುಮು ಹೋಗುವುದೇ ಒಳ್ಳೆಯದೆಂದೂ, ಅಷ್ಟೇಕೆ ಅದೇ ಕರ್ತವ್ಯವೆಂದೂ ಅನ್ನಿಸಿತ್ತು. ಏನೂ ಹೇಳದೆ ಸುಮ್ಮನೆ ಕೂತಿದ್ದ. ಈ ಸಮಯದಲ್ಲಿ ನಾಯಿಗೆ ಎಚ್ಚರವಾಗಿ ಕುಮುವಿನ ತೊಡೆಯ ಮೇಲೆ ಎರಡೂ ಕಾಲುಗಳನ್ನಿಟ್ಟುಕೊಂಡು ವಿಪ್ರದಾಸನ ಪ್ರಸಾದದ ರೊಟ್ಟಿಯ ಚೂರುಗಳಿಗಾಗಿ ಯಾಚನೆಯನ್ನು ತೋರಿಸಿ ಕೊಂಡಿತು.

ಇಷ್ಟರಲ್ಲಿ ಆಳು ರಾಮ ಸ್ವರೂಪನು ಬಂದು ಮುಖರ್ಜಿ ಮಹಾಶಯರು ಬಂದಿದ್ದಾರೆಂದು ತಿಳಿಸಿದ. ಕುಮು ಉದ್ವಿಗ್ನಳಾಗಿ "ಇವತ್ತು ಹಗಲು ನೀನು ಸ್ವಲ್ಪವೂ ನಿದ್ದೆಮಾಡಿಲ್ಲ. ಅದರ ಮೇಲೆ ಇನ್ನು ಕಾಳೂ ಅಣ್ಣನ ಹತ್ತಿರ ತರ್ಕ, ವಿತರ್ಕಮಾಡಿ ಸುಸ್ತಾಗಿ ಬಿಡುತ್ತಿ. ನಾನೇ ಹೋಗಿ ಕೇಳಿಕೊಂಡು ಬರುತ್ತೇನೆ ಸುಮ್ಮನಿರು. ಅಂತಹುದೇನಾದರೂ ವಿಶೇಷವಿದ್ದರೆ ತಿಳಿದು ಕೊಂಡು ಬಂದು ಸಮಯ ನೋಡಿಕೊಂಡು ಬಂದು ಹೇಳುತ್ತೇನೆ." ಎಂದಳು.

"ದೊಡ್ಡ ಡಾಕ್ಟರಾಗಿ ಬಿಟ್ಟಿದ್ದೀಯಲ್ಲವೆ ನೀನು? ಒಬ್ಬರು ಕೇಳಬೇಕಾದ ವಿಚಾರವನ್ನು ಇನ್ನೊಬ್ಬರು ಕೇಳಿ ಬಿಟ್ಟರೆ ಆಯಿತು, ಆಗ ರೋಗಿಯ ಮನಸ್ಸು ಸ್ವಸ್ಥವಾಗಿ ಬಿಡುತ್ತೆ, ಅಲ್ಲವೇ?"

"ಆಗಲಿ ಹಾಗಿದ್ದರೆ, ನಾನು ಕೇಳುವುದಿಲ್ಲ ಬಿಡು....ಆದರೆ ಇವತ್ತು ನೀನು ಸುಮ್ಮನೆ ನಿದ್ದೆ ಮಾಡು."

"ಕುಮು, ಇಂಗ್ಲಿಷ್ ಕವಿ ಹೇಳಿದಾನೆ ಗೊತ್ತೇ, ಕೇಳಿದ ಸಂಗೀತ ಸವಿ, ಕೇಳದೆ ಇರುವ ಸಂಗೀತ ಇನ್ನೂ ಸವಿ ಅಂತ. ಹಾಗೆಯೇ ಕೇಳುವ ಸಮಾಚಾರ ಬೇಸರ ಪಡಿಸ ಬಹುದು, ಕೇಳದೆ ಇರುವ ಸಮಾಚಾರ ಅದಕ್ಕಿಂತಲೂ ಹೆಚ್ಚಿಗೆ ಬೇಸರ ಪಡಿಸುತ್ತೆ, ಆದ್ದರಿಂದ ತಡಮಾಡದೆ ಕೇಳಿ ಬಿಡುವುದೇ ಒಳ್ಳೆಯದು."

"ನಾನು ಹಾಗಾದರೆ ಹದಿನೈದು ನಿಮಿಷ ಬಿಟ್ಟು ಕೊಂಡು ಬರುತ್ತೇನೆ. ಆಗಲೂ ನಿಮ್ಮ ಮಾತು ಕಥೆ ಇನ್ನೂ ನಿಲ್ಲದೆ ಹೋದರೆ, ನಾನು ಸುಮ್ಮಗೆ ಏಸ್‌ರಾಜ್ ತಗೊಂಡು ಬಂದು ಮಧ್ಯದಲ್ಲಿ ಬಾರಿಸಿಬಿಡುತ್ತೇನೆ, ಭಿಮ್‌ಪಲಾಶೀ ರಾಗ."

"ಸರಿ....ಹಾಗೇ ಮಾಡುವಿಯಂತೆ," ಅರ್ಧಘಂಟೆಯಾದ ಮೇಲೆ ಕುಮು ಏಸ್ ರಾಜನ್ನು ಕೈಯಲ್ಲಿಟ್ಟುಕೊಂಡು ವಿಪ್ರದಾಸನ ಕೋಣೆಯನ್ನು ಮತ್ತೆ ಪ್ರವೇಶಿಸಿದಳು. ಆದರೆ ವಿಪ್ರಾದಾಸನ ಮುಖಭಾವವನ್ನು ನೋಡಿ ತಕ್ಷಣ ಏಸ್‌ರಾಜನ್ನು ಗೋಡೆಗೆ ಒರಗಿಸಿಟ್ಟು ಬಂದು ಅವನ ಕೈಯನ್ನು ಬಿಗಿಯಾಗಿ ಹಿಡಿದುಕೊಂಡು "ಏನಾಗಿದೆಯಣ್ಣಾ?" ಎಂದು ಗಾಬರಿಯಾಗಿ ಕೇಳಿದಳು.

ಕುಮು ಇದುವರೆಗೆ ವಿಪ್ರದಾಸನ ಸ್ವಭಾವದಲ್ಲಿ ಕಾಣುತ್ತಿದ್ದ ಅಸ್ಥಿರತೆಯಲ್ಲಿ ಒಂದು ವಿಧವಾದ ಗಾಢ ವಿಷಾದವಿತ್ತು. ವಿಪ್ರದಾಸನು ತನ್ನ ಬದುಕಿನಲ್ಲಿ ಎಷ್ಟೋ ನೋವು ದುಃಖಗಳನ್ನು ಅನುಭವಿಸಿದ್ದ. ಪುಸ್ತಕ ವ್ಯಾಸಂಗ, ಸಂಗೀತ, ಟೆಲಿಸ್ಕೋಪಿನಿಂದ ಗ್ರಹ ನಕ್ಷತ್ರಗಳನ್ನು ನೋಡುವಿಕೆ, ಕುದುರೆಯ ಸವಾರಿ, ಬೇರೆ ಬೇರೆ ಕಡೆಗಳಿಂದ ಗುರುತಿಲ್ಲದೆ ಬೇರೆ ಬೇರೆ ಜಾತಿಯ ಗಿಡಗಳನ್ನು ತರಿಸಿ ಬೆಳೆಯಿಸುವುದು ಮುಂತಾದ ಹವ್ಯಾಸಗಳಲ್ಲಿ ಮುಳುಗಿ ತನ್ನ ಕಷ್ಟ ದುಃಖಗಳನ್ನು ಪೂರ್ತಿ ಮರೆತು ನೆಮ್ಮದಿಯಿಂದಿರುತ್ತಿದ್ದ. ಈಸಲ ಕಾಯಿಲೆಯ ನಿಶ್ಶಕ್ತಿಯಿಂದ ಆ ಹವ್ಯಾಸಗಳಿಗೆಡೆಯಿಲ್ಲದೆ ತನ್ನ ಅತಿ ಇಕ್ಕಟ್ಟಾದ ಆವರಣದಲ್ಲಿ ಬಂಧಿಸಲ್ಪಟ್ಟಿದ್ದ. ಈಗವನು ಹೊರಗಿನಿಂದ ಶುಶ್ರೂಷೆ ಮತ್ತು ಸಹವಾಸ ಪಡೆಯಲು ಕಾತರನಾಗಿದ್ದ. ಟಪಾಲು ಕಾಗದಗಳು ಸರಿಯಾಗಿ ಬರದೇ ಹೋದರೆ ಉದ್ವಿಗ್ನನಾಗುತ್ತಿದ್ದ. ಯೋಚನೆಗಳೋ, ನೋಡುತ್ತ ನೋಡುತ್ತ

ಂದರ ಮೇಲೊಂದು ಕಪ್ಪಾಗಿ ಮುತ್ತಿಕೊಳ್ಳುತ್ತಿವೆ. ಆದ್ದರಿಂದಲೇ ಅಣ್ಣನ ಮೇಲೆ ಕುಮು ೋರಿಸುತ್ತಿದ್ದ ಸ್ನೇಹವು ಇಂದು ಮಾತೃ ಸ್ನೇಹದ ರೂಪತಾಳಿದಂತೆ ಭಾಸವಾಗುತ್ತಿತ್ತು. ಅಷ್ಟು ೇರ ಗಂಭೀರನಾದ, ಆತ್ಮ ವಿಶ್ವಾಸವುಳ್ಳವನಾದ ಅವಳ ಅಣ್ಣನಲ್ಲಿ ಎಲ್ಲಿಂದಲೋ ಬಾಲ ಭಾವ ಂದು ಕಾಣಿಸಿಕೊಂಡಿದೆ. ಅದೆಷ್ಟು ಅನುನಯ, ಎಷ್ಟು ಹಠ, ಎಷ್ಟು ಚಂಚಲತೆ! ಅದರ ಜೊತೆ ಲ್ಲಿಯೇ ಎಂತಹ ಗಂಭೀರವಾದ ವಿಷಾದ ಮತ್ತು ವೇದನೆ!

ಆದರೆ ಕುಮು ಆಗ ಬಂದು ನೋಡಿದಾಗ ಅಣ್ಣನ ಆ ಅಸಹಾಯಕ ಆವೇಶವು ಮಾಯ ಾಗಿಹೋಗಿತ್ತು. ಅವನ ಕಣ್ಣುಗಳಲ್ಲಿ ಬೆಂಕಿ ಕಾರುತ್ತಿತ್ತು, ಶಿವನ ಹಣೆಗಣ್ಣಿನ ಜ್ವಾಲೆಯಂತೆ. ದು ಅವನ ಸ್ವಂತ ನೋವಿಗೊಸ್ಕರವಲ್ಲ. ಅದು ಅವನ ಕಣ್ಣೆದುರಿನ ಪ್ರಪಂಚದಲ್ಲಿ ಯಾವುದೋ ಹಾಪಾಪವನ್ನು ನೋಡಿ ಅದನ್ನು ಸುಟ್ಟುಹಾಕಿ ಬಿಡಬೇಕೆಂದು ಬಯಸುತ್ತಿತ್ತು. ಕುಮುವಿನ ್ರಶ್ನೆಗೆ ಯಾವ ಉತ್ತರವನ್ನೂ ಕೊಡದೆ ಎದುರುಗಡೆಯ ಗೋಡೆಯ ಕಡೆ ಎವೆಯಿಕ್ಕದೆ ೋಡುತ್ತಾ ವಿಪ್ರದಾಸನು ಸುಮ್ಮನೆ ಕೂತಿದ್ದ.

ಕುಮು ಇನ್ನೂ ಸ್ವಲ್ಪ ಹೊತ್ತಾದಮೇಲೆ "ಅಣ, ಏನಾಗಿದೆ ಹೇಳಬಾರದೆ?" ಎಂದು ಮತ್ತೆ ೇಳಿದಳು.

ವಿಪ್ರದಾಸನು ದೂರದ ಯಾವುದೋ ಲಕ್ಷ್ಯದ ಕಡೆ ನೋಟವಿಟ್ಟು "ದುಃಖವನ್ನು ದೂರ ಾಡುವುದಕ್ಕೆ ಹೋದರೆ ಅದು ಮತ್ತೂ ಮೇಲೆ ಬಂದು ಕೂಡುತ್ತದೆ. ಅದನ್ನು ಧೈರ್ಯದಿಂದ ದುರಿಸಲೇಬೇಕು" ಎಂದ.

"ನೀನು ಉಪದೇಶ ಮಾಡಣ್ಣ, ನಾನು ಎದುರಿಸುವುದಕ್ಕೆ ಸಿದ್ಧವಾಗಿದ್ದೇನೆ."

"ಹೆಣ್ಣುಮಕ್ಕಳ ಮೇಲೆ ಎಂತಹ ಅತ್ಯಾಚಾರ ನಡೆಯುತ್ತಿದೆಯೆನ್ನುವುದು ಈಗ ನನಗೆ ಕಾಣು ದೆ. ಅದು ಸಮಸ್ತ ಸಮಾಜದೊಳಗೇ ಹರಡಿದೆ. ಯಾವೊಬ್ಬ ಹೆಂಗಸಿನ ಮೇಲೆಯೇ ಅಲ್ಲ."

ಕುಮುವಿಗೆ ಅಣ್ಣನ ಮಾತುಗಳ ಸರಣಿ ಏನೂ ಅರ್ಥವಾಗಲಿಲ್ಲ.

ವಿಪ್ರದಾಸನು "ವ್ಯಥೆಯನ್ನು ನನ್ನದೆಂದೇ ನನ್ನ ಮನಸ್ಸಿನಲ್ಲಿಯೇ ಅಡಗಿಸಿಟ್ಟುಕೊಂಡಿದ್ದೆ. ಗ ಎಲ್ಲರೊಡನೆ ಸೇರಿ ಅವರ ವಿರುದ್ಧವಾಗಿ ಹೋರಾಡಲೇ ಬೇಕು ಎಂದು ಗೊತ್ತಾಗಿದೆ" ಎಂದ.

ವಿಪ್ರದಾಸನ ಬಿಳುಪಡರಿದ ಗೌರವರ್ಣದ ಮುಖವು ಆವೇಶದಿಂದ ಕೆಂಪಡರಿತು. ಅವನ ಡೆಯ ಮೇಲೆ ರೇಶಿಮೆಯ ಕಸೂತಿ ಹಾಕಿದ್ದ ಚೌಕವಾದ ಒಂದು ದಿಂಬಿತ್ತು. ಅದನ್ನು ಎತ್ತಿ ಾತ್ತಾಗಿ ಕೆಳಗೆಸೆದ. ಹಾಸುಗೆಯಿಂದೆದ್ದು ಪಕ್ಕದಲ್ಲಿದ್ದ ಕುರ್ಚಿಯ ಮೇಲೆ ಕೂತುಕೊಳ್ಳಲು ೋದ. ಕುಮು ಅವನ ಕೈಯನ್ನು ಬಿಗಿಯಾಗಿ ಹಿಡಿದು ಕೊಂಡು "ಶಾಂತವಾಗಣ್ಣ, ಏಳಬೇಡ, ನ್ನ ಕಾಯಿಲೆ ಹೆಚ್ಚಾಗುತ್ತೆ" ಎಂದು ಹೇಳಿ ಸ್ವಲ್ಪ ಬಲವಂತವಾಗಿಯೇ ಅವನನ್ನು ಹಿಡಿದುಕೊಂಡು ನ್ನು ಎತ್ತರವಾಗಿದ್ದ ದಿಂಬಿನ ಕುರ್ಚಿಯ ಮೇಲೆ ಒರಗಿಸಿ ಕೂಡಿಸಿದಳು.

ವಿಪ್ರದಾಸ ಮೈಮೇಲಿನ ವಸ್ತ್ರವನ್ನು ಮುಷ್ಟಿಯಲ್ಲಿ ಬಿಗಿಯಾಗಿ ಹಿಡಿದುಕೊಂಡು "ಸಹನೆ ಾಡುವುದು ಬಿಟ್ಟು ಹೆಂಗಸರಿಗೆ ಬೇರೆ ಯಾವ ದಾರಿಯೂ ಇಲ್ಲವೇ ಇಲ್ಲವೆಂದೇ ಅವರ ಮೇಲೆಯೇ ುಮ್ಮನೆ ಪೆಟ್ಟು ಬೀಳುತ್ತಾ ಹೋಗುತ್ತಿದೆ. ನಾವಿನ್ನು ಸಹಿಸಲು ಸಾಧ್ಯವಿಲ್ಲ ಎಂದು ಅವರುಗಳು ೇಳುವ ಕಾಲ ಬಂದಿದೆ. ಕುಮು, ಇದೇ ನಿನ್ನ ಮನೆಯೆಂದುಕೊಂಡು ಇರಬಲ್ಲೆಯೇನು? ಆ ನೆಗಿನ್ನು ನೀನು ಹೋಗಬೇಕಾಗಿಲ್ಲ" ಎಂದ.

ಕಾಳುವಿನ ಬಾಯಿಂದ ವಿಪ್ರದಾಸ ಇಂದು ಅನೇಕ ವಿಷಯಗಳನ್ನು ತಿಳಿದು ಕೊಂಡಿದ್ದ.

ಶ್ಯಾಮಾಸುಂದರಿಯ ಸಂಗಡ ಮಧುಸೂದನ ಆರಂಭಮಾಡಿದ್ದ ಸಂಬಂಧದಲ್ಲಿ ಈಚೆಗೆ ಯಾವ ವಿಧವಾದ ಗುಟ್ಟು ಇರಲಿಲ್ಲ. ಅವರಿಬ್ಬರಿಗೂ ಈಗ ಯಾವ ನಾಚುಗೆಯೂ ಇರಲಿಲ್ಲ. ಜನರು ಅವರನ್ನು ತಪ್ಪಿತಸ್ಥರೆನ್ನುವರೆಂದೇ ಅವರು ಮತ್ತಷ್ಟು ಛಲದಿಂದ ವರ್ತಿಸತೊಡಗಿದ್ದರು. ಈ ಸಂಬಂಧದ ನಡುವೆ ಸೂಕ್ಷ್ಮವಾದ ವಿಷಯ ಯಾವುದೂ ಇಲ್ಲವೆಂದೇ ಪರಸ್ಪರ ಮತ್ತು ಲೋಕಾಭಿಪ್ರಾಯಕ್ಕೂ ಹೆದರಿ ನಡೆದು ಕೊಳ್ಳುವುದು ಅವರಿಗೆ ಅವಶ್ಯಕವೇ ಇರಲಿಲ್ಲ. ಶ್ಯಾಮಾ ಸುಂದರಿಯನ್ನು ಮಧುಸೂದನನು ಆಗಾಗ ಹೊಡೆಯುತ್ತಿದ್ದನೆಂದೂ, ಶ್ಯಾಮಾ ದೊಡ್ಡದಾಗಿ ಜಗಳ ಮಾಡಿದಾಗ ಅವಳನ್ನು ಎಲ್ಲರೆದುರಿಗೂ "ಹೊರಟು ಹೋಗು, ಕುಲಗೆಟ್ಟ ಹೆಂಗಸೇ, ಸಡಿ, ನನ್ನ ಮನೆ ಬಿಟ್ಟು ತೊಲಗು" ಎಂದು ಬೈಯುತ್ತಿದ್ದನೆಂದೂ ಸಮಾಚಾರ ಹರಡಿತ್ತು. ಆದರೆ ಇದೇನು ಅಷ್ಟು ದೊಡ್ಡದಲ್ಲ. ಶ್ಯಾಮಾಳ ಸಂಬಂಧವಾಗಿ ಮಧುಸೂದನನು ತನ್ನ ಯಜಮಾನಿಕೆಯನ್ನು ಬಿಟ್ಟು ಕೊಟ್ಟಿರಲಿಲ್ಲ. ಇಚ್ಛೆಯಿಂದ ಮಧುಸೂದನ ತಾನಾಗಿ ಅವಳಿಗೇನು ಕೊಡುತ್ತಿದ್ದನೋ ಶ್ಯಾಮಾ ಅದಕ್ಕಿಂತಲೂ ಹೆಚ್ಚಾಗಿ ತೆಗೆದು ಕೊಳ್ಳಲು ಕೈಹಾಕಿದಾಗ ಬೈಗಳನ್ನೂ ತಿಂದಿದ್ದುಂಟು ಸಂಸಾರದ ವಹಿವಾಟಿನಲ್ಲಿ ಮೋತಿಯಮ್ಮನಿಗಿದ್ದ ಸ್ಥಾನವನ್ನು ತಾನು ಆಕ್ರಮಿಸಬೇಕೆಂದು ಶ್ಯಾಮಾ ಳಿಗೆ ಬಹಳ ಆಸೆಯಿತ್ತು. ಆದರೆ ಅದರಲ್ಲೂ ಅಡ್ಡಿ ಬಂತು. ಮಧುಸೂದನನಿಗೆ ಮೋತಿಯಮ್ಮನ ಮೇಲೆ ಅಪಾರವಾದ ನಂಬಿಕೆಯಿತ್ತು. ಆದರೆ ಶ್ಯಾಮಾಳ ಮೇಲೆ ಇರಲಿಲ್ಲ. ಶ್ಯಾಮಾಳ ವಿಷಯ ವಾಗಿ ಅವನಲ್ಲಿ ಅಂತಹ ಪ್ರೀತಿಯೇನೂ ಇರಲಿಲ್ಲ, ಆದರೆ ಬಹಳ ಬಲವಾದ ಆಸಕ್ತಿ ಹುಟ್ಟಿ ಕೊಂಡಿತ್ತು, ಚಳಿಗಾಲದಲ್ಲಿ ಬಹಳವಾಗಿ ಬಳಸಿದ ಕೊಳಕು ಕಂಬಳಿಯಂತೆ. ಅದರ ಮೇಲೆ ಕುಶಲ ಹಸ್ತದ ಕಸೂತಿಯೇನೂ ಮಾಡಿಲ್ಲ. ಜೋಪಾನವಾಗಿ ನೋಡಿಕೊಳ್ಳುವ ನಾಜೂಕಾದ ವಸ್ತುವೇನಲ್ಲ. ಮಂಚದಿಂದ ಕೆಳಗೆ ಧೂಳಿನಲ್ಲಿ ಬಿದ್ದರೂ ಬಾಧಕವಿಲ್ಲ. ಆದರೆ ಅದರಿಂದ ಬೆಚ್ಚಗೆ ಹಾಯಾಗಿರ ಬಹುದು. ಶ್ಯಾಮಾ ಅಂತಹ ಕಂಬಳಿ. ಅವಳನ್ನು ಸಮಾಧಾನವಾಗಿ ತೃಪ್ತಿಯಿಂದಿಟ್ಟು ಕೊಂಡಿರುವ ಅಗತ್ಯವೇನಿಲ್ಲ. ಅಷ್ಟೇ ಅಲ್ಲದೆ ಶ್ಯಾಮಾ ತನ್ನ ಸಮಸ್ತ ಮನಃಪ್ರಾಣಗಳಿಂದಲೂ ಅವನನ್ನು ದೊಡ್ಡವನೆಂದು ಅಂಗೀಕರಿಸಿದ್ದಳು. ಅವನಿಗಾಗಿ ಏನನ್ನಾದರೂ ಸಹಿಸ ಬಲ್ಲಳು ಏನು ಬೇಕಾದರೂ ಮಾಡಬಲ್ಲಳು ಎಂದು ನಿಸ್ಸಂದೇಹವಾಗಿ ತಿಳಿದಿದ್ದುದರಿಂದ ಮಧುಸೂದನನ ಆತ್ಮಗೌರವ ನೆಮ್ಮದಿಯಾಗಿತ್ತು. ಕುಮು ಇದ್ದಾಗ ಪ್ರತಿದಿನವೂ ಅವನ ಈ ಆತ್ಮಗೌರವವು ಬಲ ವಾಗಿಯೇ ಏಟು ತಿನ್ನುತ್ತಿತ್ತು.

ಮಧುಸೂದನನ ಈ ಆಧುನಿಕ ಇತಿಹಾಸವನ್ನು ತಿಳಿಯಲು ಕಾಳೂ ಅಷ್ಟು ಹೆಚ್ಚಾಗಿ ಯೇನೂ ಸಂಧಾನ ಮಾಡ ಬೇಕಾಗಿರಲಿಲ್ಲ. ಮಧುಸೂದನನ ಮನೆಯಲ್ಲಿಯೇ ಈ ವಿಷಯವಾಗಿ ಮುಚ್ಚು ಮರೆಯಿಲ್ಲದೆ ಧೈರ್ಯವಾಗಿ ಮಾತು ಕಥೆಗಳಾಗುತ್ತಿದ್ದುವು. ಕೊನೆಗೆ ಅದು ಸಂಪೂರ್ಣ ವಾಗಿ ಸಹಜವಾಗಿ ಬಿಡಲು ಈ ಮಾತು ಕಥೆಗಳ ಪರ್ವವೂ ಒಂದು ಬಗೆಯಾಗಿ ಕೊನೆಗಂಡಿತು.

ಸಮಾಚಾರವನ್ನು ಕೇಳಿದ ಮಾತ್ರದಿಂದಲೇ ವಿಪ್ರದಾಸನಿಗೆ ಬೆಂಕಿಯ ಬಾಣ ಚುಚ್ಚಿ ದಂತಾಯಿತು. ಮಧುಸೂದನನು ಏನನ್ನೂ ಮುಚ್ಚಿಡುವ ಪ್ರಯತ್ನ ಕೂಡ ಮಾಡದೆ ಹೀ ಸ್ವಂತ ಹೆಂಡತಿಯನ್ನು ಬಹಿರಂಗವಾಗಿ ಅವಮಾನಕ್ಕೆ ಗುರಿಮಾಡಿರುವುದು ಎಷ್ಟು ಸಹಜವಾಗಿದೆ ಹೆಂಡತಿಯ ಮೇಲೆ ಹೀಗೆ ಅತ್ಯಾಚಾರ ಮಾಡುವುದಕ್ಕೆ ಹೊರಗಿನವರಿಂದ ಅಡ್ಡಿಯೇ ಇಲ್ಲವಲ್ಲ

ಹೆಂಡತಿಯು ನಿರುಪಾಯಳಾಗಿ ಗಂಡನ ಹಿಡಿತದಲ್ಲಿರುವಂತೆ ಸಮಾಜವು ಸಾವಿರ ಬಗೆಯ ಸಲಕರಣೆಗಳನ್ನೂ ಸಂಕಟಗಳನ್ನೂ ಸೃಷ್ಟಿ ಮಾಡಿದೆ. ಆದರೆ ಅದೇ ಅಬಲೆಯಾದ ಹೆಣ್ಣನ್ನು ಗಂಡನ ಉಪದ್ರವದಿಂಡ ಬದುಕಿಸುವುದಕ್ಕೋಸ್ಕರ ಯಾವ ಅವಶ್ಯಕವಾದ ಮಾರ್ಗವನ್ನೂ ಒದಗಿಸಿಲ್ಲ. ಇಂತಹ ದಾರುಣವಾದ ದುಃಖ ಮತ್ತು ಮಾನ ಹೀನತೆಯು ಮನೆ ಮನೆಯಲ್ಲಿ ಯುಗಯುಗಗಳಿಂದ ಯಾವ ರೀತಿಯಾಗಿ ವ್ಯಾಪ್ತವಾಗಿದೆಯೆನ್ನುವುದನ್ನು ವಿಪ್ರದಾಸನು ಕ್ಷಣಮಾತ್ರದಲ್ಲಿ ತಿಳಿದುಕೊಂಡ. ಪತಿವ್ರತಾಧರ್ಮದ ದಪ್ಪ ಲೇಪಕೊಟ್ಟು ಈ ಯಾತನೆಯನ್ನು ಮುಚ್ಚಿಡುವ ಪ್ರಯತ್ನ ನಡೆದಿದೆ. ಆದರೆ ಯಾತನೆಯು ಸಂಭವಿಸದೆಯೇ ಇರುವಂತೆ ಮಾಡಲು ಸ್ವಲ್ಪವೂ ಪ್ರಯತ್ನವಿಲ್ಲ. ಹೆಂಗಸರು ಎಷ್ಟು ಅಗ್ಗವಾಗಿರುವರು, ಎಷ್ಟು ಕೆಲಸಕ್ಕೆ ಬಾರದವರಾಗಿ ಹೋಗಿರುವರು!

ವಿಪ್ರದಾಸನು "ಕುಮು, ಅವಮಾನವನ್ನು ಅನುಭವಿಸುವುದು ಅಸಾಧ್ಯವಲ್ಲ, ಆದರೆ ಅನ್ಯಾಯ. ಸಮಸ್ತ ಸ್ತ್ರೀ ಜಾತಿಯ ಪರವಾಗಿ ನೀನು ನಿನ್ನ ಸನ್ಮಾನವನ್ನು ಕಾದಿಟ್ಟುಕೊಂಡಿರಬೇಕು. ಇದರಿಂದ ಸಮಾಜವು ಎಷ್ಟೇ ದುಃಖವುಂಟು ಮಾಡಿದರೂ ಮಾಡಲಿ" ಎಂದನು.

ಕುಮು "ಅಣ್ಣ, ನೀನು ಯಾವ ಅವಮಾನವನ್ನ ಕುರಿತು ಹೇಳುತ್ತೀಯೋ ನನಗೆ ಸರಿಯಾಗಿ ಅರ್ಥವಾಗುತ್ತಿಲ್ಲ." ಎಂದಳು.

"ಹಾಗಾದರೆ ನಿನಗೆ ವಿಷಯವೆಲ್ಲ ಗೊತ್ತಿಲ್ಲವೇನು?"

"ಇಲ್ಲ."

ವಿಪ್ರದಾಸನು ಸುಮ್ಮನಿದ್ದ. ಆ ಮೇಲೆ "ಹೆಂಗಸರ ಅವಮಾನದಿಂದಾಗಿ ದುಃಖ ನನ್ನ ಎದೆಯಲ್ಲಿ ತುಂಬಿ ಕೊಂಡಿದೆ. ಯಾಕೆ ಗೊತ್ತೇನು?" ಎಂದ.

ಕುಮು ಏನೂ ಮಾತಾಡದೆ ಅವನ ಮುಖವನ್ನು ನೋಡುತ್ತ ಕೂತಿದ್ದಳು.

ಸ್ವಲ್ಪ ಹೊತ್ತಾದ ಮೇಲೆ ವಿಪ್ರದಾಸನು ಮುಂದುವರಿಯುತ್ತಾ "ಜೀವದಿಂದಿರುವವರೆಗೂ ಅಮ್ಮ ಎಂತಹ ದುಃಖ ಅನುಭವಿಸಿದ್ದಳೆಂಬುವುದನ್ನು ನಾನು ಯಾವ ಬಗೆಯಲ್ಲೂ ಮರೆಯಲಾರೆ. ಧರ್ಮ ಬುದ್ಧಿ ಹೀನವಾದ ನಮ್ಮ ಸಮಾಜವೇ ಅದಕ್ಕೆ ಕಾರಣ." ಎಂದ.

ಈ ವಿಷಯದಲ್ಲಿಯೇ ಅಣ್ಣ ತಂಗಿಯರ ಮತ ಭೇದವಿತ್ತು. ಕುಮು ತಮ್ಮ ತಂದೆಯನ್ನು ಬಹಳವಾಗಿ ಪ್ರೀತಿಸುತ್ತಿದ್ದಳು. ಆತನ ಹೃದಯ ಎಷ್ಟು ಕೋಮಲವೆಂದು ಬಲ್ಲಳು. ಎಷ್ಟು ದೋಷಗಳಿದ್ದರೂ ತನ್ನ ತಂದೆ ಬಹಳ ದೊಡ್ಡ ವ್ಯಕ್ತಿ ಎಂದುಕೊಳ್ಳದೆ ಅವಳ ಮನಸು ತೃಪ್ತಿಯಾಗಿರುತ್ತಿರಲಿಲ್ಲ, ಅಷ್ಟೇ ಅಲ್ಲ. ಅಪ್ಪನ ಜೀವನದಲ್ಲಿ ಸಂಭವಿಸಿದ್ದ ಶೋಚನೀಯ ಪರಿಣಾಮಕ್ಕೆ ಅಮ್ಮನನ್ನೇ ಮನಸ್ಸಿನಲ್ಲಿ ದೂಷಿಸಿಕೊಂಡಿದ್ದಳು.

ವಿಪ್ರದಾಸನೂ ತಂದೆಯ ಮೇಲೆ ದೊಡ್ಡವರೆಂದು ಭಕ್ತಿಯಿಟ್ಟಿದ್ದ. ಆದರೆ ಬಾರಿ ಬಾರಿಗೂ ಅವರ ದುರ್ನಡತೆಯ ದ್ವಾರಾ ತನ್ನ ತಾಯಿಯನ್ನು ಎಲ್ಲರೆದುರಿಗೂ ಅಪಮಾನ ಪಡಿಸಲು ಹಿಂದೆಗೆಯುತ್ತಿರಲಿಲ್ಲವೆನ್ನುವುದನ್ನು ಅವನು ಏನು ಮಾಡಿದರೂ ಕ್ಷಮಿಸಲಾರದವನಾಗಿದ್ದ. ಅವನ ತಾಯಿ ಕೂಡ ಕ್ಷಮಿಸಿರಲಿಲ್ಲವೆಂದು ವಿಪ್ರದಾಸನು ಮನಸ್ಸಿನಲ್ಲಿಯೇ ಆಕೆಯನ್ನು ಗೌರವಿಸಿದ್ದ. ವಿಪ್ರದಾಸ ಮತ್ತೆ ಹೇಳತೊಡಗಿದ. "ನಮ್ಮ ತಾಯಿ ಯಾವ ಅವಮಾನವನ್ನು ಅನುಭವಿಸಿದ್ದರೋ ಅದರಿಂದ ಒಟ್ಟು ಹೆಣ್ಣು ಜಾತಿಗೇ ಅಗೌರವ, ಕುಮು, ನೀನು ವ್ಯಕ್ತಿಗತ ಭಾವ

ದಲ್ಲಿ ನಿನ್ನ ವಿಷಯವನ್ನು ಮರೆತು ಈ ಅಗೌರವದ ವಿರುದ್ಧವಾಗಿ ನಿಲ್ಲಬೇಕು, ಖಂಡಿತ ಸೋಲೊಪ್ಪಿಕೊಳ್ಳಕೂಡದು."

ಕುಮು ತಲೆ ತಗ್ಗಿಸಿಕೊಂಡು ಮೆಲ್ಲ ಮೆಲ್ಲನೆ "ಆದರೆ ಅಪ್ಪ ಅಮ್ಮನನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಆ ಮಾತನ್ನು ಮರೆಯ ಬೇಡ, ಅಣ್ಣ, ಆ ಪ್ರೀತಿಯೇ ಎಲ್ಲ ಪಾಪಗಳನ್ನೂ ತೊಳೆದು ಬಿಡುತ್ತದೆ." ಎಂದಳು.

"ಅದನ್ನ ಒಪ್ಪಿದೆ. ಆದರೆ ಇಷ್ಟು ಪ್ರೀತಿಯಿದ್ದೂ ಕೂಡ ಅವರು ಅಮ್ಮನ ಗೌರವವನ್ನು ಹಾಳು ಮಾಡಲು ಸಿದ್ಧರಾಗಿದ್ದರು, ಆ ಪಾಪ ಸಮಾಜದ್ದು. ಅದಕ್ಕೋಸ್ಕರ ಸಮಾಜವನ್ನು ನಾನು ಕ್ಷಮಿಸಲಾರೆ. ಸಮಾಜಕ್ಕೆ ಪ್ರೀತಿಯೆನ್ನುವುದಿಲ್ಲ. ಅದಕ್ಕೆ ಇರುವುದು ಕೇವಲ ನಿಯಮ. ಅಷ್ಟೆ."

"ಅಣ್ಣ, ನೀನೇನಾದರೂ ಕೆಟ್ಟ ಸುದ್ದಿ ಕೇಳಿದ್ದೀಯೇನು?"

"ಹೌದು, ಕೇಳಿದ್ದೇನೆ. ಆ ವಿಷಯವೆಲ್ಲಾ ನಿನಗೆ ನಿದಾನವಾಗಿ ಆ ಮೇಲೆ ಹೇಳುತ್ತೇನೆ."

"ಅದೇ ಒಳ್ಳೆಯದು. ಇವತ್ತಿನ ಈ ಮಾತು ಕಥೆಗಳಿಂದ ನಿನ್ನ ಆರೋಗ್ಯ ಇನ್ನೂ ಕೆಟ್ಟು ಹೋಗಬಹುದೆಂದು ನನಗೆ ಭಯವಾಗುತ್ತಿದೆ."

"ಇಲ್ಲ, ಕುಮು, ಖಂಡಿತವಾಗಿ ಅದಕ್ಕೆ ವಿರುದ್ಧವಾಗಿಯೇ ಆಗಿದೆ. ಇಷ್ಟು ದಿನ ದುಃಖದ ಆಯಾಸದಿಂದ ದೇಹ ಸೊರಗಿ ಹೋಗಿದ್ದಂತಿತ್ತು. ಇಂದು ನನ್ನ ಮನಸ್ಸು ಜೀವನದ ಕೊನೆಯ ಘಳಿಗೆಯವರೆಗೂ ಹೋರಾಡಲೇ ಬೇಕೆಂದು ಹೇಳುತ್ತಿದ್ದರೆ ನನ್ನ ದೇಹದೊಳಗಣಿಂದ ಶಕ್ತಿ ಬರುತ್ತಿದೆ."

"ಯಾವುದರೊಡನೆ ಹೋರಾಟ, ಅಣ್ಣ?"

"ಹೆಂಗಸಿಗೆ ಅವಳ ಬೆಲೆ ಕೊಡದೆ ಇಷ್ಟು ವಂಚನೆ ಮಾಡುತ್ತಿರುವ ಸಮಾಜದೊಂದಿಗೆ."

"ನೀನು ಅದಕ್ಕೆ ಏನು ಮಾಡಲು ಸಾಧ್ಯ ಅಣ್ಣಾ?"

"ನಾನು ಅದನ್ನು ಅಂಗೀಕರಿಸದೆ ಇರ ಬಲ್ಲೆ. ಅಷ್ಟೇ ಅಲ್ಲದೆ ಇನ್ನೂ ಏನೇನು ಮಾಡಬಲ್ಲೆ ಎನ್ನುವುದನ್ನು ಯೋಚಿಸಬೇಕಾಗಿದೆ. ಇಂದಿನಿಂದಲೇ ಇದು ಪ್ರಾರಂಭವಾಯಿತು. ಕುಮು, ಈ ಮನೆಯಲ್ಲಿ ನಿನಗೆ ಸ್ಥಳವಿದೆ, ಅದೂ ಸಂಪೂರ್ಣವಾಗಿ ನಿನ್ನದೇ. ಬೇರೆ ಯಾರೊಡನೆಯೂ ಪಾಲು ಮಾಡಿಕೊಳ್ಳಬೇಕಾಗಿಲ್ಲ. ಇಲ್ಲಿ ನಿನ್ನ ಸ್ವಂತ ಅಧಿಕಾರದಿಂದಲೇ ಇರಬಲ್ಲೆ."

"ಒಳ್ಳೆಯದು, ಹಾಗೇ ಆಗಲಿ. ಆದರೆ, ಅಣ್ಣ, ಇನ್ನು ನೀನು ಮಾತಾಡಬೇಡ."

ಈ ಸಮಯದಲ್ಲಿ ಮೋತಿಯಮ್ಮನು ಬಂದಳೆಂದು ಸುದ್ದಿ ಬಂತು.

## ಐವತ್ತೊಂದನೆಯ ಅಧ್ಯಾಯ

ಕುಮು ಮೋತಿಯಮ್ಮನನ್ನು ತನ್ನ ಮಲಗುವ ಕೋಣೆಗೆ ಕರೆದುಕೊಂಡು ಹೋಗಿ ಕೂಡಿಸಿದಳು. ಮಾತಾಡುತ್ತ ಆಡುತ್ತ ಕತ್ತಲೆಯಾಯಿತು. ಆಳು ದೀಪ ಹೊತ್ತಿಸಲು ಬಂದ. ಕುಮು 'ಈಗ ಬೇಡ'ವೆಂದಳು. ಕುಮು ಮೋತಿಯಮ್ಮನಿಂದ ಸುದ್ದಿಯೆಲ್ಲವನ್ನೂ ಕೇಳಿದಳು. ಕೇಳಿ ಸುಮ್ಮನೆ ಕೂತಳು.

ಮೋತಿಯಮ್ಮನು "ಮನೆಯಲ್ಲಿ ಭೂತ ಹೊಕ್ಕಿದೆ ಕುಮು. ಅಲ್ಲಿ ವಾಸವಾಗಿರುವುದಕ್ಕೇ ಸಾಧ್ಯವಿಲ್ಲ. ನೀನೇನು ಅಲ್ಲಿಗೆ ಬರುವುದಿಲ್ಲವೇ?" ಎಂದಳು.

"ನನಗೇನಾದರೂ ಕರೆ ಬಂದಿದೆಯೇ ?"

"ಇಲ್ಲ. ನಿನಗೆ ಕರೆ ಕಳುಹಿಸುವ ಸುದ್ದಿ ತಲೆಯಲ್ಲಿಯೇ ಬಂದಿಲ್ಲ. ಆದರೆ ನೀನು ಬರದೆ ಹೋದರೆ ನಡೆಯುವ ಹಾಗೆಯೇ ಇಲ್ಲ."

"ನಾನು ಮಾಡುವುದೇನಿದೆ ? ನಾನೇನೋ ಅವರನ್ನು ತೃಪ್ತಿ ಪಡಿಸಲಾರೆ. ಯೋಚಿಸಿ ನೋಡಿದರೆ ನನ್ನಿಂದಲೇ ಇಷ್ಟೆಲ್ಲ ನಡೆದಿರುವುದು. ಆದರೆ ಬೇರೆ ಮಾರ್ಗವೇ ಇರಲಿಲ್ಲ, ನಾನು ಅರ್ಪಿಸಲಿಕ್ಕದ್ದನ್ನು ಅವರು ಸ್ವೀಕರಿಸಲಾಗಲಿಲ್ಲ. ಈಗ ನಾನು ಬರಿಗೈಯಲ್ಲಿ ಹೋಗಿ ಏನುಮಾಡಬಲ್ಲೆ ?"

"ಏನು ಹೀಗೆ ಹೇಳುತ್ತೀ ಕುಮು, ಸಂಸಾರ ನಿನ್ನದು. ಅದು ನಿನ್ನ ಕೈಬಿಟ್ಟರೆ ನಡೆಯುವುದಿಲ್ಲ."

"ಸಂಸಾರವೆಂದರೆ ಏತಕ್ಕೆ? ಮನೆ ಬಾಗಿಲು, ಸಾಮಾನು ಸರಂಜಾಮು, ಆಳುಕಾಳುಗಳು, ಇವೇ ತಾನೇ? ಈ ಮಾತು ಹೇಳುವುದಕ್ಕೆ ನಾಚುಗೆಯಾಗುತ್ತದೆ. ಅವುಗಳ ಮೇಲೆ ನನಗೆ ಅಧಿಕಾರವೇನೋ ಇದೆ. ಆದರೆ ಪ್ರಯೋಜನವೇನು? ಅಂತಃಪುರದಲ್ಲಿ ನನ್ನ ಅಧಿಕಾರ ಕಳೆದುಕೊಂಡಿದ್ದೇನೆ. ಈಗ ಇವೆಲ್ಲ ಹೊರಗಿನ ವಸ್ತುಗಳನ್ನು ಕಟ್ಟಿಕೊಂಡು ಏನು ಮಾಡಲಿ ಹೇಳು."

"ಏನು ಮಾತಾಡುತ್ತೀ ಕುಮು, ಮನೆಗೆ ಬರುವುದೇ ಇಲ್ಲವೇ ನೀನು ಹಾಗಾದರೆ?"

"ಯೋಚನೆ ಮಾಡಿದರೆ ಇವೆಲ್ಲ ನನಗೆ ಸರಿಯಾಗಿ ಅರ್ಥವೇ ಆಗುತ್ತಿಲ್ಲ. ಕೆಲವು ದಿನಗಳ ಮುಂಚೆ ಆಗಿದ್ದಿದ್ದರೆ ದೇವರ ಹತ್ತಿರ ಹೋಗಿ ಸೂಚನೆ ಕೇಳಿಕೊಳುತ್ತಿದ್ದೆ. ಜೋಯಿಸರ ಹತ್ತಿರ ಹೋಗಿ ಕೈ ತೋರಿಸಿ ಕೇಳುತ್ತಿದ್ದೆ. ಆದರೆ ಆ ನನ್ನ ಭರವಸೆಗಳೆಲ್ಲ ಧೂಳಿನಲ್ಲಿ ಸೇರಿ ಹೋಗಿವೆ. ಮೊದಲು ಮೊದಲು ಲಕ್ಷಣಗಳೆಲ್ಲ ಚೆನ್ನಾಗಿಯೇ ಇದ್ದುವು. ಕಡೆಯಲ್ಲಿ ಯಾವುದರಿಂದಲೂ ಪ್ರಯೋಜನವಾಗಲಿಲ್ಲ. ಈಗ ಎಷ್ಟು ಕೂತು ಯೋಚಿಸಿದರೂ ದೇವರ ಹತ್ತಿರ ಕೇಳುವುದಕ್ಕೆ ಮುಂಚೆ ಅಣ್ಣನ ಸಲಹೆಗಳ ಮೇಲೆ ಭಾರ ಹಾಕಿದ್ದಿದ್ದರೆ ಇಷ್ಟು ಅನ್ಯಾಯವಾಗುತ್ತಾ ಇರಲಿಲ್ಲ, ಎಂದೆನ್ನಿಸುತ್ತಿದೆ. ಆದರೆ ದೇವರ ಮೇಲೆ ಇಷ್ಟು ಉದಾಸೀನ ಹುಟ್ಟಿದರೂ ಹೃದಯದ ಒಳಗಿನಿಂದ ಆತನನ್ನು ಓಡಿಸಲಾರೆ. ಮತ್ತೆ ಮತ್ತೆ ಮನಸ್ಸು ಆತನ ಬಳಿಯೇ ಹೋಗಲೆಳಸುತ್ತದೆ."

"ನಿನ್ನ ಮಾತು ಕೇಳಿದರೆ ಭಯವಾಗುತ್ತದೆ, ಮನೆಗೆ ಹಾಗಿದ್ದರೆ ಹೋಗುವುದೇ ಇಲ್ಲವೆ?"

"ಯಾವ ಕಾಲಕ್ಕೂ ಹೋಗುವುದೇ ಇಲ್ಲ ಎಂದು ಹೇಳಲು ಸಾಧ್ಯವಿಲ್ಲ. ಹೋಗುತ್ತೇನೆ ಎಂತ ಹೇಳುವುದೂ ಸಹಜವಲ್ಲ."

"ಒಳ್ಳೇದು. ನಿಮ್ಮಣ್ಣನ ಹತ್ತಿರ ಒಂದು ಸಲ ಮಾತನಾಡಿ ನೋಡುತ್ತೇನೆ. ಅವರು ಏನು ಹೇಳುತ್ತಾರೋ ನೋಡೋಣ. ಅವರನ್ನ ನೋಡಬಹುದು ತಾನೇ ?"

"ನಡಿ ಬೇಕಾದರೆ ಈಗಲೇ ಕರೆದುಕೊಂಡು ಹೋಗುತ್ತೇನೆ."

ವಿಪ್ರದಾಸನ ಕೋಣೆಗೆ ಬಂದು ಆತನ ಚಹರೆ ನೋಡಿ ಮೋತಿಯಮ್ಮನು ಬೆಚ್ಚಿ ಗಾಬರಿಯಾದಳು. ಭೂಕಂಪವಾದಮೇಲೆ ದೀಪವಾರಿ, ಗೋಪುರ ಬಿದ್ದುಹೊದ, ದೇವಸ್ಥಾನದ ನೆನಪಾಯಿತು. ಒಳಗೆ ಕತ್ತಲೆ, ನಿಶ್ಶಬ್ದ. ಪ್ರಣಾಮ ಮಾಡಿ ಪಾದ ಧೂಳಿಯನ್ನು ತೆಗೆದು ಕೊಂಡ

ನೆಲದ ಮೇಲೆ ಕೂತಳು.

ವಿಪ್ರದಾಸನು ವ್ಯಸ್ತನಾಗಿ "ಅಲ್ಲೇಕೆ, ಇಲ್ಲಿ ಕುರ್ಚಿ ಇದೆಯಲ್ಲ?" ಎಂದ.

ಮೋತಿಯಮ್ಮನು ತಲೆಯಲ್ಲಾಡಿಸಿ "ಬೇಡ. ಇಲ್ಲೇ ಹಾಯಾಗಿದೆ" ಎಂದಳು.

ಮುಖದ ಮುಸುಕಿನೊಳಗೆ ಅವಳ ಕಣ್ಣುಗಳಲ್ಲಿ ನೀರು ತುಂಬಿತು. ಅಣ್ಣನನ್ನು ಈ ಅವಸ್ಥೆಯಲ್ಲಿ ನೋಡಿ ಕುಮು ಬಹಳ ಸಂಕಟಪಡುತ್ತಿದ್ದಾಳೆಂದುಕೊಂಡಳು.

ಕುಮು ಪ್ರಸಂಗವನ್ನು ಸಹಜವಾಗಿ ಆರಂಭಿಸಲು "ಅಣ್ಣ, ಈಕೆ ನಿನ್ನ ಅಭಿಪ್ರಾಯವನ್ನು ಕೇಳುವುದಕ್ಕೆಂದು ಬಂದಿರುವರು" ಎಂದಳು.

ಮೋತಿಯಮ್ಮ "ಛೆ, ಇಲ್ಲ ಇಲ್ಲ, ಅಭಿಪ್ರಾಯವನ್ನು ಕೇಳುವುದು ಆಮೇಲಿನ ಮಾತು, ನಾನು ಈಗ ಬಂದಿರುವುದು ಅವರ ಚರಣಗಳ ದರ್ಶನ ಮಾಡುವುದಕ್ಕೋಸ್ಕರ." ಎಂದಳು.

ಕುಮು "ನಾನು ಅವರ ಮನೆಗೆ ಹೋಗಬೇಕೇ, ಬೇಡವೇ ಎಂದು ನಿನ್ನ ಹತ್ತಿರ ಕೇಳಬೇಕೆಂದಿದ್ದಾರೆ." ಎಂದಳು.

ವಿಪ್ರದಾಸನು ಎದ್ದು ಕೂತ. ಆ ಮೇಲೆ "ಅದಂತೂ ಹೊರಗಿನವರ ಮನೆ. ಅಲ್ಲಿ ಹೋಗಿ ಕುಮು ಹೇಗಿರುತ್ತಾಳೆ?" ಎಂದ. ಅವನು ಇದನ್ನು ಕೋಪದ ಧ್ವನಿಯಲ್ಲಿ ಹೇಳಿದ್ದರೆ ಮಾತಿನ ಮಧ್ಯೆ ಇಷ್ಟರ ಮಟ್ಟಿಗೆ ಬೆಂಕಿಯಿರುತ್ತಿರಲಿಲ್ಲ. ಕಂಠಸ್ವರ ಶಾಂತವಾಗಿತ್ತು. ಮುಖದ ಮೇಲೆ ಉದ್ರೇಕದ ಲಕ್ಷಣವೇನೂ ಇರಲಿಲ್ಲ.

ಮೋತಿಯಮ್ಮನು ಗುಸ ಪಿಸ ಎಂದು ಕುಮುವಿನ ಹತ್ತಿರ ಏನೇನೋ ಹೇಳಿದಳು. ಅವಳ ಅಭಿಪ್ರಾಯ, ಕುಮು ಪಕ್ಕದಲ್ಲಿ ಕೂತುಕೊಂಡು ಅವಳ ಮಾತುಗಳನ್ನು ವಿಪ್ರದಾಸನ ಕಿವಿಗೆ ಮುಟ್ಟಿಸಬೇಕೆಂದು. ಕುಮು ಒಪ್ಪಲಿಲ್ಲ; "ನೀನೇ ಬಾಯಿ ಬಿಟ್ಟು ಸರಿಯಾಗಿ ಹೇಳು, ಪರವಾಯಿಲ್ಲ" ಎಂದಳು.

ಮೋತಿಯಮ್ಮನು ದನಿಯನ್ನು ಸ್ವಲ್ಪ ಸ್ಪಷ್ಟಮಾಡಿಕೊಂಡು "ಅವಳ ಮನೆಯನ್ನು ಯಾರೂ ಹೊರಗಿನದಾಗಿ ಮಾಡಲಾರರು, ಅವರು ಯಾರೇ ಆಗಿರಲಿ" ಎಂದಳು.

ಆ ಮಾತು ಸರಿಯಲ್ಲ. ಅವಳು ಕೇವಲ ಆಶ್ರಿತಳು. ಅವಳ ಸ್ವಂತ ಅಧಿಕಾರದಲ್ಲಿ ಬಲವಿಲ್ಲ. ಅವಳನ್ನು ಮನೆಯಿಂದ ಹೊರಗೆ ಹಾಕಿದರೆ ನಿಂದಿಸಬಹುದು, ಆದರೆ ತಡೆಯಲು ಸಾಧ್ಯವಿಲ್ಲ. ಅದರ ಶಿಕ್ಷೆ ಶಾಸ್ತಿ ಎಲ್ಲ ಅವಳ ಪಾಲಿಗೇ. ಇಷ್ಟಾದರೂ ಅನುಗ್ರಹದ ಆಶ್ರಯವನ್ನು ಸಹಿಸಿಕೊಂಡಿರ ಬಹುದಾಗಿತ್ತು, ಅದು ಮಹದಾಶ್ರಯವಾಗಿದ್ದಿದ್ದರೆ ಮಾತ್ರ." ಎಂದ.

ಇಂತಹ ಮಾತಿಗೆ ಏನು ಜವಾಬು ಕೊಡುವುದು ಎಂದು ಮೋತಿಯಮ್ಮನಿಗೆ ತೋಚಲಿಲ್ಲ. ಗಂಡನ ಆಶ್ರಯಕ್ಕೇನಾದರೂ ವಿಘ್ನ ಬಂದರೆ ಹೆಣ್ಣಿನ ಕಡೆಯ ಜನವಾದರೂ ಕೈಕಾಲು ಕಟ್ಟಿಕೊಳ್ಳುವುದು ಸಹಜ. ಆದರೆ ಇಲ್ಲಿ ಅದಕ್ಕೆ ವಿರುದ್ಧ!

ಸ್ವಲ್ಪ ಹೊತ್ತು ಸುಮ್ಮನಿದ್ದು ಮತ್ತೆ ಮೋತಿಯಮ್ಮನು "ಆದರೆ ಹೆಂಗಸರು ಅವರವ ಸಂಸಾರ ಇದ್ದ ಹೊರತು ಬದುಕಲಾರರು. ಗಂಡಸರು ತೇಲಿಕೊಂಡು ಹೋಗಬಹುದು. ಆದ ಹೆಂಗಸರಿಗೆ ಎಲ್ಲಾದರೂ ಒಂದು ನೆಲೆಯಿರ ಬೇಕಲ್ಲ?" ಎಂದಳು.

"ನೆಲೆಯೆಲ್ಲಿ? ಅವಮಾನದ ನಡುವೆಯೇ? ನಾನು ನಿಮಗೆ ಒಂದು ಮಾತು ಹೇಳುತ್ತೇ ಕುಮುವನ್ನು ಮಾಡಿದ್ದಾನಲ್ಲ, ಪರಮಾತ್ಮ? ಬಹಳ ಶ್ರದ್ಧೆ ತೆಗೆದುಕೊಂಡು ಸೃಷ್ಟಿಮಾಡಿದ್ದಾ

ವಳನ್ನ. ಕುಮುವನ್ನು ನಿರ್ಲಕ್ಷಿಸುವಂತಹ ಯೋಗ್ಯತೆಯಾದರೂ ಯಾರಿಗಿದೆ? ಚಕ್ರವರ್ತಿ ಮ್ರಾಟನಿಗೂ ಇಲ್ಲ."

ಕುಮುವನ್ನು ಮೋತಿಯಮ್ಮನು ಪ್ರೀತಿಸುತ್ತಿದ್ದಳು, ಗೌರವಿಸುತ್ತಿದ್ದಳು, ಆದರೆ ಎಂತಹ ಂಗಸಿಗಾದರೂ ಗಂಡನನ್ನು ಅತಿಕ್ರಮಿಸುವಷ್ಟು ಗೌರವವಾಗಲೀ, ಬೆಲೆಯಾಗಲಿ ಇರುತ್ತದೆನ್ನುವ ಾತು ಅವಳಿಗೇನೋ ಹಿತವಾಗಿರಲಿಲ್ಲ. ಸಂಸಾರದಲ್ಲಿ ಗಂಡನೊಡನೆ ಜಗಳ, ಮನಸ್ತಾಪ ಏನೇ ಗಲಿ, ಹೆಂಡತಿಗೆ ಅದರಿಂದ ಎಷ್ಟೇ ತಿರಸ್ಕಾರ ಮತ್ತು ಅವಮಾನವಿರಲಿ, ಅವುಗಳಿಂದ ತಪ್ಪಿಸಿ ಂಡು ಹೋಗಲು ಹೆಂಗಸು ಅಫೀಮು ತಿಂದಾಗಲಿ, ನೇಣುಹಾಕಿ ಕೊಂಡಾಗಲೀ ಸತ್ತರೂ ರವಾಯಿಲ್ಲ. ಆದರೆ ಹಾಗೆಂದು ಹೇಳಿ ಗಂಡನನ್ನು ಬಿಟ್ಟೇಬಿಟ್ಟು ಹೆಂಡತಿ ತನ್ನ ಆಧಾರದ ೕಲೆಯೇ ಇರುತ್ತಾಳೆಂದರೆ ಅದನ್ನು ಮೋತಿಯಮ್ಮನು ಬರಿಯ ಗರ್ವ, ಅಹಂಕಾರ ಎನ್ನುವಳು. ಣ್ಣು ಜಾತಿಗೆ ಇಷ್ಟೊಂದು ದರ್ಪವೇಕೆ? ಮಧುಸೂದನನು ಎಷ್ಟೇ ಅಯೋಗ್ಯನಾಗಿರಲಿ, ಎಷ್ಟೇ ್ಯಾಯಮಾಡಿರಲಿ, ಎಷ್ಟಾದರೂ ಅವನು ಗಂಡ. ಒಂದು ವಿಷಯದಲ್ಲಿ ಅವನು ತನ್ನ ಹೆಂಡತಿ ತಲೂ ದೊಡ್ಡವನು. ಈ ವಿಚಾರದಲ್ಲಿ ಯಾವ ಸಂದೇಹವೂ ಇಲ್ಲ. ವಿಧಾತನ ಸಂಗಡ ವಾದ ಡಿದರೆ ಗೆಲ್ಲುವುದಕ್ಕೆ ಸಾಧ್ಯವೇ ?

ಮೋತಿಯಮ್ಮ "ಒಂದು ದಿನ ಅಲ್ಲಿಗೆ ಹೋಗಲೇ ಬೇಕಾಗುತ್ತದೆ. ಬೇರೆ ದಾರಿಯೇ ಇಲ್ಲ" ದಳು.

"ಹೋಗಲೇ ಬೇಕು ಎನ್ನುವ ಮಾತು ಬೆಲೆಗೆ ಕೊಂಡುಕೊಂಡ ಗುಲಾಮರಿಗೆ ಹೊರತು ರೆ ಯಾರಿಗೂ ಅನ್ವಯಿಸುವುದಿಲ್ಲ."

"ಮಂತ್ರ ಪಠಿಸಿದ ಮೇಲೆ ಹೆಂಡತಿಯನ್ನ ಕೊಂಡು ಕೊಂಡ ಹಾಗೆಯೇ. ಏಳು ಸುತ್ತು ತ್ತು ಹಾಕಿದ ಮೇಲೆ ಅವತ್ತಿನಿಂದಲೇ ಅವಳ ಮೈ, ಮನಸ್ಸು ಎಲ್ಲ ಕಟ್ಟಿಹಾಕಿದ ಹಾಗೆಯೇ. ್ನ ಅವಳಿಗೆ ಓಡಿ ಹೋಗುವುದಕ್ಕೆ ಸ್ಥಳವೆಲ್ಲಿ? ಈ ಬಂಧನ ಸಾವಿನವರೆಗೆ ಇರುವ ಗಂಟು. ಣ್ಣಾಗಿ ಹುಟ್ಟಿದ ಮೇಲೆ ಜನ್ಮವಿರುವ ವರೆಗೆ ಹೆಣ್ಣಿನ ಹಣೆ ಬರಹ ಯಾವುದರಿಂದಲೂ ತಪ್ಪಿಸಲು ್ಯವಿಲ್ಲವಲ್ಲ."

ಹೆಂಗಸರ ಸನ್ಮಾನ ಹೆಂಗಸರ ಬಳಿಯೇ ಬಹಳ ಕಡಿಮೆಯೆಂದು ವಿಪ್ರದಾಸನಿಗೆ ಗೊತ್ತು. ಕ್ಕಾಗಿಯೇ ಮನೆ ಮನೆಯಲ್ಲೂ ಹೆಂಗಸರು ಅವಮಾನಗೊಳ್ಳುವ ಹಣೆಬರೆಹವು ಅಷ್ಟು ಸಹಜ ಾದೆಯೆಂದು ಅವರಿಗೆ ತಿಳಿದೂ ಇರುವುದಿಲ್ಲ. ಅವರು ತಮ್ಮ ಬೆಳಕನ್ನು ತಾವೇ ಆರಿಸಿ ಕುಳಿತಿ ರೆ. ಅನಂತರ ಸುಮ್ಮನೆ ಭಯದಲ್ಲಿ ಸಾಯುವರು, ಚಿಂತೆಯಲ್ಲಿ ಸೊರಗುವರು, ಅಯೋಗ್ಯರ ಬಲ್ಲಿ ಏಟು ತಿನ್ನುವರು ಮತ್ತು ಇವನ್ನೆಲ್ಲಾ ಬಾಯಿಮುಚ್ಚಿಕೊಂಡು ಸಹಿಸುವುದೇ ಹೆಣ್ಣು ್ದ ಸರ್ವೋತ್ಕೃಷ್ಟವಾದ ಸಾರ್ಥಕತೆಯೆಂದುಕೊಳ್ಳುವರು. ಇಲ್ಲ, ಮನುಷ್ಯರಲ್ಲಿ ಇಷ್ಟು ದೊಡ್ಡ ಮಾನ ಆಸರೆ ಪಡೆಯುವುದಕ್ಕೆ ಅವಕಾಶ ಕೊಡ ಕೂಡದು. ಸಮಾಜವು ಯಾರನ್ನು ಇಷ್ಟು ಗೆ ಇಳಿಸಿಬಿಟ್ಟಿದೆಯೋ ಸಮಾಜವನ್ನೂ ಅವರು ಪ್ರತಿದಿನವೂ ಕೆಳಗೆ ಇಳಿಸುತ್ತಿರುವರು.

ವಿಪ್ರದಾಸನ ಮಂಚದ ಪಕ್ಕದಲ್ಲಿ ನೆಲದಮೇಲೆ ಕುಮು ತಲೆ ತಗ್ಗಿಸಿಕೊಂಡು ಕೂತೇ ಳು. ವಿಪ್ರದಾಸನು ಮೋತಿಯಮ್ಮನಿಗೆ ಏನೂ ಹೇಳದೆ ಕುಮುವಿನ ತಲೆಯಮೇಲೆ ಕೈಯಿಟ್ಟು ದು ಮಾತನ್ನ ನಿನಗೆ ಹೇಳುತ್ತೇನೆ ಕುಮು, ಅರ್ಥಮಾಡಿಕೊಳ್ಳುವುದಕ್ಕೆ ಪ್ರಯತ್ನಿಸು.

ಸಾಮರ್ಥ್ಯವೆಂಬ ಪದಾರ್ಥ ಎಲ್ಲಿ ನೆಲದಮೇಲೆ ಕಸವಾಗಿ ಬಿದ್ದಿರುವ ಪದಾರ್ಥವೋ, ಯಾ
ದಕ್ಕೆ ಯಾವ ವಿಧವಾದ ಪರೀಕ್ಷೆಯೂ ಇಲ್ಲವೋ, ಅಧಿಕಾರವನ್ನು ಸ್ಥಾಪನೆ ಮಾಡುವುದಕ್ಕೆ ಯಾ
ದರ ಯೋಗ್ಯತೆಗೆ ಯಾವ ಪ್ರಮಾಣವನ್ನೂ ತೋರಿಸಬೇಕಾಗಿಲ್ಲವೋ, ಅಂತಹ ಸಾಮರ್ಥ್ಯ
ಸಂಸಾರದಲ್ಲಿ ಕೇವಲ ಹೀನತೆಯನ್ನೇ ಸೃಷ್ಟಿಮಾಡುವುದು. ಈ ಮಾತನ್ನು ನಿನಗೆ ಎಷ್ಟೋಸ
ಹೇಳಿದ್ದೇನೆ, ನಿನ್ನ ಸಂಸ್ಕಾರವನ್ನು ನೀನು ಕಡಿದು ಹಾಕಲು ಸಾಧ್ಯವಾಗಲಿಲ್ಲ. ಅದಕ್ಕೇ ಕ
ಪಟ್ಟೆ. ನೀನು ಬ್ರಾಹ್ಮಣ ಭೋಜನ ಮಾಡಿಸುವ ಸಂದರ್ಭಗಳಲ್ಲೆಲ್ಲಾ ಎಂದೂ ನಾನು ನಿನ
ಅಡ್ಡಿಮಾಡಲಿಲ್ಲ. ಆದರೆ ಕೇವಲ ಬಾರಿಬಾರಿಗೂ ತಿಳಿಸಲು ಮಾತ್ರ ಪ್ರಯತ್ನಿಸುತ್ತಿದ್ದೆ. ವಿಚಾ
ಮಾಡದೆ ಯಾವ ಮನುಷ್ಯನ ಶ್ರೇಷ್ಠತೆಯನ್ನೂ ಅಂಗೀಕಾರ ಮಾಡುವುದರಿಂದ ಕೇವಲ ಅವನಿ
ಮಾತ್ರ ಕೆಡಕಾಗುವುದೇ ಅಲ್ಲ, ಅದರಿಂದ ಸಮಾಜದಲ್ಲಿ ಶ್ರೇಷ್ಠತೆಯ ಆದರ್ಶಕ್ಕೇ ಹಾನಿಯುಂಟಾ
ಗುತ್ತದೆ. ಈ ಬಗೆಯ ಅಂಧಶ್ರದ್ಧೆಯ ಮೂಲಕ ನಮ್ಮ ಮನುಷ್ಯತ್ವವನ್ನೇ ನಿರ್ಲಕ್ಷ್ಯಮಾಡುತ್ತಿ
ವೆನೆಂದು ಯಾರಿಗೂ ಯಾಕೆ ತಿಳಿಯುವುದೇ ಇಲ್ಲವೋ! ನೀನಾದರೂ ಇಂಗ್ಲಿಷ್ ಸಾಹಿತ್ಯವನ
ಸ್ವಲ್ಪ ಸ್ವಲ್ಪ ಓದಿಕೊಂಡಿದ್ದೀಯ. ಈ ಬಗೆಯ ದಳಗಳಿಂದ, ಶಾಸ್ತ್ರಗಳಿಂದ ನಿರ್ಮಿತವಾ
ನಿರ್ವಿಕಾರ ಸಾಮರ್ಥ್ಯದ ವಿರುದ್ಧವಾಗಿ ಪ್ರಪಂಚದಲ್ಲೆಲ್ಲಾ ಇಂದು ಹೋರಾಟದ ಗಾಳಿ ಬೀ
ತೊಡಗಿದೆ ಎಂದು ಗೊತ್ತಿಲ್ಲವೇ? ಎಷ್ಟು ವಿಧವಾದ ಇಚ್ಛಾಕೃತ ಅಂಧ ದಾಸತ್ವಕ್ಕೆ ದೊಂ
ಹೆಸರಿಟ್ಟು ಮನುಷ್ಯನು ದೀರ್ಘಕಾಲ ಪೋಷಣೆ ಮಾಡಿಕೊಂಡು ಬಂದಿದ್ದಾನೋ ಅದರ ನೆ
ಯನ್ನೇ ನಿರ್ಮೂಲ ಮಾಡುವ ದಿನ ಬಂದಿದೆ, ಈಗ." ಎಂದ.

ಕುಮು ಮುಖ ತಗ್ಗಿಸಿಕೊಂಡೇ "ಅಣ್ಣಾ, ಹೆಂಡತಿಯು ಗಂಡನನ್ನು ಮೀರಿ ನಡೆಂ
ಬೇಕೆಂದು ಹೇಳುತ್ತೀಯೇನು?" ಎಂದಳು.

"ಅನ್ಯಾಯವಾಗಿ ಮೀರಿ ನಡೆದರೆ ಮಾತ್ರ ನಾನು ಆಕ್ಷೇಪಣೆ ಮಾಡುತ್ತೇನೆ. ಗಂಡನಾ
ವನೂ ಕೂಡ ಹೆಂಡತಿಯನ್ನು ಅತಿಕ್ರಮಿಸಕೂಡದು. ಇದೇ ನನ್ನ ಅಭಿಪ್ರಾಯ."

"ಒಂದು ವೇಳೆ ಹಾಗೆ ಮಾಡಿದರೆ, ಹೆಂಡತಿ ಅದೇ ಕಾರಣಕ್ಕಾಗಿ—"

ಕುಮುವಿನ ಮಾತು ಪೂರ್ತಿಯಾಗಲು ಬಿಡದೆ ವಿಪ್ರದಾಸನು "ಹೆಂಡತಿಯು ಒಂದು ಪಕ್ಷ
ಅನ್ಯಾಯವನ್ನು ಸಹಿಸಿಕೊಂಡೇ ಸುಮ್ಮನಿದ್ದರೆ ಇಡೀ ಹೆಣ್ಣುಜಾತಿಗೇ ಅವಳು ಅನ್ಯಾಯ ಮಾ
ದಂತಾಗುತ್ತದೆ. ಹೀಗೆ ಮಾಡಿಯೇ ಒಬ್ಬೊಬ್ಬರ ದ್ವಾರಾ ಎಲ್ಲರ ದುಃಖವೂ ಒಟ್ಟುಗೂಡಿ ಹೆಚ್ಚು
ಬಂದಿದೆ. ಅತ್ಯಾಚಾರದ ಮಾರ್ಗವು ಸುಗಮವಾಗಿ ಬಿಟ್ಟಿದೆ." ಎಂದ.

ಮೋತಿಯಮ್ಮನು ಸ್ವಲ್ಪ ಅಧೈರ್ಯದ ದನಿಯಲ್ಲಿ "ನಮ್ಮ ಓರಗಿತ್ತಿ ಸತೀಲಕ್ಷ್ಮಿ
ಸಮಾನಳು. ಅವಮಾನ ಮಾಡಿದರೆ ಆ ಅವಮಾನ ಅವಳನ್ನು ಸೋಂಕುವುದೇ ಇಲ್ಲ." ಎಂದ

ವಿಪ್ರದಾಸನ ಧ್ವನಿ ಈ ಸಲ ಉದ್ರೇಕಿತವಾಯಿತು "ನೀವು ಸತೀ ಲಕ್ಷ್ಮಿಯ ವಿಚಾರ ವ
ಯೋಚಿಸುತ್ತೀರಿ. ಮತ್ತು ಯಾವ ಹೇಡಿಯು ಅವಳನ್ನು ಬಾಧಕವೇ ಇಲ್ಲದೆ ಅವಮಾನಗೊಳಿ
ಅಧಿಕಾರ ಪಡೆದು ಅದನ್ನು ಪ್ರತಿದಿನವೂ ಉಪಯೋಗಿಸುತ್ತಾನೋ ಅಂತಹವನ ದುರ್ಗ
ನ್ನೇಕೆ ನೆನೆಯುವುದಿಲ್ಲ. ?"

ಕುಮು ಆಗ ಎದ್ದು ನಿಂತು ವಿಪ್ರದಾಸನ ತಲೆ ಕೂದಲಲ್ಲಿ ಕೈಯಾಡಿಸುತ್ತ ಆಡಿ
"ಅಣ್ಣ, ಇನ್ನು ನೀನು ಮಾತಾಡಬೇಡ. ನೀನು ಯಾವುದಕ್ಕೆ ಮುಕ್ತಿಯನ್ನುತ್ತೀಯೋ, ಅ

ನ್ನು ಜ್ಞಾನದ ಮೂಲಕ ಪಡೆಯಬಹುದೋ, ಅದಕ್ಕೆ ನಮ್ಮ ರಕ್ತದಲ್ಲಿಯೇ ತಡೆಯಿದೆ. ನಾವು ಮನುಷ್ಯರನ್ನೂ ನಂಬಿಕೊಂಡಿದ್ದೇವೆ. ನಂಬಿಕೆಯನ್ನೂ ಅಪ್ಪಿಕೊಂಡಿದ್ದೇವೆ, ಏನು ಮಾಡಿದರೂ ಅದರ ಆಸರೆಯನ್ನು ಬಿಡಲು ತಯಾರಾಗಿಲ್ಲ. ಎಷ್ಟೇ ಪೆಟ್ಟು ತಿಂದರೂ ಸುತ್ತಿ ಅಲೆದು ಮತ್ತೆ ಅಲ್ಲಿಗೇ ಬಂದು ಸೇರುತ್ತೇವೆ. ನಿಮಗೆ ಹೆಚ್ಚು ಜ್ಞಾನವಿದೆ. ಆ ಜ್ಞಾನದ ಮೂಲಕ ನಿಮ್ಮ ಮನಸ್ಸು ಬಿಡುಗಡೆ ಹೊಂದುತ್ತದೆ, ನಮಗೆ ಇರುವುದು ಬರಿಯ ನಂಬಿಕೆ. ಅದಕ್ಕೇ ನಮ್ಮ ಬಾಳು ಶೂನ್ಯತೆಯಿಂದ ತುಂಬಿದೆ, ನೀನು ತಿಳಿಯ ಹೇಳಿದರೆ ನನ್ನದು ತಪ್ಪೆಂದು ತಿಳಿಯಬಲ್ಲೆ. ಆದರೆ ತಪ್ಪು ತಿಳಿಯುವುದೂ, ತಪ್ಪನ್ನು ತ್ಯಜಿಸುವುದೂ ಒಂದೇ ಏನು? ಲತೆಯ ಅವಲಂಬನ ದಂತೆ ನಮ್ಮ ಮಮತ್ವ ಕಂಡದ್ದನ್ನೆಲ್ಲಾ ಅಪ್ಪಿಕೊಂಡು ನಿಲ್ಲುತ್ತದೆ, ಅದು ಒಳ್ಳೆಯದೇ ಆಗಲಿ, ಕೆಟ್ಟದೇ ಆಗಲಿ....ಆ ಮೇಲೆ ಅದನ್ನ ತೊರೆಯುವುದೇ ಅಸಾಧ್ಯ."

ವಿಪ್ರದಾಸನು "ಅದರಿಂದಲ್ಲವೇ ಮತ್ತೆ ಹೇಡಿಗಳ ಪೂಜೆ ಮಾಡುವುದಕ್ಕೆ ಪೂಜಾರಿಣಿಯರಿಗೆ ಕೊರತೆಯಿಲ್ಲ? ಅವರಿಗೆ ತಿಳಿವಳಿಕೆ ಇದ್ದಾಗ ಅಪವಿತ್ರರನ್ನು ಅಪವಿತ್ರರೆಂದೇ ತಿಳಿದಿರುತ್ತಾರೆ, ಆದರೆ ಅಂಗೀಕಾರ ಮಾಡುವಾಗ ಅವರನ್ನು ಪವಿತ್ರರೆಂದೇ ಅಂಗೀಕಾರ ಮಾಡುತ್ತಾರೆ." ಎಂದನು.

ಕುಮು "ಏನು ಮಾಡುವುದಣ್ಣಾ, ಪ್ರಪಂಚವನ್ನು ಎರಡು ಕೈಗಳಿಂದಲೂ ತಬ್ಬಿ ಹಿಡಿಯ ಬೇಕೆಂದೇ ನಮ್ಮಗಳ ಸೃಷ್ಟಿಯಾಗಿದೆ, ಆದ್ದರಿಂದಲೇ ನಾವು ಮರವನ್ನೂ ಅಪ್ಪಿ ಹಿಡಿಯುತ್ತೇವೆ, ಒಣಗಿದ ರೆಂಬೆಯನ್ನೂ ಹಿಡಿಯುತ್ತೇವೆ. ಗುರುವನ್ನು ಗೌರವಿಸುವುದಕ್ಕೆ ನಮಗೆ ಎಷ್ಟು ಹೊತ್ತು ಹಿಡಿಯುತ್ತದೋ ಭಂಡನನ್ನು ಅಂಗೀಕಾರ ಮಾಡುವುದಕ್ಕೂ ಅಷ್ಟೇ ಹೊತ್ತು. ಮೋಸದ ಬಲೆ ನಮ್ಮ ಅಂತರ್ಯದೊಳಗೇ ಹರಡಿದೆ. ದುಃಖದಿಂದ ನಮ್ಮನ್ನು ಬಿಡುಗಡೆ ಮಾಡುವವರು ಯಾರು? ಅದಕ್ಕೋಸ್ಕರವೇ ದುಃಖವನ್ನು ಅನುಭವಿಸ ಬೇಕಾಗಿಯೇ ಬಂದಾಗ ಅದನ್ನು ಅಂಗೀ ಕರಿಸಿಯೇ ಅದರಿಂದ ಬಿಡುಗಡೆ ಹೊಂದಲು ಮಾರ್ಗವನ್ನು ಕಂಡುಹಿಡಿಯ ಬೇಕಾಗಿದೆ. ಅದರಿಂದ ಲೇ ಹೆಂಗಸರು ಇಷ್ಟರಮಟ್ಟಿಗೆ ಧರ್ಮವನ್ನು ಆಶ್ರಯಿಸಿರುವುದು?" ಎಂದಳು.

ವಿಪ್ರದಾಸನು ಏನನ್ನೂ ಹೇಳಲಿಲ್ಲ. ಸುಮ್ಮನೆಯೇ ಕೂತಿದ್ದ. ಹಾಗೆ ಅವನು ಸುಮ್ಮನೆ ಕೂತಿದ್ದುದೂ ಕುಮುವಿಗೆ ಕಷ್ಟವಾಗಿ ಕಂಡಿತು ಮಾತನಾಡುವುದಕ್ಕಿಂತಲೂ ಇದರ ಭಾರ ಎಷ್ಟೋ ಹೆಚ್ಚೆಂದು ಅವಳಿಗೆ ಗೊತ್ತು.

ಕೋಣೆಯಿಂದ ಹೊರಟು ಬಂದು ಮೋತಿಯಮ್ಮನು "ಏನು ನಿಷ್ಕರ್ಷೆಮಾಡಿದ್ದಿ ಯಮ್ಮ?" ಎಂದು ಕೇಳಿದಳು.

ಕುಮು "ಹೋಗಲಾರೆ. ಅದಲ್ಲದೆ, ನಾನು ವಾಪಸ್ಸು ಹೋಗುವುದಕ್ಕೆ ಅಪ್ಪಣೆಯೂ ಆಗಿಲ್ಲ." ಎಂದಳು.

ಮೋತಿಯಮ್ಮನಿಗೆ ಮನಸ್ಸಿನಲ್ಲಿ ಸ್ವಲ್ಪ ಬೇಸರವೂ ಬಂತು. ಅತ್ತೆಯ ಮನೆಯ ಮೇಲೆ ಅವಳಿಗೆ ಅಂತಹ ಭಕ್ತಿಯೇನಿಲ್ಲ. ಆದರೂ ಅತ್ತೆಯ ಮನೆಯ ಸಂಬಂಧವಾಗಿ ಅವಳ ಹೃದಯದಲ್ಲಿ ಬಹಳಕಾಲದ ಏಕತ್ವದ ಅರಿವು ಎಡೆಮಾಡಿಕೊಂಡಿತ್ತು. ಆ ಮನೆಯ ಸೊಸೆಯೊಬ್ಬಳು ಅದನ್ನು ಉಪೇಕ್ಷೆ ಮಾಡುವುದು ಅವಳಿಗೆ ಹಿತವಾಗಿರಲಿಲ್ಲ. ಕುಮುವಿಗೆ ಅವಳು ಹೇಳಿದುದರ ಅರ್ಥ ಇದು. "ಪುರುಷರ ಪ್ರಕೃತಿಯಲ್ಲಿ ಅಂತಃಕರಣ ಕಡಿಮೆ. ಮತ್ತು ಅವರ ಸಂಯಮವೂ ಕಡಿಮೆ. ಅದಂತೂ ಮೊದಲಿಂದಲೂ ಇರುವ ಮಾತೇ. ಸೃಷ್ಟಿಯಂತೂ ಹೆಂಗಸರ ಕೈಯಲ್ಲಿಲ್ಲ. ಯಾವುದು

ಲಭ್ಯವೋ ಅದನ್ನೇ ತೆಗೆದುಕೊಂಡು ಅನುಭವಿಸಬೇಕು. 'ಅವರು ಆ ತರಹವೇ' ಎಂದು ಮನ
ಸ್ಸನ್ನು ತಯಾರು ಮಾಡಿಕೊಂಡು ಹೇಗಾದರೂ ಒಂದು ರೀತಿಯಲ್ಲಿ ಸಂಸಾರವನ್ನು ನಿರ್ವಹಿಸಿ
ಕೊಂಡು ಹೋಗಬೇಕು. ಯಾಕೆಂದರೆ ಸಂಸಾರ ಹೆಂಗಸರಿಗೆ ಸೇರಿದುದು. ಗಂಡ ಒಳ್ಳೆಯವ
ನಾಗಿರಲಿ, ಕೆಟ್ಟವನೇ ಆಗಿರಲಿ, ಸಂಸಾರವನ್ನು ಸ್ವೀಕಾರಮಾಡಿ ನಡೆಸಲೇ ಬೇಕು. ಅದು
ಸಂಪೂರ್ಣವಾಗಿ ಅಸಾಧ್ಯವಾಗಿ ಹೋದರೆ ಆಗ ಮರಣವಲ್ಲದೆ ಬೇರೆ ದಾರಿಯಿಲ್ಲ."

ಕುಮು ನಕ್ಕು "ಇಲ್ಲದೆ ಹೋದರೆ ಅದೇ ಇರಲಿ, ಸಾವಿನಲ್ಲಿ ತಪ್ಪೇನು ?" ಎಂದಳು.

ಮೋತಿಯಮ್ಮನು ಉದ್ವಿಗ್ನಳಾಗಿ "ಛೀ. ಅಂತಹ ಮಾತನ್ನಾಡ ಬೇಡ" ಎಂದಳು.

ಕುಮುವಿಗೆ ಈ ವಿಷಯ ಗೊತ್ತಿರಲಿಲ್ಲ. ಏನೆಂದರೆ ಕೆಲವೇ ದಿನಗಳ ಹಿಂದೆ ಅವರ ಕೇ
ಯಲ್ಲಿಯೇ ಹದಿನೇಳು ವರ್ಷದ ಸೊಸೆಯೊಬ್ಬಳು ಕಾರ್ಬಾಲಿಕ್ ಆಸಿಡ್ ಕುಡಿದು ಆತ್ಮಹತ
ಮಾಡಿಕೊಂಡಿದ್ದಳು. ಮತ್ತು ಎಂ.ಎ. ಪಾಸುಮಾಡಿದ ಗಂಡ ಸರ್ಕಾರಿ ಆಫೀಸಿನಲ್ಲಿ ದೊಡ್ಡ
ಉದ್ಯೋಗದಲ್ಲಿದ್ದ. ಹೆಂಡತಿಯು ತುರುಬಿನಲ್ಲಿ ಸಿಕ್ಕಿಸುವ ಪುಟ್ಟದೊಂದು ಬೆಳ್ಳಿಯ ಬಾಚಣಿ
ಯನ್ನು ಕಳೆದು ಬಿಟ್ಟಿದ್ದಳು. ತಾಯಿಯ ಬಾಯಿಂದ ಈ ದೂರನ್ನು ಕೇಳಿ ಆ ಗಂಡ ಅವಳನ
ಒದ್ದು ಬಿಟ್ಟಿದ್ದ. ಮೋತಿಯಮ್ಮನಿಗೆ ಆ ವಿಷಯ ನೆನಪಾಗಿ ಮೈಯಲ್ಲಿ ಮುಳ್ಳು ಚುಚ್ಚಿದಂತಾಯಿತು

ಈ ಸಮಯದಲ್ಲಿ ನವೀನನ ಪ್ರವೇಶವಾಯಿತು. ಕುಮು ನೋಡಿ ಸಂತೋಷಪಟ್ಟಳು
"ಗೊತ್ತು .ನಮ್ಮ ನವೀನಣ್ಣ ಬರುವುದಕ್ಕೆ ಹೆಚ್ಚು ತಡವಾಗುವುದಿಲ್ಲ" ಅಂತ.

ನವೀನನು ನಕ್ಕು "ತರ್ಕಶಾಸ್ತ್ರದಲ್ಲಿ ಅತ್ತಿಗೆಗೆ ಪರಿಶ್ರಮವಿದೆಯಲ್ಲ, ಆದರಲ್ಲಿ ಏನ
ಹೇಳುತ್ತೆ. ಮೊದಲು ಶ್ರೀಮತಿ ಹೊಗೆ ದೇವಿ ಕಂಡುಬರುತ್ತೆ, ಅದರ ಆಧಾರದ ಮೇಲೆ ಶ್ರೀಮಾನ
ಅಗ್ನಿದೇವರು ಆವಿರ್ಭಾವವಾಗುವುದನ್ನು ನಿರ್ಣಯಿಸಲು ಕಷ್ಟವೇನಾಗುವುದಿಲ್ಲ." ಎಂದ.

ಮೋತಿಯಮ್ಮನು "ಕುಮು, ನೀನೇ ಇವರನ್ನು ಸುಮ್ಮಸುಮ್ಮನೆ ಉಬ್ಬಿಸಿಬಿಟ್ಟಿದ್ದೀಯ. ಅವರ
ಅಂದುಕೊಂಡುಬಿಟ್ಟಿದ್ದಾರೆ, ತಮ್ಮನ್ನು ನೋಡಿದರೆ ಸಾಕು ನಿನಗೆ ಖುಷಿಯಾಗಿಬಿಡುತ್ತೆ ಅಂತ
ಅದರಿಂದ ಇವರಿಗೆ ಇಷ್ಟು ದಿಮಾಕು" ಎಂದಳು.

"ನನ್ನನ್ನ ನೋಡಿ ಆನಂದ ಪಡುವವರು ಎಂತಹವರಿರಬೇಕು ನೀನೇ ಹೇಳು. ನನ್ನನ
ಸೃಷ್ಟಿ ಮಾಡಿದವನೇ ತನ್ನ ಕೈ ಕೆಲಸದ ಪರಿಣಾಮವನ್ನು ನೋಡಿ ಎಷ್ಟು ಅನುತಾಪವನ
ಪಟ್ಟಿದ್ದಾನೋ. ಮತ್ತು ನನ್ನ ಕೈ ಹಿಡಿದವರು ಹೇಗೆ ತಿಳಿದುಕೊಂಡಿದಾರೆಂದರೆ—" ದೇವಾ ನಜ
ನಂತಿ ಕುತೋ ಮನುಷ್ಯಃ" (ದೇವರಿಗೇ ಗೊತ್ತಿಲ್ಲದಿರುವಾಗ, ಇನ್ನು ಮನುಷ್ಯರಿಗೆಲ್ಲಿ ?)

"ನವೀನಣ್ಣಾ, ನೀವಿಬ್ಬರೂ ಸೇರಿ ಮಾತಾಡುತಾ ಇರಿ, ನಾನು ಮೂರನೆಯವಳು ಇದ
ಕೊಂಡು ಛಂದೋಭಂಗ ಮಾಡಲಿಷ್ಟವಿಲ್ಲ. ನಾನಿನ್ನು ಹೊರಟೆ."

ಮೋತಿಯಮ್ಮನು "ಇದೇನು ಕುಮು, ಹೀಗಂತಿ, ಇಲ್ಲಿ ಮೂರನೆಯ ವ್ಯಕ್ತಿಯಾರು? ನೀನ
ಅಲ್ಲ ನಾನೇ? ಗಾಡಿ ಬಾಡಿಗೆ ಮಾಡಿಕೊಂಡು ಅವರು ನನ್ನನ್ನು ನೋಡುವುದಕ್ಕೇ ಬಂದಿರುವುದು
ಎಂದಳು.

"ಇಲ್ಲ. ಅವರಿಗೆ ಫಲಹಾರಕ್ಕೆ ಏರ್ಪಾಡು ಮಾಡಿ ಬಿಟ್ಟು ಬರುತ್ತೇನೆ" ಎಂದು ಕುಮ
ಒಳಗಡೆ ಹೊರಟುಹೋದಳು.

# ಐವತ್ತೆರಡನೆಯ ಅಧ್ಯಾಯ

ಮೋತಿಯಮ್ಮನು "ಸಮಾಚಾರ ಏನಾದರೂ ಇದೆ ಎಂದು ಕಾಣುತ್ತೆ ?" ಎಂದಳು.

"ಇದೆ. ಅದಕ್ಕೋಸ್ಕರವೇ ನಿನ್ನ ಹತ್ತಿರ ಮಾತಾಡೋಣ ಅಂತ ಬಂದೆ. ತಡಮಾಡಲಿಕ್ಕೆ ಗಲಿಲ್ಲ, ನೀನೇನೋ ಹೊರಟು ಬಂದು ಬಿಟ್ಟೆ. ಅದಾದ ಮೇಲೆ ಅಣ್ಣ ನನ್ನ ರೂಮಿಗೆ ಬಂದರು. ುಖ ನೋಡಿದರೆ ಏನೋ ಕೆಟ್ಟ ಸಂಗತಿ ನಡೆದ ಹಾಗೆ ಕಾಣುತ್ತಿತ್ತು. ಸಾಧಾರಣ ಬೆಲೆಯ ಂದು ಗಿಲೀಟಿನ "ಆಷ್ ಟ್ರೇ" ಮೇಜಿನ ಮೇಲಿಂದ ಮಾಯವಾಗಿದೆ, ಈಗ ಅದು ಯಾರ ಬಳಿ ುದೆಯೋ ಅವರು ಅದನ್ನು ಖಂಡಿತ ಬಂಗಾರದ್ದೆಂದೇ ತಿಳಿದಿದ್ದಾರೆ. ಇಲ್ಲದೆ ಹೋದರೆ ಸಣ್ಣ ಾಮಾನಿಗೆಲ್ಲ ಪರಕಾಲವನ್ನು ಕಳೆದುಕೊಳ್ಳಲು ಯಾರು ಸಿದ್ಧರಾಗಿರುತ್ತಾರೆ. ನಿನಗೆ ಗೊತ್ತೆ ುದೆಯಲ್ಲ, ಸಣ್ಣದೊಂದು ಸಾಮಾನು ಕಳೆದು ಹೋದರೂ ಅಣ್ಣ ತನ್ನ ವಿಪುಲ ಸಂಪತ್ತಿನ ಅಡಿ ಾಯವೇ ಅಲುಗಿ ಹೋದಂತೆ ಹಾರಾಡುತಾರೆ. ಇವತ್ತು ಬೆಳಿಗ್ಗೆ ಆಫೀಸಿಗೆ ಹೋಗುವಾಗ ್ಯಮಾಳನ್ನು ಊರಿಗೆ ಕಳುಹಿಸಿ ಬಿಡೆಂದು ಹೇಳಿದರು. ನಾನಂತು ಬಹಳ ಉತ್ಸಾಹದಿಂದ ಪವಿತ್ರವಾದ ಕೆಲಸದಲ್ಲಿಯೇ ಮಗ್ನನಾಗಿದ್ದೆ. ಅವರು ಆಫೀಸಿನಿಂದ ವಾಪಸು ಬರುವುದ ಾಳಗಾಗಿ ಈ ಕೆಲಸವನ್ನು ಪೂರೈಸಿ ಬಿಡಬೇಕೆಂದು ಮನಸ್ಸು ಮಾಡಿದ್ದೆ. ಇಂತಹ ಸಮಯ ್ಲಿ ಮಧ್ಯಾಹ್ನ ಒಂದುವರೆ ಘಂಟೆಯ ಹೊತ್ತಿಗೆ ಇದ್ದಕ್ಕಿದ್ದ ಹಾಗೆ ಅಣ್ಣ ನನ್ನ ಕೋಣೆಗೆ ಓಡಿ ಂದು "ಆ ವಿಷಯ ಸದ್ಯಕ್ಕೆ ಹಾಗೇ ಇರಲಿ" ಎಂದು ಬಿಟ್ಟರು. ಕೊಠಡಿಯಿಂದ ಹೊರಗಡೆ ೋಗುತ್ತಿದ್ದಾಗ ಮೇಜಿನ ಮೇಲೆ ನಾನಿಟ್ಟಿದ್ದ ಅತ್ತಿಗೆಯ ಫೋಟೋ ಮೇಲೆ ಅವರ ಕಣ್ಣು ಬಿತ್ತು. ಾಗೇ ಬೆಚ್ಚಿ ಬಿದ್ದಂತೆ ನಿಂತರು. ಅರ್ಧ ನೋಟವನ್ನು ಬಿಟ್ಟು ಚಿತ್ರವನ್ನು ಸರಿಯಾಗಿ ನೋಡಲು ವರಿಗೆ ನಾಚುಗೆಯಾಗುತ್ತಿತ್ತೆಂದು ತಿಳಿದು ಕೊಂಡೆ. ಆಗ "ಅಣ್ಣಾ, ಸ್ವಲ್ಪ ಕೂತುಕೋ, ಾಕಾ ಮಸ್ಲಿನ್ ಒಂದನ್ನ ನಿನಗೆ ತೋರಿಸಬೇಕೆಂದಿದ್ದೇನೆ. ಮೋತಿಯಮ್ಮ ತನ್ನ ಅತ್ತಿಗೆಗೆ ಳೆ ತೊಡಿಸಬೇಕೆಂದು ಈ ಸೀರೆಯನ್ನು ತರಿಸಿದಾಳೆ. ಆದರೆ ಆ ಕಳ್ಳ ಗಣೇಶರಾಮನು ನನಗೆ ಲೆಯಲ್ಲಿ ಮೋಸಮಾಡಿದಾನೆ ಅನ್ನಿಸುತ್ತೆ. ಅದನ್ನ ನಿನಗೊಂದು ಸಲ ತೋರಿಸಬೇಕು ಅಂತ ನಗೆ ಇದೆ. ನನ್ನ ಅಂದಾಜಿನಲ್ಲಿ ಅದಕ್ಕೆ ಹದಿಮೂರು ರೂಪಾಯಿ ಆಗಲಾರದು. ಎಷ್ಟು ಹೆಚ್ಚಾ ರೂ ಒಂಬತ್ತು, ಒಂಬತ್ತೂವರೆ ರೂಪಾಯಿ ಮೇಲೆ ಆಗಲಾರದು ಅಂತ ಜಂದು ಕೊಂಡಿದ್ದೇನೆ, ಂತ ಅಂದೆ."

ಮೋತಿಯಮ್ಮನು ಅವಾಕ್ಕಾಗಿ "ಇದೆಲ್ಲ ನಿಮ್ಮ ತಲೆಯೊಳಗೆ ಹೇಗೆ ಬಂತು? ನನ್ನ ಮ್ಮನ ಹೆಂಡತಿಗೆ ಬಳೆ ತೊಡಿಸುತ್ತಾರೆ ಅಂತ ಯಾರು ಹೇಳಿದರು ನಿಮಗೆ? ಈಗ ಅವಳ, ಗೂಸಿಗಿನ್ನೂ ಒಂದೂವರೆ ತಿಂಗಳು. ಹೀಗೆ ಹುಟ್ಟಿಸಿಕೊಂಡು ಹೇಳುವುದಕ್ಕೆ ಈಚೀಚೆಗೆ ಮಗೇನೂ ಎಗ್ಗೇ ಇಲ್ಲ ಅಂತ ಕಾಣುತ್ತೆ. ಈ ಹೊಸ ಜಾಣತನ ಎಲ್ಲಿ ಕಲಿತುಕೊಂಡು ಂದಿರಿ ?" ಎಂದಳು.

"ಎಲ್ಲಿಂದ ಕಾಳಿದಾಸ ತನ್ನ ಕವಿತ್ವ ಕಲಿತುಕೊಂಡು ಬಂದನೋ ಅಲ್ಲಿಂದ. ವಾಣೀ ೀಣಾಪಾಣಿಯ ಹತ್ತಿರ."

"ವೀಣಾಪಾಣಿಯು ನಿಮ್ಮನ್ನ ಬಿಟ್ಟು ಹೊರಡುವವರೆಗೂ ನಿಮ್ಮನ್ನು ಕಟ್ಟಿಕೊಂಡು ಸಂಸಾರ

ನಡೆಸುವುದು ಸಾಧ್ಯವಿಲ್ಲ."

"ನೋಡು. ಪ್ರತಿಜ್ಞೆ ಮಾಡಿದ್ದೇನೆ. ಸ್ವರ್ಗಾರೋಹಣ ಕಾಲದಲ್ಲಿ ನರಕದರ್ಶನ ಮಾಡಿ ಹೋಗುತ್ತೇನೆ ಅಂತ. ಅತ್ತಿಗೆಯ ಚರಣದಲ್ಲಿ ಇದೇ ನನ್ನ ನೈವೇದ್ಯ."

"ಆದರೆ ಒಂಬತ್ತೂವರೆ ರೂಪಾಯಿನ ಢಾಕಾ ಸೀರೆ ನೆನೆಸಿಕೊಂಡ ತಕ್ಷಣ ನಿಮಗೆ ಸಿಕ್ಕಿದ್ದು ಎಲ್ಲಿ ?"

"ಎಲ್ಲಿಯೂ ಇಲ್ಲ. ಇಪ್ಪತ್ತು ನಿಮಿಷಗಳಾದ ಮೇಲೆ ವಾಪಸು ಬಂದು 'ಹಾಳು ಗಣೇಶ ರಾಮ್ ನನಗೆ ಹೇಳದೆಯೇ ಅದನ್ನು ತಗೊಂಡು ಹೊರಟು ಹೋದ' ಎಂದೆ. ಅಣ್ಣನ ಮುಖ ನೋಡಿ ತಿಳಿದುಕೊಂಡೆ. ಈ ಮಧ್ಯೆ ಪಠ ಅವನ ಮೆದುಳನ್ನು ಪ್ರವೇಶಿಸಿ ಸ್ವಪ್ನದ ರೂಪವನ್ನು ಪಡೆದಿದೆಯೆಂದು ಗೊತ್ತಾಯಿತು. ಅಂತೂ ನೋಡು, ಯಾಕೋ ಗೊತ್ತಾಗುವುದಿಲ್ಲ. ಅಣ್ಣನಿಗೆ ನನ್ನ ಹತ್ತಿರವೂ ಸಂಕೋಚ. ಬೇರೆ ಯಾರಾದರೂ ಆಗಿದ್ದರೆ ಆ ಪಠವನ್ನು ಪಟಕ್ಕಂತ ಹಾಗೇ ಎತ್ತಿಕೊಂಡು ಹೊರಟುಹೋಗಬಹುದಾಗಿತ್ತು."

"ನಿಮ್ಮ ಜಿಪುಣತನಕ್ಕೂ ಏನು ಕಮ್ಮಿ ಇಲ್ಲ. ಅಲ್ಲ, ಅವರಿಗೇ ಕೊಟ್ಟುಬಿಡಬಾರದಾಗಿತ್ತೆ ಪಠವನ್ನ ?"

"ಕೊಡಲಿಲ್ಲ ಅಂತ ಹೇಳಿದೆನೆ? ಕೊಟ್ಟೆ. ಆದರೆ ಸಹಜ ಮನಸ್ಸಿನಿಂದ ಕೊಡಲಿಲ್ಲ. 'ಅಣ್ಣಾ, ಈ ಫೋಟೋವಿನಿಂದ ಒಂದು ಆಯಿಲ್ ಪೇಯಿಂಟಿಂಗ್ ಮಾಡಿಸಿ ನಿನ್ನ ಮಲಗುವ ಮನೆಯಲ್ಲಿ ಇಟ್ಟರೆ ಚೆನ್ನಾಗಿರುವುದಿಲ್ಲವೇ ?" ಅಂದೆ. ಅಣ್ಣ ಉದಾಸೀನ ಭಾವದಿಂದ "ಆಗಲಿ ನೋಡೋಣ" ಎಂದುಬಿಟ್ಟ. ಆಮೇಲೆ ಫೋಟೋ ತೆಗೆದುಕೊಂಡು ಮೇಲಕ್ಕೆ ಹೊರಟುಹೋದ. ಆಮೇಲೆ ಏನಾಯಿತೋ ಸರಿಯಾಗಿ ಗೊತ್ತಿಲ್ಲ....ಆಫೀಸಿಗೆ ಹೋಗಲಿಲ್ಲ ಅಂತ ಕಾಣುತ್ತೆ. ಆ ಫೋಟೋ ವಾಪಸ್ ಬರುವ ಆಸೆಯನ್ನೂ ಬಿಟ್ಟುಬಿಟ್ಟಿದ್ದೇನೆ."

"ನಿಮ್ಮ ಅತ್ತಿಗೆಗೋಸ್ಕರ ಸ್ವರ್ಗವನ್ನೇ ಬಿಟ್ಟುಕೊಡುವುದಕ್ಕೆ ಸಿದ್ಧವಾಗಿದ್ದಾಗ ಒಂದು ಪಠ ಹೋದರೆ ತಾನೇ ಏನು ಹೋಯಿತು ?"

"ಸ್ವರ್ಗದ ವಿಷಯವಾಗಿ ಸಂದೇಹವಿದೆ. ಪಠದ ವಿಷಯವಾಗಿ ಸ್ವಲ್ಪವೂ ಸಂದೇಹವಿಲ್ಲ. ಇಂತಹ ಪಠ ದೈವವಶಾತ್ ಆಗತಕ್ಕಂತಹುದು. ಯಾವ ದುರ್ಲಭ ಲಗ್ನದಲ್ಲಿ ಅವಳ ಮುಖದಲ್ಲಿ ಅಂತಹ ಲಕ್ಷ್ಮಿಯ ಕಳೆ ಸಂಪೂರ್ಣವಾಗಿ ಇಳಿದು ಬಂದಿತ್ತೋ ಸರಿಯಾಗಿ ಅದೇ ಶುಭಯೋಗವನ್ನೇ ಈ ಚಿತ್ರದಲ್ಲಿ ಹಿಡಿದಿಟ್ಟಿದೆ. ಒಂದೊಂದು ದಿನ ರಾತ್ರಿಯಲ್ಲಿ ನಿದ್ರೆಯಿಂದ ಎದ್ದು ದೀಪ ಹಚ್ಚಿಸಿ ಆ ಪಠವನ್ನು ಆಗಾಗ ನೋಡಿದ್ದೇನೆ, ಪ್ರದೀಪದ ಬೆಳಕಿನಲ್ಲಿ ಆ ಚಿತ್ರದಲ್ಲಿನ ರೂಪ ಇನ್ನೂ ಚೆನ್ನಾಗಿ ಕಾಣುತ್ತದೆ."

"ಅಲ್ಲಾಂದ್ರೆ, ನನ್ನ ಹತ್ತಿರ ಇಷ್ಟೊಂದು ಹೆಚ್ಚು ಮಾತು ಆಡುವುದಕ್ಕೆ ನಿಮಗೆ ಸ್ವಲ್ಪವೂ ಭಯವಾಗುವುದಿಲ್ಲವೇ ?"

"ಭಯವೇನಾದರೂ ಇದ್ದಿದ್ದರೆ ನಿನಗೆ ಚಿಂತೆಮಾಡುವುದಕ್ಕೆ ಅವಕಾಶವೂ ಇರುತ್ತಿತ್ತು. ಆಕೆಯನ್ನು ನೋಡಿದರೆ ನನ್ನ ಆಶ್ಚರ್ಯಕ್ಕೆ ಕೊನೆಯೇ ಇಲ್ಲ. ನಮಗೆ ಇಂತಹ ಸೌಭಾಗ್ಯ ಹೇಗೆ ತಾನೇ ಒದಗಿ ಬಂತು ಅಂತ ಅಂದುಕೊಳ್ಳುತ್ತೇನೆ. ಇಂತಹವಳನ್ನು ನಾನು 'ಅತ್ತಿಗೇ' ಅಂತ ಕರೆಯುವ ಹಾಗಾಯಿತಲ್ಲ ಅದೇ ಅದ್ಭುತ! ಮತ್ತು ಆಕೆ ಈ ಸಾಮಾನ್ಯನಾದ ನವೀನನಂತಹವನನ್ನ

ಹತ್ತಿರ ಕೂಡಿಸಿಕೊಂಡು ಬಡಿಸಿ ಉಪಚಾರ ಮಾಡುವುದಂತೂ,....ವಿಶ್ವ ಬ್ರಹ್ಮಾಂಡದಲ್ಲಿ ಇದೂ ಸಹಜವಾದುದು ಹೇಗೆ ಅಂತ! ನಮ್ಮ ಮನೆತನದಲ್ಲಿ ಎಲ್ಲರಿಗಿಂತಲೂ ನತದೃಷ್ಟನೆಂದರೆ ನಮ್ಮಣ್ಣ. ಯಾವ ವಸ್ತುವನ್ನು ಅಷ್ಟು ಸುಲಭವಾಗಿ ಪಡೆದನೋ ಅದನ್ನು ಬಲವಾಗಿ ನಿಬಂಧಮಾಡಿಟ್ಟು ಅದನ್ನ ಪೂರ್ತಿ ಕಳೆದುಕೊಂಡುಬಿಟ್ಟ."

"ಸಾಕು ಸಾಕಂದ್ರೆ.... ಅತ್ತಿಗೆಯ ಮಾತು ಬಾಯಿಗೆ ಬಂತೂ ಅಂದರೆ ಸಾಕು, ನಾಲಿಗೆ ನಿಲ್ಲುವುದೇ ಇಲ್ಲ-ಏನೋ ಮಹಾ !"

"ಲೇ....ಗೊತ್ತಾಯಿತು, ನೋಡು....ಖಂಡಿತ ನಿನ್ನ ಮನಸ್ಸಿನಲ್ಲಿ ಉಳುಕುತ್ತದೆ."

"ಏನಿಲ್ಲ. ಎಂದಿಗೂ ಇಲ್ಲ."

"ಇಲ್ಲದೆ ಏನು! ಇದೆ. ಸ್ವಲ್ಪ ಇದ್ದೇ ಇದೆ, ಆದರೆ ಈ ಸಂದರ್ಭದಲ್ಲಿ ನಿನಗೆ ಒಂದು ವಿಷಯ ಜ್ಞಾಪಿಸುವುದೊಳ್ಳೆಯದು. ಯಾವುದು ಗೊತ್ತಾ? ನೂರ್‌ನಗರದ ಸ್ಟೇಷನ್ನಿನಲ್ಲಿ ಮೊದ ಲನೆ ಸಲ ಅತ್ತಿಗೆಯ ಅಣ್ಣನನ್ನು ನೋಡಿ ಏನೇನು ಹೇಳಿದ್ದೆಯೋ ಅದೂ ಈಗಿನ ಭಾಷೆಯಲ್ಲಿ ಹೆಚ್ಚು ಮಾತು ಅಂದರೂ ನಡೆಯುತ್ತದೆ."

"ಸರಿ ಸರಿ-ಬಿಡಿ ಸಾಕು....ಆ ಚರ್ಚೆಯೆಲ್ಲ ಬಿಡಿ ಇನ್ನು. ಈಗೇನು ಹೇಳಬೇಕು ಅಂತ ಇದ್ದಿರಿ ಹೇಳಿ ಅದನ್ನ."

"ಇವತ್ತು ನಾಳೆಯೊಳಗಾಗಿ ಅಣ್ಣ ಅತ್ತಿಗೆಯನ್ನ ಕರೆಸಿಬಿಡುತಾನೆ ಅಂತ ನನಗೇನೋ ಒಂದು ನಂಬಿಕೆಯಿದೆ. ಅತ್ತಿಗೆ ಇಷ್ಟು ರೋಷದಿಂದ ತೌರುಮನೆಗೆ ಬಂದುಬಿಟ್ಟಳಲ್ಲಾ,...ಇಷ್ಟು ದಿನವಾಯಿತು-ವಾಪಸು ಬರುವ ಮಾತೇ ಇಲ್ಲ....ಇದರಿಂದ ಅಣ್ಣನಿಗೆ ನಿಜವಾಗಿ ಬಹಳ ಮನಸ್ಸು ಕೆಟ್ಟಿದೆ. ಎಲಾ, ಈ ಹಕ್ಕಿ ಬಂಗಾರದ ಪಂಜರಕ್ಕೆ ವಾಪಸು ಯಾಕೆ ಬರುವುದಿಲ್ಲ....ಅನ್ನುವುದು ಏನು ಮಾಡಿದರೂ ಅರ್ಥವಾಗುವುದಿಲ್ಲ ಅಣ್ಣನಿಗೆ....ಎಂತಹ ಮೊದ್ದು ಹಕ್ಕಿ, ಎಂತಹ ಕೃತಜ್ಞ ತೆಯೇ ಇಲ್ಲದ ಹಕ್ಕಿ !"

"ಒಳ್ಳೆಯದೇ ಆಯಿತು, ಬಿಡಿ. ಯಜಮಾನರೇ ಹೇಳಿಕಳುಹಿಸಬೇಕು ಅಂತ ಮಾತಿತ್ತೋ ಇಲ್ಲವೋ ?"

"ನನಗನ್ನಿಸುತ್ತೆ, ಹೇಳಿಕಳುಹಿಸುವುದಕ್ಕೆ ಮುಂಚೆಯೇ ಅತ್ತಿಗೆ ಹೊರಟರೆ ಒಳ್ಳೆಯದು. ಅಣ್ಣನ ಅಭಿಮಾನಕ್ಕೆ ಅಷ್ಟಾದರೂ ಜಯವಿದ್ದಹಾಗೆ ಇರುತ್ತೆ. ಅದಲ್ಲದೆ ವಿಪ್ರದಾಸ ಬಾಬು ಗಳಿಗೇ ಅತ್ತಿಗೆ ತನ್ನ ಸಂಸಾರಕ್ಕೆ ವಾಪಸು ಹೋಗಬೇಕೆಂದಿತ್ತು. ನಾನೇ ಬೇಡವೆಂದು ಹೇಳಿದ್ದೆ."

ವಿಪ್ರದಾಸನೊಡನೆ ಇದರ ವಿಷಯವಾಗಿ ಯಾವ ಮಾತುಕಥೆ ನಡೆದಿತ್ತು ಎನ್ನುವುದರ ಸೂಚನೆ ಕೊಡದೆ ಮೋತಿಯಮ್ಮನು "ವಿಪ್ರದಾಸ ಬಾಬುಗಳ ಹತ್ತಿರ ಹೋಗಿ ಹೇಳಿ ಹಾಗಾದರೆ" ಎಂದಳು.

"ಅದೇ ಹೊರಟೆ. ಅವರಿಗೆ ಹೇಳಿದರೆ ಸಂತೋಷವಾಗುತ್ತೆ."

ಈ ಸಮಯದಲ್ಲಿ ಕುಮು ಬಂದು ಬಾಗಿಲ ಹೊರಗಿನಿಂದಲೇ "ಒಳಗೆ ಬರಬಹುದೇ ?" ಎಂದು ಕೇಳಿದಳು.

ಮೋತಿಯಮ್ಮನು "ನಿನ್ನ ಮೈದುನರು ನಿನ್ನ ದಾರಿಯೇ ಕಾಯುತ್ತಿದ್ದಾರೆ." ಎಂದಳು.

"ಜನ್ಮ ಜನ್ಮಗಳಿಂದ ದಾರಿ ಕಾಯುತ್ತಿದ್ದೆ. ಈ ಜನ್ಮದಲ್ಲಿ ದರ್ಶನವಾಯಿತು."

"ಆಹಾ-ನವೀನಣ್ಣ! ಇಷ್ಟೊಂದು ಮಾತು ಹೇಗೆ ಕಲಿತಿರಿ ನೀವು ?"

"ನನಗೇ ಆಶ್ಚರ್ಯ....ಆದರೆ ಅರ್ಥವಾಗುವುದಿಲ್ಲ."

"ಒಳ್ಳೇದು....ನಡೆಯಿರಿ....ಫಲಹಾರ ಮಾಡುವಿರಂತೆ."

"ಫಲಹಾರ ಮಾಡುವುದಕ್ಕೆ ಮುಂಚೆ ಒಂದು ಸಲ ನಿಮ್ಮಣ್ಣನ ಸಂಗಡ ಸ್ವಲ್ಪ ಮಾತಾಡಿ ಬರುತ್ತೇನಮ್ಮ."

"ಇಲ್ಲ....ಅದು ಸಾಧ್ಯವಿಲ್ಲ."

"ಯಾಕೆ ?"

"ಇವತ್ತು ಅಣ್ಣ ಬಹಳ ಮಾತಾಡಿದ್ದಾರೆ. ಇವತ್ತು ಇನ್ನು ಸಾಕು."

"ಒಳ್ಳೆಯ ಸಮಾಚಾರವಿದೆ." "ಇದ್ದರೆ ಇರಲಿ. ನಾಳೆ ಬಂದು ಹೇಳುವಿರಂತೆ. ಇವತ್ತು ಯಾವ ಮಾತೂ ಬೇಡ."

"ನಾಳೆ ನನಗೆ ರಜ ಸಿಗುವುದಿಲ್ಲ. ಇನ್ನೇನಾದರೂ ಅಡ್ಡಿ ಬರಬಹುದು. ಇವತ್ತು ಒಂದು ಸಲ ಕೇವಲ ಐದು ನಿಮಿಷ ಮಾತ್ರ....ನಿಮ್ಮಣ್ಣನಿಗೆ ಸಂತೋಷವಾಗುತ್ತೆ. ಅವರಿಗೆ ಯಾವ ವಿಧದಲ್ಲೂ ಬೇಸರವಾಗುವುದಿಲ್ಲ."

"ಒಳ್ಳೇದು. ಮೊದಲು ನೀವು ಫಲಹಾರಮಾಡಿ. ಆ ಮೇಲೆ ಆಗಲಿ."

ಫಲಹಾರವಾದ ಮೇಲೆ ಕುಮು ನವೀನನನ್ನು ವಿಪ್ರದಾಸನ ಕೊಠಡಿಗೆ ಕರೆದುಕೊಂಡು ಬಂದಳು. ಅಣ್ಣ ಇನ್ನೂ ನಿದ್ದೆ ಹೋಗದೆ ಇರುವುದನ್ನು ನೋಡಿದಳು. ಕೊಠಡಿ ಕತ್ತಲು ಕತ್ತಲಾಗಿತ್ತು. ದೀಪದ ಬತ್ತಿ ಮ್ಲಾನವಾಗಿತ್ತು. ತೆರೆದ ಕಿಟಕಿಯಿಂದ ನಕ್ಷತ್ರಗಳು ಕಾಣುತ್ತಿದ್ದುವು....ಆಗಾಗ ಹೊರಗಿನಿಂದ ಭುಸ್ ಎಂದು ದಕ್ಷಿಣದ ಗಾಳಿ ಬೀಸಿ, ಕೋಣೆಯ ಪರದೆಗಳು ಮಂಚದ ಮೇಲಿನ ಸೊಳ್ಳೆಯ ತೆರೆ, ಗೂಟಕ್ಕೆ ತಗುಲಿ ಹಾಕಿದ್ದ ವಿಪ್ರದಾಸನ ಬಟ್ಟೆಗಳ ಇವುಗಳು ನಾನಾ ವಿಧವಾದ ನೆರಳುಗಳನ್ನು ಹರಡಿ ಅಲ್ಲಾಡುತ್ತಿದ್ದುವು. ನೆಲದ ಮೇಲೆ ವಾರ್ತಾ ಪತ್ರಿಕೆಯ ಹಾಳೆಗಳು ಚದರಿ ಗಾಳಿಗೆ ಅಲ್ಲಾಡುತ್ತಿದ್ದುವು. ಅರ್ಧ ಮಲಗಿದ್ದ ಅವಸ್ಥೆಯಲ್ಲಿದ್ದ ವಿಪ್ರದಾಸನು ನೆಟ್ಟಗೆ ಎದ್ದು ಕೂತ. ಮುಂದೆ ಹೋಗಲು ನವೀನನಿಗೆ ಹೆಜ್ಜೆ ಬರಲಿಲ್ಲ. ಮುಚ್ಚಂ ಜೆಯ ಅರೆಗತ್ತಲು ಮತ್ತು ರೋಗದ ದೆಸೆಯಿಂದಾದ ಕೃಶತೆ ಎರಡೂ ಸೇರಿ ವಿಪ್ರದಾಸನಿಗೆ ಒಂದು ವಿಧವಾದ ಆವರಣವನ್ನು ಹೊದಿಸಿದ್ದುವು. ಪ್ರಪಂಚದಿಂದ ಅವನೇನೋ ಬಹಳ ದೂರದಲ್ಲಿರು ವಂತೆ, ಬೇರೊಂದು ಪ್ರಪಂಚದಲ್ಲಿ ಇರುವವನಂತೆ ಕಾಣುತ್ತಿದ್ದ. ಅವನಂತಹ ಏಕಾಂಗಿಯಾದ ಮನುಷ್ಯ ಜಗತ್ತಿನಲ್ಲಿ ಎಲ್ಲೂ ಇಲ್ಲವೆಂದು ಅನ್ನಿಸುತ್ತಿತ್ತು.

ನವೀನನು ಬಂದು ವಿಪ್ರದಾಸನಿಗೆ ಪ್ರಣಾಮಮಾಡಿ "ನಿಮ್ಮ ವಿಶ್ರಾಂತಿಗೆ ವಿಘ್ನಮಾಡುವುದಕ್ಕೆ ಇಷ್ಟವಿಲ್ಲ. ಒಂದೇ ಒಂದು ಮಾತು ಹೇಳಿ ಹೋಗುತ್ತೇನೆ. ಈಗ ಸಮಯ ಒದಗಿದೆ. ಈ ಸ ಅತ್ತಿಗೆ ಮನೆಗೆ ವಾಪಸು ಬಂದರೆ ಒಳ್ಳೆಯದು ಎಂದು ನಾವೆಲ್ಲ ಅಂದುಕೊಂಡಿದ್ದೇವೆ." ಎಂದ.

ವಿಪ್ರದಾಸನು ಯಾವ ಉತ್ತರವನ್ನೂ ಕೊಡಲಿಲ್ಲ. ಸುಮ್ಮನೆ ಸ್ಥಿರವಾಗಿ ಕೂತಿದ್ದ. ಸ್ವಲ್ಪ ಹೊತ್ತಾದ ಮೇಲೆ ನವೀನನು "ತಮ್ಮ ಅಪ್ಪಣೆ ತೆಗೆದುಕೊಂಡು ಆಕೆಯನ್ನು ಕರೆದುಕೊಂಡು ಹೋಗುವುದಕ್ಕೆ ಏರ್ಪಾಡು ಮಾಡುತ್ತೇನೆ." ಎಂದ.

ಈ ಮಧ್ಯೆ ಕುಮು ಮೆಲ್ಲ ಮೆಲ್ಲಗೆ ಅಣ್ಣನ ಕಾಲಬಳಿ ಬಂದು ಕೂತಳು. ವಿಪ್ರದಾಸ

ಅವನ ಮುಖದ ಮೇಲೆ ದೃಷ್ಟಿಯಿಟ್ಟು "ನೀನು ಹೋಗಲು ಸಮಯ ಬಂದಿದೆ ಎಂದು ಮನಸ್ಸಿನಲ್ಲಿ ಅನ್ನಿಸಿದರೆ ಹೋಗು, ಕುಮು." ಎಂದ.

"ಇಲ್ಲಣ್ಣ. . ನಾನು ಹೋಗುವುದಿಲ್ಲ" ಎಂದು ಹೇಳುತ್ತಾ ಕುಮು ಅವನ ಕಾಲುಗಳ ಮೇಲೆ ಜೋರಲಾಗಿ ಬಿದ್ದಳು.

ಕೋಣೆ ಸ್ತಬ್ಧವಾಗಿತ್ತು. ಕೇವಲ ಕಿಟಿಕಿಯ ಬಾಗಿಲೊಂದು ಗಾಳಿ ಬೀಸಿದಾಗ ಸಡಿಲವಾಗಿ ಅಲ್ಲಾಡುತ್ತಾ ಆಗಾಗ ಶಬ್ದಮಾಡುತ್ತಿತ್ತು. ಹೊರಗೆ ತೋಟದಲ್ಲಿ ಮರಗಿಡಗಳ ಎಲೆಗಳು ಮರ್ಮರ ಶಬ್ದ ಮಾಡುತ್ತಿದ್ದುವು.

ಕುಮು ಸ್ವಲ್ಪ ಹೊತ್ತಾದ ಮೇಲೆ ಹಾಸುಗೆಯ ಮೇಲಿಂದ ಎದ್ದು ನವೀನನಿಗೆ "ನಡೆಯಿರಿ, ಇನ್ನು ತಡಮಾಡ ಬೇಡಿ." ಎಂದು ಹೇಳಿ ಅಣ್ಣನಿಗೆ "ಅಣ್ಣ, ನೀನು ಮಲಗು" ಎಂದಳು.

ಮೋತಿಯಮ್ಮನು ಮನೆಗೆ ಹಿಂದಿರುಗಿ ಬಂದು "ಇಷ್ಟು ದೂರ ಹೋಗುವುದು ಚೆನ್ನಾಗಿರುವುದಿಲ್ಲ" ಎಂದಳು.

"ಅಂದರೇನು ? ಕಣ್ಣಿನ ನೋಟದಿಂದಲೇ ಚೆನ್ನಾಗಿ ತಿವಿಯ ಬಹುದು, ಆದರೆ ಕಣ್ಣು ಮಾತ್ರ ಇಂಪಾಗಿ ಮಾಡಿಕೊಳ್ಳಕೂಡದು. "

"ಅಲ್ಲಾಂದ್ರೆ....ಅಲ್ಲ....ಇದು ಅವರುಗಳ ದಿಮಾಕು....ಪ್ರಪಂಚದಲ್ಲಿ ಅವರಿಗೆ ಸಮಾನರು ಯಾರೂ ಇಲ್ಲ....ಅವರು ಎಲ್ಲರಿಗಿಂತಲೂ ಮೇಲೆ....! "

"ಇಲ್ಲಿ ನೋಡು, ಇಷ್ಟು ದೊಡ್ಡ ಪ್ರತಿಷ್ಠೆ ಎಲ್ಲರಿಗೂ ಸರಿಹೋಗುವುದಿಲ್ಲ. ಆದರೆ ಇವರುಗಳ ವಿಷಯವೇ ಪ್ರತ್ಯೇಕ."

"ಆ ಹಾ ಹಾ....ಪ್ರತ್ಯೇಕ....ಹಾಗಂತ ಹೇಳಿ, ಬಂಧು ಬಳಗಗಳನ್ನೆಲ್ಲಾ ಬಿಟ್ಟು ಬಿಡಲೇನು ಆಗಾದರೆ ? "

"ಬಂಧು ಬಳಗಗಳು ಅಂತ ಅಂದ ಮಾತ್ರಕ್ಕೇ ಬಂಧು ಬಳಗಗಳಾಗಿ ಬಿಡುವುದಿಲ್ಲ. ಅವರುಗಳು ನಮ್ಮ ಜನಗಳಿಂದ ಸಂಪೂರ್ಣವಾಗಿ ಪ್ರತ್ಯೇಕವಾದ ಶ್ರೇಣಿಯ ಮನುಷ್ಯರು. ಸಂಬಂಧ ಬೆಳಸಿಕೊಂಡು ಅವರ ಜೊತೆಯಲ್ಲಿ ವ್ಯವಹಾರ ಮಾಡಲು ನನಗೆ ಸಂಕೋಚವಾಗುತ್ತೆ,"

"ಯಾರು ಎಷ್ಟೇ ದೊಡ್ಡವರಾಗಿದ್ದರೆ ತಾನೇ ಏನು, ಆಗಲೂ ನೆಂಟಸ್ತನದ ಜವಾಬು ದಾರಿ ಇದ್ದೇ ಇರುತ್ತದೆ....ತಿಳಿದುಕೊಳ್ಳಿ."

ಈ ವಾದ ಸರಣಿಯಲ್ಲಿ ಮೋತಿಯಮ್ಮನಿಗೆ ಕುಮುವಿನ ಮೇಲೆ ಸ್ವಲ್ಪ ಈರ್ಷ್ಯೆಯೂ ಇದೆ ಎಂದು ನವೀನ ತಿಳಿದುಕೊಂಡ. ಅಷ್ಟೇ ಅಲ್ಲದೆ ಇದೂ ನಿಜ. ಬಂಧುತ್ವದ ಬಂಧನದ ಬೆಲೆ ಹೆಂಗಸರ ದೃಷ್ಟಿಯಲ್ಲಿ ಬಹಳ ದೊಡ್ಡದೇ. ಅದರಿಂದಲೇ ನವೀನನು ಈ ವಿಷಯವಾಗಿ ವ್ಯರ್ಥವಾಗಿ ಚರ್ಚೆ ಬೆಳೆಸದೆ "ಇನ್ನೂ ಕೆಲವು ದಿನಗಳು ಕಳೆಯಲಿ ಬಿಡು. ಅಣ್ಣನ ಆಕಾಂಕ್ಷೆಯೂ ಸ್ವಲ್ಪ ಹೆಚ್ಚಾಗಲಿ. ಅದರಿಂದ ಯಾರಿಗೇನೂ ನಷ್ಟವಿಲ್ಲ." ಎಂದನು.

# ಐವತ್ತಮೂರನೆಯ ಅಧ್ಯಾಯ

ಮಧುಸೂದನನ ಕುಟುಂಬದಲ್ಲಿ ತನ್ನ ಸ್ಥಾನ ತಳವೂರಿ ನಿಂತಿದೆ ಎಂದು ಶ್ಯಾಮಾ ಸುಂದ
ತಿಳಿದುಕೊಳ್ಳಲು ಆಸ್ಪದವಿತ್ತು. ಆದರೆ ಅದನ್ನೇ ಅನುಭವ ಮಾಡಲು ಸಾಧ್ಯವಾಗಲಿಲ್ಲ. ಮನೆ
ಆಳು ಕಾಳುಗಳ ಮೇಲೆ ತಾನು ಯಜಮಾನಿಕೆ ಮಾಡುವ ಹಕ್ಕು ಉಂಟಾಗಿದೆಯೆಂದು ಮೊದ
ಮನಸ್ಸಿನಲ್ಲಿ ಅಂದುಕೊಂಡಿದ್ದಳು. ಆದರೆ ಅಡಿ ಅಡಿಗೂ ಅವರುಗಳು ತನ್ನನ್ನ ಯಜಮಾನಿ
ಸ್ಥಳದಲ್ಲಿ ಕೂಡಿಸಲು ಒಪ್ಪಿಲ್ಲವೆಂದು ಅವಳಿಗೆ ತಿಳಿಯಬರುತ್ತಿತ್ತು. ಅವಳನ್ನ ಬಹಿರಂಗವಾಗಿಯೆ
ನಿರ್ಲಕ್ಷ್ಯ ಮಾಡುವಷ್ಟು ಧೈರ್ಯ ಬಂದರೆ ಬದುಕಿದ ಹಾಗೆ ಎಂದು ಅವರ ನಡೆವಳಿಕೆ ತೋ
ತ್ತಿತ್ತು. ಇದರಿಂದ ಶ್ಯಾಮಾ ಅವರನ್ನು ಎಷ್ಟೋ ಸಲ ಅನಾವಶ್ಯಕವಾಗಿ ಗದರಿ, ಅಕಾರಣವಾ
ಅವರಲ್ಲಿ ತಪ್ಪು ಹುಡುಕಿ ಬೈಯುತ್ತಿದ್ದಳು. ಮಾತೆತ್ತಿದರೆ ರೇಗಿ ಬೀಳುವುದು. ಬೈಯುವ
ಗಂತೂ ಅಪ್ಪ, ಅಮ್ಮನ ಹೆಸರು ಹೇಳಿಯೇ ಬೈಯುವುದು. ಕೆಲವು ದಿನಗಳ ಹಿಂದೆ ಶ್ಯಾಮ
ಈ ಮನೆಯಲ್ಲಿ ಲೆಕ್ಕಕ್ಕೆ ಬಾರದವಳಾಗಿದ್ದಳು. ಆ ಸ್ಮೃತಿಯನ್ನೇ ಸಂಸಾರದಿಂದ ಅಳಿಸಿಹಾ
ಬಿಡುವ ಉದ್ದೇಶದಿಂದ ಚೆನ್ನಾಗಿ ತಿಕ್ಕಿ ತೊಳೆಯಲು ಹೋಗಿ ಅದು ಸಾಧ್ಯವಿಲ್ಲವೆಂ
ತಿಳಿದಳು. ಮನೆಯ ಹಳೆಯ ಚಾಕರನೊಬ್ಬನು ಶ್ಯಾಮಾಳ ಹಿಂಸೆ ತಡೆಯಲಾರ
ಕೆಲಸಕ್ಕೆ ರಾಜೀನಾಮೆ ಕೊಟ್ಟುಬಿಟ್ಟನು. ಆ ವಿಷಯದಲ್ಲಿ ಶ್ಯಾಮಾ ತಲೆ ತಗ್ಗಿಸ ಬೇಕಾಯಿತ
ಅದಕ್ಕೆ ಕಾರಣವೇನೆಂದರೆ—ತನ್ನ ಸಂಪತ್ತಿನ ಅಭಿವೃದ್ಧಿಯ ಸಂಬಂಧವಾಗಿ ಮಧುಸ
ದನನಿಗೆ ಎಷ್ಟೋ ಕುರುಡು ನಂಬಿಕೆಗಳಿದ್ದುವು. ಅವನ ಮನೆಯಲ್ಲಿದ್ದ ಆಳುಗಳಲ್ಲಿ ಅವ
ಐಶ್ವರ್ಯದ ಉನ್ನತಿಯ ಕಾಲದಿಂದ ಇದ್ದವರಲ್ಲಿ ಯಾರಾದರೂ ಸತ್ತರೂ, ಕೆಲಸ ಬಿಟ
ಹೋದರೂ ಅದೊಂದು ದುರ್ಲಕ್ಷಣವೆಂದು ನಂಬಿದ್ದ. ಇದೇ ಬಗೆಯ ಅಂಧ ಶ್ರದ್ಧೆಯಿಂದ
ಅಂದಿನ ಕಾಲದ ಹಳೆಯ, ಮಸಿಯ ಕಲೆಗಳಿಂದ ಕೊಳಕು ಕೊಳಕಾಗಿದ್ದ ಮೇಜೊಂದು, ಆಫೀ
ರೂಮಿನಲ್ಲಿ ಹೊಸ ನಮೂನೆಯ ಈಗಿನ ಕಾಲದ ಮೇಜು ಡೆಸ್ಕುಗಳ ಮಧ್ಯೆ, ದೃಷ್ಟಿ ಪರಿಹಾರವಾ
ಗುವಂತೆ ಇಡಲ್ಪಟ್ಟಿತ್ತು. ಅದರ ಮೇಲೆ ಅಂದಿನ ಹಳೆಯ ಕಾಲದ ಅಗ್ಗದ ದೌತಿ ಮತ್ತು ಮ
ಲೇಖನಿ. ಅದೇ ಲೇಖನಿಯಿಂದಲೇ ಅವನ ವ್ಯಾಪಾರದ ಹೊಸ ಘಟ್ಟದಲ್ಲಿ ಮೊದಲು ಸಲ ದೊ
ದೊಂದು ದಸ್ತಾವೇಜಿಗೆ ರುಜುಹಾಕಿದ್ದ....ಇಂತಹ ಸಮಯದಲ್ಲಿ ಅದೇ ಹಿಂದಿನ ಕಾಲದ ಆಳ
ದಧಿ ಎಂಬವನು ರಾಜೀನಾಮೆ ಕೊಟ್ಟಾಗ ಮಧುಸೂದನ ಅದನ್ನುಒಪ್ಪಿಕೊಳ್ಳಲಿಲ್ಲ. ಅದಕ್ಕೆ ಬದ
ಅವನಿಗೆ ಆ ಆಳಿನ ಭಾಗ್ಯ, ಬಕ್ಷೀಸು ಸಿಕ್ಕಿತು. ಶ್ಯಾಮಾಸುಂದರಿಯ ಸ್ವಾಭಿಮಾನಕ್ಕೆ ಇದೊಂ
ಪೆಟ್ಟು. ಅದನ್ನು ಪ್ರದರ್ಶಿಸುವುದಕ್ಕೆ ಅವಳಿಗೆ ಸರಿಯಾದ ಧೈರ್ಯ ಬರಲಿಲ್ಲ. ದಧಿಯ ನ
ಮುಖವನ್ನು ಅವಳು ನೋಡ ಬೇಕಾಯಿತು. ಮಧುಸೂದನನನ್ನುಅವಳು ಸಂಪೂರ್ಣವಾಗಿ, ಮ
ಪೂರ್ವಕವಾಗಿ ಪ್ರೀತಿಸುತ್ತಿದ್ದಳು. ಅದೇ ಅವಳಿಗೆ ಬಂದದ್ದು ಕಷ್ಟ. ಅದಕ್ಕಾಗಿ ಮಧುಸು
ನನ ನಡೆವಳಿಕೆಯ ಮೇಲೆ ಹೆಚ್ಚು ಬಲವಂತ ಮಾಡುವುದು ಅವಳಿಗೆ ಸಾಧ್ಯವಿರಲಿ
ತಮ್ಮಿಬ್ಬರ ಪ್ರಣಯ ಯಾವ ಎಲ್ಲೆಗೆ ಮುಟ್ಟಿ ಪರಸ್ಪರ ವೈಮನಸ್ಯಕ್ಕೆ ತಿರುಗಿಬಿಡುತ್ತದೆ
ಎಂದು ಹೆದರಿಕೊಂಡೇ ನಡೆಯುತ್ತಿದ್ದಳು ಮಧುಸೂದನನಿಗೂ ಚೆನ್ನಾಗಿ ಗೊತ್ತು. ಶ್ಯಾಮ
ಸಂಬಂಧವಾಗಿ ಹೆಚ್ಚು ಸಮಯವನ್ನಾಗಲೀ, ಯೋಚನೆಯನ್ನಾಗಲಿ ವೆಚ್ಚಮಾಡುವ ಅ

ವಿಲ್ಲೆಂದು ಅವನ ಅಭಿಪ್ರಾಯ. ಅವಳ ಆದರ ಉಪಚಾರಗಳಿಗಾಗುವ ಖರ್ಚನ್ನು ಕಡಿಮೆ ಮಾಡಿದರೂ ಪ್ರತಿಭಟನೆಯುಂಟಾಗುವ ಸಂದೇಹ ಕಡಿಮೆಯಾಗಿತ್ತು. ಶ್ಯಾಮಾಳ ಮೇಲೆ ಅವನಿಗೆ ಸ್ಥೂಲವಾದ ಒಂದು ಬಗೆಯ ಮೋಹವಿತ್ತು. ಆ ಮೋಹದಲ್ಲಿ ಹದಿನಾರಾಣೆಯಷ್ಟನ್ನೂ ಉಪಭೋಗ ಮಾಡಿಕೊಂಡು ಕೂಡ ಅವಳನ್ನು ಅನಾಯಾಸವಾಗಿ ಅನುಭವಿಸಿಕೊಂಡು ಹೋಗ ಬಹುದೆಂದು ಉತ್ಸಾಹವಾಗಿದ್ದ. ಇದಕ್ಕೆ ವ್ಯತಿಕ್ರಮವಾದರೆ ಬಂಧನ ಕಿತ್ತು ಹೋಗುತ್ತದೆ. ತನ್ನ ಕರ್ಮಕ್ಕಿಂತಲೂ ಮಧುಸೂದನನಿಗೆ ಬೇರೆ ದೊಡ್ಡದಿಲ್ಲ. ಆ ಕರ್ಮಕ್ಕೋಸ್ಕರವೇ ಅತ್ಯ ವಶ್ಯಕವಾಗಿ ಬೇಕಾಗಿದ್ದುದು ಸ್ಥಿರವಾದ ಆತ್ಮ ಕರ್ತೃತ್ವ. ಅದರ ಎಲ್ಲೆಯೊಳಗೆ ಶ್ಯಾಮಾಳ ಯಜಮಾನಿಕೆ ತಲೆಯಿಡಲು ಸಾಹಸಮಾಡುತ್ತಿರಲಿಲ್ಲ. ಒಂದೆರಡು ಹೆಜ್ಜೆ ಮುಂದಿಡಲು ಹೋಗಿ ಎಡವಿ, ಮುಗ್ಗರಿಸಿದ್ದಾಗಿದೆ. ಶ್ಯಾಮಾ ಆದ್ದರಿಂದಲೆ ತನ್ನನ್ನೇ ಅರ್ಪಿಸಿಕೊಳ್ಳುತ್ತಿದ್ದಳೇ ವಿನಹ ಹಕ್ಕನ್ನು ಚಲಾಯಿಸಲು ಹಿಂದೆಗೆಯುತ್ತಿದ್ದಳು. ದುಡ್ಡು, ಕಾಸು, ಸಾಮಾನು, ಸರಂಜಾಮು ಮುಂತಾದುವುಗಳಿಂದ ಶ್ಯಾಮಾ ಚಿರಕಾಲದಿಂದ ವಂಚಿತಳಾಗಿದ್ದಳು. ಅವುಗಳ ಮೇಲೆ ಅವಳ ಆಸೆಯು ಅಷ್ಟಿಷ್ಟಲ್ಲ. ಅದರಲ್ಲಿಯೂ ಅವಳು ಅಳತೆಗೆ ತಕ್ಕಂತೆಯೇ ನೋಡಿಕೊಂಡು ಹೋಗ ಬೇಕಾಗಿತ್ತು. ಇಷ್ಟು ದೊಡ್ಡ ಧನಿಕನ ಹತ್ತಿರ ಸಹಜವಾಗಿ ಏನನ್ನು ನಿರೀಕ್ಷಿಸಬಹುದಾಗಿತ್ತೋ ಅದೂ ಅವಳ ಪಾಲಿಗೆ ದುರಾಸೆಯಾಗಿತ್ತು.

ಮಧುಸೂದನನೇ ಯಾವಾಗಲಾದರೂ ಖುಷಿ ಬಂದಾಗ ಅವಳಿಗೆ ಏನಾದರೂ ಬಟ್ಟೆಬರೆ, ಒಡವೆ ವಸ್ತು ತಂದುಕೊಡುತ್ತಿದ್ದ. ಅಷ್ಟರಿಂದಲೇ ಸಂಗ್ರಹ ಮಾಡಬೇಕೆಂದಿದ್ದ ಅವಳ ಹಸಿವು ನೀಗುತ್ತಿರಲಿಲ್ಲ. ಸಣ್ಣ ಸಣ್ಣ ಅಂದವಾದ, ಆಸೆಯ ಪದಾರ್ಥಗಳನ್ನು ತೆಗೆದಿಟ್ಟುಕೊಳ್ಳಬೇಕೆಂದು ಅವಳ ಕೈ ಯಾವಾಗಲೂ ಚಪಲದಿಂದಿರುತ್ತಿತ್ತು. ಅದರಲ್ಲಿಯೂ ಅವಳಿಗೆ ಅಡ್ಡಿ. ಇಂತಹ ಸಣ್ಣದೊಂದು ಸಾಮಾನಿನ ವಿಷಯದಲ್ಲಿಯೇ ಅವಳಿಗೆ ಗಡೀಪಾರಾಗುವುದರಲ್ಲಿತ್ತು. ಆದರೆ ಶ್ಯಾಮಾಳ ಸಂಗ ಮತ್ತು ಸೇವೆ ಮಧುಸೂದನನಿಗೆ ಅಭ್ಯಾಸವಾಗಿ ಹೋಗಿತ್ತು. ಎಲೆ, ಅಡಿಕೆ ಮತ್ತು ತಂಬಾಕಿನಂತೆ ಈ ಅಭ್ಯಾಸವೂ ಬಹಳ ಅಗ್ಗ, ಆದರೆ ಪ್ರಬಲ. ಅವುಗಳಲ್ಲಿ ಏನಾದರೂ ಕೊರತೆಯಾದರೆ ಮಧುಸೂದನನ ಕೆಲಸಕ್ಕೂ ಕೊರತೆ ಬರುತ್ತಿತ್ತು. ಆ ಭಯದಿಂದಲೇ ಅವಳ ಗಡೀಪಾರಿನ ಶಿಕ್ಷೆ ಆ ಸಲ ರದ್ದಾಗಿ ಹೋಗಿತ್ತು. ಆದರೆ ಶಿಕ್ಷೆಯ ಭಯ ಮಾತ್ರ ತಲೆಯ ಮೇಲು ಗಡೆ ತೂಗಾಡುತ್ತಿತ್ತು. ತನ್ನ ಇಂತಹ ದುರ್ಬಲವಾದ ಅಧಿಕಾರದ ನಡುವೆ ಶ್ಯಾಮಾಳ ಮನಸ್ಸಿ ನಲ್ಲಿ, ಕುಮು ಪುನಃ ಯಾವ ಸಮಯದಲ್ಲಿ ವಾಪಸು ಬಂದು ತನ್ನ ಸಿಂಹಾಸನವನ್ನಾಕ್ರಮಿಸುವಳೋ ಎಂಬ ಭಯವೂ ಇತ್ತು. ಈ ಅಸೂಯೆಯ ತಾಪದಿಂದ ಅವಳ ಮನಸ್ಸಿಗೆ ಸ್ವಲ್ಪವೂ ಶಾಂತಿಯಿಲ್ಲ. ಕುಮುವಿನೊಡನೆ ಸ್ಪರ್ಧೆ ಹೂಡುವುದು ತನ್ನಿಂದ ಸಾಧ್ಯವಿಲ್ಲವೆಂದು ಅವಳಿಗೆ ಗೊತ್ತು. ಅವರಿ ಬ್ಬರೂ ಒಂದೇ ಕ್ಷೇತ್ರದಲ್ಲಿ ನಿಲ್ಲಲಾರರು. ಕುಮು ಮಧುಸೂದನನ ಅಧಿಕಾರಕ್ಕೆ ಅತೀತಳಾದ ವಳು. ಆದ್ದರಿಂದಲೇ ಅವಳ ಶಕ್ತಿ ಹೆಚ್ಚು. ಮತ್ತು ಶ್ಯಾಮಾ ಮಾತ್ರ ಮಧುಸೂದನನ ಅಂಕೆ ಯಲ್ಲಿ ಎಷ್ಟು ಮಾತ್ರ ಇದ್ದಳೆಂದರೆ ಅವಳಿಂದ ಪ್ರಯೋಜನವಿತ್ತು, ಆದರೆ ಅವಳಿಗೆ ಬೆಲೆಯಿರಲಿಲ್ಲ. ಇವನ್ನು ಕುರಿತು ಶ್ಯಾಮಾ ಎಷ್ಟೋಸಲ ಚಿಂತಿಸಿ ಅತ್ತಿದ್ದಳು. ಎಷ್ಟೋಸಲ ತಾನು ಸತ್ತುಹೋದರೆ ಒಳ್ಳೆಯದೆಂದು ಕೊಂಡಿದ್ದಳು. ಇಷ್ಟು ಅಗ್ಗವೇಕಾದೆ ಎಂದು ಹಣೆಹಣೆ ಚಚ್ಚಿಕೊಂಡಿದ್ದಳು. ಆ ಮೇಲೆ ತಾನು ಅಗ್ಗವಾದುದರಿಂದಲೇ ಈ ಸ್ಥಳ ಪಡೆದೆ. ಯಾರ ಬೆಲೆ ಹೆಚ್ಚೋ ಅವರಿಗೆ ಆದರವೂ

ಹೆಚ್ಚು. ಆದರೆ ಅಗ್ಗವಾದುದು ಅಗ್ಗವೆಂದೇ ಗೆಲ್ಲುವುದು, ಎಂದು ಕೊಳ್ಳುವಳು.

ಮಧುಸೂದನನು ಶ್ಯಾಮಾಳನ್ನು ಗ್ರಹಣ ಮಾಡದೆಇದ್ದ ಕಾಲದಲ್ಲಿ ಅವಳಿಗೆ ಇಷ್ಟು ಅಸಹನೀಯವಾದ ದುಃಖವಿರಲಿಲ್ಲ. ಅವಳು ತನ್ನ ಉಪವಾಸಿಯಾದ ಅದೃಷ್ಟವನ್ನು ಏನೋ ಒಂದು ವಿಧವಾಗಿ ಒಪ್ಪಿಕೊಂಡು ಬಿಟ್ಟಿದ್ದಳು. ನಡುನಡುವೆ ಸಿಗುತ್ತಿದ್ದ ಸಾಮಾನ್ಯ ಭಿಕ್ಷೆಯೇ ಪರಮಾನ್ನವೆಂದು ಪರಿಗಣಿಸಿದ್ದಳು. ಇಂದು ಅಧಿಕಾರ ಹೊಂದಿರುವುದಕ್ಕೂ ಹೊಂದದಿರುವುದಕ್ಕೂ ಸಾಮಂಜಸ್ಯವೇ ಕಾಣುತ್ತಿರಲಿಲ್ಲ. "ಕಳೆದು ಹೋದೀತು, ಕಳೆದು ಹೋದೀತು," ಎಂಬ ಭಯದಿಂದ ಮನಸ್ಸು ಕಳವಳವಾಗಿತ್ತು. ಭಾಗ್ಯದ ರೈಲುಕಂಬಿಯು ಎಷ್ಟು ಸಡಿಲವಾಗಿ ಹಾಕಲ್ಪಟ್ಟಿತ್ತೆಂದರೆ ಯಾವಾಗಲೋ ಎಲ್ಲಿ ಗಾಡಿ ಉರುಳಿ ಹೋಗುವುದೋ ಎಂಬ ಭಯವಿರುತ್ತಲೇ ಇತ್ತು. ಮೋತಿಯಮ್ಮನ ಜೊತೆಯಲ್ಲಿ ಮನಸ್ಸು ಬಿಚ್ಚಿ ದುಃಖ ತೋಡಿಕೊಂಡರೆ ಸಮಾಧಾನವಾಗುವುದೆಂದು ಹೇಳಲು ಪ್ರಯತ್ನಿಸಿದಾಗ ಅವಳು ಎಷ್ಟು ತಿರಸ್ಕಾರದಿಂದ ತಲೆ ಕೊಡವಿಕೊಂಡು ಹೊರಟು ಹೋದಳೋ! ಕೂಡಲೇ ಅವಳ ಮೇಲೆ ರೋಷವುಕ್ಕಿ ತಕ್ಕ ಶಿಕ್ಷೆ ಮಾಡೋಣವೇ ಎಂದು ಉತ್ಸುಕಳಾದಳು. ಸುಲಭವಾಗಿದ್ದರೆ ಮಾಡಿಬಿಡುತ್ತಿದ್ದಳು. ಆದರೆ ಸಾಧ್ಯವಿಲ್ಲ. ಅವಳಿಗೆ ಗೊತ್ತು. ಸಂಸಾರ ವ್ಯವಹಾರದಲ್ಲಿ ಮಧುಸೂದನನ ಬಳಿ ಮೋತಿಯಮ್ಮನಿಗೆ ಬೆಲೆಯಿದೆ. ಅಲ್ಲಿಂದ ಅವಳನ್ನು ಅಲ್ಲಾಡಿಸುವ ಹಾಗಿಲ್ಲ. ಅಂದಿನಿಂದ ಅವರಿಬ್ಬರಿಗೂ ಮಾತೇ ನಿಂತು ಹೋಗಿತ್ತು. ಸಾಧ್ಯವಿದ್ದಿದ್ದರೆ ಒಬ್ಬರಿಗೊಬ್ಬರು ಮುಖ ಕೂಡ ನೋಡುತ್ತಿರಲಿಲ್ಲ....ಈ ರೀತಿಯಾಗಿ ಈ ಮನೆಯಲ್ಲಿ ಶ್ಯಾಮಾಳ ಸ್ಥಾನವು ಮೊದಲಿಗಿಂತಲೂ ಇಕ್ಕಟ್ಟಾಗಿ ಹೋಗಿದೆ. ಎಲ್ಲಿಯೂ ಅವಳಿಗೆ ಸ್ವಲ್ಪವೂ ಸ್ವಾತಂತ್ರ್ಯವಿಲ್ಲ. ಸ್ವಚ್ಛಂದತೆಯಿಲ್ಲ.

ಇಂತಹ ಸಮಯದಲ್ಲಿ ಒಂದು ದಿನ ಸಾಯಂಕಾಲ ಮಲಗುವ ಮನೆಗೆ ಬಂದು ನೋಡಿದರೆ ಮೇಜಿನ ಮೇಲೆ ಗೋಡೆಗೆ ಹೊಸದಾಗಿ ತಗುಲಿ ಹಾಕಿದ್ದ ಕುಮುವಿನ ಪಠ ಕಣ್ಣಿಗೆ ಬಿತ್ತು. ತಲೆಯ ಮೇಲೆ ಬೀಳಲಿರುವ ಸಿಡಿಲಿನ ಮಿಂಚಿನ ಕಾವು ಅವಳ ಕಣ್ಣನ್ನು ಚುಚ್ಚಿತ್ತು. ಗಾಳಕ್ಕೆ ಸಿಕ್ಕಿ ಹಾಕಿಕೊಂಡ ಮೀನಿನಂತೆ ಅವಳು ಒದ್ದಾಡತೊಡಗಿದಳು ಎದೆ ನಡುಗುತ್ತಿತ್ತು. ಚಿತ್ರದ ಕಡೆಯಿಂದ ನೋಟವನ್ನು ಬಲವಂತವಾಗಿ ತಿರುಗಿಸಲು ಯತ್ನಿಸಿದಳು. ಸಾಧ್ಯವಾಗಲಿಲ್ಲ. ತದೇಕ ದೃಷ್ಟಿಯಿಂದ ನೋಡುತ್ತಿದ್ದಳು. ಮುಖ ಬಣ್ಣಗೆಟ್ಟಿತು. ಕಣ್ಣುಗಳೆರಡರಲ್ಲೂ ಏನೋ ದಾಹ. ಮುಷ್ಟಿ ಬಿಗಿಯಾಗಿ ಹಿಡಿದುಕೊಂಡಿದ್ದಳು. ಏನಾದರೊಂದನ್ನು ಒಡೆಯಬೇಕೆಂದು, ಹರಿದು ಹಾಕಬೇಕೆಂದು ಅನ್ನಿಸಿತು. ಆ ಕೋಣೆಯಲ್ಲೇ ಇದ್ದರೆ ಏನಾದರೊಂದನ್ನ ಹಾಳು ಮಾಡಬಹುದೆಂಬ ಭಯದಿಂದ ಹೊರಗೆ ಓಡಿಹೋದಳು. ತನ್ನ ಕೋಣೆಗೆ ಹೋಗಿ ಹಾಸುಗೆಯ ಮೇಲೆ ಜೋರಲಾಗಿ ಬಿದ್ದುಕೊಂಡು ದುಪ್ಪಟಿಯನ್ನು ಚೂರು ಚೂರಾಗಿ ಹರಿದು ಹಾಕಿದಳು. ರಾತ್ರಿಯಾಯಿತು. ಹೊರಗಣಿಂದಲೇ ಆಳು ಬಂದು ಮಹಾರಾಜರು ಮಲಗುವ ಮನೆಯಿಂದ ಬರಹೇಳಿ ಕಳುಹಿಸಿದ್ದಾರೆಂದು ಸಮಾಚಾರ ಕೊಟ್ಟನು. ತಾನು ಬರುವುದಿಲ್ಲೆಂದು ಹೇಳಲು ಶಕ್ತಿಯಿಲ್ಲ. ಬೇಗ ಬೇಗ ಎದ್ದು ಮುಖ ತೊಳೆದು ನಕ್ಕೀ ಕೆಲಸ ಮಾಡಿದ್ದೊಂದು ಢಾಕಾ ಸೀರೆಯನ್ನು ಉಟ್ಟು ಮೈಗೆ ಸ್ವಲ್ಪ ಗಂಧ ಸವರಿಕೊಂಡು ಮಲಗುವ ಮನೆಗೆ ಹೋದಳು. ಆ ಪಠ ತನ್ನ ಕಣ್ಣಿಗೆ ಬೀಳದೆ ಇರಲಿ ಸಧ್ಯ ಎಂದು ಅವಳ ಪ್ರಯತ್ನ. ಆದರೆ ಸರಿಯಾಗಿ ಅದೇ ಪಠದ ಎದುರಿಗೆ ದೀಪವಿತ್ತು. ಬೆಳಕೆಲ್ಲಾ ಯಾರದೋ ದೀಪ್ತ ದೃಷ್ಟಿಯಂತೆ ಆ ಪಠವನ್ನೇ ಬೆಳಗಿಸುತ್ತಿತ್ತು. ಆ ಕೋಣೆಯಲ್ಲಿದ್ದ

ಉಳಿದ ಎಲ್ಲಾ ಪದಾರ್ಥಗಳಿಗಿಂತಲೂ ಈ ಪಠವೇ ಹೆಚ್ಚಾಗಿ ದೃಷ್ಟಿಗೆ ಬೀಳುತ್ತಿತ್ತು. ಶ್ಯಾಮಾ ಎಂದಿನಂತೆ ವೀಳೆಯ ತಟ್ಟೆ ತೆಗೆದು ಮಧುಸೂದನನಿಗೆ ವೀಳೆಯವನ್ನು ಸಿದ್ಧಮಾಡಿಕೊಟ್ಟಳು. ಆಮೇಲೆ ಕಾಲ ಬಳಿ ಕುಳಿತು ಕಾಲೊತ್ತಲು ಆರಂಭಿಸಿದಳು. ಏನೋ ಒಂದು ಕಾರಣದಿಂದ ಮಧುಸೂದನ ಇಂದು ಖುಷಿಯಾಗಿದ್ದ. ವಿಲಾಯತಿಯವರ ಅಂಗಡಿಯೊಂದರಿಂದ ಒಂದು ಬೆಳ್ಳಿಯ ಫೋಟೋ ಫ್ರೇಮ್ ತಂದಿದ್ದ. ಗಂಭೀರ ಭಾವದಲ್ಲಿ "ಇದನ್ನು ತಗೋ" ಎಂದು ಶ್ಯಾಮಾಳಿಗೆ ಹೇಳಿದ. ಶ್ಯಾಮಾಳ ಮುಂದೆ ಪ್ರೇಮ ತೋರಿಸುವಾಗಲೂ ಮಧುಸೂದನ ಮಧುರ ರಸ ಹರಿಸುವುದರಲ್ಲಿ ಕಾರ್ಪಣ್ಯ ತೋರಿಸುತ್ತಿದ್ದ. ಅವನಿಗೆ ಗೊತ್ತು,...ಅಲ್ಪ ಸ್ವಲ್ಪ ಸಲಿಗೆ ಹೆಚ್ಚಾಗಿ ಕೊಟ್ಟರೆ ಸಾಕು-ಆಮೇಲೆ ಮರ್ಯಾದೆ ಉಳಿಸಿಕೊಳ್ಳುವುದೇ ಕಷ್ಟ. ಫ್ರೇಮನ್ನು ಖಾಕಿ ಕಾಗದದಲ್ಲಿ ಸುತ್ತಿತ್ತು. ನಿಧಾನವಾಗಿ ಕಾಗದದ ಹೊದಿಕೆಯನ್ನು ಬಿಚ್ಚಿ ಎಸೆದು "ಇದರಿಂದ ಏನು ಮಾಡುವುದು?" ಎಂದಳು.

ಮಧುಸೂದನ "ಗೊತ್ತಿಲ್ಲವೇ, ಇದರಲ್ಲಿ ಫೋಟೋಗ್ರಾಫ್ ಇಡುತ್ತಾರೆ." ಎಂದ.

ಶ್ಯಾಮಾಳ ಹೃದಯದೊಳಗೆ ಯಾರೋ ಕಮ್ಚಿಯಿಂದ ಹೊಡೆದಂತಾಯಿತು.

"ಯಾರ ಫೋಟೋಗ್ರಾಫನ್ನು ಇಡಬೇಕು?" ಎಂದಳು.

"ಯಾಕೆ. ನಿನ್ನದೇ, ಅವತ್ತು ನಿನ್ನ ಫೋಟೋ ತೆಗೆಸಲಿಲ್ಲವೇ?"

"ನನಗೆ ಅಂತಹ ಸೌಭಾಗ್ಯದಿಂದ ಕೆಲಸವಿಲ್ಲ." ಎಂದು ಹೇಳಿ ಫ್ರೇಮನ್ನು ನೆಲದ ಮೇಲೆ ರಭಸವಾಗಿ ಬಿಸಾಟಳು.

ಮಧುಸೂದನ ಆಶ್ಚರ್ಯದಿಂದ "ಇದರ ಅರ್ಥವೇನು?" ಎಂದ.

"ಇದರ ಅರ್ಥ ಏನೂ ಇಲ್ಲ." ಎಂದು ಹೇಳಿ ಹಾಸುಗೆಯಿಂದ ನೆಲದ ಮೇಲೆ ಉರುಳಿ ತಲೆ ಕುಟ್ಟಿಕೊಳ್ಳಲಾರಂಭಿಸಿದಳು. ಶ್ಯಾಮಾಳಿಗೆ ಕಡಿಮೆ ಬೆಲೆಯ ಪದಾರ್ಥ ರುಚಿಸಲಿಲ್ಲ. ಏನೋ ಬೆಲೆಯಾದ ಒಡವೆ ಸಿಗುತ್ತದೆಂದು ಆಸೆಯಾಗಿದ್ದಳೇನೊ? ಹೀಗೆಂದು ಮಧುಸೂದನ ಯೋಚಿಸಿದ. ದಿನವೆಲ್ಲಾ ಆಫೀಸಿನ ಕೆಲಸಮಾಡಿ ಮುಗಿಸಿ ಮನೆಗೆ ಬಂದರೆ ಈ ಉಪದ್ರವ ನೋಡಿ ಅವನಿಗೆ ಸ್ವಲ್ಪವೂ ಸಹಿಸಲಿಲ್ಲ....ಇದು ಬಹುಶಃ ಹಿಸ್ಟೀರಿಯಾ (ಬುದ್ಧಿ ವಿಕಾರ). ಹಿಸ್ಟೀರಿಯಾ ಕಂಡರೆ ಅವನಿಗೆ ವಿಪರೀತ ಹೇಸುಗೆ. ಜೋರಾಗಿ ಗದರಿಸುತ್ತಾ "ಏಳು ಮೇಲೆ. ಏಳು ಹೂಂ...,ಏಳೀ ಅಂದರೆ ಕೇಳಬೇಕು" ಎಂದ.

ಶ್ಯಾಮಾ ಎದ್ದು ವೇಗವಾಗಿ ಕೋಣೆಯಿಂದ ಹೊರಟು ಹೋದಳು. ಮಧುಸೂದನ ಅವಳ ಹಿಂದೆಯೇ ಗಟ್ಟಿಯಾಗಿ ಗದರಿದ "ಇದೆಲ್ಲಾ ನನ್ನ ಹತ್ತಿರ ನಡೆಯುವುದಿಲ್ಲ ಗೊತ್ತಾ?"

ಶ್ಯಾಮಾಳನ್ನು ಮಧುಸೂದನನು ಚನ್ನಾಗಿ ಬಲ್ಲ. 'ಸ್ವಲ್ಪ ಹೊತ್ತಿನೊಳಗಾಗಿಯೇ ಬರುತ್ತಾಳೆ, ಎಲ್ಲಿ ಹೋಗುತ್ತಾಳೆ! ಬಂದು ಕಾಲ ಮೇಲೆ ಬಿದ್ದು ಹೊರಳಾಡಿ 'ಮಾಫ್' ಮಾಡಿ ಅಂತ ಕೇಳಿಕೊಳ್ಳುತ್ತಾಳೆ. ಆಗ ಅವಳಿಗೆ ಸ್ವಲ್ಪ ಬುದ್ಧಿ ಕಲಿಸಬೇಕು' ಎಂದು ಖಂಡಿತವಾಗಿಯೂ ತಿಳಿದಿದ್ದ.

ಹತ್ತು ಘಂಟೆ ಹೊಡೆಯಿತು, ಶ್ಯಾಮಾ ಬರಲೇ ಇಲ್ಲ. ಮತ್ತೊಂದು ಸಲ ಶ್ಯಾಮಾಳ ಕೋಣೆಯ ಹೊರಗಡೆಯಿಂದ ಆಳಿನ ಧ್ವನಿ ಕೇಳಿಸಿತು "ಮಹಾರಾಜ್ ಬುಲಾಯಾ" (ಮಹಾರಾಜರು ಕೂಗುತ್ತಾರೆ).

ಶ್ಯಾಮಾ "ಮಹಾರಾಜರಿಗೆ ಹೇಳು. ನನಗೆ ಮೈ ಸ್ವಸ್ಥವಾಗಿಲ್ಲ" ಎಂದಳು.

ಮಧುಸೂದನನು "ಹಠಕ್ಕೇನೂ ಕಡಿಮೆಯಿಲ್ಲ, ಹುಕುಂ ಮಾಡಿದರೂ ಬರುವುದಿಲ್ಲ ಅಂತಾಳೆಯೇ? ಹಾಂ,..," ಅಂದುಕೊಂಡ.

ಇನ್ನೊಂದು ಸ್ವಲ್ಪ ಹೊತ್ತಾದ ಮೇಲೆ ತಾನೇ ಬರುತ್ತಾಳೆಂದು ನಿರ್ಧರ ಮಾಡಿಕೊಂಡಿದ್ದ. ಆಗಲೂ ಬರಲಿಲ್ಲ. ಹನ್ನೊಂದು ಹೊಡೆಯುವುದಕ್ಕೆ ಇನ್ನೂ ಹದಿನೈದು ನಿಮಿಷಗಳು ಬಾಕಿ ಇವೆ.

ಹಾಸುಗೆಯಿಂದ ಎದ್ದು ಮಧುಸೂದನನು ಬೇಗ ಬೇಗ ನಡೆದು ಶ್ಯಾಮಾಳ ಮಲಗುವ ಮನೆಯನ್ನು ಪ್ರವೇಶಿಸಿದ. ಕೊಠಡಿಯಲ್ಲಿ ದೀಪ ಇರಲಿಲ್ಲ. ಕತ್ತಲಲ್ಲಿಯೇ ಶ್ಯಾಮಾ ನೆಲದ ಮೇಲೆ ಬಿದ್ದುಕೊಂಡಿರುವುದು ಕಾಣಿಸಿತು. ಇದೆಲ್ಲಾ ಆಟ ತನ್ನಿಂದ ಆದರವನ್ನು ಕಸಿದುಕೊಳ್ಳುವುದಕ್ಕೋಸ್ಕರ ಎಂದು ಮಧುಸೂದನನಿಗೆ ಚೆನ್ನಾಗಿ ಗೊತ್ತು.

ಗರ್ಜಿಸುತ್ತಾ "ಎದ್ದು ಬಾ ಅಂತೇನೆ, ಬೇಗ ಎದ್ದು ಬಾ, ಹುಡುಗಾಟಿಕೆ ಮಾಡಬೇಡ" ಎಂದ.

ಶ್ಯಾಮಾ ಏನೂ ಹೇಳದೆ ಎದ್ದು ಹೊರಟಳು.

## ಐವತ್ತನಾಲ್ಕನೆಯ ಅಧ್ಯಾಯ

ಮರುದಿನ ಆಫೀಸಿಗೆ ಹೋಗುವ ಮುಂಚೆ ಊಟವಾದ ಮೇಲೆ ಸ್ವಲ್ಪ ಸುದಾರಿಸಿಕೊಂಡು ಹೋಗಲು ಮಲಗುವ ಮನೆಗೆ ಬಂದಾಗ ಕುಮುವಿನ ಫೋಟೋ ಮಧುಸೂದನನ ಕಣ್ಣಿಗೆ ಬೀಳಲಿಲ್ಲ. ಇತರ ದಿನಗಳಂತೆ ಇಂದು ಶ್ಯಾಮಾ ಎಲೆ, ಅಡಿಕೆ ತಟ್ಟೆಯನ್ನು ಹಿಡಿದು ಮಧುಸೂದನನ ಸೇವೆಗೆಂದು ಮುಂದಾಗಿಯೇ ಬರಲಿಲ್ಲ. ಅವಳಿಗೆ ಹೇಳಿ ಕಳುಹಿಸಬೇಕಾಯಿತು. ಸ್ವಲ್ಪ ಮುಖ ಗಂಟುಹಾಕಿಕೊಂಡೇ ಅವಳು ಬಂದುದನ್ನು ನೋಡಿ.

"ಮೇಜಿನ ಮೇಲೆ ಪಠ ಇತ್ತಲ್ಲಾ, ಏನಾಯಿತು?" ಎಂದ.

ಶ್ಯಾಮಾ ಅತ್ಯಂತ ವಿಸ್ಮಯವನ್ನು ನಟಿಸಿ "ಪಠ? ಯಾರ ಪಠ?" ಎಂದು ಕೇಳಿದಳು. ಅವಳ ನಟನೆ ಸ್ವಲ್ಪ ಮಿತಿ ಮೀರಿಯೇ ಆಗಿತ್ತು. ಸಾಮಾನ್ಯವಾಗಿ ಗಂಡಸರ ಬುದ್ಧಿಶಕ್ತಿಯ ವಿಚಾರದಲ್ಲಿ ಹೆಂಗಸರಿಗೆ ಅಷ್ಟೇನೂ ಗೌರವವಿರುವುದಿಲ್ಲ. ಆದ್ದರಿಂದಲೇ ಶ್ಯಾಮಾ ಹೀಗೆ ಮಾಡಲು ಸಾಧ್ಯವಾಯಿತು.

ಮಧುಸೂದನನು ಕೋಪದ ಧ್ವನಿಯಲ್ಲಿ "ಫೋಟೋ ನೋಡಲಿಲ್ಲವೆ?" ಎಂದ.

ಶ್ಯಾಮಾ ಏನೂ ತಿಳಿಯದವಳಂತೆ ಮುಖಮಾಡಿಕೊಂಡು "ಇಲ್ಲ, ನಾನು ನೋಡಲಿಲ್ಲವಲ್ಲ!" ಎಂದಳು.

ಮಧುಸೂದನನು ಗರ್ಜನೆ ಮಾಡುತ್ತಾ "ಸುಳ್ಳುಬೇರೆ ಹೇಳ್ತೀಯಾ!" ಎಂದ.

"ಸುಳ್ಳು ಯಾಕೆ ಹೇಳಲಿ. ಪಠತೆಗೆದುಕೊಂಡು ನಾನೇನು ಮಾಡಲಿ?"

"ಎಲ್ಲಿಟ್ಟಿದ್ದೀಯೋ ತಗೊಂಡು ಬಾ ಒಳ್ಳೆಯ ಮಾತಲ್ಲಿ. ಇಲ್ಲದೆ ಹೋದರೆ ಒಳ್ಳೆಯದಾಗುವುದಿಲ್ಲ."

"ಅಯ್ಯಮ್ಮಾ, ಇದೆಂಥ ಪ್ರಾಣ ಸಂಕಟ! ನಿಮ್ಮ ಪಠ ನಾನೆಲ್ಲಿಂದ ತರಲಿ?"

ಆಳನ್ನ ಬರಹೇಳಿ ಕೂಗು ಹಾಕಿದ. ಅವನು ಬಂದೊಡನೆ "ನವೀನ ಬಾಬುಗಳನ್ನು ಬ

ಹೇಳು." ಎಂದ. ನವೀನನು ಸ್ವಲ್ಪ ಹೊತ್ತಿಗೇನೇ ತಲೆ ಕೆರೆದುಕೊಳ್ಳುತ್ತಾ ಬಂದು ದೂರದಲ್ಲಿ ನಿಂತ.

"ಏನಣ್ಣಾ?"

"ಹೋಗಿ ನಿಮ್ಮ ಅತ್ತಿಗೆಯನ್ನು ಕರೆದುಕೊಂಡು ಬಾ."

ಶ್ಯಾಮಾ ಮುಖ ಸೊಟ್ಟಗೆ ಮಾಡಿಕೊಂಡು ಮರದ ಬೊಂಬೆಯಂತೆ ಸುಮ್ಮನೆ ನಿಂತಿದ್ದಳು. ನವೀನನು ಸ್ವಲ್ಪ ಸುಮ್ಮನಿದ್ದು ಮತ್ತೆ ತಲೆ ಕೆರೆದುಕೊಳ್ಳುತ್ತಾ "ಅಣ್ಣಾ ಅಲ್ಲಿಗೆ ನೀನೇ ಒಂದು ಸಲ ಹೋಗಿ ಬರುವುದು ಒಳ್ಳೆಯದಲ್ಲವೇ? ನೀನೇ ಹೋಗಿ ಬರಹೇಳಿದರೆ ಅತ್ತಿಗೆಗೆ ಬಹಳ ಸಂತೋಷವಾಗುತ್ತೆ" ಎಂದ.

ಮಧುಸೂದನ ಗಂಭೀರಭಾವದಲ್ಲಿ ಸ್ವಲ್ಪ ಹೊತ್ತು ಗುಡುಗುಡಿಯನ್ನ ಸೇದುತ್ತಿದ್ದು ಆ ಮೇಲೆ "ಒಳ್ಳೆಯದು, ನಾಳೆ ಭಾನುವಾರ. ನಾಳೆಯೇ ಹೋಗಿ ಬರೋಣ" ಎಂದ.

ನವೀನ ಮೋತಿಯಮ್ಮನ ಬಳಿ ಬಂದು "ಒಂದು ಕೆಲಸ ಮಾಡಿಬಿಟ್ಟೆ" ಎಂದ.

"ನನ್ನ ಸಲಹೆ ಕೇಳದೇನೇ?"

"ನಿನ್ನ ಸಲಹೆ ಕೇಳುವುದಕ್ಕೆ ಹೊತ್ತಿರಲಿಲ್ಲ."

"ಹಾಗಾದರೆ ಈಗಲೇ ಗೊತ್ತಾಗುತ್ತೆ....ಪಶ್ಚಾತ್ತಾಪ ಪಡಬೇಕಾಗುತ್ತೆ."

"ಸಾಧ್ಯ. ಜಾತಕದಲ್ಲಿ ನನ್ನ ಬುದ್ಧಿಸ್ಥಾನದಲ್ಲಿ ಬೇರೆ ಯಾವ ಗ್ರಹವೂ ಇಲ್ಲ. ಕೇವಲ. ಹೆಂಡತಿ....ಇರುವುದು. ಇದಕ್ಕಾಗಿಯೇ ಯಾವಾಗಲೂ ನಿನ್ನನ್ನ ಕೈಯಹತ್ತಿರವೇ ಇಟ್ಟು ಕೊಂಡು ಮುಂದಕ್ಕೆ ಹೋಗುತ್ತಾ ಇದ್ದೇನೆ. ನಡೆದದ್ದು ಇಷ್ಟೆ. ಅಣ್ಣ ಇವತ್ತು ಅತ್ತಿಗೆಯನ್ನ ಕರೆದುಕೊಂಡು ಬರಬೇಕೆಂದು ಹುಕುಮ್ ಮಾಡಿದರು. ನಾನು ಸುಮ್ಮನಿರದೆ ಥಟ್ಟಂತ "ನೀನೇ ಹೋಗಿ ಬಂದರೆ ಒಳ್ಳೆಯದಲ್ಲವೇ, ಅಂತ ಅಂದು ಬಿಟ್ಟೆ. ಅಣ್ಣನ ಮನಸ್ಸಿನಲ್ಲಿ ಏನಿತ್ತೋ ಏನೋ "ಹೂಂ" ಅಂತ ಒಪ್ಪಿಕೊಂಡುಬಿಟ್ಟರು. ಆಮೇಲೆ ಇದರ ಫಲ ಏನಾಗುತ್ತೋ ಅಂತ ಯೋಚನೆ ಗಿಟ್ಟುಕೊಂಡಿದೆ."

"ಒಳ್ಳೆಯದಾಗುವುದಿಲ್ಲ. ವಿಪ್ರದಾಸ ಬಾಬುವಿನ ಮನೋಭಾವ ಇದ್ದ ರೀತಿ ನೋಡಿದರೆ, ಏನೋ ಹೇಳಬೇಕೆಂದು ಇನ್ನೇನೋ ಹೇಳಿ ಬಿಡುತ್ತಾರೆ. ಕಡೆಗೆ ಕುರುಕ್ಷೇತ್ರದ ಯುದ್ಧವೇ ಆಗಿ ಹೋಗುತ್ತದೆ. ಇಂತಹ ಕೆಲಸ ಯಾಕೆ ಮಾಡಿದಿರಿ?"

"ಮೊದಲನೆ ಕಾರಣ, ಬುದ್ಧಿಯ ಕಣಜ ಅದೇ ಸಮಯದಲ್ಲಿ ಖಾಲಿಯಾಗಿತ್ತು. ನೀನೋ ಇನ್ನೆಲ್ಲೋ ಹೋಗಿ ಇದ್ದುಬಿಟ್ಟೆ. ಎರಡನೆಯದು, ಅಂದು ಅತ್ತಿಗೆ ನಾನು ಬರುವುದಿಲ್ಲ ಎಂದು ಹೇಳಿದಾಗ ಅದರ ಒಳಗಡೆಯ ಅರ್ಥವನ್ನು ತಿಳಿದುಕೊಂಡಿದ್ದೆ. ಏನು ಗೊತ್ತೇ? ಆಕೆಯ ಅಣ್ಣ ಖಾಯಿಲೆ ಮೈಯಲ್ಲೇ ಕಲಿಕತ್ತೆಗೆ ಬಂದಿದ್ದ, ಅಷ್ಟಾದರೂ ಒಂದು ದಿನ ಕೂಡ ಅವರನ್ನು ನೋಡಿ ಕೊಂಡು ಬರೋಣ ಅಂತ ನಮ್ಮ ಮಹಾರಾಜರಿಗೆ ಅನ್ನಿಸಲಿಲ್ಲ.,..ಈ ಅಪಚಾರವೇ ಆಕೆಯ ಮನಸ್ಸಿನಲ್ಲಿ ಎಲ್ಲಕ್ಕಿಂತಲೂ ದೊಡ್ಡದಾಗಿ ನೋಯಿಸಿರುವುದು."

ಈ ಮಾತು ಕೇಳಿ ಮೋತಿಯಮ್ಮನು ಸ್ವಲ್ಪ ಚಕಿತಳಾದಳು. ಈ ವಿಷಯ ಅವಳಿಗೇ ಏಕೆ ಮೊದಲು ಹೊಳೆಯಲಿಲ್ಲ ಎಂದು ಆಶ್ಚರ್ಯವಾಯಿತು. ನಿಜವಾಗಿ ಅವಳಿಗೆ ತಿಳಿಯದೆಯೇ ನಾವನ ಮನೆಯ ಮಾಹಾತ್ಮ್ಯದ ವಿಷಯದಲ್ಲಿ ಅವಳಿಗೆ ಒಂದು ವಿಧವಾದ ಅಹಂಕಾರವಿತ್ತು.

ಇತರ ಸಾಧಾರಣ ಜನಗಳಂತೆ ಮಹಾರಾಜ ಮಧುಸೂದನನಿಗೂ ಬಂಧುತ್ವದ ಜವಾಬುದಾರಿ ಇದೆ ಎನ್ನುವುದು ಅವಳ ಮನಸ್ಸಿಗೇಕೆ ಹೊಳೆಯಲಿಲ್ಲ ಅನ್ನಿಸಿತು.

ಅಂದಿನ ಚರ್ಚೆಯ ನೆನಪಿನಲ್ಲಿಯೇ ನವೀನನು ಸ್ವಲ್ಪ ಹೆಚ್ಚು ಟಿಪ್ಪಣಿ ಕೊಡುತ್ತಾ "ನನ್ನ ಸ್ವಂತ ಬುದ್ಧಿಯಿಂದ ಈ ಮಾತು ಬಹುಶಃ ನನ್ನ ಮನಸ್ಸಿಗೆ ಹೊಳೆಯುತ್ತಿರಲಿಲ್ಲ. ನೀನೇ ಅವತ್ತು ಹೇಳಿದ್ದೆಯಲ್ಲ ಆ ಪ್ರಸಂಗದ ಜ್ಞಾಪಕದಿಂದ ಹೊಳೆಯಿತು."

"ಯಾವ ಪ್ರಸಂಗ?"

"ಅದೇ ಅವತ್ತು ಹೇಳಿದ್ದೆಯಲ್ಲ, ಬಂಧುತ್ವದ ಹೊಣೆಗಾರಿಕೆ ಆತ್ಮಮರ್ಯಾದೆಯ ಹೊಣೆಗಾರಿಕೆಗಿಂತಲೂ ದೊಡ್ಡದೆಂದು....? ಅದೇ ಯೋಚನೆ ಮಾಡುತ್ತ ಈ ಮಹಾರಾಜನಂತಹ ದೊಡ್ಡ ಮನುಷ್ಯ ಕೂಡ ವಿಪ್ರದಾಸ ಬಾಬುವನ್ನು ನೋಡಿಕೊಂಡು ಬರುವುದು ಸಂಪ್ರದಾಯವಾಗಿತ್ತು"

ಮೋತಿಯಮ್ಮನಿಗೆ ಸೋಲೊಪ್ಪಿಕೊಳ್ಳಲು ಇಷ್ಟವಿರಲಿಲ್ಲ. ಮಾತನ್ನು ಹಾರಿಸಿಬಿಡಲು ಪ್ರಯತ್ನ ಮಾಡುತ್ತಾ "ಅಷ್ಟು ಕೆಲಸಗಳಲ್ಲಿ ಮುಳುಗಿದ್ದರೆ ಇಂತಹ ಮುಖ್ಯವಾದ ವಿಷಯವನ್ನು ಹೇಳಲು ಕೂಡ ಸಾಧ್ಯವಿರುತ್ತದೆಯೇ? ಈಗೇನು ಮಾಡಿದರೆ ಒಳ್ಳೆಯದು ಅನ್ನುವುದನ್ನು ಯೋಚಿಸಿ, ನೋಡೋಣ," ಎಂದಳು.

"ಮೊದಲಿನಲ್ಲಿಯೇ ಎಲ್ಲ ವಿಷಯದ ಕಡೆಯವರೆಗೂ ಯೋಚಿಸಲು ಹೋದರೆ ಮುಗ್ಗರಿಸಬೇಕಾಗುತ್ತೆ. ಮೊದಲ ಕರ್ತವ್ಯವೇನು ಅನ್ನುವುದನ್ನು ಯೋಚಿಸಿದರೆ ಸಾಕು. ಅದು ಅಣ್ಣ ವಿಪ್ರದಾಸ ಬಾಬುಗಳನ್ನು ನೋಡಲು ಹೋಗುವುದೇ. ನೋಡುವುದಕ್ಕೆ ಹೋದರೆ ಅದರ ಫಲ ಏನಾಗಬಹುದೋ ಅದಕ್ಕೆ ಉಪಾಯವನ್ನು ಈಗಲಿಂದ ಚಿಂತೆಮಾಡುತ್ತ ಕೂತರೆ ಅದರಿಂದ ಚಿಂತಾಶೀಲತೆಯು ಪರಿಚಯವಾದ ಹಾಗೆ ಆಗುತ್ತೆ. ಮತ್ತು ಅದೇ ಅತಿ ಚಿಂತಾಶೀಲತೆಯಾಗುತ್ತದೆ."

"ಯಾರಿಗೆ ಗೊತ್ತು. ಏನೋ ಗಲಾಟೆಯಾಗುತ್ತೆ ಅಂತ ನನಗೆ ಅನ್ನಿಸುತ್ತೆ."

## ಐವತ್ತೈದನೆಯ ಅಧ್ಯಾಯ

ಅಂದು ಬೆಳಿಗ್ಗೆ ಬಹಳ ಹೊತ್ತು ಕುಮು ಅವಳ ಅಣ್ಣನ ಕೋಣೆಯಲ್ಲಿ ಕೂತು ಏಸ್ರಾಜನ್ನು ಬಾರಿಸುತ್ತಾ ಹಾಡುತ್ತ ಇದ್ದಳು. ಪ್ರಾತಃಕಾಲದಲ್ಲಿ ಬಾರಿಸುವ ರಾಗದಲ್ಲಿ, ದನಿಯಲ್ಲಿ ಸ್ವಂತ ವ್ಯಕ್ತಿಗತ ವೇದನೆಯು ವಿಶ್ವಕ್ಕೆ ಸೇರಿದಂತಾಗಿ ಅಸೀಮ ರೂಪದಲ್ಲಿ ಕಾಣಬರುವುದು. ಆಗ ಅದರ ಬಂಧನ ಮುಕ್ತಿಯಾಗುವುದು, ಸರ್ಪಗಳು ಮಹಾದೇವನ ಜಟೆಯನ್ನು ಸೇರಿ ಭೂಷಣವಾಗಿ ಪ್ರಕಾಶಿಸುವಂತೆ. ವ್ಯಥೆಯ ನದಿಗಳು ವ್ಯಥೆಯ ಸಮುದ್ರಕ್ಕೆ ಹೋಗಿ ಶಾಶ್ವತವಾದ ವಿಶ್ರಾಂತಿಯನ್ನು ಪಡೆಯುವುವು. ಅವುಗಳ ರೂಪವೇ ಬದಲಾಗುವುದು. ಚಂಚಲತೆಯು ಗಭೀರತೆಯಲ್ಲಿ ಹೋಗಿ ಸೇರಿಕೊಳ್ಳುವುದು. ವಿಪ್ರದಾಸನು ನಿಶ್ವಾಸ ಬಿಡುತ್ತ "ಸಂಸಾರದಲ್ಲಿ ಅತಿ ಕ್ಷುದ್ರವಾದ ಕಾಲವೇ ಸತ್ಯವೆಂದು ಕಂಡು ಬರುತ್ತದೆ ಕುಮು, ಚಿರಕಾಲವು ಮರೆಯಲ್ಲಿಯೇ ಇರುತ್ತದೆ. ಸಂಗೀತದಲ್ಲಿ ಚಿರಕಾಲವು ಬಂದು ಎದುರಿಗೆ ನಿಲ್ಲುವುದು. ಕ್ಷುದ್ರ ಕಾಲವು ತುಚ್ಛ

ವಾಗಿ ಹೋಗುವುದು. ಅದರಿಂದ ಆಗ ಮನಸ್ಸು ಮುಕ್ತಿ ಹೊಂದುವುದು." ಎಂದ.

ಈ ಸಮಯದಲ್ಲಿ ಮಹಾರಾಜಾ ಮಧುಸೂದನರು ಬಂದಿದ್ದಾರೆಂದು ಸುದ್ದಿ ಬಂತು.

ಒಂದು ಮುಹೂರ್ತದಲ್ಲಿ ಕುಮುವಿನ ಮುಖ ಬಣ್ಣಗೆಟ್ಟು ಹೋಯಿತು. ಅದನ್ನು ನೋಡಿ ವಿಪ್ರದಾಸನ ಮನಸ್ಸಿನಲ್ಲಿ ಬಹಳ ನೋವಾಯಿತು. "ಕುಮು, ನೀನು ಮನೆಯೊಳಗೆ ಹೋಗು. ನೀನು ಇಲ್ಲಿರುವುದು ಬಹುಶಃ ಆವಶ್ಯಕವಿರುವುದಿಲ್ಲ," ಎಂದ.

ಕುಮು ಬೇಗ ಬೇಗ ಹೊರಟು ಹೋದಳು. ಮಧುಸೂದನನು ಬೇಕೆಂತಲೇ ಮೊದಲೇ ತಿಳಿಸದೆ ಬಂದಿದ್ದಾನೆ. ಇವರ ಕಡೆಯವರಿಗೆ ತಮ್ಮ ಏರ್ಪಾಡಿನ ದೀನತೆಯನ್ನು ಮುಚ್ಚಲು ಅವಕಾಶ ಕೊಡಕೂಡದೆಂಬುದು ಅವನ ಉದ್ದೇಶಗಳಲ್ಲೊಂದು. ದೊಡ್ಡ ಮನೆಗೆ ಸೇರಿದವನೆಂದು ವಿಪ್ರದಾಸನಿಗೆ ಒಂದು ಬಗೆಯ ಹೆಮ್ಮೆ ಇರುವುದೆಂದು ಮಧುಸೂದನನ ನಂಬಿಕೆ. ಆ ಕಲ್ಪನೆಯೇ ಅವನಿಗೆ ಸಹಿಸಲಸಾಧ್ಯವಾಗಿತ್ತು. ಆದ್ದರಿಂದ ಅವನು ಬಂದಿದ್ದ ಭಾವ ನೋಡಿದರೆ ಅವನು ನೋಡಿಕೊಂಡು ಹೋಗುವುದಕ್ಕಲ್ಲ ಬಂದಿರುವುದು, ತೋರಿಸಿಕೊಂಡು ಹೋಗುವುದಕ್ಕೆ ಎಂದೆನ್ನಿಸುತ್ತಿತ್ತು.

ಮಧುಸೂದನನ ಉಡುಪು ಬಹಳ ವಿಚಿತ್ರವಾಗಿತ್ತು. ಮನೆಯ ಚಾಕರ, ಚಾಕರಿಯರು ನೋಡಿ ದಿಗ್ಭ್ರಮೆಗೊಳ್ಳುವಂತಹ ವೇಷ. ಗೆರೆಗಳುಳ್ಳ ವಿಲಾಯತಿ ಷರ್ಟಿನ ಮೇಲೆ ಬಣ್ಣದ ಹೂಗಳು ಹೆಣೆದಿದ್ದ ಸಿಲ್ಕಿನ ವೇಸ್ಟ್‌ಕೋಟು, ಹೆಗಲ ಮೇಲೆ ಇಸ್ತ್ರಿ ಮಾಡಿ ಚೆನ್ನಾಗಿ ಮಡಿಸಿದ ವಲ್ಲಿ, ಪ್ರಯತ್ನಪಟ್ಟು ನೆರಿಗೆ ಹಾಕಿದ್ದ ಕರಿ ಅಂಚಿನ ಶಾಂತಿಪುರದ ಧೋತರ, ವಾರ್ನಿಷ್ ಹಾಕಿದ ಕರಿಯ ದರ್ಬಾರಿ ಷೂ, ದೊಡ್ಡ ದೊಡ್ಡ ವಜ್ರ, ಪಚ್ಚೆಗಳ ಉಂಗುರಗಳಿಂದ ಕೈ ಬೆರಳುಗಳು ಥಳ ಥಳಿಸುತ್ತಿದ್ದವು. ಪ್ರಶಸ್ತವಾದ ಹೊಟ್ಟೆಯ ಸುತ್ತ ದಪ್ಪನಾದ ಬಂಗಾರದ ಗಡಿಯಾರದ ಸರಪಣಿ, ಕೈಯಲ್ಲಿ ಅಲಂಕಾರವಾದ ಒಂದು ದೊಣ್ಣೆ, ಅದರ ಚಿನ್ನದ ಹಿಡಿ ಆನೆಯ ಮುಖದ ಆಕಾರದಲ್ಲಿ ನಾನಾ ರತ್ನಗಳಿಂದ ಕೂಡಿ ಮಾಡಲ್ಪಟ್ಟಿತ್ತು, ಒಳಗೆ ಬಂದದ್ದೇ ಒಂದು ಅಸಮಾಪ್ತ ನಮಸ್ಕಾರವನ್ನು ಮಾಡಿದಂತೆ ತೋರಿ ಮಂಚದ ಪಕ್ಕದಲ್ಲಿದ್ದ ಒಂದು ಕುರ್ಚಿಯ ಮೇಲೆ ತಾನಾಗಿಯೇ ಕೂತು "ಹ್ಯಾಗಿದ್ದೀರಿ, ವಿಪ್ರದಾಸ ಬಾಬು, ದೇಹಸ್ಥಿತಿ ಅಷ್ಟು ಚೆನ್ನಾಗಿದ್ದ ಹಾಗೆ ಕಾಣುವುದಿಲ್ಲ" ಎಂದ. ವಿಪ್ರದಾಸನು ಅವನಿಗೆ ಯಾವ ಉತ್ತರವನ್ನೂ ಕೊಡದೆ "ನಿಮ್ಮ ದೇಹಸ್ಥಿತಿ ಚೆನ್ನಾಗಿರುವ ಹಾಗೆ ಕಾಣುತ್ತದೆ" ಎಂದ.

"ವಿಶೇಷವಾಗಿ ಚೆನ್ನಾಗಿದೆಯೆಂದು ಹೇಳಲಾರೆ. ಸಂಜೆಯಾಯಿತೆಂದರೆ ತಲೆ ನೋಯುತ್ತದೆ. ಹಸಿವೂ ಚೆನ್ನಾಗಿ ಆಗುವುದಿಲ್ಲ, ಊಟ, ತಿಂಡಿಗಳಲ್ಲಿ ಸ್ವಲ್ಪ ವ್ಯತ್ಯಾಸವಾದರೂ ತಡೆಯುವುದಕ್ಕೆ ಆಗುವುದಿಲ್ಲ. ಜೊತೆಗೆ ನಿದ್ರೆಯಿಲ್ಲದೆ ಕೂಡ ಆಗಾಗ ನರಳುತ್ತೇನೆ. ಇದೇ ನನಗೆ ಎಲ್ಲಾದಕ್ಕಿಂತಲೂ ಹೆಚ್ಚು ಸಂಕಟ."

ಶುಶ್ರೂಷೆಗಾಗಿ ಸರ್ವದಾ ಜನರು ಬೇಕಾಗಿದೆ ಎಂದು ಹೇಳಲಿಕ್ಕೆ ಇದು ಪೀಠಿಕೆ.

ವಿಪ್ರದಾಸನು "ಆಫೀಸಿನ ಕೆಲಸ ಬಹುಶಃ ಬಹಳ ಕಷ್ಟವೇನೋ?" ಎಂದ.

"ಅಂತಹುದೇನೂ ಇಲ್ಲ. ಆಫೀಸಿನ ಕೆಲಸ ಕಾರ್ಯಗಳು ತಮಗೆ ತಾವೇ ನಡೆದುಕೊಂಡು ಹೋಗುತ್ತವೆ. ನಾನೇನು ಹೆಚ್ಚಾಗಿ ನೋಡಿಕೊಳ್ಳಬೇಕಾಗಿಲ್ಲ, ಮ್ಯಾರ್ಕಟ್ ಸಾಹೇಬನ ಮೇಲೆಯೇ ಹೆಚ್ಚು ಭಾಗ ಕೆಲಸದ ಭಾರ ಬಿದ್ದಿರುವುದು. ಸರ್ ಆರ್ಥರ್ ಪೀಬಾಡಿ ಕೂಡ ನನಗೆ

ಎಷ್ಟೋ ಸಹಾಯ ಮಾಡುತ್ತಾನೆ."

ಗುಡಿ ಗುಡಿ ಬಂತು. ವೀಳೆಯದ ತಟ್ಟೆಯಲ್ಲಿ ಎಲೆ, ಅಡಿಕೆ, ಸುಗಂಧ ಬೀರುವ ಮಸಾಲೆ ಮುಂತಾದುವನ್ನು ಕೈಯಲ್ಲಿ ಹಿಡಿದುಕೊಂಡು ಆಳೊಬ್ಬ ಬಂದು ನಿಂತ. ಅದರಿಂದ ಒಂದು ಸಣ್ಣ ಏಲಕ್ಕಿ ತೆಗೆದುಕೊಂಡು ಬಾಯಿಗೆ ಹಾಕಿಕೊಂಡು ಬೇರೇನೂ ಮುಟ್ಟಲಿಲ್ಲ. ಗುಡಿಗುಡಿಯ ನಾಳ ತೆಗೆದುಕೊಂಡು ಒಂದೆರಡು ಸಲ ಹೊಗೆಯೆಳೆದು ಕೊಂಡ. ಆ ಮೇಲೆ ಗುಡು ಗುಡಿಯ ಕೊಳವೆ ಎಡಕೈಯಲ್ಲಿ ಹಿಡಿಯಲ್ಪಟ್ಟು ಮಡಿಲ ಮೇಲೆಯೇ ಇತ್ತು. ಇನ್ನು ಅದಕ್ಕೆ ಉಪಯೋಗವಾಗಲಿಲ್ಲ, ಅಂತಃಪುರದಿಂದ ಫಲಹಾರಕ್ಕೆ ಸಿದ್ಧವಾಗಿದೆಯೆಂದು ಸುದ್ದಿ ಬಂತು. ಸ್ವಲ್ಪ ವ್ಯಸ್ತನಾಗಿ "ಅದಂತೂ ನನ್ನ ಕೈಯಲ್ಲಿ ಸಾಧ್ಯವಿಲ್ಲ. ಮೊದಲೆ ಹೇಳಿದ್ದೇನೆ. ಊಟ ತಿಂಡಿಯಲ್ಲಿ ಸ್ವಲ್ಪವೂ ವ್ಯತ್ಯಾಸವಾಗ ಕೂಡದು ಅಂತ." ಅಂದ.

ವಿಪ್ರದಾಸನು ಎರಡನೆ ಸಲ ಬಲವಂತ ಮಾಡಲಿಲ್ಲ. ಆಳಿಗೆ"ಅವರ ದೇಹಸ್ಥಿತಿ ಚೆನ್ನಾಗಿಲ್ಲ. ಏನೂ ತಿನ್ನಲಿಕ್ಕೆ ಆಗುವುದಿಲ್ಲವಂತೆ ಅಂತ ಅವನಿಗೆ ಹೇಳಿಬಿಡು" ಎಂದ.

ವಿಪ್ರದಾಸನು ಸುಮ್ಮನೆಯೇ ಇದ್ದ. ಕುಮುವಿನ ಪ್ರಸ್ತಾಪ ತಾನಾಗಿಯೇ ಬರುತ್ತದೆಂದು ಮಧುಸೂದನನ ನಿರೀಕ್ಷೆಯಿತ್ತು. ಇಷ್ಟು ದಿನಗಳಾಗಿ ಹೋಗಿದ್ದುವು. ಈಗ ಕುಮುವನ್ನು ಅತ್ತೆಯ ಮನೆಗೆ ವಾಪಸು ಕರೆದುಕೊಂಡು ಹೋಗುವ ಪ್ರಸ್ತಾಪವನ್ನು ವಿಪ್ರದಾಸನು ತಾನೇ ಉದ್ವಿಗ್ನತೆಯಿಂದ ಎತ್ತುವನು ಎಂದುಕೊಂಡಿದ್ದ. ಆದರೆ ಅವನು ಕುಮುವಿನ ಹೆಸರು ಕೂಡ ಉಚ್ಚರಿಸಲಿಲ್ಲ. ಒಳಗೊಳಗೇ ಸ್ವಲ್ಪ ಕೋಪವೂ ಹುಟ್ಟಿಕೊಳ್ಳಲು ಆರಂಭವಾಯಿತು. ಬಂದದ್ದು ತಪ್ಪಾಯಿತೆಂದು ಯೋಚಿಸಿದ. ಎಲ್ಲಾ ಈ ನವೀನನ ಕಿತಾಪತಿ! ತಕ್ಷಣ ವಾಪಸು ಹೋಗಿ ಅವನಿಗೆ ಕಠಿಣವಾದ ಶಿಕ್ಷೆ ಮಾಡಬೇಕೆಂದು ಮನಸ್ಸು ಚಡಪಡಿಸಲಾರಂಭಿಸಿತು.

ಈ ಸಮಯದಲ್ಲಿ ಸಾಧಾರಣ ಕರಿಯ ಅಂಚಿನ ಸೀರೆಯೊಂದನ್ನು ಉಟ್ಟು ಮುಖದ ಮೇಲೆ ಮುಸುಕೆಳೆದುಕೊಂಡು ಕುಮು ಕೋಣೆಯೊಳಗೆ ಪ್ರವೇಶಮಾಡಿದಳು.

ವಿಪ್ರದಾಸನು ಇದನ್ನು ನಿರೀಕ್ಷೆ ಮಾಡಿರಲಿಲ್ಲ. ಅವನಿಗೆ ಆಶ್ಚರ್ಯವಾಗಿ ಹೋಯಿತು. ಮೊದಲು ಗಂಡನಿಗೆ ಆ ಮೇಲೆ ಅಣ್ಣನಿಗೆ ನಮಸ್ಕಾರಮಾಡಿ ಕುಮು ಮಧುಸೂದನನಿಗೆ "ಅಣ್ಣನಿಗೆ ಬಹಳ ಆಯಾಸವಾಗಿದೆ. ಅವರು ಹೆಚ್ಚಾಗಿ ಮಾತಾಡ ಕೂಡದು ಅಂತ ಡಾಕ್ಟರು ಹೇಳಿದ್ದಾರೆ. ನೀವು ಈ ಪಕ್ಕದ ರೂಮಿಗೆ ಬನ್ನಿ" ಎಂದಳು.

ಮಧುಸೂದನನ ಮುಖ ಕೆಂಪಗಾಗಿ ಹೋಯಿತು. ಬೇಗ ಕುರ್ಚಿಯಿಂದ ಎದ್ದು ನಿಂತು ಬಿಟ್ಟನು. ಮಡಿಲಲ್ಲಿದ್ದ ಗುಡುಗುಡಿಯ ಕೊಳವೆಯು ನೆಲದ ಮೇಲೆ ಬಿದ್ದು ಹೋಯಿತು. ವಿಪ್ರದಾಸನ ಮುಖದ ಕಡೆ ನೋಡದೆಯೇ "ಒಳ್ಳೇದು, ಇನ್ನು ಬರುತ್ತೇನೆ" ಎಂದು ಹೊರಟನು.

ಮೊದಲು ಬಂದ ಕೋಪದ ಆವೇಶದಲ್ಲಿ ದಡದಡನೆ ಗಾಡಿಹತ್ತಿ ಮನೆಗೆ ಹೊರಟು ಹೋಗೋಣವೆಂದು ಕೊಂಡ. ಆದರೆ ಅವನ ಮನಸ್ಸು ಕಟ್ಟಿಹಾಕಲ್ಪಟ್ಟಿತ್ತು. ಬಹಳ ದಿನಗಳಾದ ಮೇಲೆ ಇಂದು ಕುಮುವನ್ನು ಕಂಡಿದ್ದ. ಅವಳನ್ನು ಸಾಧಾರಣ ನಿತ್ಯಗಟ್ಟಲೆಯ ಉಡುಪಿನಲ್ಲಿ ನೋಡಿದುದು ಇದೇ ಮೊದಲು. ಇಷ್ಟು ಸುಂದರವಾಗಿ ಅವಳೆಂದೂ ಕಂಡಿರಲಿಲ್ಲ. ಎಷ್ಟು ಗಂಭೀರ, ಎಷ್ಟು ಶಾಂತ! ಮಧುಸೂದನನ ಮನೆಯಲ್ಲಿ ಅವಳು ಹೊರಗಿನವರ ಹೆಣ್ಣಂತೆ ಪೋಷಾಕು ಹಾಕಿದ ಹೆಂಗಸಾಗಿದ್ದಳು...ಇಲ್ಲಾದರೆ ಸಂಪೂರ್ಣವಾಗಿ ಮನೆಯ ಗೃಹಿಣಿ. ಇಂದು

ಅವಳನ್ನೇನೋ ಬಹಳ ಹತ್ತಿರದಿಂದ ನೋಡಿದಂತಿತ್ತು. ಎಂತಹ ಸ್ನಿಗ್ಧವಾದ ರೂಪ! ಕೂಡಲೇ ಒಂದು ಕ್ಷಣ ಕೂಡ ತಡಮಾಡದೆ ಅವಳನ್ನು ಗಾಡಿಯಲ್ಲಿ ಕೂಡಿಸಿಕೊಂಡು ಮನೆಗೆ ಕರೆದು ಕೊಂಡು ಹೋಗಿ ಬಿಡೋಣವೆನ್ನಿಸಿತು. ಅವಳು ನನ್ನವಳು, ನನ್ನವಳೇ, ಅವಳು ನನ್ನ ಮನೆಯವಳು, ನನ್ನ ಐಶ್ವರ್ಯ, ನನ್ನ ಸಮಸ್ತ ತನು, ಮನಗಳ ಸ್ವತ್ತು; ಈ ಮಾತನ್ನೇ ತಿರುವಿ ತಿರುವಿ ಹೇಳಬೇಕೆಂದು ಆಸೆಯಾಯಿತು.

ಪಕ್ಕದ ಕೋಣೆಯಲ್ಲಿ ಒಂದು ಸೋಫಾ ನೋಡಿ ಕುಮು ಕೂಡೆಂದು ಹೇಳಿದ ತಕ್ಷಣ ಅವನು ಕೂತುಕೊಳ್ಳಬೇಕಾಯಿತು. ಅದು ಪೂರ್ತಿಯಾಗಿ ಹೊರಗಿನ ಕೊಠಡಿಯಾಗಿರದಿದ್ದರೆ ಕುಮು ವನ್ನೂ ಹಿಡಿದುಕೊಂಡು ಪಕ್ಕದಲ್ಲಿ ಸೋಫಾದ ಮೇಲೆ ಕೂಡಿಸಿಕೊಳ್ಳುತ್ತಿದ್ದ. ಕುಮು ತಾನು ಕೂಡದೆ ಕುರ್ಚಿಯೊಂದರ ಹಿಂದುಗಡೆ ಅದರ ಬೆನ್ನಮೇಲೆ ಕೈಯೂರಿಕೊಂಡು ನಿಂತಳು.

"ನನ್ನ ಹತ್ತಿರ ಹೇಳುವುದೇನಾದರೂ ಇದೆಯೇ ?" ಎಂದಳು.

ಅವಳು ಮಾತಾಡಿದ ದನಿ ಅವನ ಕಿವಿಗೆ ಹಿತವಾಗಿ ಕಾಣಲಿಲ್ಲ. "ಮನೆಗೆ ಬರುವುದಿಲ್ಲವೆ?" ಎಂದು ಕೇಳಿದ.

"ಇಲ್ಲ."

ಮಧುಸೂದನ ಚಕಿತನಾದ. "ಏನು ಮಾತಿದು ?"

"ನನ್ನ ಆವಶ್ಯಕತೆಯೇನೂ ಇಲ್ಲವಲ್ಲ ನಿಮಗೆ!"

ಶ್ಯಾಮಾಸುಂದರಿಯ ವಿಷಯ ಇವಳ ಕಿವಿಗೆ ಬಿದ್ದಿರಬೇಕೆಂದು ಮಧುಸೂದನ ಊಹಿಸಿ ಕೊಂಡ. ಅದರಿಂದಲೇ ಇಷ್ಟು ಬಿಗುಮಾನವಿರಬೇಕು. ಬಿಗುಮಾನವಿರುವುದು ಚೆನ್ನಾಗಿಯೇ ಕಂಡಿತು. "ನೀನು ಹೇಳುವ ಮಾತು ಸರಿಯಲ್ಲ, ಆವಶ್ಯಕವಿಲ್ಲದೆ ಇರುತ್ತದೆಯೇ? ಶೂನ್ಯವಾದ ಮನೆ ಚೆನ್ನಾಗಿ ಕಾಣುತ್ತದೆಯೇ?" ಎಂದ.

ಇದರ ವಿಷಯವಾಗಿ ಚರ್ಚೆ ಮಾಡಲು ಕುಮುವಿಗೆ ಇಷ್ಟವಾಗಲಿಲ್ಲ. ಸಂಕ್ಷೇಪವಾಗಿ ಮತ್ತೊಂದು ಸಲ "ನಾನು ಬರುವುದಿಲ್ಲ" ಎಂದಳು.

"ಹಾಗೆಂದರೆ ಏನು? ಮನೆಯ ಸೊಸೆ ಮನೆಗೆ ಬರುವುದಿಲ್ಲ ಅಂದರೆ?"

ಕುಮು ಸಂಕ್ಷೇಪವಾಗಿ "ಇಲ್ಲ" ಎಂದಳು. ಮಧುಸೂದನನು ಸೋಫಾದಿಂದ ಎದ್ದು ನಿಂತು ಏನು? ಬರುವುದಿಲ್ಲವೇ ? ಬರಲೇಬೇಕು, ಗೊತ್ತಾಯಿತೇ ?" ಎಂದು ಕೂಗಿದ.

ಕುಮು ಮಾತಾಡಲಿಲ್ಲ.

ಮಧುಸೂದನ ಗರ್ಜಿಸುತ್ತಾ "ಗೊತ್ತೇ, ಪೋಲೀಸಿನವರನ್ನು ಕರೆದು ನಿನ್ನನ್ನ ಕತ್ತು ಹಿಡಿದು ಎಳೆದುಕೊಂಡು ಹೋಗಬಲ್ಲೆ. "ಇಲ್ಲ" ಅಂದರೆ ಆಗಿಹೋಯಿತೇನು?" ಎಂದ.

ಕುಮು ಆಗಲೂ ಮಾತಾಡಲಿಲ್ಲ. ಮಧುಸೂದನನ ಕೋಪ ಕೆರಳಿ ಇನ್ನೂ ಗಟ್ಟಿಯಾಗಿ ಕೂಗುತ್ತಾ "ಅಣ್ಣನ ಸ್ಕೂಲಿನ ನೂರ್ ನಗರದ ಅಭ್ಯಾಸ ಪುನಃ ಶುರುವಾಯಿತು ಅಂತ ಕಾಣುತ್ತೆ." ಎಂದ. ಕುಮು ಅಣ್ಣನ ಕೋಣೆಯ ಕಡೆ ಭಯಪೂರಿತವಾದ ನೋಟವನ್ನೊಂದು ಸಲ ಎಸೆದು "ಸುಮ್ಮನೆ ಇರಿ, ಅಷ್ಟು ಗಟ್ಟಿಯಾಗಿ ಮಾತಾಡಬೇಡಿ." ಎಂದಳು.

"ಯಾಕೆ? ನಿಮ್ಮ ಅಣ್ಣನಿಗೆ ಹೆದರಿಕೊಂಡು ಮಾತಾಡ ಬೇಕು ಅಲ್ಲವೇ ? ಈ ಗಳಿಗೆಯಲ್ಲಿ ಅವನನ್ನು ಬೀದಿಗೆ ಹಾಕಬಲ್ಲೆ, ಗೊತ್ತೇ ನಿನಗೆ ?"

ಮರುಕ್ಷಣದಲ್ಲಿಯೇ ಅವಳ ಅಣ್ಣ ಕೋಣೆಯ ಬಾಗಿಲಲ್ಲಿ ಬಂದು ನಿಂತಿರುವುದನ್ನು ಕುಮ ಕಂಡಳು. ದೀರ್ಘದೇಹ, ಶೀರ್ಣಕಾಯ, ಬಿಳುಪೇರಿದ ಮುಖ! ದೊಡ್ಡ ದೊಡ್ಡ ಕಣ್ ಗಳೆರಡೂ ಬೆಂಕಿಯುಗುಳುತ್ತಿರುವಂತಿದ್ದುವು. ಒರಟಾದೊಂದು ಅಂಗವಸ್ತ್ರ ಹೆಗಲ ಮೇಲಿಂ ಜೋತಾಡುತ್ತಾ ನೆಲದ ಮೇಲೆ ಬಿದ್ದಿದೆ. ವಿಪ್ರದಾಸನು ಕುಮುವನ್ನು ಕರೆಯುತ್ತಾ "ಬಾರೆ ಕುಮ ಬಾ ನನ್ನ ರೂಮಿಗೆ ಬಾ" ಎಂದ.

ಮಧುಸೂದನ ಗಟ್ಟಿಯಾಗಿ ಅರಚುತ್ತಾ "ಈ ನಿನ್ನ ಅಹಂಕಾರ ಮನಸ್ಸಿನಲ್ಲಿರುತ್ತೆ. ಹುಷಾರ್ ನೋಡಿಕೊಳ್ಳುತ್ತೇನೆ ನಾನು... ನಿನ್ನ ಈ ನೂರ್ ನಗರದ 'ನೂರ್' (ಬೆಳಕು) ಅಳಿಸಿ ಹಾಕ ಹೋದರೆ ನನ್ನ ಹೆಸರು ಮಧುಸೂದನನಲ್ಲ" ಎಂದ.

ತನ್ನ ಕೋಣೆಗೆ ಹೋಗಿ ವಿಪ್ರದಾಸ ಹಾಸುಗೆಯ ಮೇಲೆ ಮಲಗಿ ಕೊಂಡ. ಕಣ್ ಮುಚ್ಚಿಕೊಂಡಿದ್ದ. ನಿದ್ದೆಯಿಂದಲ್ಲ, ಆಯಾಸದಿಂದ, ಚಿಂತೆಯಿಂದ. ಕುಮು ತಲೆಯ ಹತ್ತಿ ಕೂತು ಬೀಸಣಿಗೆಯಿಂದ ಗಾಳಿ ಬೀಸಲು ತೊಡಗಿದಳು. ಇದೇ ರೀತಿ ಬಹಳ ಹೊತ್ತು ಕಳೆ ಮೇಲೆ ಕ್ಷೇಮಾ ಅತ್ತೆ ಹತ್ತಿರ ಬಂದು "ಇವತ್ತೇನು ಊಟ ಮಾಡುವುದಿಲ್ಲವೇ ಕುಮು? ಹೊತ್ತು ಎಷ್ಟಾಗಿದೆ ಏನುಕಥೆ!" ಎಂದಳು.

ವಿಪ್ರದಾಸನು ಕಣ್ಣನ್ನು ತೆರೆದು "ಕುಮು, ಹೋಗು ಊಟ ಮಾಡು ಹೋಗು ಹೋ ನಿನ್ನ ಆ ಕಾಳೂ ಅಣ್ಣನನ್ನ ಕಳುಹಿಸಿಕೊಡು" ಎಂದ.

ಕುಮು "ಅಣ್ಣ, ನಿನ್ನ ಕಾಲಿಗೆ ಬೀಳುತ್ತೇನೆ. ಈಗ ಕಾಳೂ ಅಣ್ಣ ಬೇಡ. ಸ್ವಲ್ಪ ನಿದ ಮಾಡುವುದಕ್ಕೆ ಪ್ರಯತ್ನಮಾಡು." ಎಂದಳು.

ವಿಪ್ರದಾಸನು ಏನೂ ಹೇಳದೆ ಗಂಭೀರವಾದ ವೇದನೆಯ ನೋಟದಿಂದ ಕುಮುವಿ ಮುಖದ ಕಡೆ ನೋಡಿದ, ಸ್ವಲ್ಪ ಹೊತ್ತಾದ ಮೇಲೆ ನಿಟ್ಟುಸಿರು ಬಿಟ್ಟು ಮತ್ತೆ ಕಣ್ಣು ಮುಚ್ಚಿ ಕುಮು ಮೆಲ್ಲ ಮೆಲ್ಲಗೆ ಹೊರಗೆ ಹೋಗಿ ಬಾಗಿಲನ್ನು ಮುಚ್ಚಿದಳು. ಸ್ವಲ್ಪ ಹೊತ್ತಾದ ಮೇ ಕಾಳೂ ತಾನು ಬಂದು ಮಾತಾಡಬೇಕೆಂದು ಹೇಳಿ ಕಳುಹಿಸಿದ. ವಿಪ್ರದಾಸನು ಎದ ದಿಂಬಿಗೆ ಒರಗಿಕೊಂಡು ಕೂತ. ಕಾಳೂ "ಅಳಿಯ ಬಂದು ಸ್ವಲ್ಪ ಹೊತ್ತಿಗೇನೇ ಹೊರಟ ಹೋದ, ಏನಾಯಿತು ಹೇಳಿ ಮತ್ತೆ? ಕುಮುವನ್ನು ಅವರ ಮನೆಗೆ ವಾಪಸು ಕರೆದುಕೊಂ ಹೋಗುವ ವಿಷಯದಲ್ಲಿ ಏನೂ ಹೇಳಲಿಲ್ಲವೇನು ?"

"ಹೂಂ, ಹೇಳಿದರು. ಕುಮು ತಾನು ಹೋಗುವುದಿಲ್ಲೆಂದು ಉತ್ತರ ಕೊಟ್ಟಿದ್ದಾಳೆ."

ಕಾಳೂ ವಿಪರೀತ ಹೆದರಿಕೊಂಡು "ಇದೇನು ಮಾತು ಅಣ್ಣ! ಇದು ಮನೆ ಹಾಳಾಗು ಮಾತೇ!"

"ಮನೆ ಹಾಳಾಗುವುದಕ್ಕೆ ನಾವು ಯಾವ ಕಾಲದಲ್ಲೂ ಹೆದರಲಿಲ್ಲ. ಆದರೆ ಮಾನ ಭಂಗ ಹೆದರುತ್ತೇವೆ."

"ಹಾಗಾದರೆ ಸಿದ್ಧವಾಗಿರಿ, ಅದೇನೂ ನಿದಾನವಾಗುವುದಿಲ್ಲ. ನಿಮ್ಮಗಳ ರಕ್ತದಲ್ಲಿ ನೀವೇನು ಮಾಡೀರಿ ಅದೆಲ್ಲಿ ಹೋಗುತ್ತೆ! ಒಂದು ಸಲ ನಿಮ್ಮ ತಂದೆ ಮ್ಯಾಜಿಸ್ಟ್ರೇಟರನ್ನು ನಿರ್ಲಕ್ಷ ಮಾಡಲು ಹೋಗಿ ಕಡೆಯಲ್ಲಿ ಎರಡು ಲಕ್ಷ ರೂಪಾಯಿ ನಷ್ಟ ಮಾಡಿಕೊಳ್ಳುವ ಹಾಗಾಯಿತ ಗೊತ್ತಿಲ್ಲವೇ ನಿಮಗೆ? ಎದೆಯನ್ನು ಉಬ್ಬಿಸಿಕೊಂಡು ತಾವಾಗಿ ವಿಪತ್ತಿನಲ್ಲಿ ಹೋಗಿ ಬೀಳುವು

ನಿಮ್ಮ ಪರಂಪರೆಯಲ್ಲಿಯೇ ಬಂದು ಹೋಗಿದೆ. ಅದಂತೂ ನಮ್ಮ ವಂಶದಲ್ಲಿಲ್ಲ. ಆದ್ದರಿಂದಲೇ ನಿಮ್ಮ ಜೊತೆಯಲ್ಲಿದ್ದುಕೊಂಡು ನಿಮ್ಮ ಈ ಅಪಾಯಕರವಾದ ಹುಚ್ಚಾಟಗಳನ್ನೆಲ್ಲ ಸಹಿಸುವುದಕೆ ಅಸಾಧ್ಯವಾಗಿದೆ. ಆದರೆ ಬದುಕುವುದು ಹೇಗೆ ಹೀಗಾದರೆ?"

ವಿಪ್ರದಾಸನು ಚಾಚಿದ್ದ ಎಡಗಾಲ ಮೇಲೆ ಬಲಗಾಲನ್ನು ಎತ್ತಿ ಹಾಕಿಕೊಂಡು, ದಿಂಬಿನ ಮೇಲೆ ತಲೆಯಿಟ್ಟು, ಕಣ್ಣು ಮುಚ್ಚಿಕೊಂಡು ಸ್ವಲ್ಪ ಹೊತ್ತು ಸುಮ್ಮನೆ ಯೋಚಿಸಿದ. ಆಮೇಲೆ ಕಣ್ಣು ತೆರೆದು "ಕರಾರು ಪತ್ರದ ಪ್ರಕಾರ ಮಧುಸೂದನನು ಎರಡು ತಿಂಗಳ ನೋಟೀಸು ಕೊಡದೆ ನಮ್ಮ ಕಡೆಯಿಂದ ಹಣ ಪಾವತಿ ಕೇಳಲು ಅವಕಾಶವಿಲ್ಲ ಅಂತ ಕಾಣುತ್ತೆ, ಈ ಮಧ್ಯೆ ಸುಬೋಧನೂ ಈ ಆಷಾಢಮಾಸದೊಳಗಾಗಿ ಬಂದು ಬಿಡುತ್ತಾನೆ. ಆಗೇನಾದರೂ ಒಂದು ಉಪಾಯ ಮಾಡಬಹುದು" ಎಂದ.

ಕಾಳೂ ಸ್ವಲ್ಪ ಕೋಪಗೊಂಡು "ಉಪಾಯ ಮಾಡದೆ ಹೋದರೆ ಏನು, ಒಟ್ಟಿಗೆ ಆರಿ ಹೋಗುವ ದೀಪಗಳು, ಮರ್ಯಾದೆಯಾಗಿ ಒಂದೊಂದಾಗಿ ಆರಿ ಹೋಗುತ್ತವೆ ಅಷ್ಟೆ." ಎಂದ.

"ದೀಪದ ಬುಡದಿಂದ ಉರಿದು ಬತ್ತಿ ಮುಗಿಯುತ್ತಾ ಬಂದಿದೆ. ಈಗ ಯಾವ ಮಷಾಲ್‌ಚಿಯೂ ಬಂದು ಉಫ್ ಎಂದು ಆರಿಸಬೇಕಾಗಿಲ್ಲ. ಆದ್ದರಿಂದ ಹೆಚ್ಚಾಗಿಲ್ಲ. ಹತಾಶನಾಗಿ ಕೂಡಬೇಕಾಗಿಲ್ಲ. ಈ ಸಾಯುತ್ತಿರುವ ದೀಪದ ಮೇಲೆ ಕಾವಲು ಕೂತು ಏನೂ ಪ್ರಯೋಜನವಿಲ್ಲ. ಅದಕ್ಕೆ ಬದಲು ಪೂರ್ತಿ ಕತ್ತಲಲ್ಲಿಯೇ ನೆಮ್ಮದಿಯಾಗಿ ಇರಬಹುದು."

ಇದನ್ನು ಕೇಳಿ ಕಾಳೂವಿನ ಎದೆಯಲ್ಲಿ ವಿಪರೀತ ವ್ಯಥೆಯಾಯಿತು. ಇದು ಖಾಯಿಲೆಯ ಮನುಷ್ಯ ಆಡುವ ಮಾತು ಎಂದು ಅರಿವಾಯಿತು ಅವನಿಗೆ. ವಿಪ್ರದಾಸನು ಈ ತರಹ ಸೋಲೊಪ್ಪಿಕೊಂಡು ಹೋರಾಟ ಬಿಟ್ಟು ಕೂಡುವ ಮನುಷ್ಯನಲ್ಲ. ಪರಿಣಾಮವನ್ನು ತಪ್ಪಿಸುವುದಕ್ಕೋಸ್ಕರ ವಿಪ್ರದಾಸನು ಇಷ್ಟು ದಿನ ನಾನಾ ವಿಧವಾಗಿ ಕಾರ್ಯಕ್ರಮ ಕೈಗೊಂಡಿದ್ದ. ಅಪರಲ್ಲಿ ಅವನು ಜಯಶೀಲನಾಗುವನೆಂದು ಕಾಳುವಿಗೆ ವಿಶ್ವಾಸವಿತ್ತು. ಆದರೆಈಗ ಯೋಚನೆಯನ್ನೂ ಮಾಡಲಾರ, ವಿಶ್ವಾಸವಿಡುವುದಕ್ಕೂ ಶಕ್ತಿಯಿಲ್ಲ.

ಕಾಳೂ ಸ್ನಿಗ್ಧ ದೃಷ್ಟಿಯಿಂದ ವಿಪ್ರದಾಸನ ಮುಖದ ಕಡೆ ನೋಡುತ್ತಾ "ನೀವೇನೂ ಯೋಚನೆ ಮಾಡಬೇಕಾಗಿಲ್ಲ, ಅಣ್ಣ. ಏನೇನು ಮಾಡಬೇಕೋ ಅದನ್ನ ನಾನೇ ಮಾಡುತ್ತೇನೆ. ಹೋಗಿ ಒಂದು ಸಲ ದಳ್ಳಾಳಿಗಳ ಮನೆಗಳನ್ನು ಅಲೆದುಕೊಂಡು ಬರುತ್ತೇನೆ" ಎಂದ.

ಮರುದಿನ ವಿಪ್ರದಾಸನಿಗೆ ಇಂಗ್ಲೀಷಿನಲ್ಲಿ ಬರೆದ ಒಂದು ಕಾಗದ ಬಂತು. ಮಧುಸೂದನನ ಬರವಣಿಗೆ. ಬರವಣಿಗೆಯ ಭಾಷೆ ವಕಾಲತಿಯ ರೂಢಿಯ ಭಾಷೆ. ಬಹುಶಃ ಅಟಾರ್ನಿಯ ಕೈಯಿಂದ ಬರೆಯಿಸಿರಬಹುದು. "ಕುಮು ಅವರ ಮನೆಗೆ ವಾಪಸು ಬರುತ್ತಾಳೆಯೇ ಇಲ್ಲವೇ ಎಂದು ಖಂಡಿತವಾಗಿಯೂ ತಿಳಿಸಬೇಕು. ಅನಂತರ ಏನು ಮಾಡಬೇಕೋ ಅದನ್ನ ಮಾಡಲಾಗುತ್ತೆ." ಎಂದು ಬರೆದಿತ್ತು.

ವಿಪ್ರದಾಸನು ಕುಮುವನ್ನು "ಕುಮೂ, ಚೆನ್ನಾಗಿ ಎಲ್ಲ ವಿಷಯವನ್ನೂ ಯೋಚಿಸಿ ನೋಡಿದ್ದೀಯೋ?" ಎಂದು ಕೇಳಿದ.

ಕುಮು "ಯೋಚನೆ ಮಾಡುವುದೆಲ್ಲಾ ಆಗಿ ಹೋಗಿದೆ, ಅಣ್ಣ. ಆದ್ದರಿಂದಲೇ ಇವತ್ತು ಮನಸ್ಸು ಸಂಪೂರ್ಣವಾಗಿ ನಿಶ್ಚಿಂತೆಯಾಗಿದೆ. ಮುಂಚೆ ಇಲ್ಲಿ ಹೇಗೆ ಇದ್ದೆನೋ ಹಾಗೆಯೇ

ಈಗಲೂ ಇರುವಹಾಗೆ ಅನ್ನಿಸುತ್ತದೆ. ಈ ಮಧ್ಯೆಏನೇನು ನಡೆದಿದೆಯೋ ಎಲ್ಲಾ ಸ್ವಪ್ನ!" ಎಂದಳು

"ಒಂದು ಪಕ್ಷ ನಿನ್ನ ಮೇಲೆ ಜೋರು ಮಾಡಿ ಕರೆದುಕೊಂಡು ಹೋಗುವುದಕ್ಕೆ ಪ್ರಯತ್ನ ಮಾಡಿದರೆ ನೀನು ಆಗ ಜೋರಿನಿಂದಲೇ ಅದನ್ನ ಎದುರಿಸುವುದಕ್ಕೆ ಆಗುತ್ತದೆಯೇ?"

"ನಿನ್ನ ಮೇಲೆ ಏನೂ ಅನ್ಯಾಯ ನಡೆಸದೆ ಹೋದರೆ ತಡೆಯಬಲ್ಲೆ."

"ನಾನು ಯಾಕೆ ವಿಚಾರಿಸುತ್ತ ಇದ್ದೇನೆಂದರೆ, ಕೊನೆಗೆ ಹೋಗಲೇಬೇಕೆಂದು ಆದರೆ ಸಾವ ಕಾಶ ಮಾಡಿದಷ್ಟೂ ಕಷ್ಟಕ್ಕೆ ಬರುತ್ತದೆ. ಅವರ ಜೊತೆಯಲ್ಲಿ ನಿನ್ನ ಸಂಬಂಧದ ಸೂತ್ರ ಮನಸ್ಸಿ ನಲ್ಲಿ ಎಲ್ಲಾದರೂ ಕಟ್ಟಿಹಾಕಿಕೊಂಡಿದಿಯೇನು?"

"ಎಳ್ಳಷ್ಟೂ ಇಲ್ಲ, ನಾನು ಕೇವಲ ನವೀನ, ಮೋತಿಯಮ್ಮ, ಮತ್ತು ಹಾಬಲೂವನ್ನು ಪ್ರೀತಿಸುತ್ತೇನೆ. ಆದರೆ ಅವರುಗಳು ಸಂಪೂರ್ಣವಾಗಿ ಬೇರೆ ಮನೆಯವರಿದ್ದ ಹಾಗೆಯೇ."

"ಇಲ್ಲಿ ನೋಡು, ಕುಮು, ಅವರು ತೊಂದರೆ ಕೊಡುತ್ತಾರೆ. ಸಮಾಜದ ಬಲದಿಂದ, ಕಾನೂ ನಿನ ಬಲದಿಂದ, ತೊಂದರೆ ಕೊಡುವ ಸಾಮರ್ಥ್ಯ ಅವರಿಗಿದೆ, ಆದ್ದರಿಂದಲೇ ಅದನ್ನು ಅಂಗೀಕರಿ ಸಲೇ ಕೂಡದು. ಅಂಗೀಕರಿಸಲು ಹೋದರೆ ನಾಚುಗೆ, ಸಂಕೋಚ, ಭಯ ಎಲ್ಲ ತೆಗೆದು ಬಿಸಾಡಿ ಬಿಟ್ಟು ಸಮಾಜದ ಮುಂದೆ ಹೋಗಿ ನಿಲ್ಲಬೇಕು. ಮನೆಯೊಳಗೆ, ಹೊರಗೆ, ನಾಲ್ಕು ದಿಕ್ಕುಗಳಲ್ಲೂ ನಿಂದೆಯ ಸುಂಟರ ಗಾಳಿ ಎದ್ದು ಸುತ್ತುಗಟ್ಟುತ್ತದೆ. ಅದರ ಮಧ್ಯೆ ತಲೆ ಎತ್ತಿಕೊಂಡು ನಿಲ್ಲ ಬೇಕಾಗುತ್ತೆ."

"ಅಣ್ಣ, ಅದರಿಂದ ನಿನಗೇನಾದರೂ ಕೆಡಕು, ಅಶಾಂತಿ ಆದೀತೇ?"

ಕೆಡಕು, ಅಶಾಂತಿ ಅಂತ ಯಾವುದಕ್ಕೆ ಹೇಳುತ್ತೀಯ, ಕುಮು? ನೀನು ಅವಮಾನದ ಮಧ್ಯೆ ಮುಳುಗಿ ಹೊದರೆ ನನಗೆ ಅದಕ್ಕಿಂತಲೂ ಕೆಡುಕು ಆಗಲು ಸಾಧ್ಯವಿದೆಯೇ? ಯಾವ ಮನೆ ಯಲ್ಲಿ ನೀನು ಇದ್ದು ಅದು ನಿನ್ನ ಮನೆಯಾಗುವುದಿಲ್ಲವೋ, ನಿನ್ನ ಮೇಲೆ ಯಾರಿಗೆ ಏಕಾಂತದಲ್ಲಿ ಅಧಿಕಾರವಿದ್ದೂ ಅವರು ನಿನ್ನ ಮನಸ್ಸಿಗೆ ಹೊರಗಿನವರಾಗಿಯೇ ಉಳಿಯುವರೋ, ಆಗ ಅದ ಕ್ಕಿಂತಲೂ ಹೆಚ್ಚು ಅಶಾಂತಿ ಯಾವುದು ನನಗೆ ಕುಮು? ಅಪ್ಪ ನಿನ್ನನ್ನು ಬಹಳವಾಗಿ ಪ್ರೀತಿಸುತ್ತಿ ದ್ದರು. ಆದರೆ ಆಗಿನ ದಿನಗಳಲ್ಲಿ ಯಜಮಾನರಾಗಿದ್ದವರು ದೂರದಲ್ಲಿಯೇ ಇರುತ್ತಿದ್ದರು. ನಿನಗೆ ಓದುಬರೆಹದ ಅವಶ್ಯಕತೆಯಿದೆ ಎಂಬುದಾಗಿ ಅವರ ಮನಸ್ಸಿಗೇ ಬರುತ್ತಿರಲಿಲ್ಲ. ನಾನೇ ಮೊದಲಿನಿಂದಲೂ ಅಲ್ಪ ಸ್ವಲ್ಪ ಕಲಿಸಿದೇನೆ. ನಿನ್ನನ್ನು ಮನುಷ್ಯಳಾಗಿ ಮಾಡಿದ್ದೇನೆ ನಿನಗೆ ನಿನ್ನ ತಂದೆ ತಾಯಿಗಳಿಗಿಂತ ನಾನು ಯಾವ ವಿಧದಲ್ಲೂ ಕಡಮೆಯಿಲ್ಲ ಹಾಗೆ ಮನುಷ್ಯಳಾಗಿ ಮಾಡುವುದು ಅಂದರೆ ಏನು ಜವಾಬುದಾರಿ ಅನ್ನುವುದು ಈಗ ಅರ್ಥ ವಾಗುತ್ತಿದೆ. ನೀನು ಇತರ ಹುಡುಗಿಯರಹಾಗೆ ಇದ್ದಿದ್ದರೆ ನಿನಗೆಲ್ಲೂ ಕಷ್ಟವಾಗುತ್ತಿರಲಿಲ್ಲ ಇಂದು ಎಲ್ಲಿ ನಿನ್ನ ಸ್ವಚ್ಛಂದತೆಯನ್ನು ಯಾರೂ ಅರ್ಥಮಾಡಿಕೊಳ್ಳಲಾರರೋ ಗೌರವಿಸಲಾರರೋ ಅಂತಹ ಕಡೆ ನಿನಗೆ ನರಕ ಇದ್ದ ಹಾಗೆ. ನಾನು ನಿನ್ನನ್ನು ಅಂತ ಸ್ಥಳಕ್ಕೆ ಗಡೀಪಾರು ಮಾಡಿ ಹೇಗೆ ಪ್ರಾಣ ಇಟ್ಟುಕೊಂಡಿರಲಿ ಹೇಳು? ನೀನೇನಾದರೂ ನ ತಮ್ಮನಾಗಿದ್ದಿದ್ದರೆ ಹೇಗೆ ಇರುತ್ತಿದ್ದೆಯೋ ಹಾಗೆಯೇ ಚಿರದಿನವೂ ನನ್ನ ಹತ್ತಿರವೇ ಇದ್ ಬಿಡು."

ಅಣ್ಣನ ಎದೆಯ ಹತ್ತಿರ ಮಂಚದ ಪಕ್ಕದಲ್ಲಿ ತಲೆ ಇಟ್ಟುಕೊಂಡು ಮುಖವನ್ನು ಬ

ಯಾವ ಕಡೆಯೋ ತಿರುಗಿಸಿಕೊಂಡು ಕುಮು "ಆದರೆ ನಾನು ನಿನ್ನ ಮೇಲೆ ಹೊರೆಯಾಗಿ ಇರಲಾರೆ ಅಲ್ಲ?....ಖಂಡಿತ ಇರಲಾರೆ." ಎಂದಳು.

ಕುಮುವಿನ ತಲೆಯ ಮೇಲೆ ಕೈಯಾಡಿಸುತ್ತ ವಿಪ್ರದಾಸನು "ಹೊರೆ ಹೇಗಾಗುತ್ತೀಯೆ, ತಂಗಿ? ನಾನು ನಿನ್ನ ಕೈಯಿಂದ ಚೆನ್ನಾಗಿ ಕೆಲಸಮಾಡಿಸುತ್ತೇನೆ. ನನ್ನ ಕೆಲಸಗಳನ್ನೆಲ್ಲಾ ನಿನಗೇ ಒಪ್ಪಿಸಿಬಿಡುತ್ತೇನೆ. ಯಾವ ಪ್ರೈವೇಟ್ ಸೆಕ್ರೆಟರಿ ಕೂಡ ಅಷ್ಟು ಕೆಲಸಗಳನ್ನು ಮಾಡುವುದಿಲ್ಲ. ನನ್ನ ಮುಂದೆ ನೀನು ಏಸ್‌ರಾಜ್ ಬಾರಿಸ ಬೇಕಾಗುತ್ತೆ. ನನ್ನ ಕುದುರೆಯನ್ನು ನೋಡಿಕೊಳ್ಳು ವುದೂ ನಿನ್ನ ಜವಾಬುದಾರಿಯಾಗುತ್ತದೆ. ಅಷ್ಟೇ ಅಲ್ಲದೆ, ನಿನಗೆ ಗೊತ್ತಿದೆಯಲ್ಲ. ನನಗೆ ಇತರರಿಗೆ ಕಲಿಸಿಕೊಡಬೇಕೆಂದರೆ ಬಹಳ ಇಷ್ಟ. ನಿನ್ನಂತಹ ಶಿಷ್ಯಳೆಲ್ಲಿ ಸಿಗುತ್ತಾಳೆ ಹೇಳು ನನಗೆ? ಒಂದು ಕೆಲಸ ಮಾಡಬೇಕು ಮೊದಲು. ಬಹಳ ದಿನಗಳಿಂದ ಪರ್ಶಿಯನ್ ಭಾಷೆ ಕಲಿಯುವ ಆಸೆ ನನಗೆ ಇದೆ. ಒಬ್ಬನೇ ಕಲಿಯುವುದಕ್ಕೆ ಇಷ್ಟವಿಲ್ಲ. ನಾವಿಬ್ಬರೂ ಸೇರಿ ಕಲಿಯೋಣ. ನೀನು ಖಂಡಿತ ನನಗಿಂತಲೂ ಮುಂದೆ ಹೋಗಿ ಬಿಡುತ್ತಿ, ಗೊತ್ತು. ನಾನು ನಿನಗೆ ಸ್ವಲ್ಪವೂ ಹಿಂಸೆ ಪಡಿಸುವುದಿಲ್ಲ, ನೋಡುತ್ತಿರು." ಎಂದ.

ಕೇಳುತ್ತಾ ಕೇಳುತ್ತಾ ಕುಮುವಿನ ಮನಸ್ಸು ಪುಳಕಿತವಾಗಿ ಹೋಯಿತು. ಇದಕ್ಕಿಂತಲೂ ಜೀವನದಲ್ಲಿ ಸುಖ ಬೇರೆ ಯಾವುದೂ ಇರಲಾರದು.

ಸ್ವಲ್ಪ ಹೊತ್ತಾದ ಮೇಲೆ ವಿಪ್ರದಾಸನು ಮತ್ತೆ "ಮತ್ತೊಂದು ಮಾತನ್ನು ನಿನಗೆ ಈಗಲೇ ಹೇಳುತ್ತೇನೆ ಕುಮು. ಅತಿ ಶೀಘ್ರದಲ್ಲಿಯೇ ನಮ್ಮಗಳ ಸ್ಥಿತಿ ಬದಲಾವಣೆಯಾಗುತ್ತೆ. ನಮ್ಮ ಗಳ ಪದ್ಧತಿಗಳೂ ಮಾರ್ಪಾಡಾಗುತ್ತವೆ. ನಾವುಗಳು ಬಡವರ ರೀತಿಯಲ್ಲಿ ಇರಬೇಕಾಗುತ್ತದೆ. ಆಗ ನೀನು ನಮ್ಮ ಬಡತನದ ಐಶ್ವರ್ಯವಾಗಿರುತ್ತಿ." ಎಂದ.

ಕುಮುವಿನ ಕಣ್ಣಲ್ಲಿ ನೀರು ತುಂಬಿತು.

"ನನಗೆ ಅಂತಹ ಭಾಗ್ಯ ಬಂದರೆ ಆಗ ಬದುಕಿಕೊಳ್ಳುತ್ತೇನೆ." ಎಂದಳು.

ವಿಪ್ರದಾಸನು ಮಧುಸೂದನನ ಕಾಗದವನ್ನು ಹಾಗೇ ಇಟ್ಟು ಬಿಟ್ಟ. ಜವಾಬು ಕೊಡಲಿಲ್ಲ.

## ಐವತ್ತಾರನೆಯ ಅಧ್ಯಾಯ

ಎರಡು ದಿನಗಳಾದ ಮೇಲೆ ನವೀನನೂ, ಮೋತಿಯಮ್ಮನೂ ಹಾಬಲುವನ್ನು ಸಂಗಡ ಕರೆದುಕೊಂಡು ಬಂದು ನಿಂತರು. ಹಾಬಲೂ ದೊಡ್ಡಮ್ಮನ ತೊಡೆಯ ಮೇಲೆ ಹತ್ತಿ ಅವಳ ಎದೆಯ ಮೇಲೆ ಮುಖವಿಟ್ಟು ಅತ್ತ....ಅತ್ತದ್ದು ಯಾವ ಕಾರಣಕ್ಕೋ ಹೇಳಲು ಅಸಾಧ್ಯ. ಕಳೆದು ಹೋದದ್ದಕ್ಕಾಗಿ ಸಂಕಟವೇ ? ಅಥವಾ ನಡೆಯುತ್ತಿರುವುದಕ್ಕಾಗಿ ಮುಷ್ಕರವೋ, ಇಲ್ಲವೇ ಮುಂದೆ ನಡೆಯುವುದಕ್ಕಾಗಿ ಚಿಂತೆಯೋ ?

ಕುಮು ಹಾಬಲೂವನ್ನು ತಬ್ಬಿಕೊಂಡು "ಕಠಿಣವಾದ ಪ್ರಪಂಚ, ಗೋಪಾಲ, ಅಳುವು ದಕ್ಕೆ ಕೊನೆಯಿಲ್ಲ. ನನ್ನದೆನ್ನುವುದೇನಿದೆ? ಮನುಷ್ಯರ, ಮಕ್ಕಳ ಅಳುವನ್ನು ಸಂತೈಸುವುದಕ್ಕೆ ನಾನು ಏನು ತಾನೇ ಕೊಡಬಲ್ಲೆ? ಅಳುವಿನಿಂದಲೇ ಅಳುವನ್ನು ನಿಲ್ಲಿಸಲು ಇಷ್ಟ. ಅದಕ್ಕಿಂತಲೂ ಹೆಚ್ಚು ನನ್ನ ಕೈಯಲ್ಲಾಗದು. ನಿನ್ನಲ್ಲಿ ನಾನು ತೋರಿಸಿರುವ ಪ್ರೀತಿಗಿಂತಲೂ ಅಧಿಕವಾಗಿ ನಾನೇನೂ ಕೊಡಲಾರೆ, ಮಗೂ, ಆ ಪ್ರೀತಿ ನಿನಗೆ ದೊರಕಿದೆ. ನಿಮ್ಮ ದೊಡ್ಡಮ್ಮ ಸದಾ ಇರಲಾರಳು.

ಆದರೆ ಈ ಮಾತನ್ನ ಮಾತ್ರ ಮನಸ್ಸಿನಲ್ಲಿಡು." ಎಂದು ಹೇಳಿ ಅವನ ಕೆನ್ನೆಯನ್ನು ಮುತ್ತಿಟ್ಟಳು. ನವೀನನು "ಅತ್ತಿಗೆ, ಈಸಲ ರಜಬಪುರದ ನಮ್ಮ ಪೂರ್ವಿಕರ ಮನೆಗೆ ಹೋಗುತ್ತೇವೆ. ಇಲ್ಲಿನ ಪರ್ವ ಮುಗಿದ ಹಾಗೆ." ಎಂದ.

ಕುಮು ವ್ಯಾಕುಲಿತಳಾಗಿ "ನಾನೊಬ್ಬ ನತದೃಷ್ಟೆ ಬಂದು ನಿಮಗೆ ಈ ಕಷ್ಟ ತಂದೊಡ್ಡಿದೆ," ಎಂದಳು.

ನವೀನನು "ಎಂದಿಗೂ ಇಲ್ಲ. ಇನ್ನೂ ಅದಕ್ಕೆ ವಿರುದ್ಧವಾಗಿಯೇ ಆಗಿದೆ. ಬಹಳ ದಿನ ಗಳಿಂದಲೂ ಮನಸ್ಸು ಹೋಗೋಣ ಹೋಗೋಣ ಎನ್ನುತ್ತಲೇ ಇತ್ತು. ಎಷ್ಟೋ ಸಲ ಗಂಟು, ಮೂಟೆ ಕಟ್ಟಿ ಹೊರಡುವುದಕ್ಕೂ ತಯಾರಾಗಿದ್ದೆ. ಇಂತಹ ಸಮಯದಲ್ಲಿ ನೀನು ನಮ್ಮ ಮನೆಗೆ ಬಂದೆ. ಮನೆಯ ಆಶೆಯನ್ನು ನೀನು ಪೂರ್ಣ ಮಾಡಿದ್ದೆ. ಆದರೆ ವಿಧಾತನಿಗೆ ಸಹಿಸಲಿಲ್ಲ." ಎಂದ.

ಅಂದಿನ ದಿನ ಮಧುಸೂದನ ಮನೆಗೆ ವಾಪಸು ಹೋಗಿ ದೊಡ್ಡ ಗಲಾಟೆಯೆಬ್ಬಿಸಿದ್ದನೆಂದು ಅರ್ಥವಾಯಿತು.

ನವೀನನು ಏನೆಂದರೂ ಮೋತಿಯಮ್ಮ ಮಾತ್ರ ಕುಮುವೇ ತಮ್ಮ ಸಂಸಾರದಲ್ಲಿ ಎಲ್ಲ ತಲೆ ಕೆಳಗು ಮಾಡಿ ಬಿಟ್ಟಿದಾಳೆಂದು ಖಂಡಿತವಾಗಿ ತಿಳಿದಿದ್ದಳು. ಈ ವಿಷಯದಲ್ಲಿ ಅವಳು ಕುಮು ವನ್ನು ಮನ್ನಿಸಲು ತಯಾರಾಗಿರಲಿಲ್ಲ. ಈಗಲೂ ಕುಮು ತಲೆ ತಗ್ಗಿಸಿಕೊಂಡು ಅತ್ತೆಯ ಮನೆಗೆ ಹೋಗುವುದೇ ಒಳ್ಳೆಯದು....ಆ ಮೇಲೆ ಎಷ್ಟು ಅವಮಾನವಾದರೂ ಅದನ್ನ ಮನಸ್ಸಿನಲ್ಲೇ ಇಟ್ಟು ಕೊಳ್ಳಬೇಕು, ಎಂದು ಅವಳ ಅಭಿಪ್ರಾಯ.

ದನಿಯನ್ನು ಸ್ವಲ್ಪ ಕಠಿಣವಾಗಿಯೇ ಮಾಡಿಕೊಂಡು "ನೀನು ಅತ್ತೆಯ ಮನೆಗೆ ಎಂದಿಗೂ ಬರುವುದೇ ಇಲ್ಲ ಅಂತ ಮನಸ್ಸು ಮಾಡಿಬಿಟ್ಟಿದ್ದೀಯಾ ಹಾಗಾದರೆ? ಎಂದಳು. ಕುಮು ಅದಕ್ಕೆ ಉತ್ತರ ಕೊಡಲು ಸ್ವಲ್ಪ ಕಷ್ಟದಿಂದಲೇ "ಇಲ್ಲ, ಹೋಗುವುದಿಲ್ಲ" ಎಂದಳು.

ಮೋತಿಯಮ್ಮನು "ಹಾಗಾದರೆ ಮುಂದೇನು ಗತಿ?" ಎಂದಳು. ಕುಮು "ಈ ಭೂಮಿ ಎಷ್ಟೋ ದೊಡ್ಡದು. ಇದರ ಮಧ್ಯೆ ಯಾವುದೋ ಒಂದು ಜಾಗದಲ್ಲಿ ನನಗೂ ಒಂದಿಷ್ಟು ನೆಲ ಸಿಗುತ್ತದೆ. ಬಾಳಿನಲ್ಲಿ ಎಷ್ಟೋ ಭಾಗ ಹರಿದು ಹೋಗುತ್ತದೆ. ಆದರೂ ಅಲ್ಪ ಸ್ವಲ್ಪ ಇರುತ್ತದೆ." ಎಂದಳು.

ಕುಮು ಮೋತಿಯಮ್ಮನ ಮನಸ್ಸು ತನ್ನಿಂದ ಬಹುದೂರ ಸರಿದು ಹೋಗಿದೆಯೆಂದು ತಿಳಿದು ಕೊಂಡಳು. ಆ ಮೇಲೆ ನವೀನನನ್ನು ಕುರಿತು "ನವೀನಣ್ಣ, ಹಾಗಾದರೆ ಏನು ಮಾಡುತ್ತೀ ಈಗ?" ಎಂದಳು.

"ನದಿಯ ಅಂಚಿನಲ್ಲಿಯೇ ಸ್ವಲ್ಪ ಜಮೀನಿದೆ. ಅದರಿಂದ ಒಂದಿಷ್ಟು ದಪ್ಪಕ್ಕಿಯೂ ಸಿಕ್ಕುತ್ತೆ, ಸ್ವಲ್ಪ ನಿರ್ಮಲವಾದ ವಾಯು ಸೇವನೆಯೂ ಆಗುತ್ತೆ."

ಮೋತಿಯಮ್ಮನು ಸ್ವಲ್ಪ ಕೋಪದಿಂದಲೇ "ಓ ಮಹಾರಾಯರೆ, ಅದಕ್ಕಾಗಿ ನೀವು ಯೋಚ ನೆಯೇ ಮಾಡಬೇಕಾಗಿಲ್ಲ. ಇದೇ ಮಿರ್ಜಾಪುರದ ಅನ್ನ ನೀರಿನ ಋಣ ನಮಗಿನ್ನೂ ಇದೆ. ಅದನ್ನು ಯಾರೂ ನಮ್ಮಿಂದ ಕಿತ್ತುಕೊಳ್ಳುವ ಹಾಗಿಲ್ಲ. ನಾವಂತೂ ಅಷ್ಟು ಅಭಿಮಾನವಂ ತೇನಲ್ಲ, ಯಜಮಾನರು ಸ್ವಲ್ಪ ಬೈದಾಕ್ಷಣ ಮುನಿಸಿಕೊಂಡು ಬೈರಾಗಿಗಳ ಹಾಗೆ ಹೊರಟು ಹೋಗುವುದಕ್ಕೆ! ಅವರೇ ಇವತ್ತಲ್ಲ, ನಾಳೆ ವಾಪಸು ಕರೆದೇ ಕರೆಯುತ್ತಾರೆ. ಆಗ ವಾಪ

ಬಂದೂ ಬರುತ್ತೇವೆ. ಈ ಮಧ್ಯೆ ಸ್ವಲ್ಪ ಸಾವಕಾಶವಾದರೂ, ಸಹಿಸಿಕೊಂಡು ಹೋಗುತ್ತೇವೆ. ಈ ಮಾತು ನೋಡಿ, ಈಗಲೇ ಹೇಳಿದ್ದೇನೆ." ಎಂದಳು. ನವೀನನು ಸ್ವಲ್ಪ ಖಿನ್ನನಾಗಿ "ಆಗಲಿ ಕಣೆ, ನನಗೆ ಆ ವಿಷಯ ಗೊತ್ತಿಲ್ಲದೆ ಇಲ್ಲ. ಆದರೆ ಅದನ್ನು ಕುರಿತು ಬಡಾಯಿ ಕೊಚ್ಚಿಕೊಳ್ಳು ವುದಿಲ್ಲ, ಪುನರ್ಜನ್ಮವೇನಾದರೂ ಇದ್ದರೆ ಆಗ ಸನ್ಯಾಸಿಯಾಗಿಯೇ ಹುಟ್ಟುತ್ತೇನೆ. ಅದರಿಂದ ಅನ್ನ ನೀರಿಗೇನಾದರೂ ಕಿತ್ತಾಟ ಬಂದರೆ ಅದನ್ನೂ ಸ್ವೀಕಾರ ಮಾಡುತ್ತೇನೆ." ಎಂದ.

ನಿಜವಾಗಿ ನವೀನನೇ ಅನೇಕಸಲ ಅಣ್ಣನ ಆಶ್ರಯ ಬಿಟ್ಟು ಗ್ರಾಮದಲ್ಲಿ ಬೇಸಾಯದ ಜೀವನ ಮಾಡಬೇಕೆಂದು ಸಂಕಲ್ಪಮಾಡಿದ್ದ. ಮೋತಿಯಮ್ಮನು ಬಾಯಲ್ಲಿ ಮಾತ್ರ ಆರ್ಭಟ ಮಾಡಿದ್ದಳು. ಆದರೆ ತೀರ್ಮಾನವನ್ನು ಆಚರಣೆಗೆ ತರಬೇಕಾದಾಗ ಏನು ಮಾಡಿದರೂ ಕದಲ ಲಿಲ್ಲ. ನವೀನನನ್ನು ಬಾರಿ ಬಾರಿಗೂ ಅಡ್ಡಿಮಾಡಿದ್ದಳು. ಭಾವಂದಿರ ಮೇಲೆ ತಮಗೆ ಪೂರ್ತಿ ಹಕ್ಕಿದೆಯೆಂದೂ ಅವಳ ಅಭಿಪ್ರಾಯ. ಈಗ ಭಾವಂದಿರು ತಾನೇ ಮಾವಂದಿರ ಸ್ಥಾನದಲ್ಲಿರುವುದು? ಭಾವಂದಿರು ಅನ್ಯಾಯ ಮಾಡಿದರೂ ಅದನ್ನ ಅವಮಾನವೆಂದೆಣಿಸ ಕೂಡದೆಂದು ಅವಳ ಮತ. ಕುಮುವಿನ ಬಗ್ಗೆ ಅವಳ ಗಂಡನ ವ್ಯವಹಾರ ಹೇಗೇ ಇದ್ದರೂ ಹಾಗೆಂದು ಹೇಳಿ ಕುಮು ಗಂಡನ ಮನೆಯನ್ನೇ ಬಿಟ್ಟು ಬಿಡುವುದು ಮೋತಿಯಮ್ಮನಿಗೆ ಅತ್ಯಂತ ವಿಚಿತ್ರವೆನ್ನಿಸಿತು.

ಡಾಕ್ಟರು ಬಂದಿದ್ದಾರೆಂದು ಸಮಾಚಾರ ಬಂತು. ಕುಮು "ಸ್ವಲ್ಪ ಕೂತುಕೊಂಡಿರಿ. ಡಾಕ್ಟರು ಏನು ಹೇಳುತ್ತಾರೋ ಕೇಳಿಕೊಂಡು ಬರುತ್ತೇನೆ." ಎಂದಳು.

ಡಾಕ್ಟರು ಕುಮುವಿಗೆ "ನಾಡಿ ಇನ್ನೂ ಕೆಟ್ಟು ಹೋಗಿದೆ. ರಾತ್ರಿ ನಿದ್ದೆ ಕಡಿಮೆ ಯಾಗಿದೆಯೆಂದು ಕಾಣುತ್ತದೆ. ರೋಗಿ ತಕ್ಕಷ್ಟು ವಿಶ್ರಾಂತಿ ತೆಗೆದುಕೊಳ್ಳುವ ಹಾಗೆ ಕಾಣುವು ದಿಲ್ಲ." ಎಂದರು.

ಕುಮು ಡಾಕ್ಟರನ್ನು ನೋಡಿ ವಾಪಸು ಬರುತ್ತಿದ್ದಾಗ ಕಾಳೂ ಬಂದು "ಒಂದು ಮಾತನ್ನು ಹೇಳದೆ ಇರಲು ಸಾಧ್ಯವಿಲ್ಲ, ಮಗು. ಸುತ್ತ ಹರಡಿರುವ ಬಲೆ ಬಹಳ ಬಿಗಿಯಾಗುತ್ತ ಬಂದಿದೆ. ನೀನು ಈ ಸಮಯದಲ್ಲಿ ಅತ್ತೆಯ ಮನೆಗೆ ಹೋಗದೆ ಇದ್ದ ಪಕ್ಷದಲ್ಲಿ ವಿಪತ್ತು ಇನ್ನೂ ಜೋರಾಗು ತ್ತದೆ. ನನಗಂತೂ ಯಾವ ದಾರಿಯೂ ತೋಚದು" ಎಂದ.

ಕುಮು ಮಾತಾಡದೆ ಸುಮ್ಮನಿದ್ದಳು. ಕಾಳು ಮತ್ತೆ "ನಿನ್ನ ಗಂಡನ ಕಡೆಯಿಂದ ತಗಾದೆ ಬಂದಿದೆ. ಅದನ್ನು ನಿರ್ಲಕ್ಷ್ಯ ಮಾಡುವ ಶಕ್ತಿಯಿದೆಯೇನು ನಮಗೆ? ನಾವಂತೂ ಸಂಪೂರ್ಣವಾಗಿ ಅವರ ಕೈಯಲ್ಲಿದ್ದೇವೆ." ಎಂದ.

ಕುಮು ವರಾಂಡದ ಸಲಾಕಿಯನ್ನು ಹಿಡಿದು ಕೊಂಡು "ನನಗೇನೂ ತೋಚುವುದಿಲ್ಲ, ಕಾಳಣ್ಣ. ಪ್ರಾಣ ಸುಮ್ಮನೆ ಉಸಿರುಬಿಡುತ್ತಿದೆ, ಸಾವು ಬಿಟ್ಟರೆ ಬೇರೆ ಯಾವ ಮಾರ್ಗವೂ ಇಲ್ಲವೆಂದು ಮನಸ್ಸಿಗೆ ಅನ್ನಿಸುತ್ತಿದೆ." ಎಂದು ಹೇಳಿ ಬೇಗ ಬೇಗ ಹೊರಟು ಹೋದಳು.

ಅಣ್ಣನ ಕೊಠಡಿಯಲ್ಲಿ ಕುಮು ಇದ್ದಾಗ ಅದೇ ಅವಕಾಶ ಮಾಡಿಕೊಂಡು ಮೋತಿಯಮ್ಮನು ಕ್ಷೇಮಾ ಅತ್ತೆಯೊಂದಿಗೆ ಸ್ವಲ್ಪ ಮಾತು ಕಥೆಯಾಡಿದಳು. ನಾನಾ ರೀತಿಯ ಲಕ್ಷಣಗಳನ್ನು ಗಮನಿಸಿ ನೋಡಿದ ಮೇಲೆ ಕುಮು ಗರ್ಭಿಣಿಯೆಂದು ಇಬ್ಬರಿಗೂ ಸಂದೇಹವಾಗಿತ್ತು. ಮೋತಿಯ ಮ್ಮನಿಗೆ ಬಹಳ ಸಂತೋಷವಾಗಿ ಹೋಯಿತು. ಮನಸ್ಸಿನಲ್ಲೇ "ತಾಯಿ, ನಮ್ಮಮ್ಮ, ಕಾಳೀ, ಇದನ್ನು ನಿಜವಾಗುವಂತೆ ಮಾಡಮ್ಮ....ಹಾ....ಈಸಲ ಸಿಕ್ಕಿ ಹಾಕಿಕೊಂಡಳು....ಈ ಮಾನಿಷೆ

ಅತ್ತೆಯ ಮನೆಯನ್ನೇ ನಿರ್ಲಕ್ಷ್ಯ ಮಾಡಬೇಕೆಂದಿದ್ದಳು. ಈಗ ನಾಡಿಯಲ್ಲೇ ಗಂಟು ಬಿದ್ದು ಹೋಯಿತು. ಸುಮ್ಮನೆ ಸೆರಗು ಅಂಗ ವಸ್ತ್ರಗಳ ಗಂಟಲ್ಲ. ಈಗ ಹೇಗೆ ಓಡಿ ಹೋದಾಳು ?" ಎಂದು ಕೊಂಡಳು.

ಕುಮುವನ್ನು ಮರೆಯಾಗಿ ಕರೆದುಕೊಂಡು ಹೋಗಿ ಮೋತಿಯಮ್ಮನು ತನ್ನ ಸಂದೇಹದ ವಿಷಯವನ್ನು ಹೇಳಿದಳು. ಕುಮುವಿನ ಮುಖವು ವಿವರ್ಣವಾಗಿ ಹೋಯಿತು. ಅವಳು ಕೈ ಮುಷ್ಟಿಯನ್ನು ಬಿಗಿಯಾಗಿ ಹಿಡಿದುಕೊಂಡು "ಇಲ್ಲ, ಇಲ್ಲ....ಇದು ಎಂದಿಗೂ ಸಾಧ್ಯವಾಗುವುದಿಲ್ಲ. ಏನೂ ಮಾಡಿದರೂ ಇಲ್ಲ!" ಎಂದಳು.

ಮೋತಿಯಮ್ಮನು ರೇಗಿ "ಯಾಕಮ್ಮಾ ಸಾಧ್ಯವಿಲ್ಲ? ನೀನು ಎಷ್ಟೇ ದೊಡ್ಡವರ ಮನೆಯ ಹೆಣ್ಣಾದರೇನು, ನಿನ್ನ ವಿಷಯದಲ್ಲಿ ಮಾತ್ರ ಸಂಸಾರದ ನಿಯಮ ತಲೆ ಕೆಳಗಾಗುವುದಿಲ್ಲ. ನೀನು ಘೋಷಾಲರ ಮನೆಯ ಸೊಸೆ ತಾನೇ? ಘೋಷಾಲ ವಂಶದ ಇಷ್ಟ ದೇವತೆ ನಿನ್ನನ್ನು ಸಹಜ ವಾಗಿಯೇ ಬಿಟ್ಟು ಬಿಡುತ್ತಾಳೆಯೇ? ಓಡಿ ಹೋಗುವ ದಾರಿಗಡ್ಡವಾಗಿ ನಿಂತಿದ್ದಾಳೆ ಆಕೆ!" ಎಂದಳು.

ಗಂಡನ ಜೊತೆಯಲ್ಲಿ ಕುಮುವಿನ ಅಲ್ಪಕಾಲದ ಸಂಪರ್ಕವು ದಿನ ದಿನಕ್ಕೆ ಒಳಗೊಳಗೇ ಎಂತಹ ವಿಕೃತ ರೂಪವನ್ನು ಪಡೆದಿತ್ತು ಎನ್ನುವುದು ಗರ್ಭದ ಸಂದೇಹದಿಂದ ಅವಳ ಮನಸ್ಸಿಗೆ ಚೆನ್ನಾಗಿ ಸ್ಪಷ್ಟವಾಗತೊಡಗಿತು. ಮನುಷ್ಯ ಮನುಷ್ಯರಿಗೆ ಇರುವ ವ್ಯತ್ಯಾಸ ಎಲ್ಲಕ್ಕಿಂತಲೂ ಅತಿಕ್ರಮಿಸಲಸಾಧ್ಯವಾದುದು. ಅದರ ಸಲಕರಣೆಗಳು ಎಷ್ಟೋ ಸಲ ಬಹಳ ಸೂಕ್ಷ್ಮವಾದುವು. ಭಾಷೆಯಲ್ಲಿ, ಭಂಗಿಯಲ್ಲಿ, ವ್ಯವಹಾರದ ಸಣ್ಣ, ಪುಟ್ಟ ಸೂಚನೆಗಳಲ್ಲಿ, ಏನೂ ಮಾಡದೆ ಇರುವ ಸಮಯದಲ್ಲೂ ಕೂಡ, ಆ ಸಮಯದ ಅನಭಿವ್ಯಕ್ತ ಇಂಗಿತಗಳಲ್ಲಿ, ಕೊರಳಿನ ದನಿಯಲ್ಲಿ, ರುಚಿ ಯಲ್ಲಿ, ರೀತಿಯಲ್ಲಿ, ಬಾಳಿನಾದರ್ಶದಲ್ಲಿ, ಈ ಭೇದದ ಲಕ್ಷಣಗಳು ತಮ್ಮ ಬೆಳಕನ್ನು ಹರಡಿರು ತ್ತವೆ. ಮಧುಸೂದನನಲ್ಲಿ ಕುಮುವನ್ನು ಬಲವಾಗಿ ನೋಯಿಸುವುದೊಂದೇ ಅಲ್ಲ ಇದ್ದುದು. ತಡೆಯ ಲಾರದಷ್ಟು ನಾಚುಗೆಯನ್ನುಂಟು ಮಾಡುವುದೂ ಇತ್ತು. ಅದು ಅಶ್ಲೀಲವೆಂದು ಅವಳ ಮನಸ್ಸಿಗೆ ಅನ್ನಿಸಿತು. ಮಧುಸೂದನ ತನ್ನ ಬದುಕಿನ ಮೊದಲ ದಿನಗಳಲ್ಲಿ ಅತ್ಯಂತ ಬಡವನಾಗಿದ್ದ. ಆದರಿಂದಲೇ ದುಡ್ಡಿನ ದೊಡ್ಡಸ್ತಿಕೆಯ ಸಂಬಂಧವಾಗಿ ಅವನು ಮಾತು ಮಾತಿನಲ್ಲಿಯೂ ವ್ಯಕ್ತ ಪಡಿಸುತ್ತಿದ್ದ ಗರ್ವದಲ್ಲಿ ಅವನ ರಕ್ತಗತವಾದ ದಾರಿದ್ರ್ಯದ ಹೀನತೆಯಿತ್ತು. ಈ ಹಣದ ಪೂಜೆಯ ಮಾತನ್ನು ಮಧುಸೂದನ ಕುಮುವಿನ ತೌರುಮನೆಯವರನ್ನು ಬಾರಿ ಬಾರಿಗೂ ಹೀಯಾಳಿಸುವುದ ಕ್ಕಾಗಿ ಎತ್ತುತ್ತಿದ್ದ. ಅವನ ಸ್ವಾಭಾವಿಕ ಹೀನತೆ, ಮಾತಿನ ಕರ್ಕಶತೆ, ಡಾಂಭಿಕವಾದ ಅಸಭ್ಯತೆ ಒರಟಾದ ನಡವಳಿಕೆ, ಮತ್ತು ಸಂಸಾರದಲ್ಲಿ ಅವನ ಆಂತರಿಕ ಸಂಕೀರ್ಣತೆ ಪ್ರತಿ ಕ್ಷಣವು ಕುಮುವಿನ ಮನಸ್ಸನ್ನೂ, ಹೃದಯವನ್ನೂ ಸಂಕುಚಿತ ಮಾಡುತ್ತಿತ್ತು. ಇವುಗಳನ್ನು ದೃಷ್ಟಿ ಯಿಂದಲೂ ಯೋಚನೆಯಿಂದಲೂ ಎಷ್ಟೇ ದೂರವಿಡಲು ಪ್ರಯತ್ನಿಸಿದರೂ ಅವುಗಳು ಮತ್ತೆ ಮತ್ತೆ ಕಸದ ರಾಶಿಯಂತೆ ನಾಲ್ಕು ದಿಕ್ಕಿನಲ್ಲಿಯೂ ಶೇಖರವಾಗುತ್ತಿದ್ದುವು. ತನ್ನ ಮನಸ್ಸಿನಲ್ಲಿದ್ದ ಅಸಹನೆ ಯನ್ನು ಕುಮು ಸರ್ವ ಪ್ರಯತ್ನದಿಂದಲೂ ತುಳಿಯಲು ಪ್ರಯತ್ನಿಸಿದ್ದಳು. ಪತಿ ಪೂಜೆಯ ಕರ್ತವ್ಯದ ವಿಷಯದಲ್ಲಿ ತನ್ನ ಸಂಸ್ಕಾರವನ್ನು ಶುದ್ಧವಾಗಿಟ್ಟುಕೊಳ್ಳಲು ಅವಳು ಮಾಡುತ್ತಿದ್ದ ಪ್ರಯತ್ನಗಳಿಗೆ ಕೊನೆಯಿರಲಿಲ್ಲ. ಆದರೆ ಎಷ್ಟು ದೊಡ್ಡ ಸೋಲಾಗಿದೆ ! ಎಂದು ಇದಕ್ಕೆ ಮೊದಲು ಇಷ್ಟು ಮಟ್ಟಿ

ತಿಳಿದಿರಲಿಲ್ಲ. ಮಧುಸೂದನನ ಸಂಗಡ ಅವಳ ರಕ್ತ ಮಾಂಸದ ಸಂಬಂಧ ಇನ್ನು ಕಡಿಯಲಾರದು ದಾಗಿತ್ತು. ಇದರ ಬೀಭತ್ಸತನವು ಅವಳಿಗೆ ತಡೆಯಲಾರದ ನೋವನ್ನುಂಟುಮಾಡಿತ್ತು. ಕುಮು ಅತ್ಯಂತ ಉದ್ವಿಗ್ನವಾದ ಮುಖದೊಡನೆ ಮೋತಿಯಮ್ಮನನ್ನು "ಯಾವ ರೀತಿಯಲ್ಲಿ ನೀನು ಇದನ್ನು ಖಂಡಿತವೆಂದು ತಿಳಿದುಕೊಂಡೆ?" ಎಂದು ಕೇಳಿದಳು.

ಮೋತಿಯಮ್ಮನಿಗೆ ಬಹಳ ಕೋಪ ಬಂತು. ತಡೆದುಕೊಂಡು "ನಾನು ಮಗುವಿನ ತಾಯಿ, ನನಗೆ ತಿಳಿಯದೆ ಹೋದರೆ ಯಾರಿಗೆ ತಿಳಿದೀತು? ಆದರೂ ಪೂರ್ತಿಯಾಗಿ ನಿರ್ಧರಿಸಿ ಹೀಗೇ ಎಂದು ಹೇಳುವುದಕ್ಕೆ ಸಮಯವಿನ್ನೂ ಆಗಿಲ್ಲ. ಅನುಭವವಿರುವ ಯಾವಳಾದರೂ ಸೂಲಗಿತ್ತಿಯನ್ನು ಕರೆಸಿ ಪರೀಕ್ಷೆ ಮಾಡುವುದು ಉತ್ತಮ." ಎಂದಳು.

ನವೀನ, ಮೋತಿಯಮ್ಮ, ಹಾಬಲೂ ಇವರುಗಳು ಹೊರಡುವ ಸಮಯವಾಯಿತು. ಆದರೆ ದೈವದ ಈ ಕೊನೆಯ ಅನ್ಯಾಯದ ವಿಷಯ ಹೊರತು ಕುಮುವಿಗೆ ಇಂದು ಬೇರೆ ಯಾವ ವಿಷಯದಲ್ಲೂ ಮನಸ್ಸಿಡಲು ಸಾಧ್ಯವಾಗಲಿಲ್ಲ. ಆದ್ದರಿಂದಲೇ ಬಹಳ ಸಾಮಾನ್ಯ ರೀತಿಯಲ್ಲಿಯೇ ಈ ಅತ್ತೆಯ ಮನೆಯ ಬಂಧುಗಳನ್ನು ಬೀಳ್ಕೊಡಬೇಕಾಯಿತು. ಹೋಗುವಾಗ ನವೀನನು "ಅತ್ತಿಗೆ, ಪ್ರಪಂಚದಲ್ಲಿ ಎಲ್ಲ ವಸ್ತುಗಳಿಗೂ ಒಂದು ಅಂತ್ಯವಿದೆ. ಆದರೆ ನಿನ್ನ ಸೇವೆ ಮಾಡುವ ಭಾಗ್ಯ ಅಕಸ್ಮಾತ್ತಾಗಿ ಪಡೆದಿದ್ದವನು ಹೀಗೆ ವೃಥಾ ಕಾರಣಕ್ಕಾಗಿ ಅಕಸ್ಮಾತ್ತಾಗಿಯೇ ಒಂದು ದಿನ ಕಳೆದುಕೊಳ್ಳುತ್ತೇನೆಂದು ಎಂದೂ ಊಹಿಸಿರಲಿಲ್ಲ. ಪುನಃ ಬಂದು ನೋಡುತ್ತೇನೆ." ಎಂದು ಹೇಳಿ ನಮಸ್ಕಾರ ಮಾಡಿದ. ಹಾಬಲೂ ನಿಶ್ಶಬ್ದವಾಗಿ ಅತ್ತ. ಮೋತಿಯಮ್ಮ ಮುಖ ಗಂಟು ಹಾಕಿಕೊಂಡು ಇದ್ದಳು. ಒಂದು ಮಾತನ್ನೂ ಆಡಲಿಲ್ಲ.

## ಐವತ್ತೇಳನೆಯ ಅಧ್ಯಾಯ

ಸಮಾಚಾರ ವಿಪ್ರದಾಸನ ಕಿವಿಗೆ ಬಿತ್ತು. ಸೂಲಗಿತ್ತಿ ಬಂದಳು. ಕುಮು ಗರ್ಭಿಣಿಯಾಗಿರುವ ವಿಷಯದಲ್ಲಿ ಸಂದೇಹವುಳಿಯಲಿಲ್ಲ. ಮಧುಸೂದನನ ಕಿವಿಗೂ ಸಂಗತಿ ತಲಪಿತು. ಮಧುಸೂದನ ಧನವನ್ನು ಬಯಸಿದ್ದ. ಧನ ಬೇಕಾದಷ್ಟು ಸೇರಿತ್ತು. ಹಣಕ್ಕೆ ತಕ್ಕಂತೆ ಬಿರುದೂ ಸಿಕ್ಕಿತ್ತು. ಈಗ ತನ್ನ ಮಹಿಮೆಯನ್ನು ಭಾವೀ ಸಂತತಿಯಲ್ಲಿ ಸ್ಥಾಪಿಸಲು ಸಾಧ್ಯವಾದರೆ ಈ ಸಂಸಾರದಲ್ಲಿ ಅವನ ಕರ್ತವ್ಯದ ಕಡೆಯ ಗುರಿಯನ್ನು ತಲುಪಿದ ಹಾಗೆ ಆಗುತ್ತದೆ. ಮನಸ್ಸಿಗೆ ಎಷ್ಟು ತೃಪ್ತಿ, ಸಂತೋಷಗಳಾದುವೋ ಅಷ್ಟು ಮಟ್ಟಿಗೆ ಅಪರಾಧದ ಎಲ್ಲ ಹೊರೆಯನ್ನೂ ಕುಮುವಿನ ಮೇಲಿಂದ ಸರಿಸಿ ವಿಪ್ರದಾಸನ ತಲೆಯ ಮೇಲೆ ಏರಿಸಿದ. ಎರಡನೆಯ ಕಾಗದವೊಂದನ್ನು ಅವನಿಗೆ ಬರೆದ. ಅದರಲ್ಲಿ "**Whereas**" ಎಂದು ಆರಂಭಿಸಿ "**Your obedient servant**" ಎಂದು ಮುಗಿಸಿ 'ಮಧುಸೂದನ ಘೋಷಾಲ್' ಎಂದು ಸಹಿ ಮಾಡಿದ್ದ. ಮಧ್ಯೆ "**I shall have the painful necessity**" ಇತ್ಯಾದಿ. ಬರೆದಿದ್ದ. ಈ ಬಗೆಯ ಹೆದರಿಸುವ ಕಾಗದಗಳಿಂದ ಚಟರ್ಜಿ ಮನೆತನದವರಲ್ಲಿ, ನಿರೀಕ್ಷಿಸಿದುದಕ್ಕೆ ವಿರುದ್ಧವಾದ ಫಲವುಂಟಾಗುತ್ತದೆ,ಆದರಲ್ಲೂ ನಷ್ಟದ ಭೀತಿ ತೋರಿದಾಗಲಂತೂ ಇನ್ನೂ ಹೆಚ್ಚಾಗಿ ಆಗುತ್ತದೆ. ವಿಪ್ರದಾಸನು ಕಾಗದವನ್ನು ಕಾಳೂಗೆ ತೋರಿಸಿದ. ಅವನ ಮುಖ ಕೆಂಪಗಾಗಿ ಹೋಯಿತು. "ಇಂತಹ ಕಾಗದ

ನೋಡಿದರೆ ನನ್ನಂತಹ ಸಾಮಾನ್ಯನ ಮೈಯಲ್ಲೂ ನವಾಬರುಗಳಿಗೆ ಆಗುವ ಹಾಗೆ ರಕ್ತ ಕುದಿಯುತ್ತೆ. ಎದುರಿಗೆ ಇಲ್ಲದಿರುವ ಕೊತ್ವಾಲನನ್ನು ಕೂಗಿ ತಲೆ ಹಾರಿಸಿಬಿಡೋ ಇವನಿಗೆ ಎಂದು ಹೇಳೋಣವೇ ಅನ್ನಿಸುತ್ತೆ." ಎಂದ.

ಹಗಲು ಹೊತ್ತು ನಾನಾ ಪ್ರಕಾರದ ಬರವಣಿಗೆಯ ಕೆಲಸವಿತ್ತು. ಅವೆಲ್ಲವನ್ನೂ ಮುಗಿಸಿ ಬಿಟ್ಟು ಸಾಯಂಕಾಲ ವಿಪ್ರದಾಸನು ಕುಮುವಿಗೆ ಹೇಳಿಕಳುಹಿಸಿದನು. ಕುಮು ಇಂದು ಇಡೀ ದಿವಸ ಅಣ್ಣನ ಹತ್ತಿರ ಬಂದಿರಲಿಲ್ಲ. ತನ್ನನ್ನೇ ಮರೆಸಿಕೊಂಡು ಮರೆಸಿಕೊಂಡು ತಿರುಗುತ್ತಿದ್ದಳು.

ವಿಪ್ರದಾಸನು ಹಾಸುಗೆ ಬಿಟ್ಟಿದ್ದು ಕುರ್ಚಿಯ ಮೇಲೆ ಕೂತ. ರೋಗಿಯಂತೆ ಮಲಗಿಯೇ ಇದ್ದರೆ ಮನಸ್ಸು ದುರ್ಬಲವಾಗಿರುತ್ತದೆ. ಎದುರುಗಡೆ ಕುಮುವಿಗಾಗಿ ಚಿಕ್ಕದೊಂದು ಕುರ್ಚಿಯು ಸಿದ್ಧವಾಗಿತ್ತು. ದೀಪವನ್ನು ಮೂಲೆಯೊಂದರಲ್ಲಿ ಸ್ವಲ್ಪ ಮರೆಯಾಗಿಟ್ಟಿದ್ದರು. ನೆತ್ತಿಯ ಮೇಲೆ ದೊಡ್ಡದೊಂದು ಎಳೆಯುವ ಚಾಮರ (ಪಂಖಾ) ಹುಸ್, ಹುಸ್ ಎಂದು ಶಬ್ದ ಮಾಡುತ್ತಾ ಗಾಳಿಯಾಡಿಸುತ್ತಿತ್ತು.

ವೈಶಾಖದ ಕೊನೆಯ ದಿನಗಳ ಆಕಾಶದಲ್ಲಿ ಇನ್ನೂ ಸೆಕೆ ಸೇರಿಕೊಂಡೇ ಇತ್ತು. ದಕ್ಷಿಣದ ಗಾಳಿ ಒಂದೊಂದು ಸಲ ಸ್ವಲ್ಪವಾಗಿ ಬೀಸಿ ಮತ್ತೆ ಉಡುಗಿ ಹೋಗುತ್ತಿತ್ತು. ಮರಗಳ ಎಲೆಗಳು ಕಿವಿಗೊಟ್ಟು ಮನಸ್ಸಿಟ್ಟು ಕೇಳುತ್ತಿರುವಂತೆ ನಿಶ್ಶಬ್ದವಾಗಿದ್ದವು. ಸಮುದ್ರವನ್ನು ಸೇರುವ ಕಡೆ ಗಂಗಾ ನದಿಯ ಮುಖದಲ್ಲಿ ನೀಲಿ ಬಣ್ಣದ ನೀರು ಬೆಳ್ಳಗಾಗಿರುವಂತೆ, ಅಂಧಕಾರವೂ ಅದೇ ರೀತಿಯಾಗಿತ್ತು. ಬಹಳ ಹೊತ್ತು ತಡಮಾಡಿದ ಗೋಧೂಳಿಯ ಕೊನೆಯ ಬೆಳಕು ಇನ್ನೂ ಅಂಧಕಾರದ ಕಪ್ಪಿನಲ್ಲಿ ಅಲ್ಲಲ್ಲಿ ಬೆರೆತು ಹೋಗಿತ್ತು. ತೋಟದ ಪುಷ್ಕರಿಣಿ ನೆರಳಿನಿಂದ ಕಣ್ಮರೆಯಾಗಿತ್ತು. ಆದರೆ ಥಳಥಳಿಸುತ್ತಿರುವ ನಕ್ಷತ್ರಗಳ ಸ್ಥಿರ ಪ್ರತಿಬಿಂಬವು ಆಕಾಶ ಬೆರಳು ತೋರುತ್ತಿದೆಯೋ ಎನ್ನುವಂತೆ ಪುಷ್ಕರಿಣಿಯನ್ನು ತೋರಿಸುತ್ತಿತ್ತು. ಮರಗಳಡಿಯಲ್ಲಿ ಚಾಕರರು ದೀವಿಗೆಗಳನ್ನು ಹಿಡಿದುಕೊಂಡು ಕ್ಷಣಕ್ಕೊಂದು ಸಲ ಓಡಾಡುತ್ತಿದ್ದರು. ಗೂಬೆ ಕೂಗು ಹಾಕಿತು.

ಕುಮು ಬೇಕೆಂತಲೇ ಸ್ವಲ್ಪ ಹಿಂಜರಿದು ತಡಮಾಡಿ ಬಂದಳು. ವಿಪ್ರದಾಸನ ಹತ್ತಿರದ ಕುರ್ಚಿಯ ಮೇಲೆ ಕೂತುಕೊಂಡು "ಅಣ್ಣಾ, ನನಗೇಕೋ ಸ್ವಲ್ಪವೂ ಸರಿಯಿಲ್ಲ, ಎಲ್ಲಾದರೂ ಹೊರಟುಹೋಗೋಣವೇ ಅನ್ನಿಸಿದೆ." ಎಂದಳು.

ವಿಪ್ರದಾಸನು "ಹಾಗೆ ಹೇಳುವುದು ತಪ್ಪು, ಕುಮು, ನಿನಗೆ ಎಲ್ಲಾ ಸರಿ ಹೋಗಿ ಬಿಡುತ್ತದೆ ಸುಮ್ಮನಿರು. ಇನ್ನು ಕೆಲವು ದಿನಗಳಾದ ಮೇಲೆ ನಿನ್ನ ಮನಸ್ಸು ತುಂಬಿ ಕೊಳ್ಳುತ್ತದೆ, ನೋಡುತ್ತಿರು" ಎಂದ.

"ಆ ಮೇಲೆ ಹಾಗಾದರೆ—–"ಎಂದು ಹೇಳಿ ಕುಮು ಸುಮ್ಮನಾದಳು.

"ಅದು ಗೊತ್ತು. ಈಗ ನಿನ್ನ ಬಂಧನವನ್ನು ಕತ್ತರಿಸುವವರು ಯಾರಮ್ಮಾ, ಕುಮು?"

"ಹಾಗಾದರೆ ನಾನು ಹೋಗಲೇ ಬೇಕೇ ಅಣ್ಣಾ?"

"ನಿನ್ನನ್ನು ಅಡ್ಡಿ ಮಾಡುವ ಅಧಿಕಾರ ಇನ್ನು ಮೇಲೆ ನನಗಿಲ್ಲ. ನಿನ್ನ ಮಗುವನ್ನು ಅದರ ಸ್ವಂತ ಮನೆಯಿಂದ ಹೇಗೆ ತಾನೇ ದೂರವಿಡಲಿ?"

ಕುಮು ಬಹಳ ಹೊತ್ತು ಸುಮ್ಮನೆ ಕೂತಿದ್ದಳು, ವಿಪ್ರದಾಸನು ಏನೂ ಹೇಳಲಿಲ್ಲ.

ಕಡೆಗೆ ಕುಮು ಮೃದುಸ್ವರದಲ್ಲಿ "ಹಾಗಾದರೆ ಯಾವಾಗ ಹೋಗಬೇಕು?

ಂದು ಕೇಳಿದಳು.

"ನಾಳೆಯೇ, ಇನ್ನು ನಿದಾನಮಾಡುವುದು ಸರಿಯಲ್ಲ."

"ಅಣ್ಣ, ಒಂದು ಮಾತು ಚೆನ್ನಾಗಿ ಅರ್ಥವಾಗುತ್ತಿದೆ. ಈ ಸಲ ಹೋದರೆ ಅವರು ನನ್ನನ್ನು ುತ್ತೆ ಎಂದಿಗೂ ನಿನ್ನ ಹತ್ತಿರ ಬರಲು ಬಿಡುವುದಿಲ್ಲ."

"ಅದು ನನಗೆ ಚೆನ್ನಾಗಿ ಗೊತ್ತು."

"ಒಳ್ಳೇದು. ಹಾಗೇ ಆಗಲಿ. ಆದರೆ ಒಂದು ಮಾತು ಈಗಲೇ ಹೇಳುತ್ತೇನೆ. ಯಾವತ್ತೂ ಯಾವ ಕಾರಣಕ್ಕೂ ನೀನು ಅವರ ಮನೆಗೆ ಹೋಗಕೂಡದು ನನಗೆ ಗೊತ್ತು. ಅಣ್ಣ, ನಿನ್ನನ್ನ ೋಡಲು ನನ್ನ ಪ್ರಾಣ ಹೊಡೆದುಕೊಳ್ಳುತ್ತದೆ. ಆದರೆ ಏನುಮಾಡಿದರೂ ಅವರ ಮನೆಯಲ್ಲಿ ನ್ನನ್ನೆಂದಿಗೂ ನೋಡದೆ ಇರುವ ಹಾಗೆ ಆಗಬೇಕು. ಅದು ನನ್ನಿಂದ ಸಹಿಸಲಿಕ್ಕಾಗದುದು."

"ಇಲ್ಲ, ಕುಮು, ಇದಕ್ಕಾಗಿ ನೀನು ಯೋಚನೆ ಮಾಡಬೇಕಾಗಿಲ್ಲ."

"ಅವರು ಒಂದು ಪಕ್ಷ ನಿನ್ನನ್ನ ವಿಪತ್ತಿನಲ್ಲಿ ನೂಕುವುದಕ್ಕೆ ಪ್ರಯತ್ನ ಮಾಡಬಹುದು."

"ಅವರು ಏನು ಮಾಡಬಲ್ಲರೋ ಅದನ್ನ ಮಾಡಿ ಮುಗಿಸಿ ಬಿಟ್ಟರೆ ನನ್ನ ಮೇಲಿನ ಅವರ ್ವೇಷವೂ ಮುಗಿದು ಹೋಗುತ್ತದೆ. ಆಗಲೇ ನಾನು ಸ್ವತಂತ್ರನಾಗುತ್ತೇನೆ, ಅದಕ್ಕೇಕೆ ನೀನು ಿಪತ್ತು ಅನ್ನುವುದು?"

"ಆ ಹೊತ್ತೇ ನನ್ನನ್ನೂ ಸ್ವತಂತ್ರಳಾಗಿ ಮಾಡಿಬಿಡಣ್ಣ. ಅಷ್ಟರಲ್ಲಿ ನಾನೂ ಅವರ ಮಗು ನ್ನು ಅವರ ಕೈಯಲ್ಲೇ ಬಿಟ್ಟು ಬಂದು ಬಿಡುತ್ತೇನೆ. ಮಗುವಿಗೋಸ್ಕರವಾಗಿಯೂ ಕಳೆದು ೊಳ್ಳಲಾಗದಂತಹುದೂ ಒಂದಿದೆಯಲ್ಲ?"

"ಒಳ್ಳೇದು. ಮೊದಲು ಮಗುವಾಗಲಿ. ಆ ಮೇಲೆ ಹೇಳುವೆಯಂತೆ."

"ನೀನು ನಂಬುವುದಿಲ್ಲ. ಆದರೆ ಅಮ್ಮನ ವಿಷಯ ಜ್ಞಾಪಕವಿದೆಯೇ? ಅವಳದಂತೂ ಇಚ್ಛಾ ೃತ್ಯು. ಆ ದಿನ ಸಂಸಾರದಲ್ಲಿ ಅವಳು ತನ್ನ ಸ್ಥಾನವನ್ನು ಪಡೆದಿರಲಿಲ್ಲ. ಆದ್ದರಿಂದಲೇ ಅವಳು ನ್ನ ಮಕ್ಕಳು ಮರಿಗಳನ್ನು ಅನಾಯಾಸವಾಗಿ ಬಿಸುಟು ಹೋಗಬಲ್ಲವಳಾಗಿದ್ದಳು. ಮನುಷ್ಯನ ೀವ ಮುಕ್ತಿ ಬಯಸಿದಾಗ ಯಾವುದರಿಂದಲೂ ಅದನ್ನ ತಡೆಯುಲಾಗುವುದಿಲ್ಲ. ನಾನು ನಿನ್ನ ಂಗಿಯೇ, ಅಣ್ಣ. ನನಗೆ ಮುಕ್ತಿ ಬೇಕು. ಒಂದು ದಿನ ನನ್ನ ಬಂಧನವನ್ನು ಕಡಿದು ಹಾಕು ್ತೇನೆ. ಆಗ ನನಗೆ ಅಮ್ಮ ಆಶೀರ್ವಾದ ಮಾಡುತ್ತಾಳೆ. ಈಗಲೇ ಹೇಳಿದ್ದೇನೆ, ನೋಡುತ್ತಿರು."

ಆಮೇಲೆ ಬಹಳ ಹೊತ್ತು ಇಬ್ಬರೂ ಸುಮ್ಮನೆ ಕೂತಿದ್ದರು. ಹಠಾತ್ತಾಗಿ ಬುಸ್ಸೆಂದು ಗಾಳಿ ೀಸಿತು. ಟೀಪಾಯಿಯ ಮೇಲಿದ್ದ ವಿಪ್ರದಾಸನ ಓದುವ ಪುಸ್ತಕಗಳ ಹಾಳೆಗಳು ಫರ್ ರ್ರೆಂದು ತಿರುವಿಕೊಳ್ಳಲಾರಂಭಿಸಿದುವು. ತೋಟದಿಂದ ಬರುತ್ತಿದ್ದ ಸ್ಫಟಿಕದ ಹೂಗಳ ಕಂಪು ೋಣೆಯನ್ನು ತುಂಬಿತು.

ಕುಮು ಹೇಳತೊಡಗಿದಳು "ಅವರು ನನಗೆ ದುಃಖ ಪಡಿಸಿದ್ದಾರೆ. ಅದನ್ನು ನೀನು ಮನಸ್ಸ ಲ್ಲಿಡಬೇಡಣ್ಣ. ಅವರು ನನ್ನನ್ನು ಸುಖಪಡಿಸಲು ಸಾಧ್ಯವೇ ಇಲ್ಲ. ಏಕೆಂದರೆ ನಾನಿರುವ ೀತಿಯೇ ಹಾಗೆ. ನಾನೂ ಅವರನ್ನು ಸುಖಪಡಿಸಲಾರೆ. ಯಾರು ಸಹಜವಾಗಿ ಅವರನ್ನು ಸುಖ ಡಿಸಬಲ್ಲರೋ ಅವರ ಸ್ಥಾನವನ್ನು ನಿರ್ಣಯಿಸಲು ಏನಾದರೂ ಒಂದು ತೊಂದರೆ ಬರುತ್ತದೆ. ಾಗಿರುವಾಗ ಈ ವಿಡಂಬನೆಯೇಕೆ? ಸಮಾಜದ ಮುಂದೆ ಅಪರಾಧದ ಎಲ್ಲಾ ಹೊಣೆಯನ್ನೂ

ಕೇವಲ ನಾನೊಬ್ಬಳೇ ಹೊರಲು ಸಿದ್ಧವಾಗಿದ್ದೇನೆ. ಅವರಿಗೆ ಯಾವ ಕಳಂಕವೂ ತಗಲುವುದಿಲ್ಲ ಆದರೆ ಒಂದು ದಿನ ಅವರನ್ನು ಬಿಡುಗಡೆ ಮಾಡಿ ನಾನೂ ಬಿಡುಗಡೆ ಹೊಂದುತ್ತೇನೆ. ಆಗ ಹೊರಟು ಬಂದು ಬಿಡುತ್ತೇನೆ, ನೋಡುತ್ತಿರು. ಮಿಥ್ಯೆಯಾಗಿ ಮಿಥ್ಯೆಯ ಮಧ್ಯೆ ಇರಲಾರೆ. ನಾನೂ ಅವ ಮನೆಯ ದೊಡ್ಡ ಸೊಸೆ. ಹಾಗೆಂದರೆ ನಾನು ಕುಮು ಅಲ್ಲ ಎಂದು ಅರ್ಥವೇನು? ಅಣ್ಣ, ನೀನ ದೇವರನ್ನು ನಂಬುವುದಿಲ್ಲ. ನಾನು ನಂಬುತ್ತೇನೆ. ಮೂರು ತಿಂಗಳ ಹಿಂದೆ ಹೇಗೆ ನಂಬ ತ್ತಿದ್ದೆನೋ ಅದಕ್ಕಿಂತಲೂ ಹೆಚ್ಚಾಗಿ ನಂಬುತ್ತೇನೆ. ಇಷ್ಟು ದಿನವೆಲ್ಲ ನಾನು ಯೋಚ ಮಾಡುತ್ತಿದ್ದುದು ಏನು ಗೊತ್ತೆ ? ನಾಲ್ಕು ದಿಕ್ಕಿನಲ್ಲೂ ಇಷ್ಟು ಅವ್ಯವಸ್ಥೆ ಇಷ್ಟು ತಾರು ಮಾರಾಗಿದ ಅಷ್ಟಿದ್ದರೂ ಈ ಗಡಿ ಬಿಡಿ ಪ್ರಪಂಚವೆಲ್ಲವನ್ನೂ ಮುಚ್ಚಿಬಿಟ್ಟಿಲ್ಲ. ಇವೆಲ್ಲವನ್ನೂ ದಾಟಿಕೊಂಡ ಹೋದರೆ ಅಲ್ಲಿ ಚಂದ್ರ, ಸೂರ್ಯರಿಂದ ಪ್ರಪಂಚ ನಡೆಯುತ್ತದೆ. ಆ ದಾಟಿಹೋಗುವ ಸ್ಥಳ ಲ್ಲಿಯೇ ವೈಕುಂಠವಿದೆ. ಅಲ್ಲಿಯೇ ನನ್ನ ದೇವರಿರುವುದು. ನಿನ್ನೆದುರಿಗೆ ಈ ಮಾತನ್ನೆಲ್ಲ ಆಡು ದಕ್ಕೆ ನಾಚುಗೆಯಾಗುತ್ತದೆ.

"ಆದರೆ ಇನ್ನು ಮೇಲೆಂದಿಗೂ ಹೀಗೆ ಹೇಳಲು ಸಾಧ್ಯವಿಲ್ಲ, ಅದಕ್ಕೆ ಇವತ್ತೇ ಹೇ ಹೋಗುತ್ತೇನೆ. ಇಲ್ಲದೆ ಹೋದರೆ ನನ್ನ ವಿಷಯವಾಗಿ ಸುಮ್ಮನೆ ಯೋಚನೆ ಮಾಡುತ್ತಿ. ಎ ಹೋದರೂ ಯಾವುದೋ ಒಂದು ಬಾಕಿಯಿರುತ್ತದೆ. ಅದನ್ನು ನಾನು ಚೆನ್ನಾಗಿ ತಿಳಿದುಕೊಂ ದ್ದೇನೆ. ಅದೇ ನನ್ನ ಅನಂತ ಅದೇ ನನ್ನ ದೇವರು. ಇದು ನನಗೆ ಗೊತ್ತಿಲ್ಲದೆ ಹೋಗಿದ್ದ ಇಲ್ಲೇ ನಿನ್ನ ಕಾಲಹತ್ತಿರ ತಲೆ ಕುಟ್ಟಿಕೊಂಡು ಸಾಯುತ್ತಿದ್ದೆ. ಆ ಸೆರೆಮನೆಗೆ ನುಗ್ಗುತ್ತಿರಲಿ ಅಣ್ಣ, ಈ ಪ್ರಪಂಚದಲ್ಲಿ ನೀನು ನನ್ನವನಾಗಿ ಇರುತ್ತೀಯೆಂದು ನಾನು ಈ ವಿಷಯವನ್ನು ತಿಳಿಯ ಸಾಧ್ಯವಾಯಿತು."

ಹೀಗೆ ಹೇಳಿ ಕುಮು ಕುರ್ಚಿಯನ್ನು ಬಿಟ್ಟೆದ್ದು ಅಣ್ಣನ ಕಾಲ ಮೇಲೆ ತಲೆಯನ್ನಿಟ್ಟುಕೊಂ ಹಾಗೆ ಬಿದ್ದಿದ್ದಳು. ರಾತ್ರಿ ಮುಂದಕ್ಕೆ ಹೋಯಿತು. ವಿಪ್ರದಾಸನು ಕಿಟಕಿಯ ಹೊರಗ ರೆಪ್ಪೆ ಬಡಿಯದೆ ನೋಡುತ್ತ ಚಿಂತೆಯಲ್ಲಿ ಮುಳುಗಿದ್ದ.

## ಐವತ್ತೆಂಟನೆಯ ಅಧ್ಯಾಯ

ಮರುದಿನ ಬೆಳಿಗ್ಗೆ ಅಷ್ಟು ಹೊತ್ತಿಗೇ ವಿಪ್ರದಾಸ ಕುಮುವಿಗೆ ಹೇಳಿಕಳುಹಿಸಿದ. ಕು ಬಂದು ನೋಡಿದಾಗ ವಿಪ್ರದಾಸನು ಹಾಸುಗೆಯ ಮೇಲೆ ಕೂತಿದ್ದ. ತೊಡೆಯ ಮೇಲೆ ಒ ಎಸ್‌ರಾಜ್ ಇತ್ತು. ಮತ್ತೊಂದು ಪಕ್ಕದಲ್ಲಿ ಒರಗಿಸಿತ್ತು.

ಕುಮುವನ್ನು ನೋಡಿ "ತಗೋ ವಾದ್ಯವನ್ನ ಇಬ್ಬರೂ ಸೇರಿ ಬಾರಿಸೋಣ." ಎಂದ. ಆಗಿನ ಸ್ವಲ್ಪ ಕತ್ತಲೆ. ರಾತ್ರಿಯೆಲ್ಲ ಆದಮೇಲೆ ಗಾಳಿ ಸ್ವಲ್ಪ ತಂಪಾಗಿ ಅಶ್ವತ್ಥಗಿಡದ ಎಲೆಗಳ ಸರ್‌ಸರ್ ಎಂದು ಬೀಸುತ್ತಿತ್ತು. ಕಾಗೆಗಳು ಕೂಗಾಡತೊಡಗಿದ್ದುವು. ಇಬ್ಬರೂ ಸೇರಿ ಭೈ ರಾಗವನ್ನು ಆಲಾಪನೆ ಮಾಡಲು ಆರಂಭಿಸಿದರು. ಆಲಾಪನೆ ಗಂಭೀರ, ಶಾಂತ ಮತ್ತು ಕರು ಮಯವಾಗಿತ್ತು. ಸತಿಯ ವಿರಹವು ಖಂಡಿತವಾದ ವೇಳೆಯಲ್ಲಿ ಮಹಾದೇವನ ಅಂದಿನ ದಿನದ ಪ್ ತದ ಧ್ಯಾನದಂತೆ. ಬಾರಿಸುತ್ತ, ಬಾರಿಸುತ್ತ ಪುಷ್ಪಿತವಾದ ಕೃಷ್ಣ ಚೂಡಾಗಿಡದ ಕೊಂಬೆಗಳ ನ

ುಂದ ಹೊಂಬೆಳಕು ಉಜ್ವಲವಾಯಿತು. ಸೂರ್ಯನು ತೋಟದ ಪೌಳಿಗೋಡೆಯ ಮೇಲು
ಡ ಕಾಣಿಸಿಕೊಂಡನು. ಚಾಕರರು ಬಾಗಿಲ ಹತ್ತಿರ ಬಂದು ನಿಂತಿದ್ದು ಹೊರಟು ಹೋದರು.
ೋಣೆಯನ್ನು ಚೊಕ್ಕಟ ಮಾಡಲು ಆಗಲಿಲ್ಲ. ಬಿಸಿಲು ಕೋಣೆಯೊಳಗಡೆ ಬಂದಿತು. ಬಾಗಿಲು
ಾಯುವವನು ಮೆಲ್ಲಮೆಲ್ಲಗೆ ಬಂದು ವೃತ್ತ ಪತ್ರಿಕೆಯನ್ನು ಟೀಪಾಯಿಯ ಮೇಲೆ ಇಟ್ಟು ನಿಶ್ಶಬ್ದ
ಾಗಿ ಹೊರಟುಹೋದ.

ಬಾರಿಸುವುದನ್ನ ನಿಲ್ಲಿಸಿ ವಿಪ್ರದಾಸನು "ಕುಮು, ನನಗೆ ಯಾವ ಧರ್ಮವೂ ಇಲ್ಲವೆಂದು
ೀನು ತಿಳಿದಿದ್ದೀಯ, ನನ್ನ ಧರ್ಮವನ್ನು ಮಾತಿನಲ್ಲಿ ಹೇಳಹೋದರೆ ಅರ್ಥವಾಗುವುದಿಲ್ಲ,
ದಕ್ಕೇ ಹೇಳಲಿಲ್ಲ. ಗಾನದ ಸ್ವರದಲ್ಲಿ ಅದರ ರೂಪವನ್ನು ಕಾಣುತ್ತೇನೆ. ಅದರಲ್ಲಿ ಗಭೀರ
ುಃಖವೂ, ಗಭೀರ ಆನಂದವೂ ಎರಡೂ ಒಂದಾಗಿ ಸೇರಿರುವುವು, ಅದಕ್ಕೆ ಹೆಸರಿಡಲು ಸಾಧ್ಯವಿಲ್ಲ,
ೀನು ಇಂದು ಹೊರಟು ಹೋಗುತ್ತಿದ್ದೀಯ, ಕುಮು. ಬಹುಶಃ ಮತ್ತೆ ನೋಡಲಾಗುವುದಿಲ್ಲ.
ವತ್ತು ಬೆಳಿಗ್ಗೆ ನಿನ್ನನ್ನು ಆ ಎಲ್ಲ ಅಪಸ್ವರದ, ಎಲ್ಲ ವಿರಸದ ಆಚೆಯ ದಡಕ್ಕೆ ಸೇರಿಸಿ ಬಂದಿದ್ದೆ.
ೀನು ಶಾಕುಂತಲ ಓದಿದ್ದೀಯೆ, ದುಷ್ಯಂತನ ಮನೆಗೆ ಶಕುಂತಲೆ ಪಯಣ ಬೆಳೆಸಿದಾಗ ಕಣ್ವ
ುಷಿ ಸ್ವಲ್ಪ ದೂರದವರೆಗೆ ಅವಳನ್ನು ತಲುಪಿಸಿ ಹಿಂದಿರುಗಿದ. ಯಾವ ಲೋಕಕ್ಕೆ ಅವಳನ್ನು
ಳುಹಿಸಲು ಆತನು ಹೊರಟಿದ್ದನೋ ಅಲ್ಲಿ ಶಕುಂತಲೆಗೆ ದುಃಖವೂ, ಅಪಮಾನವೂ ಕಾದಿದ್ದುವು.
ವರೆ ಶಕುಂತಲೆ ಅಲ್ಲಿಯೇ ನಿಲ್ಲದೆ, ಅದನ್ನೂ ದಾಟಿ ಶಾಶ್ವತವಾದ ಶಾಂತಿಯ ಬೀಡನ್ನು ಸೇರಿ
ಳು. ಇವತ್ತು ಮುಂಜಾನೆಯ ಭೈರವರಾಗದ ಮಧ್ಯೆ ಇದ್ದ ಅದೇ ಶಾಂತಿಯ ಸ್ವರ ಆ ನಿರ್ಮಲ
ರಿಪೂರ್ಣತೆಯ ಕಡೆಗೆ ಕೊಂಡುಹೋಗಲೆಂದೇ ನನ್ನ ಸಮಸ್ತ ಅಂತಃಕರಣದ ಆಶೀರ್ವಾದ.
ಪರಿಪೂರ್ಣತೆಯೇ ನಿನ್ನ ಒಳಗಿನ ಮತ್ತು ಹೊರಗಿನ ದುಃಖವನ್ನೆಲ್ಲ ನಿನ್ನ ಅವಮಾನವನ್ನೆಲ್ಲ
ೂಚ್ಚಿಕೊಂಡು ಹೋಗಲಿ," ಎಂದ.

ಕುಮು ಯಾವ ಮಾತನ್ನೂ ಆಡಲಿಲ್ಲ. ವಿಪ್ರದಾಸನ ಪಾದಗಳ ಮೇಲೆ ತಲೆಯಿಟ್ಟು ನಮ
್ಕರಮಾಡಿದಳು. ಸ್ವಲ್ಪ ಹೊತ್ತು ಕಿಟಕಿಯ ಹೊರಗಡೆಯ ಬೆಳಕಿನ ಕಡೆ ದೃಷ್ಟಿಸಿನೋಡು
ದ್ದಳು, ಆ ಮೇಲೆ "ಅಣ್ಣ, ನಿನ್ನ ಟೀ, ಮತ್ತು ರೊಟ್ಟಿಯನ್ನು ನಾನು ತಯಾರು ಮಾಡಿಕೊಂಡು
ರುತ್ತೇನೆ, ಏನು?" ಎಂದು ಹೊರಗೆ ಹೋದಳು.

ಮಧುಸೂದನನು ಇಂದು ಜೋಯಿಸರನ್ನು ಕರೆಯಿಸಿ ಪ್ರಯಾಣದ ಲಗ್ನವನ್ನು ಗೊತ್ತು
ಾಡಿದ್ದ. ಬೆಳಿಗ್ಗೆ ಹತ್ತು ಘಂಟೆಯಾದ ಮೇಲೆ ಸ್ವಲ್ಪ ಹೊತ್ತಿಗೆ ಕ್ಲುಪ್ತವಾಗಿ ಜರಿಕೆಲಸ
ಾಡಿದ್ದ ಕೆಂಪು ಬನಾತಿನ ಮುಸುಕು ಹಾಕಿದ ಪಲ್ಲಕ್ಕಿ ಬಾಗಿಲಲ್ಲಿ ಬಂದು ನಿಂತುಕೊಂಡಿತು.
ೂಣ್ಣೆ, ದವಾಲಿಗಳ ಸಮೇತ ಆಳುಗಳು ಬಂದಿದ್ದರು, ಬಹಳ ಡೌಲಿನಿಂದ ಕುಮುವನ್ನು
ಜರ್ಾಪುರದ ಅರಮನೆಗೆ ಕರೆದುಕೊಂಡು ಹೋಗಲಾಯಿತು. ಇಂದು ಅಲ್ಲಿ ಓಲಗ
ೂದುವ ಏರ್ಪಾಡಾಗಿತ್ತು. ಬ್ರಾಹ್ಮಣ ಭೋಜನ, ದಾನಧರ್ಮ ಮುಂತಾದುವುಗಳೂ
ೂಡ ಕಾರ್ಯಕ್ರಮದಲ್ಲಿದ್ದವು.

ಮಾಣಿಕ ಎಂಬ ಆಳು ಬಾರ್ಲಿಯ ಬಟ್ಟಲನ್ನು ತೆಗೆದುಕೊಂಡು ವಿಪ್ರದಾಸನ ಕೊಠಡಿಗೆ
ಂದ. ವಿಪ್ರದಾಸನು ಹಾಸುಗೆಯಲ್ಲಿರಲಿಲ್ಲ. ಕಿಟಕಿಯ ಎದುರುಗಡೆ ಕುರ್ಚಿಯನ್ನು ಎಳೆದು
ೊಂಡುಹೋಗಿ ಸ್ತಬ್ಧನಾಗಿ ಕೂತಿದ್ದ. ಬಾರ್ಲಿ ಯಾವಾಗ ಬಂತೆಂದು ಗಮನ ಕೊಡಲಿಲ್ಲ.
ಳು ಹೊರಟುಹೋದ. ಕ್ಷೇಮಾ ಅತ್ತೆ ಪಥ್ಯವನ್ನು ಸಿದ್ಧಮಾಡಿಕೊಂಡು ಬಂದು ವಿಪ್ರದಾಸನ

ಹೆಗಲ ಮೇಲೆ ಕೈಯಿಟ್ಟು "ವಿಪ್ರೂ, ಹೊತ್ತಾಗಿ ಹೋಯಿತಪ್ಪಾ!" ಎಂದಳು.

ವಿಪ್ರದಾಸನು ಕುರ್ಚಿಯಿಂದ ನಿಧಾನವಾಗಿ ಎದ್ದು ಹಾಸುಗೆಯ ಮೇಲೆ ಹೋಗಿ ಮಲಗಿ
ಕುಮುವನ್ನು ಅವರ ಮನೆಗೆ ಎಷ್ಟು ರೀತಿಯಿಂದ ಕರೆದುಕೊಂಡು ಹೋದರೆಂದು ಹೇಳಲು ಕ್ಷೇಮ
ಅತ್ತೆಗೆ ಆಸೆ. ಆದರೆ ವಿಪ್ರದಾಸನ ಗಭೀರವಾದ ನಿಸ್ತಬ್ಧತೆಯನ್ನು ನೋಡಿ ಯಾವ ಮಾತನ್ನ
ಆಡಲಾರದೆ ಹೋದಳು. ವಿಪ್ರದಾಸನ ನೋಟದ ಎದುರುಗಡೆ ಪಾತಾಳ ಮುಟ್ಟುವ ಶೂನ್ಯ
ನಿಂತಿದ್ದಂತೆ ಮನಸ್ಸಿಗೆ ಅನ್ನಿಸಿತು.

ವಿಪ್ರದಾಸನು "ಅತ್ತೆ, ಕಾಳೂವನ್ನು ಕಳುಹಿಸಿಕೊಡು "ಎಂದು ಹೇಳಿದಾಗ ಈ ಸಾಮಾ
ಮಾತೂ ಕೂಡ ಕಣ್ಮರೆಯಾದೊಂದು ಪ್ರಕಾಂಡ ನಿಶ್ಶಬ್ದ ಕತ್ತಲೆಯೊಳಗಿನಿಂದ ಧ್ವನಿಸಿದಂ
ಇತ್ತು. ಕ್ಷೇಮಾ ಅತ್ತೆಯ ಮೈ ನಡುಗಿತು.

ಕಾಳೂ ಬಂದಾಗ ವಿಪ್ರದಾಸನು ಅವನ ಕೈಯಲ್ಲೊಂದು ಕಾಗದವನ್ನು ಕೊಟ್ಟ. ವಿಲ
ಯತಿಯಿಂದ ಸುಬೋಧ ಬರೆದಿದ್ದ. ಬಾರ್ ಡಿನ್ನರ್ ಪೂರೈಸದೆ ತಾನು ದೇಶಕ್ಕೆ ವಾ
ಸಾದರೆ ಪುನಃ ಅದಕ್ಕಾಗಿಯೇ ವಿಲಾಯತಿಗೆ ಬರಬೇಕಾಗುವುದು. ಅದಕ್ಕೆ ಬದಲು, ಡಿನ್ನ
ಮುಗಿಸಿಕೊಂಡು ಮಾಘ, ಪಾಲ್ಗುಣದ ಮಧ್ಯೆ ಹಿಂದಿರುಗಿದರೆ ಅನುಕೂಲ. ವ್ಯರ್ಥವಾದ ಖರ್ಚ
ತೊಂದರೆ ತಪ್ಪುತ್ತದೆ, ಅಲ್ಲಿಯವರೆಗೆ ಆಸ್ತಿಯ ಪಾಸ್ತಿಯ ಮಾತು ಕಥೆಗಳು ತಡೆಯಬಹುದೆಂ
ಅವನ ಅಭಿಪ್ರಾಯ.

ಅಂದು ಆಸ್ತಿಯ ತಾಪತ್ರಯವನ್ನು ಹೇಳಿ ವಿಪ್ರದಾಸನಿಗೆ ತೊಂದರೆ ಕೊಡಲು ಕಾಳುವಿ
ಇಷ್ಟವಿರಲಿಲ್ಲ. "ಅಣ್ಣಾ, ಇದುವರೆಗೆ ದುಡ್ಡು ವಾಪಸು ಕೊಡಬೇಕೆಂದು ಯಾವ ಪ್ರಸ್ತಾಪವನ್ನು
ಎತ್ತಿಲ್ಲ. ಇನ್ನು ಕೆಲವು ದಿನ ಸಾವಧಾನವಾಗಿ ಇದ್ದುಕೊಂಡು ಹೋದರೆ ಯಾವ ಗಲಾಟೆಯು
ಆಗುವುದಿಲ್ಲ. ಯಾವ ಉತ್ಪಾತವೂ ಆಗುವುದಿಲ್ಲ. ಅದು ಹೇಗಾದರೂ ಇರಲಿ, ನೀನು ಏನ
ಯೋಚನೆ ಮಾಡಬೇಕಾಗಿಲ್ಲ." ಎಂದು ಕಾಳೂ ಸಮಾಧಾನ ಹೇಳಿದ.

ವಿಪ್ರದಾಸನು "ನನಗೆ ಯಾವ ಯೋಚನೆಯೂ ಇಲ್ಲ, ಕಾಳೂ, ಸ್ವಲ್ಪವೂ ಇಲ್ಲ." ಎಂದ.

ವಿಪ್ರದಾಸನ ಚಿಂತೆಯೇನೋ ಕಾಳುವಿಗೆ ಹಿತವಾಗಿರಲಿಲ್ಲ. ಆದರೆ ಅವನ ಸಂಪೂಣ
ನಿಶ್ಚಿಂತೆಯೂ ಮತ್ತಷ್ಟು ಗಾಬರಿಯುಂಟು ಮಾಡುತ್ತಿತ್ತು.

ವಿಪ್ರದಾಸನು ವೃತ್ತ ಪತ್ರಿಕೆಯನ್ನು ಎತ್ತಿಕೊಂಡು ಓದಲು ಆರಂಭಿಸಿದ. ಆಗ ಇ
ವಿಷಯವಾಗಿ ಹೆಚ್ಚು ಯಾವ ಮಾತನ್ನೂ ಆಡಲು ವಿಪ್ರದಾಸನಿಗೆ ಇಷ್ಟವಿಲ್ಲವೆಂದು ಕಾಳ
ತಿಳಿದುಕೊಂಡ. ಬೇರೆ ದಿನಗಳಲ್ಲಿ ಕೆಲಸ ಮುಗಿದೊಡನೆ ಕಾಳೂ ತಕ್ಷಣ ಹೊರಟು ಹೋ
ತ್ತಿದ್ದ. ಇಷ್ಟು ಹೊತ್ತೂ ಸುಮ್ಮನೆ ಕೂತಿದ್ದ. ಬೇರೆ ಏನಾದರೂ ಮಾತಾಡೋಣವೇ, ಇಲ್ಲ
ಏನಾದರೂ ಸೇವೆ ಮಾಡೋಣವೇ ಎಂದು ಮನಸ್ಸಿನಲ್ಲಿ ಅನ್ನಿಸುತ್ತಿತ್ತು, "ಹೊರಗಡೆಯ
ಕಿಟಿಕಿಯ ಬಾಗಿಲನ್ನು ಮುಚ್ಚಿಬಿಡಲೇ ? ಬಿಸಿಲು ಹೊಡೆಯುತ್ತಿದೆ" ಎಂದು ಕೇಳಿದ.

ವಿಪ್ರದಾಸನು ಕೈ ಅಲ್ಲಾಡಿಸಿ ಬೇಡವೆಂದು ತಿಳಿಸಿದ.

ಕಾಳೂ ಆಗಲೂ ಕೂತೇ ಇದ್ದ, ಅಣ್ಣನ ಕೊಠಡಿಯಲ್ಲಿ ಇಂದು ಕುಮು ಇರಲಿಲ್ಲ.
ಶೂನ್ಯತೆ ಅವನ ಎದೆಯ ಮೇಲೆ ಅವರಿಸಿ ಕೂತಿತ್ತು. ಹಠಾತ್ತಾಗಿ ಮಂಚದ ಕೆಳಗಿಂದ ಟ
ಗುಮುರ್ ಗುಮುರ್ ಎಂದು ರೋದಿಸುತ್ತಿದ್ದ ದನಿ ಕೇಳಿಸಿತು. ಕುಮು ಹೊರಟು ಹೋದದ್ದ
ಅದು ನೋಡಿತ್ತು. ಏನು ತಿಳಿದುಕೊಂಡಿತ್ತೋ ಏನು ಕಥೆಯೋ—ಅವನ್ನು ವ್ಯಕ್ತಪಡಿಸ
ಹೇಗೆ ತಾನೇ ಸಾಧ್ಯ ?

---

# ರವೀಂದ್ರನಾಥಠಾಕೂರರ ಕೃತಿಗಳು

| | | | |
|---|---|---|---|
| **ನಾಟಕಗಳು—** | | | ರೂ. ನಪೈ. |
| ಅಂಚೆಯ ಮನೆ | .... | .... | ೦—೭೫ |
| ಬಲಿದಾನ | .... | .... | ೧—೨೫ |
| ರಕ್ತಕರವೀರ | .... | .... | ಅಚ್ಚಿನಲ್ಲಿ |
| **ಕಾದಂಬರಿಗಳು—** | | | |
| ನೌಕಾಘಾತ | .... | .... | ೧—೫೦ |
| ವಿನೋದಿನಿ | .... | .... | ೧—೫೦ |
| ಮನೆ—ಜಗತ್ತು | .... | .... | ೧—೫೦ |
| ಗೋರಾ | .... | .... | ೨—೫೦ |
| ಯೋಗಾಯೋಗ | .... | .... | |
| **ಕಥೆಗಳು—** | | | |
| ಚಿನ್ನದ ದೋಣಿ | .... | .... | ೧—೫೦ |
| **ಆತ್ಮಕಥೆ—** | | | |
| ನನ್ನ ಬಾಲ್ಯದ ದಿನಗಳು | .... | .... | ೦—೭೫ |
| **ಸಾಹಿತ್ಯ ವಿಮರ್ಶೆ—** | | | |
| ಸಾಹಿತ್ಯ | .... | .... | ೨—೦೦ |

ಕಾವ್ಯಾಲಯ * ಪ್ರಕಾಶಕರು * ಮೈಸೂರು.